ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ಶ್ರೀ ವ್ಯಾಸಮಹರ್ಷಿ ಪ್ರಣೀತಂ

# ಶ್ರೀ ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಉತ್ತರಖಂಡ—ಏಳನೆಯ ಭಾಗ

(೨೪೭—೨೬೮ ಅಧ್ಯಾಯಗಳು)



ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದ್ರಾಸು)



ಮೈಸೂರು:

ಶ್ರೀ ಹನುಮಾನ್ ಪ್ರೆಸ್

೧೯೪೬

|| ಶ್ರೀಃ ||

-X-

# ಮುನ್ನುಡಿ



ಪದ್ಮಮಹಾಪುರಾಣದ ಉತ್ತರಖಂಡವನ್ನು ಓದುಗರ ಅನುಕೂಲಕ್ಕೋಸ್ಕರ ವಿಷಯಗಳನ್ನು ಅನುಸರಿಸಿ ಸಂಪುಟಗಳನ್ನಾಗಿ ವಿಂಗಡಿಸುತ್ತಿರುವೆವಷ್ಟೆ! ಆ ರೀತಿಯ ವಿಂಗಡಣೆಯಲ್ಲಿ ಇದು ಏಳನೆಯ ಭಾಗವಾಗಿ ಪ್ರಕಟವಾಗಿದೆ. ಇದರಲ್ಲಿ ಇನ್ನೂರ ನಾಲ್ವತ್ತೇಳನೆಯ ಅಧ್ಯಾಯದಿಂದ ಇನ್ನೂರ ಅರವತ್ತೆಂಟನೆಯ ಅಧ್ಯಾಯ ಪೂರ್ತಿಯಾಗಿ ಸಂಗ್ರಹಿಸಲ್ಪಟ್ಟಿರುತ್ತದೆ.

ಇದರಲ್ಲಿ ಮಾಘಸ್ನಾನದ ಮಹಿಮೆಯ ವರ್ಣನೆ, ಶಂಖ ಚಕ್ರಾಂಕನದ ಪ್ರಾಶಸ್ತ್ಯ, ವಿಷ್ಣುಭಕ್ತಿ ನಿರೂಪಣ, ಊರ್ಧ್ವಪುಂಡ್ರಧಾರಣ ವಿಧಿ, ದ್ವೈತ ಮಹತ್ವ ವರ್ಣನೆ, ವೈಕುಂಠದ ವರ್ಣನೆ, ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ ಅವತಾರ ಇವುಗಳನ್ನು ವರ್ಣಿಸಿದೆ.

ಮಾಘ ಮಹಿಮೆಯಲ್ಲಿ ಗಂಧರ್ವಕನ್ಯೆಯರು ಸ್ನಾನಕ್ಕೆ ಹೋಗಿದ್ದು ಅಲ್ಲಿ ವೇದನಿಧಿಯ ಮಗನನ್ನು ನೋಡಿ ಮೋಹಗೊಂಡು ಆ ಋಷಿಪುತ್ರನ ಶಾಪದಿಂದ ಗಂಧರ್ವಕನ್ಯೆಯರೂ, ಗಂಧರ್ವಕನ್ಯೆಯರ ಶಾಪದಿಂದ ಋಷಿಪುತ್ರನೂ ಪಿಶಾಚ ರಾಗುತ್ತಾರೆ. ಅನಂತರ ಲೋಮಶಋಷಿಯ ಮಾತಿನಂತೆ ಮಾಘ ಮಾಸದಲ್ಲಿ ಪ್ರಯಾಗಕ್ಕೆ ಹೋಗಿ ಸ್ನಾನಮಾಡಿ ಪಿಶಾಚತನವನ್ನು ನಾಶಮಾಡಿಕೊಳ್ಳುತ್ತಾನೆ. ಮಾಘ ಮಾಸದಲ್ಲಿ ಪ್ರಯಾಗದಲ್ಲಿ ಗಂಗಾಸ್ನಾನವು ಉತ್ತಮವೆಂದು ಈ ಕಥೆಯು ವ್ಯಕ್ತಪಡಿಸಿರುತ್ತದೆ.

ವಿಷ್ಣುಪೂಜೆಯ ಪ್ರಾಶಸ್ತ್ಯವನ್ನು ಹೇಳುತ್ತ ಆ ವಿಷ್ಣುಪೂಜೆಯನ್ನು ಮಾಡಲು ಯೋಗ್ಯತಾ ಸಂಪಾದನೆಗೋಸ್ಕರ ಅದರ ಅಂಗವಾದ ತಪ್ತ ಶಂಖ ಚಕ್ರ ಧಾರಣವನ್ನೂ ಊರ್ಧ್ವಪುಂಡ್ರ ಧಾರಣವನ್ನೂ ವಿವರಿಸಿರುವುದು ಶಾಸ್ತ್ರ ಗಳಿಗೆಲ್ಲವೂ ಆಧಾರವಾಗಿ ನಿಂತಿದೆ.

ಮಂತ್ರೋಪದೇಶ, ಅಂಗನ್ಯಾಸ, ಕರನ್ಯಾಸ ವಿಧಾನಗಳನ್ನೂ ಹೇಳಿ ದ್ವೈತವು ಮಹತ್ವಪೂರಿತವಾದದ್ದೆಂದು ವಿವರಿಸಲ್ಪಟ್ಟಿದೆ.

ತ್ರಿಪಾದ್ವಿಭೂತಿಯ ಕಥನವೆಂದು ಹೇಳಿ ವೈಕುಂಠಲೋಕವನ್ನು ಬಹು ಚೆನ್ನಾಗಿ ವರ್ಣಿಸಿರುವುದು.

ಸೃಷ್ಟಿಯ ಉತ್ಪತ್ತಿಯ ರೀತಿಯನ್ನು ಸಂಕ್ಷೇಪದಿಂದ ವಿವರಿಸಿ, ಅದರಲ್ಲಿ ದಶಾವತಾರಗಳನ್ನು ಸ್ವಾಮಿಯು ಎತ್ತಿರುವುದನ್ನು ವಿವರಿಸಿ ಅದಕ್ಕೆ ಕಾರಣವನ್ನೂ ವಿವರಿಸಿರುತ್ತದೆ.

ಮತ್ಸ್ಯಾವತಾರದ ಕಥೆಯನ್ನು ಹೇಳುತ್ತ ದುಷ್ಟನಾದ ಮಕರಾಕ್ಷಸನ ವಧೆಯು ನಿರೂಪಿತವಾಗಿದೆ.

ದೂರ್ವಾಸಋಷಿಯ ಶಾಪದಿಂದ ಇಂದ್ರನ ಸಂಪತ್ತೆಲ್ಲವೂ ಹೋಗುವುದಲ್ಲದೆ ಲಕ್ಷ್ಮಿಯೇ ಕಣ್ಮರೆಯಾಗಿರುವುದರಿಂದ ವಿಷ್ಣುವು ಸಮುದ್ರ ಮಥನವನ್ನು ಮಾಡಬೇಕೆಂದು ದೇವತೆಗಳಿಗೆ ಉಪದೇಶಿಸಿ, ಅದಕ್ಕೆ ದಾರಿಯನ್ನು ತೋರಿಸಿ, ಸಮುದ್ರದಲ್ಲಿ ಮಂಥರಪರ್ವತವನ್ನು ಧರಿಸಲೋಸುಗ ಕೂರ್ಮಾವತಾರವನ್ನು ಮಾಡಿರುವ ವಿಷ್ಣುವಿನ ಕೂರ್ಮಾವತಾರದ ಕಥೆಯು ಮನೋಹರವಾಗಿದೆ.

ಏಕಾದಶಿಯ ದಿನ ಎಲ್ಲರೂ ಉಪವಾಸವಿದ್ದು ಲಕ್ಷ್ಮಿಯನ್ನು ಸ್ತುತಿಸಲು ದ್ವಾದಶಿಯ ದಿನ ಆ ಲಕ್ಷ್ಮಿಯು ಆವಿರ್ಭೂತಳಾಗುವಳು. ಈ ಸಂದರ್ಭದಲ್ಲಿ ಏಕಾದಶಿಯ ವ್ರತ ವಿಧಿಯನ್ನು ಉಪವಾಸ ಮಾಡತಕ್ಕ ಏಕಾದಶಿಗಳ ಸ್ಥಿತಿಯನ್ನು ನಿರ್ಣಯಿಸಿರುವುದು.

ವರಾಹಾವತಾರವು ವೇದಗಳನ್ನು ಹೊತ್ತುಕೊಂಡು ಹೋದ ಹಿರಣ್ಯಾಕ್ಷನ ವಧೆಗೆ ಆದುದೆಂಬುದು ಬಹು ಸ್ವಾರಸ್ಯವಾದ ರೀತಿಯಲ್ಲಿ ವಿವರಿಸಲ್ಪಟ್ಟಿದೆ.

ನರಸಿಂಹಾವತಾರದಲ್ಲಿ ಹಿರಣ್ಯಕಶಿಪುವಿನ ವಧೆ, ಪ್ರಹ್ಲಾದ ಪರಿಪಾಲನೆಯು ಮೊದಲಿನಿಂದ ಕೊನೆಯವರೆಗೂ ರಂಜಕವಾಗಿರುವುದಲ್ಲದೆ ಪ್ರಹ್ಲಾದನಂತೆಯೇ ಭಕ್ತರಾಗಬೇಕೆಂಬುದನ್ನು ಒತ್ತಿ ತಿಳಿಸುವ ವೈಶಿಷ್ಟ್ಯವನ್ನು ಹೊಂದಿರುವ ಈ ಅವತಾರವು ಮೋಕ್ಷಾಪೇಕ್ಷಿಗಳಿಗೆ ಬಹು ಉಪಯುಕ್ತವಾದುದು.

ವಿಷ್ಣುವು ವಾಮನಾವತಾರ ಮಾಡುವುದಕ್ಕೆ ಕಶ್ಯಪನೇ ಕಾರಣನು ಎಂದು ವಿವರಿಸಿ, ಒಬ್ಬ ತಂದೆಗೆ ಅನೇಕ ಮಕ್ಕಳಿರುವಾಗ ಪ್ರೀತಿಯು ಎಲ್ಲಿಡೆಯಲ್ಲಿದ್ದರೂ ಕಷ್ಟಪಡುವವನಲ್ಲಿ ಅಧಿಕವಾಗಿರುತ್ತದೆ. ಎಂಬ ಅಂಶವನ್ನು ಸೂಚಿಸುವ ಉತ್ತಮ ಉದಾಹರಣೆಯಾಗಿರುತ್ತದೆ. ಬಲಿಚಕ್ರವರ್ತಿಯು ತಾನು ದಾನವನಾದಾಗ್ಯೂ ಆತನು ವಿಷ್ಣುವಿನಲ್ಲಿಟ್ಟಿದ್ದ ಹರಿಭಕ್ತಿ, ಔದಾರ್ಯ ಗುಣಗಳಿಂದ ಹೆಚ್ಚಿನ ಪ್ರಖ್ಯಾತ ಪುರುಷನಾಗಿ ಬಾಳಿ, ಹರಿಯೊಲುಮೆಯನ್ನು ಪಡೆದು ರಸಾತಲವನ್ನು ಇಂದಿಗೂ ವೈಭವಯುತನಾಗಿ ಆಳುತ್ತಲಿರುವನೆಂಬ ವಿಷಯವು ಪ್ರಪಂಚಕ್ಕೇ ಜ್ಞಾನವನ್ನು ಬೋಧಿಸತಕ್ಕ ಉತ್ತಮ ಉದಾಹರಣೆಯಾಗಿರುತ್ತದೆ.

ಪರಶುರಾಮಾವತಾರದಲ್ಲಿ ಬಹು ಬಲಿಷ್ಠನಾದ ಕಾರ್ತವೀರ್ಯಾರ್ಜುನನನ್ನು ಪರಶುರಾಮನು ಕೊಂದ ವಿಷಯವನ್ನು ವಿವರಿಸುತ್ತಾ, ತಪಸ್ವಿಗಳಿಗೆ ಅಸಾಧ್ಯವಾದ ಕಾರ್ಯವಾವುದೂ ಇಲ್ಲವೆಂಬುದನ್ನು ತೋರಿಸಿದೆ.

ಪಂಡಿತರುಗಳಿಗೆ ಆಶ್ರಯವನ್ನು ಕೊಟ್ಟು ಅವರನ್ನು ಪ್ರೋತ್ಸಾಹಿಸುತ್ತ ಅವರುಗಳಿಂದ ಅನೇಕ ಗ್ರಂಥಗಳು ಕನ್ನಡದಲ್ಲಿ ಹೊರಹೊಮ್ಮುವಂತೆ ಮಾಡಿ ತನ್ಮೂಲಕ ಜನಸಾಮಾನ್ಯರಿಗೂ ಜ್ಞಾನಾಮೃತಪಾನವು ಸುಲಭದಲ್ಲಿ ದೊರಕುವಂತೆ ಲೋಕೋಪಕಾರ ಮಾಡುತ್ತಲಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುಗಳವರಿಗೆ ಭಗವಂತನು ಆಯುರಾರೋಗ್ಯ ಸತ್ಸಂತಾನಗಳನ್ನು ಕೊಟ್ಟು ಸಲಹಲೆಂದು ಅನನ್ಯಮನಸ್ಕನಾಗಿ ಪ್ರಾರ್ಥಿಸುತೇನೆ.

ಮೈಸೂರು, ಅನುವಾದಕ,

20—7—1946 **ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ.**



|| ಶ್ರೀಃ ||

-X-

# ಪದ್ಮಮಹಾಪುರಾಣದ ಉತ್ತರಖಂಡದಲ್ಲಿ ಏಳನೆಯ ಭಾಗದ

## ವಿಷಯಾನುಕ್ರಮಣಿಕೆ



ಪುಟಸಂಖ್ಯೆ

ಪುಟಸಂಖ್ಯೆ





॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ವಸಿಷ್ಠ ಉವಾಚ ॥

ಕಥಿತಂ ಮಾಘಮಾಹಾತ್ಮ್ಯಂ ದತ್ತಾತ್ರೇಯೇಣ ಭಾಷಿತಂ ।
ಅಧುನಾಹಂ ಪ್ರವಕ್ಷ್ಯಾಮಿ ಮಾಘಸ್ನಾನಫಲಂ ಮಹತ್ ॥ ೧ ॥

ಸರ್ವಕ್ರತುವರಿಷ್ಠಂ ಯತ್ಸರ್ವದಾನಫಲಪ್ರದಂ ।
ಸರ್ವವ್ರತತಪಸ್ತುಲ್ಯಂ ಮಾಘಸ್ನಾನಂ ಪರಂತಪ ॥ ೨ ॥

ಸ್ನಾನೇನ ಮಾಘಸ್ಯ ದಿಲೀಪ ಮಾನವಾಃ
ಪಿತೄನ್ ದಿವಿ ಸ್ಥಾಪ್ಯ ಕುಲದ್ವಯೋದ್ಭವಾನ್ ।
ಸ್ವರ್ಗಂ ಪ್ರಯಾನ್ತಿ ಸ್ವಯಮುಜ್ಜ್ವಲಾನನಾ
ವರೈರ್ವಿಮಾನೈ ರುಚಿರೈಶ್ಚ ಕಾಂಚನೈಃ ॥ ೩ ॥

---

### ಇನ್ನೂರ ನಲವತ್ತೇಳನೆಯ ಅಧ್ಯಾಯವು.



೧. ವಸಿಷ್ಠನು ಹೇಳಿದನು—ಎಲೈ ರಾಜನೇ! ದತ್ತಾತ್ರೇಯನು ಹೇಳಿದ ಮಾಘಮಹಿಮೆಯನ್ನು ಹೇಳಿದ್ದೇನೆ. ಈಗ ನಿನಗೆ ಮಾಘಸ್ನಾನದ ಫಲವನ್ನು ಹೇಳುತ್ತೇನೆ.

೨. ಮಾಘಸ್ನಾನವು ಎಲ್ಲಾ ಯಾಗಗಳ ಪುಣ್ಯಕ್ಕಿಂತಲೂ ಹೆಚ್ಚಿನ ಪುಣ್ಯವನ್ನು ಕೊಡುತ್ತದೆ. ಎಲ್ಲಾ ದಾನ ಗಳ ಪುಣ್ಯವನ್ನೂ ಕೊಡುತ್ತದೆ.

೩. ಎಲೈ ದಿಲೀಪನೆ! ಈ ಮಾಘಸ್ನಾನದಿಂದ ಮನುಷ್ಯರು ತಮ್ಮ ತಾಯಿ ತಂದೆಗಳ ಎರಡು ಕುಲದ ಪಿತೃಗಳನ್ನೂ ಸ್ವರ್ಗಕ್ಕೆ ಹೊಂದಿಸಿ ತಾವೂ ಕೂಡಾ ಪ್ರಕಾಶಮಾನರಾಗಿ ಉತ್ತಮವಾದ ಚಿನ್ನದ ವಿಮಾನಗಳಿಂದ ಸ್ವರ್ಗಕ್ಕೆ ಹೋಗುತ್ತಾರೆ.

ಯೇ ಮಾನವಾಃ ಪಾಪಕೃತೋಽಪಿ ಸರ್ವದಾ
ಮಹಾದುರಾಚಾರರತಾ ವಿಮಾರ್ಗಗಾಃ ।
ಸ್ನಾತ್ವಾ ಹಿ ಮಾಘೇಽಹಿರಿವ ತ್ವಚಂ ಭೃಶಂ
ಮುಂಚಂತಿ ತೇಽಪೀಹ ಮಹಾಘಕಂಚುಕಂ ॥ ೪ ॥

ಸತ್ಯೇನ ಹೀನಾಃ ಪಿತೃಮಾತೃದೂಷಕಾ
ಅನಾಶ್ರಮಸ್ಥಾಃ ಕುಲಧರ್ಮವರ್ಜಿತಾಃ ।
ಯೇ ದಾಂಭಿಕಾಸ್ತೇಽಪಿ ನರಾಃ ಸತಾಂ ಗತಿಂ
ಸ್ನಾನೈಃ ಪ್ರಯಾಂತ್ಯತ್ರ ಹಿ ಮಾಘಸಂಭವೈಃ ॥ ೫ ॥

ಪುಣ್ಯೇಷು ತೀರ್ಥೇಷ್ವಪಿ ಮಾಘಮಾಸಜಂ
ಸ್ನಾನಂ ನರಾಣಾಮಪಿ ದುರ್ಲಭಂ ಭುವಿ ।
ತಸ್ಮಾದ್ಯತೋ ಬ್ರಹ್ಮವಿದಾಂ ಪದಂ ನರೈಃ
ಸಂಪ್ರಾಪ್ಯತೇ ನಾತ್ರ ವಿಚಾರಣಾ ಚ ॥ ೬ ॥

---

೪. ಪಾಪಿಗಳಾದರೂ ದುರಾಚಾರಿಗಳಾದರೂ ಕೆಟ್ಟಮಾರ್ಗದಲ್ಲಿ ಹೋಗುತ್ತಿದ್ದರೂ ಅಂತಹ ಮನುಷ್ಯರೂ ಕೂಡ ಮಾಘಮಾಸದಲ್ಲಿ ಸ್ನಾನ ಮಾಡಿದರೆ ಸರ್ಪವು ತನ್ನ ಪೊರೆಯನ್ನು ಬಿಡುವಂತೆ ಪಾಪವೆಂಬ ಪೊರೆಯನ್ನು ಬಿಡುತ್ತಾರೆ. (ಪಾಪವನ್ನು ಕಳೆದುಕೊಳ್ಳುತ್ತಾರೆ.)

೫. ಸುಳ್ಳು ಹೇಳುವವರೂ ತಾಯಿತಂದೆಗಳನ್ನು ದೂಷಿಸುವವರೂ ಆಶ್ರಮವನ್ನು ಹೊಂದದವರೂ ಕುಲಧರ್ಮವನ್ನು ಬಿಟ್ಟವರೂ ಡಂಭಾಚಾರ ಮಾಡುವವರೂ ಕೂಡ ಈ ಮಾಘಮಾಸದಲ್ಲಿ ಸ್ನಾನಮಾಡಿದರೆ ಸತ್ಪುರುಷರು ಹೊಂದತಕ್ಕ ಗತಿಯನ್ನು ಹೊಂದುತ್ತಾರೆ.

೬. ಈ ಮಾಘಮಾಸದಲ್ಲಿ ಸ್ನಾನಮಾಡುವಿಕೆಯು ಪುಣ್ಯ ತೀರ್ಥಗಳಲ್ಲಿ ಸಿಕ್ಕುವುದು ಕಷ್ಟವು. ಹಾಗೆ ಮಾಘಮಾಸದಲ್ಲಿ ಪುಣ್ಯತೀಥಗಳಲ್ಲಿ ಸ್ನಾನಮಾಡಿದರೆ ಬ್ರಹ್ಮಜ್ಞಾನಿಗಳು ಹೊಂದುವ ಫಲವನ್ನು ಹೊಂದುತ್ತಾರೆ. ಇದರಲ್ಲಿ ವಿಚಾರವೂ ಬೇಕಿಲ್ಲ. ಸಂದೇಹವೂ ಇಲ್ಲ.

ಮಾಘೇ ಪ್ರಪಾದಾನತಪಃಪ್ರಸೇವನಂ
ಸ್ನಾನಂ ಹರೇಃ ಪೂಜನಮಕ್ಷಯಂ ನೃಪ ।
ತಸ್ಮಾದ್ಯಥಾಶಕ್ತಿ ನರೈಃ ಪ್ರಯತ್ನತಃ
ಸ್ನಾತ್ವಾ ಪ್ರದೇಯಂ ವಸನಾನ್ನಕಾಂಚನಂ ॥ ೭ ॥

ಮಾಘೇನ್ನದಾತಾಽಮೃತಪಃ ಸುರಾಲಯೇ
ಹೇಮ್ನಃ ಪ್ರದಾತಾ ಬಲಭಿತ್ಸಮೀಪಗಃ ।
ದೀಪಾಗ್ನಿವಾಸಾಂಸಿ ದದನ್ನರಸ್ಸದಾ
ಸೂರ್ಯಸ್ಯ ಲೋಕೇ ವಸತಿ ಪ್ರಭಾಮಯಃ ॥ ೮ ॥

ಯಜ್ಞೈಶ್ಚ ದಾನೈಃ ಸುತಪೋಭಿರುಜ್ಜ್ವಲೈಃ
ಸುಬ್ರಹ್ಮಚರ್ಯೈರ್ವರಯೋಗಸೇವಯಾ ।
ಶುದ್ಧಾ ಭವಂತೀಹ ತಥಾ ನ ಪಾಪಿನಃ
ಸ್ನಾನೈರ್ಯಥಾ ತೀರ್ಥಭವೈರ್ಹಿ ಮಾಘಜೈಃ ॥ ೯ ॥

---

೭. ಮಾಘಮಾಸದಲ್ಲಿ ಅರವಟ್ಟಿಗೆಗಳನ್ನು ಇಡಿಸಿ ದಾನಮಾಡುವುದೂ, ಪೂಜೆಯನ್ನು ಮಾಡುವುದೂ, ಎಲ್ಲವೂ ಅಕ್ಷಯವಾಗುತ್ತವೆ. ಆದ್ದರಿಂದ ಮನುಷ್ಯರಾದವರು ಕೈಲಾದ ಮಟ್ಟಿಗೂ ಪ್ರಯತ್ನಪಟ್ಟು ತೀರ್ಥಗಳಲ್ಲಿ ಸ್ನಾನಮಾಡಿ ಬಟ್ಟೆ ಅನ್ನ ಸುವರ್ಣಗಳನ್ನು ದಾನಮಾಡಬೇಕು.

೮. ಮಾಘಮಾಸದಲ್ಲಿ ಅನ್ನದಾನಮಾಡಿದವನು ದೇವಲೋಕದಲ್ಲಿ ಅಮೃತವನ್ನು ಕುಡಿಯುತ್ತಾನೆ. ಚಿನ್ನವನ್ನು ದಾನಮಾಡಿದವನು ಇಂದ್ರನ ಸಮೀಪದಲ್ಲಿ ಕುಳಿತುಕೊಳ್ಳುತ್ತಾನೆ. ದೀಪ ಬೆಂಕಿ ಬಟ್ಟೆಗಳನ್ನು ಕೊಡುವವನು ಕಾಂತಿಯುಕ್ತನಾಗಿ ಸೂರ್ಯಲೋಕದಲ್ಲಿ ವಾಸಿಸುತ್ತಾನೆ.

೯. ಮನುಷ್ಯರು ಮಾಘಮಾಸದ ಸ್ನಾನದಿಂದ ಶುದ್ಧರಾಗುವಂತೆ ಯಾಗಗಳಿಂದಾಗಲಿ ಉಜ್ವಲವಾದ ತಪಸ್ಸುಗಳಿಂದಾಗಲೀ ಬ್ರಹ್ಮಚರ್ಯದಿಂದಾಗಲಿ ಯೋಗದಿಂದಾಗಲಿ ಶುದ್ಧರಾಗುವುದಿಲ್ಲ. ಪಾಪಿಗಳು ಅವರ ಪಾಪಗಳೆಲ್ಲವನ್ನೂ ಕಳೆದುಕೊಳ್ಳುತ್ತಾರೆ.

ದುಃಖೌಘಸಂತಪ್ತಿಮಸಹ್ಯಯಾತನಾಂ
ಯಾಮೀಂ ನ ತೇ ಯಾನ್ತ್ಯಪಿ ಪಾಪಕಾರಿಣಃ ।
ಯೇ ಮಾಘಮಾಸೇ ವರತೀರ್ಥಮಜ್ಜನಂ ।
ಕುರ್ವನ್ತಿ ಚಾರ್ಧೋದಿತಸೂರ್ಯಮಣ್ಡಲೇ ॥ ೧೦ ॥

ಸ್ನಾತ್ವಾ ಹಿ ಮಾಘೇ ಹರಿಮರ್ಚಯಂತಿ ಯೇ
ಸ್ವರ್ಗಚ್ಯುತಾ ಭೂಪತಯೋ ಭವನ್ತಿ ।
ಭವ್ಯಾಸ್ಸುರೂಪಾಃ ಸುಭಗಾಃ ಪ್ರಿಯಂವದಾಃ
ಧರ್ಮಾನ್ವಿತಾ ಭೂರಿಧನಾಃ ಶತಾಯುಷಃ ॥ ೧೧ ॥

ದೀಪ್ತೇನಲೇ ಕಾಷ್ಠಚಯೋ ಯಥಾ ಹುತೋ
ಭಸ್ಮಾವಶೇಷೋ ಭವತೀಹ ತತ್ಕ್ಷಣಾತ್ ।
ಸ್ನಾನೇನ ಮಾಘಸ್ಯ ತಥಾ ವಿಲೀಯತೇಽ
ಕ್ಷುದ್ರೋಽಪಿ ಪಾಪೌಘಮಹಾದ್ರಿಸಂಚಯಃ ॥ ೧೨ ॥

---

೧೦. ಪಾಪಿಗಳಾದವರು ದುಃಖದಿಂದ ತೊಂದರೆ ಪಡುವುದನ್ನೂ ಸಹಿಸುವುದಕ್ಕೆ ಆಗದ ಯಾತನೆಯನ್ನೂ ಅನುಭವಿಸದಿರಬೇಕಾದರೆ ಮಾಘಮಾಸದಲ್ಲಿ ಸೂರ್ಯನು ಅರ್ಧ ಮೇಲಕ್ಕೆ ಉದಿಯಿಸಿರುವಾಗ ತೀರ್ಥಗಳಲ್ಲಿ ಸ್ನಾನಮಾಡಬೇಕು.

೧೧. ಮಾಘಸ್ನಾನಮಾಡಿ ಯಾರು ಹರಿಯನ್ನು ಪೂಜಿಸುತ್ತಾರೆಯೋ ಅವರು ಸ್ವರ್ಗದಿಂದ ಬಂದು ಭೂಮಿಯಲ್ಲಿ ಹುಟ್ಟಿದಮೇಲೆ ರಾಜರಾಗಿ ಹುಟ್ಟುತ್ತಾರೆ. ಅವರು ಮಂಗಳಾಕಾರರೂ ಸುಂದರರೂ ಒಳ್ಳೆಯ ದೇಹವುಳ್ಳವರೂ ಒಳ್ಳೆಯ ಮಾತನಾಡುವವರೂ ಧರ್ಮಿಷ್ಠರೂ ಬಹು ಧನವಂತರೂ ನೂರು ವರ್ಷ ಆಯುಸ್ಸುಳ್ಳವರೂ ಆಗಿರುತ್ತಾರೆ.

೧೨. ಉರಿಯುತ್ತಿರುವ ಬೆಂಕಿಯಲ್ಲಿ ಹಾಕಿದ ಸೌದೆಯ ಹೊರೆಗಳು ಹೇಗೆ ಉರಿದು ಬೂದಿಯಾಗುತ್ತದೆಯೋ ಹಾಗೆ ಮಾಘಸ್ನಾನದಿಂದ ಬಹುವಾದ ಪಾಪಗಳ ಗುಂಪೂ ಕೂಡಾ ನಾಶವಾಗುತ್ತವೆ.

ಕಾಯೇನ ವಾಚಾ ಮನಸಾ ಚ ಪಾತಕಂ
ಜ್ಞಾತಂ ಯದಜ್ಞಾತಮಲಂಕೃತಂ ನರೈಃ ।
ಸ್ನಾನಂ ತು ಮಾಘೇ ವರತೀರ್ಥಸಂಭವಂ
ಸರ್ವಂ ದಹೇದ್ವಿಷ್ಣುರಿವಾಶು ದುರ್ಗತಿಂ ॥ ೧೩ ॥

ಸಂಭುಜ್ಯಮಾನೇ ಕಲುಷೇ ಹಿ ಪಾರ್ಥಿವ
ಪ್ರಮಾದತೋಽಪೀಹ ನೃಣಾಂ ಕಥಂಚನ
ಸ್ನಾನಂ ತು ಮಾಘಸ್ಯ ಯದಿ ಪ್ರಸಜ್ಜ್ಯತೇ
ತದೈವ ತತ್‌ಸಂಕ್ಷಯಮೇತಿ ನಿಶ್ಚಿತಂ ॥ ೧೪ ॥

ಗಂಧರ್ವಕನ್ಯಾಃ ಪೃಥಿವೀಶ ಶಾಪಜಂ
ಸಂಭುಜ್ಯಮಾನಾಘಫಲಂ ದುರತ್ಯಯಂ ।
ಸ್ನಾನಾದ್ವಿಮುಕ್ತಾಃ ಖಲು ಮಾಘಸಂಭವಾತ್
ವಾಕ್ಯಾತ್ಪುರಾ ಲೋಮಶಜಾತ್ತದದ್ಭುತಂ ॥ ೧೫ ॥

---

೧೩. ಮನಸ್ಸು ದೇಹ ಮಾತುಗಳಿಂದ ತಿಳಿದೂ ತಿಳಿಯದೆಯೂ ಮಾಡಿದ ಯಾವ ಪಾಪಗಳಿರುವುವೋ ಅವೆಲ್ಲವನ್ನೂ ಈ ಮಾಘಸ್ನಾನವು ವಿಷ್ಣುವು ನರಕವನ್ನು ನಾಶಮಾಡುವಂತೆ ನಾಶಮಾಡುತ್ತದೆ.

೧೪. ತಾನು ಪ್ರಮಾದದಿಂದ ಮಾಡಿದ ಪಾಪವನ್ನು ಮನುಷ್ಯನು ಇಲ್ಲಿ ಅನುಭವಿಸುತ್ತಿದ್ದರೂ ಮಾಘದ ಸ್ನಾನವು ಒಂದುವೇಳೆ ನಮಗೆ ಸಿಕ್ಕಿದರೆ ಆ ಸ್ನಾನವನ್ನು ಮಾಡಿದ ಕೂಡಲೇ ಆ ಪಾಪವೆಲ್ಲವೂ ಹೋಗುತ್ತವೆ.

೧೫. ಎಲೈ ದೊರೆಯೆ! ಗಂಧರ್ವ ಕನ್ಯೆಯರು ತಮಗೆ ಬಂದ ಬಹುದೊಡ್ಡ ಶಾಪವನ್ನು ಅನುಭವಿಸುತ್ತಿದ್ದು ಲೋಮಶನೆಂಬ ಮುನಿಯ ಮಾತಿನಂತೆ ಮಾಘ ಸ್ನಾನವನ್ನು ಮಾಡಿ ಅದೆಲ್ಲವನ್ನೂ ಕಳೆದುಕೊಂಡರು.

॥ ಸೂತ ಉವಾಚ ॥

ಶ್ರುತ್ವೈತತ್ಪಾರ್ಥಿವಃ ಪ್ರೀತ್ಯಾ ನತ್ವಾ ತತ್ಪಾದಪಂಕಜಂ ।
ಶ್ರದ್ಧಯಾ ಪರಯಾ ನಮ್ರಸ್ತಂ ಪಪ್ರಚ್ಛ ಪುರೋಧಸಂ ॥ ೧೬ ॥

॥ ದಿಲೀಪ ಉವಾಚ ॥

ಭಗವನ್ ಬ್ರೂಹಿ ಕನ್ಯಾಭಿಃ ಪ್ರಾಪ್ತಃ ಶಾಪಃ ಕಥಂ ಕುತಃ ।
ಕಸ್ಯಾಪತ್ಯಾನಿ ತಾಸ್ತಾಸಾಂ ನಾಮ ಕಿಂ ಕೀದೃಶಂ ವಯಃ ॥ ೧೭ ॥

ಕಥಂ ಲೋಮಶವಾಕ್ಯೇನ ಪಾತಕಾಚ್ಛಾಪಸಂಭವಾತ್
ವಿಮುಕ್ತಾಃ ಕುತ್ರ ತಾಃ ಸಸ್ನುರ್ಮಾಘಂ ತಾಃ ಕತಿಸಂಖ್ಯಯಾ ॥ ೧೮ ॥

॥ ವಸಿಷ್ಠ ಉವಾಚ ॥

ಶ್ರೂಯತಾಂ ರಾಜಶಾರ್ದೂಲ ಧರ್ಮಗರ್ಭಾಂ ಪರಾಂ ಕಥಾಂ ।
ಯಥಾರಣಿರ್ವಹ್ನಿಗರ್ಭಾ ಧರ್ಮಸೂರ್ವಹ್ನಿಸೂರಿವ ॥ ೧೯ ॥

---

೧೬. ಸೂತನು ಹೇಳಿದನು–ಆ ದಿಲೀಪನು ಈ ಮಾತನ್ನು ಕೇಳಿ ವಸಿಷ್ಠನ ಪಾದಗಳಿಗೆ ಶ್ರದ್ಧೆಯಿಂದ ನಮಸ್ಕರಿಸಿ ನಮ್ರತೆಯಿಂದ ಆ ಪುರೋಹಿತನನ್ನು ಇಂತೆಂದು ಕೇಳಿದನು.

೧೭-೧೮. ದಿಲೀಪನು ಹೇಳಿದನು–ಎಲೈ ಸ್ವಾಮಿಯೇ ! ನಾನು ಕೇಳುವುದನ್ನು ಹೇಳು. ಆ ಕನ್ಯೆಯರಿಗೆ ಶಾಪವು ಹೇಗೆ ಬಂದಿತು ? ಕಾರಣವೇನು ? ಎಲ್ಲಿ ಬಂದಿತು ? ಅವರು ಯಾರ ಮಕ್ಕಳು ? ಅವರ ಹೆಸರೇನು ? ಅವರ ವಯಸ್ಸೇನು ? ಶಾಪದಿಂದ ಬಂದ ಪಾಪವು ಲೋಮಶನ ಮಾತಿನಂತೆ ಹೇಗೆ ನಿವಾರಣೆಯಾಯಿತು ? ಎಲ್ಲಿ ಸ್ನಾನ ಮಾಡಿದರು ? ಎಷ್ಟು ಮಾಘಮಾಸಗಳಲ್ಲಿ ಸ್ನಾನಮಾಡಿದರು ?

೧೯. ವಸಿಷ್ಠನು ಹೇಳಿದನು–ಎಲೈ ದಿಲೀಪನೆ ! ಈ ಕಥೆಯನ್ನು ಕೇಳು. ಇದು ಧರ್ಮಗರ್ಭವಾದ ಉತ್ತಮ ಕಥೆಯು. ಅಗ್ನಿಯನ್ನು ಒಳಗೆ ಉಳ್ಳ ಅರಣಿಯಂತಿರುವುದು. ಅರಣಿಯು ಅಗ್ನಿಯನ್ನು ಹೊರಗೆಡಹುವಂತೆ ಈ ಕಥೆಯು ಧರ್ಮವನ್ನು ಹೊರಗೆಡುಹುವುದು.

ಗಂಧರ್ವಸ್ಸುಖಸಂಗೀತಃ ತಸ್ಯ ಕನ್ಯಾ ಪ್ರಮೋಹಿನೀ ।
ಸುಶೀಲಸ್ಯ ಸುಶೀಲಾ ಚ ಸುಸ್ವರಾ ಸ್ವರವೇದಿನಃ　　　　|| ೨೦ ||

ಸುತಾರಾ ಚಂದ್ರಕಾಂತಸ್ಯ ಚಂದ್ರಿಕಾ ಸುಪ್ರಭಸ್ಯ ಚ ।
ಇಮಾನಿ ಖಲು ನಾಮಾನಿ ತಾಸಾಮಪ್ಸರಸಾಂನೃಪ　　　　|| ೨೧ ||

ಕುಮಾರ್ಯಃ ಪಂಚ ಸರ್ವಾಸ್ತಾ ವಯಸಾ ಸುಸಮಾಃ ಪುನಃ ।
ಶೋಭನ್ತೇ ಚ ಮಿಥಸ್ತಾಶ್ಚ ಭಗಿನ್ಯಾ ಇವ ಸರ್ವದಾ　　　　|| ೨೨ ||

ಚಂದ್ರಾದಿವ ವಿನಿಷ್ಕ್ರಾಂತಾಃ ಚಂದ್ರಿಕೇವ ಸಮುಜ್ವಲಾಃ ।
ಚಂದ್ರಾನನಾಃ ಸುಕೇಶ್ಯಶ್ಚ ಚಂದ್ರಾಮೃತರಸಾಧರಾಃ　　　　|| ೨೩ ||

---

೨೦. ಸುಖಸಂಗೀತನೆಂಬ ಗಂಧರ್ವನಿಗೆ ಪ್ರಮೋಹಿನಿಯೆಂಬ ಮಗಳೂ ಸುಶೀಲನೆಂಬುವನಿಗೆ ಸುಶೀಲಳೂ ಸ್ವರವೇದಿಗೆ ಸುಸ್ವರೆಯೆಂಬವಳೂ ಮಕ್ಕಳಿದ್ದರು.

೨೧. ಚಂದ್ರಕಾಂತನಿಗೆ ಸುತಾರೆಯೆಂದೂ ಸುಪ್ರಭನಿಗೆ ಚಂದ್ರಿಕೆ ಎಂದೂ ಮಕ್ಕಳಿದ್ದರು. ಅಪ್ಸರಸ್ತ್ರೀಯರ ಹೆಸರು ಈ ರೀತಿಯಾಗಿವೆ.

೨೨. ಈ ಐದು ಜನ ಕನ್ಯೆಯರೂ ವಯಸ್ಸಿನಿಂದಲೂ ಸೌಂದರ್ಯಾದಿಗಳಿಂದಲೂ ಒಂದೇ ರೀತಿಯಾಗಿ ಇದ್ದುಕೊಂಡಿದ್ದರು. ಮತ್ತು ಯಾವಾಗಲೂ ಅಕ್ಕತಂಗಿಯರಂತೆ ಒಬ್ಬರನ್ನು ಒಬ್ಬರು ಬಿಟ್ಟಿರದೆ ಸ್ನೇಹದಿಂದ ಒಟ್ಟಿಗೇ ಇರುತ್ತಿದ್ದರು.

೨೩. ಚಂದ್ರನಿಂದ ಹೊರಕ್ಕೆ ಬಂದಿರುವ ಚಂದ್ರಿಕೆಯೋ ಎಂಬಂತೆ ಪ್ರಕಾಶಮಾನರಾಗಿರುವರು. ಚಂದ್ರನಂತೆ ಮುಖವುಳ್ಳವರು. ಚನ್ನಾಗಿರುವ ಕೂದಲುಳ್ಳವರು. ಚಂದ್ರನಲ್ಲಿರುವ ಅಮೃತವನ್ನೇ ತುಟಿಯಲ್ಲಿ ಹೊಂದಿರುವರು. (ಪ್ರಿಯವಾದಿನಿಯರು)

ನೇತ್ರೇಷ್ವಾನಂದಕಾರಿಣ್ಯಃ ಕೌಮುದ್ಯಃ ಕೈರವೇಷ್ವಿವ ।
ಲಾವಣ್ಯಪಿಂಡಸಂಭೂತಾ ವರರೂಪಾ ಮನೋಹರಾಃ ॥ ೨೪ ॥

ಉದ್ಭಿನ್ನಕುಚಕುಂಭಿನ್ಯಃ ಪದ್ಮಿನ್ಯ ಇವ ಮಾಧವೇ ।
ಉನ್ಮೀಲದ್ಯೌವನೈಃ ಕಾನ್ತಾ ವಲ್ಲೀವ ನವಪಲ್ಲವೈಃ ॥ ೨೫ ॥

ಹೇಮಗೌರಾಶ್ಚ ಹೇಮಾಭಾ ಹೇಮಾಲಂಕಾರಭೂಷಿತಾಃ ।
ಹೇಮಚಂಪಕಮಾಲಿನ್ಯೋ ಹೇಮಚ್ಛವಿಸುವಾಸಸಃ ॥ ೨೬ ॥

ಸ್ವರಗ್ರಾಮಾವಲೀಹಾಸು ವಿವಿಧಾಮೂರ್ಛನಾಸು ಚ ।
ತಾಲದಾನವಿನೋದೇಷು ವೇಣುವೀಣಾ ಪ್ರವಾದನೇ ॥ ೨೭ ॥

---

೨೪. ಚಂದ್ರಿಕೆಯು ಕನ್ನೈದಿಲೆಗೆ ಹೇಗೆ ಆನಂದವನ್ನುಂಟುಮಾಡುತ್ತದೆಯೋ ಹಾಗೆ ಎಲ್ಲರ ಕಣ್ಣಿಗೂ ಆನಂದವನ್ನುಂಟುಮಾಡತಕ್ಕವರು. ಲಾವಣ್ಯದ ಗಂಟಿನಿಂದಲೇ ಹುಟ್ಟಿದಂತಿದ್ದರು. ಸುಂದರಿಯರು. ಮನೋಹರರು.

೨೫. ವಸಂತಋತುವಿನಲ್ಲಿ ಸರೋವರದಲ್ಲಿ ಕಮಲದ ಮೊಗ್ಗುಗಳು ಹುಟ್ಟಿದಂತೆ ಹುಟ್ಟಿ ಇವರಿಗೆ ಪದ್ಮದ ಮೊಗ್ಗಿನಂತೆ ಸ್ತನಗಳು ಹೊರಗೆ ಕಾಣುತ್ತಿದ್ದುವು. ಯೌವನವು ವಿಕಾಸಿಸುತ್ತಿದ್ದಿತು. ಇದನ್ನು ನೋಡಿದರೆ ಹೊಸ ಚಿಗುರಿನಿಂದ ಪ್ರಕಾಶಿಸುವ ಬಳ್ಳಿಗಳಂತಿದ್ದರು.

೨೬. ಚಿನ್ನದಂತೆ ಹೊಂಬಣ್ಣವುಳ್ಳವರು. ಚಿನ್ನದಂತೆ ಕಾಂತಿಯುಳ್ಳವರು. ಚಿನ್ನದ ಒಡವೆಗಳನ್ನು ಹಾಕಿಕೊಂಡಿದ್ದರು. ಚಿನ್ನದಂತಿರುವ ಸಂಪಿಗೆಯ ಹೂವನ್ನು ಮುಡಿದಿದ್ದರು. ಚಿನ್ನದ ಬಣ್ಣದ ಬಟ್ಟೆಯನ್ನು ಹೊದ್ದಿದ್ದರು.

೨೭-೨೮. ಸಂಗೀತದ ಸ್ವರಗಳು, ಗ್ರಾಮಗಳು, ಅವಲೀಹಗಳು ಮತ್ತು ಮೂರ್ಛನೆಗಳು, ತಾಳಗಳು, ಕಾಲಗಳು, ಮಾನಗಳು, ಇವುಗಳಲ್ಲಿಯೂ, ಕೊಳಲು ವೀಣೆ ಇವುಗಳನ್ನು ನುಡಿಸುವುದರಲ್ಲಿಯೂ, ಕುಣಿಯುವುದು, ಮುಕ್ತಾಯ

ಮೃದಂಗನಾದಸಂಗೀತೇ ಲಾಸ್ಯಮಾರ್ಗಲಯೇಷು ಚ ।
ವಿಚಿತ್ರಾದಿ ವಿನೋದೇಷು ಕಲಾಸು ಚ ವಿಶಾರದಾಃ ॥ ೨೮ ॥

ಏವಂ ಭೂತಾಶ್ಚ ತಾಃ ಕನ್ಯಾ ಮುಮುದುಃ ಕ್ರೀಡನೈರ್ವರೈಃ ।
ಪಿತೃಭಿರ್ಲಾಲಿತಾಸ್ತತ್ರ ಚೈರುಶ್ಚ ಧನದಾಲಯೇ ॥ ೨೯ ॥

ಕೌತುಕಾದೇಕದಾ ಪಂಚ ಮಿಲಿತಾ ಮಾಸಿ ಮಾಧವೇ ।
ಕನ್ಯಾ ಮನ್ದಾರಪುಷ್ಪಾಣಿ ವಿಚಿನ್ವತ್ಯೋ ವನಾದ್ವನಂ ॥ ೩೦ ॥

ಗೌರೀಂ ಸಮಾರಾಧಯಿತುಂ ವರಾಂಗನಾಃ
ಕದಾಚಿದಚ್ಛೋದ ಸರೋವರಂ ಯಯುಃ ।
ಹೇಮಾಮ್ಬುಜಾನಿ ಪ್ರವಾರಾಣಿ ತಾಃ ಪುನಃ
ತಸ್ಮಾದುಪಾದಾಯ ವರೋತ್ಪಲೈಸ್ಸಹ । ॥ ೩೧ ॥

---

ಗಳನ್ನು ಕೊಡುವಿಕೆ, ಇವುಗಳಲ್ಲಿಯೂ ಅನೇಕ ಬಗೆಯಾದ ವಿನೋದಗಳ ಲ್ಲಿಯೂ ಅನೇಕ ಬಗೆಯ ಕಲೆಗಳಲ್ಲಿಯೂ, ಬಹುವಾದ ಜ್ಞಾನವನ್ನು ಹೊಂದಿದ್ದರು.

೨೯. ಈ ರೀತಿಯಾದ ಈ ಕನ್ಯೆಯರು ಅನೇಕವಾದ ಆಟಗಳಿಂದ ಸಂತೋಷಪಡುತ್ತಿದ್ದರು. ತಾಯಿತಂದೆಯರಿಂದ ಬಹುವಾಗಿ ಆದರಿಸಲ್ಪಟ್ಟವ ರಾಗಿ ಆ ಕುಬೇರನ ಊರಾದ ಆ ಲಂಕಾಪಟ್ಟಣದಲ್ಲಿ ಸುಖದಿಂದಿರುತ್ತಿದ್ದರು.

೩೦. ಈ ಐದು ಜನ ಕನ್ಯೆಯರೂ ಒಂದುಸಾರಿ ಒಟ್ಟುಗೂಡಿಕೊಂಡು ಮನ್ದಾರಪುಷ್ಪವನ್ನು ಕುಯ್ಯಲು ಕಾಡಿನಿಂದ ಕಾಡಿಗೆ ಸಂಚರಿಸುತ್ತಿದ್ದರು.

೩೧. ಅದೂ ಅಲ್ಲದೆ ಗೌರಿಯ ಪೂಜೆಗೋಸ್ಕರ ಚಿನ್ನದ ಕಮಲಗಳನ್ನೂ ಕನ್ನೆಯದೆಲೆಗಳನ್ನೂ ತೆಗೆದುಕೊಂಡು ಹೋಗಲು ಅಚ್ಛೋದ ಸರೋವರಕ್ಕೆ ಬಂದರು.

ವೈಡೂರ್ಯಶುಭ್ರ ಸ್ಫಟಿಕೇ ಪ್ರಕುಟ್ಟಿಮೇ
ಸ್ನಾತ್ವಾ ಸರಸ್ಯಾಂ ಪರಿಧಾಯ ಚಾಂಬರಂ ।
ಮೌನೇನ ಚ ಸ್ಥಂಡಿಲಪಿಂಡಿಕಾಮಯೀಂ
ಸುವರ್ಣಸಿಕ್ತಾಭಿರುಮಾಂ ವಿನಿರ್ಮಮುಃ ॥ ೩೨ ॥

ಆವಾಹ್ಯ ತಾಂ ಕುಂಕುಮಪಂಕಚಂದನೈ
ರಭ್ಯರ್ಚ್ಯ ಗೌರೀಂ ವರಪಂಕಜಾದಿಭಿಃ ।
ನಾನೋಪಚಾರೈಶ್ಚ ಸುಭಕ್ತಿಭಾವಿತಾ
ಲಾಸ್ಯಪ್ರಯೋಗೈರ್ನನೃತುಃ ಕುಮಾರಿಕಾಃ ॥ ೩೩ ॥

ಗಾಂಧಾರಮಾಶ್ರಿತ್ಯ ವರಂ ಸ್ವರಂ ತತೋ
ಗೇಯಂ ಸುತಾರಧ್ವನಿಭಿಃ ಸುಮೂರ್ಛಿತಂ ।
ಏಣೀದೃಶಸ್ತಾಃ ಪ್ರಜಗುಃ ಕಲಾಕ್ಷರಂ
ಚಾರು ಪ್ರಬಂಧಂ ಗತಿಭಿಶ್ಚ ಸುಸ್ವರಂ ॥ ೩೪ ॥

---

೩೨. ವೈಡೂರ್ಯದಂತೆ ಶುಭ್ರವಾದ ಸ್ಫಟಿಕಗಳ ಮೆಟ್ಟಲಿರುವ ಆ ಅಚ್ಛೋದ ಸರೋವರದ ಒಂದು ಭಾಗದಲ್ಲಿ ಸ್ನಾನಮಾಡಿ ಬೇರೆಯ ಮಡಿಬಟ್ಟೆಯನ್ನುಟ್ಟು ಕೊಂಡು ಮೌನವಾಗಿದ್ದುಕೊಂಡು ಮರಳುಂಡೆಯ ಗೌರಿಯನ್ನು ಚಿನ್ನದ ಮರಳಿ ನಿಂದ ಮಾಡಿದರು.

೩೩. ಆ ಮರಳುಂಡೆಯಲ್ಲಿ ಗೌರಿಯನ್ನು ಆವಾಹನೆಮಾಡಿ ಆಕೆಯನ್ನು ಕುಂಕುಮ ಹೂ ಗಂಧಗಳಿಂದ ಪೂಜಿಸಿ ಅನೇಕ ಉಪಚಾರಗಳನ್ನು ಮಾಡಿ ಭಕ್ತಿ ಯಿಂದ ಕೂಡಿದವರಾಗಿ ಅವಳೆದುರಿಗೆ ನರ್ತನವನ್ನು ಮಾಡುವುದಕ್ಕೆ ಮೊದಲು ಮಾಡಿದರು.

೩೪. ಮೊದಲು ಗಾಂಧಾರ ಸ್ವರವನ್ನು ಆಶ್ರಯಿಸಿ ಒಳ್ಳೆಯ ತಾರಧ್ವನಿ ಯಿಂದ ಚೆನ್ನಾಗಿ ಇರುವಂತೆ ಮೂರ್ಛನೆಗಳಿಂದ ಹಾಡುತ್ತಾ ಅದಕ್ಕೆ ಸರಿಯಾಗಿ ಕಾಲನ್ನು ಹಾಕಿ ಕುಣಿಯುತ್ತಾ ತಾಳವನ್ನು ಹಾಕುತ್ತಾ ಮನೋಹರವಾಗಿ ಹಾಡುತ್ತಾ ಕುಣಿಯುತ್ತಿದ್ದರು.

ತಸ್ಮಿನ್ ಸುತಾರೇ ರಸವರ್ಷಹರ್ಷದೇ
ಕನ್ಯಾಸ್ವಲಂ ನಿರ್ಭರಚಿತ್ತವೃತ್ತಿಷು ।
ಅಚ್ಛೋದತೀರ್ಥಪ್ರವರೇ ತದಾಗತಃ
ಸ್ನಾತುಂ ಮುನೇಃ ವೇದನಿಧೇಃ ಸುತೋಗ್ನಿಪಃ ॥ ೩೫ ॥

ರೂಪೇಣ ನಿಸ್ಸೀಮತರೋ ವರಾನನಃ
ಪಯೋಜಪತ್ರಾಯತಲೋಚನೋ ಯುವಾ ।
ವಿಸ್ತೀರ್ಣವಕ್ಷಾಃ ಸುಭುಜೋತಿಸುಂದರಃ
ಶ್ಯಾಮಚ್ಛವಿಃ ಕಾಮ ಇವಾಪರೋ ಹಿ ಸಃ ॥ ೩೬ ॥

ಸ ಬ್ರಹ್ಮಚಾರೀ ಸುಶಿಖೋ ವಿರಾಜತೇ
ದಂಡೇನ ಯುಕ್ತೋ ಧನುಷೇವ ಮನ್ಮಥಃ ।
ಏಣಾಜಿನಪ್ರಾವರಣಃ ಸುಸೂತ್ರಧೃಕ್ ।
ಹೇಮಾಭಮೌಂಜೀಕಟಿಸೂತ್ರಮೇಖಲಃ ॥ ೩೭ ॥

---

೩೫. ಈ ಕನ್ನಿಕೆಯರು ಬೆಳಗ್ಗೆ ನಕ್ಷತ್ರವು ಕಾಣುತ್ತಿರುವಾಗ ಹರ್ಷವು ಹೆಚ್ಚುತ್ತಿರುವ ಹೊತ್ತಿನಲ್ಲಿ ಭಕ್ತಿಯಿಂದ ಪೂಜಿಸುತ್ತಿರಲು ಆ ಅಚ್ಛೋದ ಸರೋವರದಲ್ಲಿ ಸ್ನಾನಮಾಡಲು ವೇದನಿಧಿಯ ಮಗನಾದ ಅಗ್ನಿಪನೆಂಬುವನು ಬಂದನು.

೩೬. ಅವನು ರೂಪಿನಲ್ಲಿ ಸೌಂದರ್ಯದ ಎಲ್ಲೆಯನ್ನು ಮೀರಿಯೂ ಆಜಾನುಬಾಹುವಾಗಿಯೂ, ಕಮಲದಂತೆ ಕಣ್ಣುಳ್ಳವನಾಗಿಯೂ, ಅಗಲವಾದ ಎದೆಯುಳ್ಳವನಾಗಿಯೂ, ಚೆನ್ನಾಗಿರುವ ಭುಜಗಳುಳ್ಳವನಾಗಿಯೂ, ಮನೋಹರವಾದ ಕಾಂತಿಯುಳ್ಳವನಾಗಿಯೂ, ಯುವಕನಾಗಿಯೂ ಇದ್ದನು. ಇವನನ್ನು ನೋಡಿದರೆ ಮತ್ತೊಬ್ಬ ಮನ್ಮಥನಂತೆ ಇದ್ದನು.

೩೭. ಅವನು ಬ್ರಹ್ಮಚಾರಿಯು. ಚೆನ್ನಾಗಿರುವ ಜುಟ್ಟುಳ್ಳವನು. ಇವನು ದಂಡುಕೋಲನ್ನು ಹಿಡಿದುಕೊಂಡಿರುವುದನ್ನು ನೋಡಿದರೆ ಧನುಸ್ಸನ್ನು ಹಿಡಿದಿರುವ ಮನ್ಮಥನಂತಿದ್ದನು. ಕೃಷ್ಣಾಜಿನವನ್ನು ಹೊದೆದಿದ್ದನು. ಒಳ್ಳೆಯ ಯಜ್ಞೋಪವೀತವನ್ನು ಧರಿಸಿದ್ದನು. ಚಿನ್ನದ ಮೌಂಜಿಯನ್ನು ಹಾಕಿಕೊಂಡಿದ್ದನು.

ತಂ ದೃಷ್ಟ್ವಾ ಬ್ರಾಹ್ಮಣಂ ಬಾಲಾಸ್ತಾಸ್ತತ್ರ ಸರಸೀತಟೇ ।
ಜಹೃಷುಃ ಕೌತುಕಾವಿಷ್ಟಾಃ ಕೋಽಯಂ ನೋ ನಯನಾತಿಥಿಃ ॥ ೩೮ ॥

ಸಂತ್ಯಕ್ತನೃತ್ತಗೀತಾಸ್ತಾಸ್ತಸ್ಯಾಲೋಕನಲಾಲಸಾಃ ।
ಹರಿಣ್ಯೋಽ ಲುಬ್ಧಕೇನೇವ ವಿದ್ಧಾಃ ಕಾಮೇನ ಸಾಯಕೈಃ ॥ ೩೯ ॥

ಪಶ್ಯ ಪಶ್ಯೇತಿ ಜಲ್ಪಂತ್ಯೋಽ ಮುಗ್ಧಾಃ ಪಂಚ ಸುಸಂಭ್ರಮಂ ।
ತಸ್ಮಿನ್ನಿಪ್ರವರೇ ಯೂನಿ ಕಾಮದೇವಭ್ರಮಂ ಯಯುಃ ॥ ೪೦ ॥

ಪುನಃ ಪುನಸ್ತಮಭ್ಯರ್ಚ್ಯ ನಯನೈಃ ಪಂಕಜೈರಿವ ।
ಪಶ್ಚಾದ್ವಿಚಾರ ಆರಬ್ಧಶ್ಚಾಸ್ಸರೋಽಭಿಃ ಪರಸ್ಪರಂ ॥ ೪೧ ॥

---

೩೮. ಅವನನ್ನು ನೋಡಿ ಆಶ್ಚರ್ಯಗೊಂಡು ನಮ್ಮ ಕಣ್ಣಿಗೆ ಬಿದ್ದವನು ಇವನಾರು? ಇವನು ಏತಕ್ಕೆ ಈ ಸರೋವರಕ್ಕೆ ಬಂದನು? ಎಂದು ಯೋಚಿಸುತ್ತಾ ಸಂತೋಷಪಟ್ಟರು.

೩೯–೪೦. ಆ ಕನ್ಯೆಯರು ಅವನನ್ನು ನೋಡಿದ ಕೂಡಲೆ ತಮ್ಮ ಹಾಡುವಿಕೆ ಕುಣಿಯುವಿಕೆಗಳನ್ನು ಬಿಟ್ಟುಬಿಟ್ಟರು. ಬೇಡನು ಬಾಣಗಳನ್ನು ಹೊಡೆದರೆ ಮೃಗಗಳು ತಮ್ಮ ಕ್ರಿಯೆಗಳನ್ನು ಬಿಡುವಂತೆ ಕಾಮನ ಬಾಣದಿಂದ ಹೊಡೆಯಲ್ಪಟ್ಟು ನೃತ್ಯಗೀತಗಳನ್ನು ಬಿಟ್ಟುಬಿಟ್ಟರು. ಆ ಐದು ಜನರೂ "ನೋಡು ನೋಡು" ಎಂಬುದಾಗಿ ನೋಡುತ್ತಾ ಆ ಯುವಕನಲ್ಲಿ ಇವನು ಕಾಮದೇವನೇ ಇರಬೇಕೆಂಬ ಭ್ರಾಂತಿಯನ್ನು ಹೊಂದಿದರು.

೪೧. ಅವರು ಕಣ್ಣುಗಳೆಂಬ ಕಮಲಗಳಿಂದ ಅವನನ್ನು ಅನೇಕ ಬಾರಿ ಪೂಜಿಸಿ ಎಂದರೆ ಬಹುವಾಗಿ ನೋಡಿ ಅನಂತರ ಒಬ್ಬರಿಗೊಬ್ಬರು ವಿಚಾರ ಮಾಡಲುಪಕ್ರಮಿಸಿದರು.

|| ಕನ್ಯಾ ಊಚುಃ ||

**ಯದ್ಯಯಂ ಕಾಮದೇವಸ್ಸ್ಯಾತ್ ರತಿಹೀನಃ ಕಥಂ ಚರೇತ್ ।**
**ಅಹೋಸ್ವಿದಶ್ವಿನೌ ದೇವೌ ತೌ ಲೋಕೇ ಯುಗ್ಮಚಾರಿಣೌ** || ೪೨ ||

**ಗಂಧರ್ವಃ ಕಿನ್ನರೋ ವಾಥ ಸಿದ್ಧೋ ವಾ ಕಾಮರೂಪಧೃಕ್ ।**
**ಋಷಿಪುತ್ರೋಽಥವಾ ಕಶ್ಚಿತ್ ಕಶ್ಚಿದ್ವಾ ಮಾನುಷೋತ್ತಮಃ** || ೪೩ ||

**ಅಥವಾ ಕಶ್ಚಿದೇವಾಯಂ ಧಾತ್ರಾ ಸೃಷ್ಟೋ ಹಿ ನಃ ಕೃತೇ ।**
**ಯಥಾ ಭಾಗ್ಯವತಾಮರ್ಥೇ ನಿಧಾನಂ ಪೂರ್ವಕರ್ಮಭಿಃ** || ೪೪ ||

**ತಥಾಸ್ಮಾಕಂ ಕುಮಾರೀಣಾಂ ಗೌರ್ಯಾನೀತೋ ನರೋತ್ತಮಃ ।**
**ಕರುಣಾಜಲಕಲ್ಲೋಲಪ್ಲವಾದ್ರೀಕೃತಚಿತ್ತಯಾ** || ೪೫ ||

---

೪೨. ಕನ್ಯೆಯರು ಹೇಳಿದರು–ಇವನೇನಾದರೂ ಕಾಮದೇವನಿರಬಹುದೆ? ಹಾಗಾದರೆ ಜೊತೆಯಲ್ಲಿ ರತಿಯಿರಬೇಕಲ್ಲ! ಅವಳು ಇಲ್ಲದಿರುವುದರಿಂದ ಇವನು ಕಾಮದೇವನಲ್ಲ. ಅಶ್ವಿನೀದೇವತೆಗಳಾಗಿರಬಹುದೆ? ಅವರು ಯಾವಾಗಲೂ ಇಬ್ಬರೂ ಜೊತೆಯಲ್ಲಿ ಸಂಚರಿಸತಕ್ಕವರು. ಆದುದರಿಂದ ಅವರೂ ಅಲ್ಲ.

೪೩. ಗಂಧರ್ವನೇನಾದರೂ ಇರಬಹುದೆ? ಅಥವಾ ಕಿನ್ನರನಿರಬಹುದೆ? ಇಲ್ಲದಿದ್ದರೆ ಇಷ್ಟಬಂದ ರೂಪವನ್ನು ಹೊಂದುವ ಸಿದ್ಧನಾಗಿರಬಹುದೆ? ಇಲ್ಲವೆ ಯಾವನಾದರೂ ಋಷಿಯ ಮಗನೋ? ಮನುಷ್ಯರಲ್ಲಿ ಉತ್ತಮನಾದ ಯಾವನಾದರೂ ಒಬ್ಬನು ಆಗಿರಬಹುದೆ?

೪೪. ಭಾಗ್ಯವಂತರು ಭಾಗ್ಯವನ್ನು ಅನುಭವಿಸುವುದಕ್ಕೋಸ್ಕರ ತಮ್ಮ ಪೂರ್ವ ಪುಣ್ಯವು ನಿಧಿಯನ್ನು ಸೃಷ್ಟಿಸುವಂತೆ ನಮಗೋಸ್ಕರಲೇ ಬ್ರಹ್ಮನು ಯಾರನ್ನಾದರೂ ಸೃಷ್ಟಿಮಾಡಿ ಕಳುಹಿಸಿರುವನೊ?

೪೫. ಅದೇ ರೀತಿಯಲ್ಲಿ ಕರುಣೆಯೆಂಬ ನೀರಿನ ಅಲೆಗಳಿಂದ ನೆನೆಯುತ್ತಿರುವ ಮನಸ್ಸುಳ್ಳ ಗೌರಿಯು ನಮಗೋಸ್ಕರವಾಗಿಯೇ ಈ ಉತ್ತಮನಾದ ಪುರುಷನನ್ನು ಕರೆದುತಂದಿರಬಹುದೆ?

ಮಯಾ ವೃತಸ್ತ್ವಯಾ ಚಾಯಂ ವೃತಶ್ಚಾಯಂ ಮಯೇತಿ ಚ ।
ಏವಂ ಪಂಚಸು ಕನ್ಯಾಸು ವದನ್ತೀಷು ನೃಪೋತ್ತಮ ॥ ೪೬ ॥

॥ ವಸಿಷ್ಠ ಉವಾಚ ॥

ಶ್ರುತ್ವಾ ತದ್ವಚನಂ ತತ್ರ ಕೃತಮಾಧ್ಯಾಹ್ನಿಕಕ್ರಿಯಃ ।
ಆಲೋಚ್ಯ ಹೃದಯೇ ಸೋಽಪಿ ವಿಘ್ನೋತದುಪಸ್ಥಿತಂ ॥ ೪೭ ॥

॥ ಋಷಿಕುಮಾರ ಉವಾಚ ॥

ಬ್ರಹ್ಮವಿಷ್ಣುಗಿರಿಶಾದಯಃ ಸುರಾ ಯೇಽಪಿ ಸಿದ್ಧಮುನಯಃ ಪುರಾವಿದಃ ।
ತೇಽಪಿ ಯೋಗಬಲಿನೋ ವಿಮೋಹಿತಾ ಲೀಲಯಾ
ತದಬಲಾಭಿರದ್ಭುತಂ ॥ ೪೮ ॥

ಯೋಷಿತಾಂ ನಯನತೀಕ್ಷ್ಣಸಾಯಕೈರ್ಭ್ರೂಲತಾಕುಟಿಲಚಾಪನಿರ್ಗತೈಃ ।
ಧನ್ವಿನಾ ಮಕರಕೇತುನಾ ಹತಃ ಕಸ್ಯ ನೋ ಪತತಿ ಹಾ ಮನೋಮೃಗಃ॥೪೯॥

---

೪೬. ಹೀಗೆ ಆ ಐದುಜನ ಕನ್ಯೆಯರೂ ಯೋಚಿಸುತ್ತಾ ನಾನು ಇವನನ್ನು ವರಿಸಿರುವೆನು, ನಾನು ಇವನನ್ನು ವರಿಸಿರುವೆನು, ನೀನು ಇವನನ್ನು ವರಿಸಿದ್ದೀಯೆ, ನಾನು ವರಿಸಿದ್ದೇನೆ, ಎಂಬುದಾಗಿ ಹೇಳಲು ಮೊದಲು ಮಾಡಿದರು.

೪೭. ವಸಿಷ್ಠನು ಹೇಳಿದನು–ಆ ಕುಮಾರನು ಇವರ ಮಾತುಗಳನ್ನು ಕೇಳಿ ಮಾಧ್ಯಾಹ್ನಿಕವನ್ನು ಮಾಡಿಕೊಂಡು ಇದೇನೋ ವಿಘ್ನವು ಬಂದಿತೆಂದು ಮನಸ್ಸಿನಲ್ಲಿಯೇ ಯೋಚಿಸುತ್ತಿದ್ದನು.

೪೮. ಋಷಿಕುಮಾರನು ಹೇಳಿದನು –ಬ್ರಹ್ಮ, ವಿಷ್ಣು, ಶಿವರೇ ಮುಂತಾದ ದೇವತೆಗಳೂ ಸಿದ್ಧರೂ ಮುನಿಗಳೂ ಹಿಂದಿನ ವಿಷಯವನ್ನು ತಿಳಿದವರೂ ಕೂಡ ಯೋಗಿಗಳಾಗಿದ್ದರೂ ಅಬಲೆಯವರಿಂದ ಬಹು ಸುಲಭವಾಗಿಯೇ ಮೋಹಗೊಳಿಸಲ್ಪಟ್ಟಿದ್ದಾರೆ. ಇದು ಆಶ್ಚರ್ಯವು.

೪೯. ಬಿಲ್ಲಾಳಾದ ಮನ್ಮಥನು ಬಿಟ್ಟ ಹೆಂಗಸರ ಹುಬ್ಬೆಂಬ ಡೊಂಕಾದ ಬಿಲ್ಲಿನಿಂದ ಹೊರಟ ಕಡೆಗಣ್ಣೆಂಬ ಕ್ರೂರವಾದ ಬಾಣದಿಂದ ಯಾವನ ಮನಸ್ಸೆಂಬ ಮೃಗವು ತಾನೇ ಸಾಯದೆ ಇರುವುದು?

ತಾವದೇವ ನಯಧೀರ್ವಿರಾಜತೇ ತಾವದೇವ ಜನತಾಭಯಂ ಭವೇತ್ ।
ತಾವದೇವ ಧೃಡಚಿತ್ತತಾ ಭೃಶಂ ತಾವದೇವ ಗಣನಾ ಕುಲಸ್ಯ ಚ ॥ ೫೦ ॥

ತಾವದೇವ ತಪಸಃ ಪ್ರಗಲ್ಭತಾ ತಾವದೇವ ಯಮಸೇವನಂ ನೃಣಾಂ ।
ಯಾವದೇವ ವನಿತೇಕ್ಷಣಾಸವೈರ್ಮಾದ್ಯತೇದ್ಭುತಮದೈರ್ನ ಪೂರುಷಃ॥೫೧॥

ಮೋಹಯನ್ತು ಮದಯನ್ತು ರಾಗಿಣೋ
ಯೋಷಿತಃ ಸ್ವಲಿಲತೈರ್ಮನೋಹರೈಃ ।
ಮೋಹಯನ್ತಿ ಮದಯನ್ತಿ ಮಾಮಿಮಾ
ಧರ್ಮರಕ್ಷಣಪರಂ ಹಿ ಕೈರ್ಗುಣೈಃ ॥ ೫೨ ॥

ಮಾಂಸರಕ್ತಮಲಮೂತ್ರನಿರ್ಮಿತೇ
ಯೋಷಿತಾಂ ವಪುಷಿ ನಿರ್ಗುಣೇಽಶುಚೌ ।
ಕಾಮಿನಶ್ಚ ಪರಿಕಲ್ಪ್ಯ ಚಾರುತಾಂ
ಹಾ ರಮಂತಿ ಸುವಿಮೂಢಚೇತಸಃ ॥ ೫೩ ॥

---

೫೦–೫೧. ಮನುಷ್ಯನು ಎಲ್ಲಿಯವರೆಗೆ ಹೆಂಗಸರ ಕಣ್ಣಿನ ನೋಟವೆಂಬ ಮದ್ಯವನ್ನು ಕುಡಿದು ಮದಿಸದಿರುವನೋ ಅಲ್ಲಿಯವರೆಗೇನೆ ಅವನಿಗೆ ದೃಢವಾದ ಮನಸ್ಸಿರುವುದು. ಅಲ್ಲಿಯವರಗೇನೆ ಜನಗಳಲ್ಲಿ ಭಯವೂ ಇರುತ್ತದೆ. ಅಲ್ಲಿಯವರೆಗೇನೆ ತನ್ನ ವಂಶದ ಗೌರವವನ್ನು ಕಾಪಾಡುವನು. ಅಲ್ಲಿಯವರೆಗೇನೆ ಅವನ ತಪಸ್ಸಿನ ಪ್ರೌಢಿಮೆಯೂ ಕೂಡ ಇರುವುದು. ಅಲ್ಲಿಯವರೆಗೇನೆ ಅವನ ನಿಯಮಗಳೆಲ್ಲವೂ ಪ್ರಕಾಶಿಸುವುವು.

೫೨. ಹೆಂಗಸರಾದವರು ತಮ್ಮಲ್ಲಿ ಸೇರಿಕೊಂಡು ಸುಖಪಡುವ ಅನುರಾಗವುಳ್ಳವರನ್ನು ಬೇಕಾದರೆ ಮೋಹಪಡಿಸಲಿ. ಮದ ಬರುವನ್ತೆ ಮಾಡಲಿ. ಆದರೆ ಧರ್ಮವನ್ನೇ ರಕ್ಷಿಸಿಕೊಂಡಿರುವ ನನ್ನನ್ನು ಇವರು ಯಾವ ಗುಣದಿಂದ ತಾನೇ ಮೋಹಗೊಳಿಸಬಲ್ಲರು? ಮದಬರುವಂತೆ ಮಾಡಬಲ್ಲರು?

೫೩. ಮಾಂಸ ರಕ್ತ ಮಲ ಮೂತ್ರಗಳಿಂದ ನಿರ್ಮಿತವಾದ ಗುಣವಿಲ್ಲದ ಅಶುಚಿಯಾದ ಈ ಹೆಂಗಸರ ಶರೀರದಲ್ಲಿ ಕಾಮಿಗಳಾದವರು ಮನೋಹರತೆಯನ್ನು ಕಲ್ಪಿಸಿಕೊಂಡು ದಡ್ಡತನವನ್ನು ಹೊಂದಿ ಸುಖಿಸುತ್ತಾರೆ.

ದಾರುಣೋ ಹಿ ಪರಿಕೀರ್ತಿತೋಂಗನಾ
ಸನ್ನಿಧಿರ್ವಿಮಲಬುದ್ಧಿಭಿರ್ನರೈಃ ॥
ಯಾವದತ್ರ ನ ಸಮೀಪಗಾ ಇಮಾಃ
ತಾವದೇವ ಹಿ ಗೃಹಂ ವ್ರಜಾಮ್ಯಹಂ ॥ ೫೪ ॥

॥ ವಸಿಷ್ಠ ಉವಾಚ ॥

ಸಮೀಪಂ ತಸ್ಯ ಯಾವದ್ಧಿ ನಾಗಚ್ಛಂತಿ ವರಾಂಗನಾಃ ॥
ವೈಷ್ಣವೇನ ಪ್ರಭಾವೇನ ತಾವದಂತರ್ದಧೇ ದ್ವಿಜಃ ॥ ೫೫ ॥

ತಸ್ಯ ಯೋಗಬಲಾದ್ಭೂಪ ಗತಸ್ಯಾದರ್ಶನಂ ತದಾ ।
ದೃಷ್ಟ್ವಾ ತದದ್ಭುತಂ ಕರ್ಮ ವೈಷ್ಣವಂ ಬ್ರಹ್ಮಚಾರಿಣಃ ॥ ೫೬ ॥

ವಿತ್ರಸ್ತನಯನಾ ಬಾಲಾಃ ಕುರಂಗ್ಯ ಇವ ಕಾತರಾಃ ।
ಸಂಭ್ರಾಂತ ನಯನಾಶ್ಶೂನ್ಯಾ ದದೃಶುಸ್ತಾ ದಿಶೋ ದಶ ॥ ೫೭ ॥

---

೫೪. ಪವಿತ್ರವಾದ ದೂರಾಲೋಚನೆಯ ಬುದ್ಧಿಯುಳ್ಳ ವಿದ್ವಾಂಸರು ಹೆಂಗಸರ ಬಳಿಯಲ್ಲಿ ಗಂಡಸರು ಇರುವುದು ಬಹು ಕೆಟ್ಟದೆಂದು ಹೇಳಿದ್ದಾರೆ. ಈ ಹೆಂಗಸರು ನನ್ನ ಬಳಿಗೆ ಬರುವುದರೊಳಗಾಗಿ ನಾನು ಮನೆಗೆ ಹೊರಟು ಹೋಗುತ್ತೇನೆ.

೫೫. ವಸಿಷ್ಠನು ಹೇಳಿದನು—ಆ ಹೆಂಗಸರು ಇವನ ಹತ್ತಿರ ಬರುವುದರೊಳಗಾಗಿಯೇ ಆತನು ತನ್ನ ವೈಷ್ಣವ ಪ್ರಭಾವದಿಂದ ಅವರಿಗೆ ಕಾಣದಂತೆ ಮರೆಯಾದನು.

೫೬-೫೭. ಆ ಬ್ರಹ್ಮಚಾರಿಯು ತನ್ನ ಯೋಗಬಲದಿಂದ ಕಾಣದಂತೆ ಮಾಯವಾಗಲು ಈ ವೈಷ್ಣವ ಬ್ರಹ್ಮಚಾರಿಯ ಅದ್ಭುತವಾದ ಕೆಲಸವನ್ನು ನೋಡಿ ಆ ಹೆಂಗಸರು ಹೆದರಿಕೆಯಿಂದ ಅತ್ತಿತ್ತ ನೋಡುತ್ತಾ ಜಿಂಕೆಗಳಂತೆ ಹೆದರಿದರು. ಭ್ರಾಂತಿಗೊಂಡು ತಮ್ಮ ಕಣ್ಣಿನಿಂದ ನಿರಾಶೆಯನ್ನು ತೋರಿಸುತ್ತಾ ಹತ್ತು ದಿಕ್ಕುಗಳನ್ನೂ ನೋಡುತ್ತಿದ್ದರು.

ಇಂದ್ರಜಾಲಂ ಸ್ಫುಟಂ ವೇತ್ತಿ ಮಾಯಾಂ ಜಾನಾತಿ ವಾ ಪುನಃ ।
ದೃಷ್ಟೋಽಪ್ಯದೃಷ್ಟರೂಪೋ ಭೂದಿತ್ಯೂಚುಶ್ಚ ಪರಸ್ಪರಂ ॥ ೫೮ ॥

ತಪ್ತಂ ಚ ಹೃದಯಂ ತಾಸಾಂ ತಸ್ಯೈವ ಹೃಚ್ಛಯಾಗ್ನಿನಾ ।
ಜ್ವಲದ್ದಾವಾನಲೇನೇವ ಸುದಗ್ಧಂ ಸಾಂದ್ರಕಾನನಂ ॥ ೫೯ ॥

॥ ಕನ್ಯಾ ಊಚುಃ ॥

ತ್ಯಕ್ತ್ವೇಂದ್ರಜಾಲಿಕಾಂ ವಿದ್ಯಾಂ ಕಾಂತ ದರ್ಶಯ ಸತ್ವರಂ ।
ಸ್ವಾತ್ಮಾನಂ ನ ಹಿ ತೇ ಯುಕ್ತಂ ಪ್ರಾಗ್ಗ್ರಾಸೇ ಮಕ್ಷಿಕೋಪಮಂ ॥ ೬೦ ॥

ಹಾ ಕಷ್ಟಂ ದರ್ಶಿತಃ ಕಸ್ಮಾದ್ಧಾತ್ರಾ ತ್ವಂ ಘಟಿತಃ ಕುತಃ ।
ಜ್ಞಾತಂ ಮಹಾನುಸಂತಾಪಹೇತೋರ್ನಸ್ತ್ವಂ ವಿನಿರ್ಮಿತಃ ॥ ೬೧ ॥

---

೫೮. ಈತನು ಇಂದ್ರಜಾಲವನ್ನು ಚೆನ್ನಾಗಿಬಲ್ಲನು. ಅಥವಾ ಮಾಯೆಯನ್ನಾದರೂ ಚೆನ್ನಾಗಿ ಅಭ್ಯಾಸ ಮಾಡಿರುವನು. ಕಣ್ಣಿಗೆ ಕಾಣುತ್ತಿದ್ದರೂ ಕೂಡ ಒಡನೆಯೇ ಮರೆಯಾದನಲ್ಲ! ಎಂಬುದಾಗಿ ಒಬ್ಬರಿಗೊಬ್ಬರು ಆಡಿಕೊಳ್ಳುತ್ತಿದ್ದರು.

೫೯. ಉರಿಯುತ್ತಿರುವ ಕಾಳ್ಗಿಚ್ಚಿನಿಂದ ದಟ್ಟವಾದ ಕಾಡು ಬೆಂದು ಹೋಗುವಂತೆ ಆ ಬ್ರಹ್ಮಚಾರಿಯಲ್ಲಿಟ್ಟಿರುವ ಮನಸ್ಸಿನಿಂದ ತಾವು ಹೊಂದಿದ್ದ ಮನ್ಮಥನಬಾಧೆಯೆಂಬ ಬೆಂಕಿಯಿಂದ ಅವರ ಹೃದಯವು ಸುಟ್ಟುಹೋಯಿತು.

೬೦. ಕನ್ಯೆಯರು ಹೇಳಿದರು–ಎಲೈ ಕಾನ್ತನೆ! ಈ ಇಂದ್ರಜಾಲದ ವಿದ್ಯೆಯನ್ನು ಬಿಟ್ಟು ಬಿಟ್ಟು ನಿನ್ನ ರೂಪವನ್ನು ತೋರಿಸು. ಊಟಮಾಡಬೇಕೆಂದು ಹಸಿವಿನಿಂದ ಊಟಮಾಡಲು ಕುಳಿತೊಡನೆಯೇ ಮೊದಲನೆಯ ತುತ್ತಿನಲ್ಲಿಯೇ ನೊಣವು ಸಿಕ್ಕಿ ಆ ಅನ್ನವು ಹೊಟ್ಟೆಗೆ ಸೇರದನ್ತೆ ಹೇಗೆ ಆಗುವುದೋ ಹಾಗೆ ನಿನ್ನ ದೇಹವನ್ನು ಮುಚ್ಚಿಕೊಂಡು ನಮ್ಮನ್ನು ವಂಚಿಸುತ್ತಿರುವೆಯಲ್ಲ!

೬೧. ಅಯ್ಯೋ! ದೇವರು ನಿನ್ನನ್ನು ನಮಗೆ ಏಕೆತೋರಿಸಿದನು? ನಿನ್ನನ್ನೇಕೆ ಇಲ್ಲಿಗೆ ಬರಮಾಡಿದನು? ಓಹೋ! ಈಗ ಗೊತ್ತಾಯಿತು! ನಮಗೆ ಬಹು ಸಂಕಟವೂ ದುಃಖವೂ ಉಂಟಾಗಲೆಂದೇ ದೇವರು ನಿರ್ಮಿಸಿ ನಮಗೆ ತೋರಿಸಿದನು.

**ಕಚ್ಚಿತ್ತೇ ನಿರ್ದಯಂ ಚೇತಃ ಕಚ್ಚಿದಸ್ಮಾಸು ನೋ ಮತಿಃ |**
**ಕಚ್ಚಿದ್ಧೂರ್ತೋಽಸಿ ಹೇ ಕಾಂತ ಕಚ್ಚಿನ್ಮುಷ್ಣಾಸಿ ನೋ ಮನಃ ॥ ೬೨ ॥**

**ಕಚ್ಚಿನ್ನ ಪ್ರತ್ಯಯೋಽಸ್ಮಾಸು ಕಚ್ಚಿದಸ್ಮಾನ್ ಪರೀಕ್ಷಸೇ |**
**ಕಚ್ಚಿನ್ನರ್ಮಕಲಾಶೀಲಃ ಕಚ್ಚಿನ್ಮಾಯಾವಿಶಾರದಃ ॥ ೬೩ ॥**

**ಕಚ್ಚಿಚ್ಚಿತ್ತೇ ಪ್ರವಿಷ್ಟಸ್ತ್ವಂ ವೇತ್ಸಿ ವಿಜ್ಞಾನಲಾಘವಂ |**
**ಕಚ್ಚಿನ್ನಿರ್ಗಮನೋಪಾಯಂ ನ ಜಾನಾಸಿ ಕುತಃ ಪುನಃ ॥ ೬೪ ॥**

**ಕಚ್ಚಿದ್ವಿನಾಪರಾಧಂ ತು ತ್ವಮಸ್ಮಾಸು ಪ್ರಕುಪ್ಯಸೇ |**
**ಕಚ್ಚಿದ್ದುಃಖಂ ನ ಜಾನಾಸಿ ಪರೇಷಾಂ ವಿಪ್ರಲಂಭನಂ ॥ ೬೫ ॥**

---

೬೨-೬೩. ನಿನ್ನ ಮನಸ್ಸು ದಯವಿಲ್ಲದಿರತಕ್ಕುದಾಗಿರಬಹುದೆ ? ನಮ್ಮ ವಿಷಯದಲ್ಲಿ ನಿನಗೆ ಮನಸ್ಸಿಲ್ಲವೊ ? ನೀನೇನಾದರೂ ನಮ್ಮನ್ನು ಪರೀಕ್ಷಿಸಬೇಕೆಂದು ಧೂರ್ತತನಮಾಡುತ್ತಿರುವೆಯೋ ? ನಮ್ಮ ಮನಸ್ಸನ್ನು ಕದ್ದುಕೊಂಡಹೋಗುತ್ತಿರುವೆಯೋ ? ನಮ್ಮಲ್ಲಿ ನಿನಗೆ ನಂಬಿಕೆಯಿಲ್ಲದಿರಬಹುದೆ ? ಇಲ್ಲದ್ದಿದ್ದರೆ ನಮ್ಮನ್ನು ಪರೀಕ್ಷಿಸುತ್ತಿರುವೆಯೋ ? ಅಥವಾ ದುಃಖಪಡಿಸಿ ಅನಂತರ ನೋಡಬೇಕೆಂಬ ಬುದ್ಧಿಯುಳ್ಳವನೋ ? ಇಲ್ಲವೆ ಮಾಯೆಯಲ್ಲಿಯೇ ಗಟ್ಟಿಗನಾಗಿರುವೆಯೋ ?

೬೪. ನೀನು ಅಣಿಮಾದಿಮಹಿಮೆಗಳಲ್ಲಿ ಲಘುವಾಗುವಿಕೆಯನ್ನು ತಿಳಿದಿರಬಹದು. ಆದ್ದರಿಂದಲೇ ನಮ್ಮ ಮನಸ್ಸಿನೊಳಗೆ ಹೊಕ್ಕಿದ್ದೀಯೆ. ಆದರೆ ಹೊರಗೆಬರಲು ಉಪಾಯವನ್ನು ತಿಳಿಯದಿರುವೆಯಾ ? ಆದ್ದರಿಂದಲೇ ಕಾಣದಿರುವೆಯೇನೋ ?

೬೫. ನಾವು ತಪ್ಪುಮಾಡದಿದ್ದರೂ ನಮ್ಮ ಮೇಲೆ ನೀನೇನಾದರೂ ಕೋಪಗೊಂಡಿರುವೆಯಾ ! ಇತರರಿಗೆ ವಿರಹದಿಂದ ಉಂಟಾಗುವ ದುಃಖವನ್ನು ನೀನು ತಿಳಿಯದಿರುವೆಯಾ ?

ತ್ವದ್ದರ್ಶನಂ ವಿನಾ ನೂನಂ ಹೃದಯೇಶ್ವರ ಸಾಂಪ್ರತಂ ।
ನ ಜೀವಾಮೋಥ ಜೀವಾಮಃ ಪುನಸ್ಸಂದರ್ಶನೇನ ತೇ ॥ ೬೬ ॥

ನೀಯಂತಾಂ ಚ ವಯಂ ತತ್ರ ಶೀಘ್ರಂ ಯತ್ರ ಗತೋ ಭವಾನ್ ।
ತ್ವದ್ದರ್ಶನಹರೋ ಧಾತಾ ವ್ಯಥಾನ್ಮೋಹಾಂಕುರಚ್ಛಿದಾಂ ॥ ೬೭ ॥

ಸರ್ವಥಾ ದರ್ಶನಂ ದೇಹಿ ಕಾರುಣ್ಯಂ ಭಜ ಸರ್ವಥಾ ।
ಪರ್ಯಂತಂ ನ ಪ್ರಪಶ್ಯಂತಿ ಕಸ್ಯಚಿತ್ಸಜ್ಜನಾ ಜನಾಃ ॥ ೬೮ ॥

॥ ವಸಿಷ್ಠ ಉವಾಚ ॥

ಇತ್ಥಂ ವಿಲಪ್ಯ ತಾಃ ಕನ್ಯಾಃ ಪ್ರತೀಕ್ಷ್ಯ ಚಪಲೇಕ್ಷಣಾಃ ।
ಪಿತುರ್ಭಯಾದ್ಗೃಹಂ ಗಂತುಂ ಶೀಘ್ರಮಾರೇಭಿರೇ ತತಃ ॥ ೬೯ ॥

---

೬೬. ಎಲೈ ಹೃದಯೇಶ್ವರನೆ! ನಿನ್ನ ದರ್ಶನವಿಲ್ಲದಿದ್ದರೆ ಈಗ ನಾವು ಖಂಡಿತವಾಗಿಯೂ ಬದುಕುವುದಿಲ್ಲ. ನಿನ್ನ ದರ್ಶನವಾದರೆ ಖಂಡಿತವಾಗಿಯೂ ಆಗ ಬದುಕುತ್ತೇವೆ.

೬೭. ಎಲೈ ಕಾಂತನೆ! ನೀನು ಎಲ್ಲಿಹೋಗಿರುವೆಯೋ ಅಲ್ಲಿಗೆ ನಮ್ಮನ್ನು ಕರೆದುಕೊಂಡು ಹೋಗು. ನಿನ್ನ ದರ್ಶನವನ್ನು ಮಾಡಿಸಿದ ಬ್ರಹ್ಮನೇ ಮೋಹ ವೆಂಬ ಮೊಳಕೆಯನ್ನು ಕತ್ತರಿಸಬಹುದೆ?

೬೮. ಹೇಗಾದರೂ ದರ್ಶನವನ್ನು ಕೊಡು. ಹೇಗಾದರೂ ದಯೆಯನ್ನು ಹೊಂದು. ಸಜ್ಜನರಾದವರು ಒಬ್ಬರು ಸಾಯುವವರೆವಿಗೂ ಸುಮ್ಮನಿರುವುದಿಲ್ಲ.

೬೯. ವಸಿಷ್ಠನು ಹೇಳಿದನು–ಆ ಕನ್ಯೆಯರು ಹೀಗೆ ದುಃಖಿಸಿ ಬಹು ಹೊತ್ತು ಅತ್ತಿತ್ತ ನೋಡುತ್ತಾ ಕಾದುಕೊಂಡಿದ್ದು ಅನಂತರ ತಂದೆಯ ಹೆದರಿಕೆಯಿಂದ ಮನೆಗೆ ಹೋಗಲು ಮನಸ್ಸುಮಾಡಿದರು.

ತತ್ರೈವಮುನಿಗಡೈರ್ಬದ್ಧಾ ಭೃಶಂ ವಿರಹವಿಕ್ಲವಾಃ ।
ಕಥಂ ಚಿದ್ಧೈರ್ಯಮಾಲಂಬ್ಯ ತಾಃ ಸ್ವಂ ಸ್ವಂ ಗೃಹಂ ಯಯುಃ ॥ ೭೦ ॥

ಆಗತಾಃ ಪತಿತಾಃ ಸರ್ವಾಃ ಜಲಯಂತ್ರ ಸಮೀಪತಃ ।
ಕಮೇತನ್ಮಾತ್ರಭಿಃ ಪೃಷ್ಟಾಃ ಕುತಃ ಕಾಲಾತ್ಯಯೋಽಜನಿ ॥ ೭೧ ॥

॥ ಕನ್ಯಾ ಊಚುಃ ॥

ಕ್ರೀಡಂತ್ಯಃ ಕಿನ್ನರೀಭಿಸ್ತು ಸಾರ್ಧಂ ಸಂಹತಕಂದುಕಾಃ ।
ಸಂಸ್ಥಿತಾಸ್ತೇನ ನ ಜ್ಞಾತಂ ದಿವಸಾದಿ ಸರೋವರೇ ॥ ೭೨ ॥

ಪಥಿ ಶ್ರಾಂತಾ ವಯಂ ಮಾತಃ ಸಂತಾಪಸ್ತೇನ ನಸ್ತನೌ ।
ನೋಹೇನ ಮಹತಾ ವಕ್ತುಂ ನ ಕೇನಾಪ್ಯುತ್ಸಹಾಮಹೇ ॥ ೭೩ ॥

---

೭೦. ಅವನಲ್ಲಿರುವ ಪ್ರೀತಿಯೆಂಬ ಸಂಕೋಲೆಯಿಂದ ಕಟ್ಟಲ್ಪಟ್ಟು ಬಹುವಾಗಿ ವಿರಹಕಾತರರಾಗಿ ಕೊನೆಗೆ ಕಷ್ಟದಿಂದ ಧೈರ್ಯವನ್ನು ತಂದುಕೊಂಡು ಅವರು ತಮ್ಮ ತಮ್ಮ ಮನೆಗೆ ಹೊರಟುಹೋದರು.

೭೧. ಅವರೆಲ್ಲರೂ ಮನೆಗಳಿಗೆ ಬಂದು ನೀರಿನ ಯಂತ್ರದ ಹತ್ತಿರದಲ್ಲಿ ಬೇಗೆಯನ್ನು ಪರಿಹರಿಸಿಕೊಳ್ಳಲು ಮಲಗಿದರು. ಆಗ ಅವರ ವರ ತಾಯಿಯರು ಇದು ಏನು ? ಏತಕ್ಕೆ ಇಷ್ಟು ಹೊತ್ತಾಯಿತು ? ಎಂದು ಕೇಳಿದರು.

೭೨. ಕನ್ಯೆಯರು ಹೇಳಿದರು–ಅಮ್ಮಾ ಕಿನ್ನರಿಯರೊಡನೆ ಸೇರಿಕೊಂಡು ಸರೋವರದ ಬಳಿಯಲ್ಲಿ ಚಂಡನ್ನಾಡುತ್ತಲಿದ್ದೆವು. ಅದರಿಂದ ಹೊತ್ತೇ ಗೊತ್ತಾಗಲಿಲ್ಲ

೭೩. ನಾವು ದಾರಿಯಲ್ಲಿ ಓಡಿಬಂದುದರಿಂದ ಬಳಲಿದ್ದೇವೆ. ಆದ್ದರಿಂದ ನಮ್ಮ ದೇಹದಲ್ಲಿ ಬಿಸಿಯುಂಟಾಗಿದೆ. ನಮಗೆ ಆ ಆಯಾಸದಿಂದ ಬುದ್ಧಿಯೇ ಸರಿಯಾಗಿಲ್ಲದುದರಿಂದ ಏನನ್ನು ಹೇಳಲೂ ಮನಸ್ಸೇ ಬರುವುದಿಲ್ಲ.

|| ವಸಿಷ್ಠ ಉವಾಚ ||

ಇತ್ಯುಕ್ತ್ವಾ ಲುಲುಠುಸ್ತತ್ರ ಮಣಿಭೂಮೌ ಕುಮಾರಿಕಾಃ ।
ಆಕಾರಂ ಗೋಪಯಂತ್ಯಸ್ತಾ ಮುಗ್ಧಾ ಜಲ್ಪಂತಿ ಮಾತೃಭಿಃ || ೭೪ ||

ಕಾಚಿನ್ನರ್ತಯತಿ ಕ್ರೀಡಾಮಯೂರಂ ನ ಮುದಾ ತದಾ ।
ಶುಕಂ ನ ವಾದಯತ್ಯನ್ಯಾ ಪಂಜರಸ್ಥಂ ಯಥಾ ಪುರಾ || ೭೫ ||

ಲಾಲಯೇನ್ನಕುಲಂ ನಾನ್ಯಾ ನೋ ಲಾಪಯತಿ ಸಾರಿಕಾಂ ।
ಅಪರಾತೀವ ಸಮ್ಮುಗ್ಧಾ ನೈವ ಖೇಲತಿ ಸಾರಸೈಃ || ೭೬ ||

ಭೇಜಿರೇ ನ ವಿನೋದನ್ತಾ ರೇಮಿರೇ ನ ಚ ಮನ್ದಿರೇ ।
ಊಚಿರೇ ಬಾಂಧವೈರ್ನಾಲಂ ವೀಣಾವಾದ್ಯಂ ನ ಚಕ್ರಿರೇ || ೭೭ ||

---

೭೪. ವಸಿಷ್ಠನು ಹೇಳಿದನು–ಹೀಗೆಂದು ಹೇಳುತ್ತಾ ಆ ಕನ್ಯೆಯರು ಆ ಮಣಿಗಳನ್ನು ಹಾಕಿ ಮಾಡಿದ ನೆಲದಮೇಲೆ ಹೊರಳಾಡುತ್ತಿದ್ದರು. ಅವರು ತಮ್ಮ ಆಕಾರವನ್ನು ಮುಚ್ಚಿಕೊಳ್ಳುತ್ತಾ ತಾಯಿಯರೊಡನೆ ಬೇರೆ ಬೇರೆ ಏನೇನನ್ನೋ ಹೇಳುತ್ತಿರುವರು.

೭೫. ದಿನವೂ ಆಡಿಸುತ್ತಿದ್ದಂತೆ ಒಬ್ಬಳು ಆಟಕ್ಕೋಸ್ಕರ ಇಟ್ಟುಕೊಂಡಿದ್ದ ನವಿಲನ್ನು ಆಡಿಸಲೊಲ್ಲಳು. ಮತ್ತೊಬ್ಬಳು ನಿತ್ಯವೂ ಪಂಜರದಲ್ಲಿರುವ ಗಿಣಿಯನ್ನು ಆಡಿಸಿ ಮಾತನಾಡಿಸುತ್ತಿದ್ದಂತೆ ಸಂತೋಷದಿಂದ ಮಾತನಾಡಿಸಲೊಲ್ಲಳು.

೭೬. ಒಬ್ಬಳು ಮುಂಗಸಿಯನ್ನು ನಿತ್ಯದಂತೆ ಮುದ್ದಾಡದೇ ಹೋದಳು ಮತ್ತೊಬ್ಬಳು ಸಾರಿಕಾಪಕ್ಷಿಯನ್ನು ನಿತ್ಯದಂತೆ ಮಾತನಾಡಿಸಲೊಲ್ಲಳು. ಇನ್ನೊಬ್ಬಳು ಬಹುವಾಗಿ ಶ್ರಮಪಟ್ಟು ಸಾರಸವನ್ನು ಆಡಿಸುವುದೇ ಇಲ್ಲ.

೭೭. ಅವರು ವಿನೋದವನ್ನು ಹೊಂದಲೇ ಇಲ್ಲ. ಮನೆಯಲ್ಲಿ ಯಾವ ಸಂತೋಷದ ಆಟವನ್ನೂ ಆಡಲೇ ಇಲ್ಲ. ಬಂಧುಗಳೊಡನೆ ಬೇಕಾದಂತೆ ಮಾತುಗಳನ್ನಾಡಲೇ ಇಲ್ಲ. ವೀಣೆಯನ್ನು ಬಾರಿಸಲೇ ಇಲ್ಲ.

ಕಲ್ಪದ್ರುಮಪ್ರಸೂನಂ ಯತ್ ರಸವತ್ತತ್ಸುಧೋಪಮಂ ।
ಮಂದಾರಕುಸುಮಾಮೋದಿ ನ ಪಪುರ್ಮಧುರಂ ಮಧು ॥ ೭೮ ॥

ಯೋಗಿನ್ಯ ಇವ ತಾಃ ಕನ್ಯಾ ನಾಸಾಗ್ರನ್ಯಸ್ತಲೋಚನಾಃ ।
ಅಲಕ್ಷ್ಯಧ್ಯಾನಸಂತಾನಾಃ ಪುರುಷೋತ್ತಮಮಾನಸಾಃ ॥ ೭೯ ॥

ಚಂದ್ರಕಾನ್ತಮಣಿಚ್ಛನ್ನಸ್ರನದ್ವಾರಿಸುಶೀತಲೇ ।
ವಾತಾಯನೇ ಕ್ಷಣಂ ಸ್ಥಿತ್ವಾ ಜಲಯನ್ತ್ರೇ ಕ್ಷಣಂ ಕ್ಷಣಾತ್ ॥ ೮೦ ॥

ರಚಯನ್ತ್ಯಃ ಕ್ಷಣಂ ಶಯ್ಯಾಂ ದೀರ್ಘಿಕಾಂಭೋಜಿನೀದಳೈಃ ।
ವೀಜ್ಯಮಾನಾಸ್ಸಖೀಭಿಸ್ತಾಃ ಶೀತಲೈಃ ಕದಲೀದಳೈಃ ॥ ೮೧ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ರಾಕ್ಷಸ ವಿಮೋಕ್ಷಣಂ ನಾಮ ಸಪ್ತಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೭೮-೮೧. ಕಲ್ಪವೃಕ್ಷಂದ ತೆಗೆದ ಚೆನ್ನಾಗಿರುವ ಅಮೃತದಂತೆ ರುಚಿಯುಳ್ಳ ಮಂದಾರದ ಹೂವನ್ನು ಹಾಕಿ ವಾಸನೆ ಬರುವಂತೆ ಮಾಡಿರುವ ಮಧುವನ್ನು ಒಬ್ಬರೂ ಕುಡಿಯಲೇ ಇಲ್ಲ. ಆ ಕನ್ಯೆಯರು ಯೋಗಿನಿಯರಂತೆ ಮೂಗಿನ ತುದಿಯಲ್ಲಿ ಕಣ್ಣುಗಳನ್ನು ನಿಲ್ಲಿಸಿಕೊಂಡು ಆ ಪುರುಷೋತ್ತಮನಾದ ಆ ಋಷಿಪುತ್ರನನ್ನು ಧ್ಯಾನಿಸುತ್ತಾ ಧ್ಯಾನದ ಸಂತಾನ ಹೇಗೆ ನಡೆಯುತ್ತಿದೆ ಎಂಬುದನ್ನು ಗಮನಿಸದೆ ಧ್ಯಾನಿಸುತ್ತಿದ್ದರು. ಚಂದ್ರಕಾಂತಮಣಿಯಿಂದ ಕೂಡಿಕೊಂಡು ನೀರನ್ನು ಸುರಿಸುತ್ತಾ ತಣ್ಣಗಿರುವ ವಾತಾಯನವೆಂಬ ಕಿಟಕಿಗಳಲ್ಲಿ ಕ್ಷಣಕಾಲ ನಿಂತಿದ್ದು ಮತ್ತೊಂದು ಕ್ಷಣಕಾಲ ಜಲಯಂತ್ರದ ಬಳಿ ನಿಂತಿರುತ್ತಿದ್ದರು. ತಮ್ಮ ತಾಪವನ್ನು ಹೋಗಲಾಡಿಸಿಕೊಳ್ಳಲು ಕೊಳಗಳಲ್ಲಿರುವ ಕಮಲದ ದಳಗಳನ್ನು ತಂದು ಅವುಗಳಿಂದ ಹಾಸಿಗೆಯನ್ನು ಹಾಸಿಕೊಂಡು ಮಲಗುತ್ತಿದ್ದರು. ಎಳೆಯ ಬಾಳೆಯ ಎಲೆಗಳನ್ನು ತಂದು ಅದರಿಂದ ಸಖಿಯರ ಕೈಯ್ಯಲ್ಲಿ ಬೀಸಿಸಿಕೊಳ್ಳುತ್ತಿದ್ದರು.

**ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ರಾಕ್ಷಸ ವಿಮೋಕ್ಷಣ ಎಂಬ ಇನ್ನೂರ ನಲವತ್ತೇಳನೆಯ ಅಧ್ಯಾಯವು ಮುಗಿದುದು.**



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ॥



**॥ ವಸಿಷ್ಠ ಉವಾಚ ॥**

**ಇತ್ಥಂ ಯುಗಸಮಾಂ ರಾತ್ರಿಮನಯಂಸ್ತಾ ವರಸ್ತ್ರಿಯಃ ।**
**ಕಥಂ ಚಿದ್ಧೀರತಾಂ ಕೃತ್ವಾ ಸಜ್ವರಾ ವಿಜ್ವರಾ ಇವ ॥ ೧ ॥**

**ಪ್ರಾತರ್ವ್ಯೋಮಮಣಿಂ ದೃಷ್ಟ್ವಾ ಮನ್ಯಮಾನಾಃ ಸ್ವಜೀವಿತಂ ।**
**ವಿಜ್ಞಾಪ್ಯ ಮಾತರಂ ಸ್ವಾಂ ಸ್ವಾಂ ಗೌರೀಂ ಪೂಜಯಿತುಂ ಗತಾಃ ॥ ೨ ॥**

---

**ಇನ್ನೂರ ನಲವತ್ತೆಂಟನೆಯ ಅಧ್ಯಾಯವು.**



೧. ವಸಿಷ್ಠನು ಹೇಳಿದನು-ಆ ಕನ್ಯೆಯರು ಮದನಜ್ವರದಿಂದ ಕೂಡಿ ಬಾಧೆ ಪಡುತ್ತಿದ್ದರು. ಜ್ವರದ ವೇಗವನ್ನು ಮತ್ತೊಬ್ಬರಿಗೂ ತೋರ್ಪಡಿಸಿಕೊಳ್ಳದೆ ಬಹು ಧೈರ್ಯವನ್ನು ಹೊಂದಿ ಅಂದಿನ ರಾತ್ರಿಯನ್ನು ಯುಗದ ಕಾಲಕ್ಕೆ ಸಮನಾಗಿ ಬಹು ಕಷ್ಟಪಟ್ಟು ಕಳೆದರು.

೨. ಬೆಳಗ್ಗೆ ಸೂರ್ಯನು ಹುಟ್ಟಿದುದನ್ನು ನೋಡಿ ತಮ್ಮ ಜೀವವು ಉಳಿದುದನ್ನು ತಿಳಿದುಕೊಂಡು ಅವರು ತಮ್ಮ ತಮ್ಮ ತಾಯಿಯರಿಗೆ ಹೇಳಿ ಮತ್ತೆ ಆ ಸ್ಥಳಕ್ಕೆ ಗೌರಿಯನ್ನು ಪೂಜಿಸಲು ಹೊರಟುಹೋದರು.

ಸ್ನಾತ್ವಾ ತೇನ ವಿಧಾನೇನ ಪುಷ್ಪೈರ್ಧೂಪೈಸ್ತಥಾ ಪುನಃ ।
ವಿಧಿವತ್ಪೂಜಯಿತ್ವಾ ತು ಗಾಯನ್ತ್ಯಸ್ತತ್ರ ತಸ್ಥಿರೇ ॥ ೩ ॥

ಏತಸ್ಮಿನ್ನಂತರೇ ಚೈವ ಸ್ನಾತುಂ ವಿಪ್ರಃ ಸಮಾಗತಃ ।
ಪಿತುರಾಶ್ರಮತಸ್ತಸ್ಮಾದಚ್ಛೋದೇಽಸ್ಮಿನ್ ಸರೋವರೇ ॥ ೪ ॥

ಮಿತ್ರಂ ದೃಷ್ಟ್ವಾ ಹಿ ರಾತ್ರ್ಯಂತೇ ಪದ್ಮಿನ್ಯ ಇವ ಕನ್ಯಕಾಃ ।
ಉತ್ಫುಲ್ಲನಯನಾ ಜಾತಾಸ್ತಂ ದೃಷ್ಟ್ವಾ ಬ್ರಹ್ಮಚಾರಿಣಂ ॥ ೫ ॥

ಗತ್ವಾ ತದೈವ ತಾಃ ಕನ್ಯಾಃ ಸಮೀಪಂ ಬ್ರಹ್ಮಚಾರಿಣಃ ।
ಸವ್ಯಾಪಸವ್ಯಬಂಧೇನ ಬಾಹುಪಾಶಂ ಚ ಚಕ್ರಿರೇ ॥ ೬ ॥

॥ ಕನ್ಯಾ ಊಚುಃ ॥

ಗತೋಽಸಿ ಧೂರ್ತ ಪೂರ್ವೇದ್ಯುರ್ಗನ್ತುಮದ್ಯ ನ ಶಕ್ಯತೇ ।
ಧೃತಶ್ಚ ನೂನಮಸ್ಮಾಭಿರತ್ರ ತೇಽಸ್ತಿ ವಿಚಾರಣಾ ॥ ೭ ॥

---

೩. ಅಲ್ಲಿಗೆ ಹೋಗಿ ಸ್ನಾನಮಾಡಿ ಆ ಗೌರಿಯನ್ನು ಧೂಪದೀಪ ಹೂಗಳಿಂದ ಶಾಸ್ತ್ರದ ರೀತಿಯಲ್ಲಿ ಪೂಜಿಸಿ ಗಾನಮಾಡುತ್ತಲಿದ್ದರು.

೪. ಇಷ್ಟುಹೊತ್ತಿಗೆ ಆ ಬ್ರಹ್ಮಚಾರಿಯು ತನ್ನ ತಂದೆಯ ಆಶ್ರಮದಿಂದ ಅಲ್ಲಿರುವ ಅಚ್ಛೋದ ಸರೋವರಕ್ಕೆ ಸ್ನಾನಮಾಡಲು ಬಂದನು.

೫. ಬೆಳಗಿನ ಹೊತ್ತಿನಲ್ಲಿ ಸೂರ್ಯನನ್ನು ನೋಡಿ ಪದ್ಮಗಳು ಹೇಗೆ ಅರಳು ವುವೋ ಹಾಗೆ ಈ ಕನ್ಯೆಯರು ಅವನನ್ನು ನೋಡಿ ಸಂತೋಷಪಟ್ಟು ಅರಳಿದ ಕಣ್ಣುಗಳುಳ್ಳವರಾದರು.

೬. ಆ ಕನ್ಯೆಯರು ಒಡನೆಯೇ ಅವನ ಬಳಿಗೆ ಹೋಗಿ ಒಬ್ಬರಿಗೊಬ್ಬರು ಕಟಕಟೆಯ ಕೈಯ್ಯನ್ನು ಕಟ್ಟಿಕೊಂಡು ಮಧ್ಯಕ್ಕೆ ಸಿಕ್ಕಿಸಿಕೊಂಡರು.

೭. ಕನ್ಯೆಯರು ಹೇಳಿದರು—ಎಲೈ ಧೂರ್ತನೆ! ಹಿಂದಿನ ದಿನ ನೀನು ಹೊರದು ಹೋದೆ. ಈ ದಿನ ನೀನು ಹೋಗಲಾರೆ. ನಾವು ನಿನ್ನನ್ನು ಖಂಡಿತವಾ ಗಿಯೂ ಧರಿಸಿದ್ದೇವೆ. ಈ ವಿಷಯದಲ್ಲಿ ವಿಚಾರವನ್ನೇ ಮಾಡಬೇಕಾದುದಿಲ್ಲ.

|| ವಸಿಷ್ಠ ಉವಾಚ ||

ಇತ್ಯುಕ್ತ್ವೋಽಸೌ ದ್ವಿಜಃ ಪ್ರಾಹ ಪ್ರಹರ್ಷ ಬಾಹುಪಾಶಗಃ || ೮ ||

|| ಋಷಿಪುತ್ರ ಉವಾಚ ||

ಯುಷ್ಮಾಭಿರುಚ್ಯತೇ ಭದ್ರಮನುಕೂಲಂ ಪ್ರಿಯಂ ವಚಃ |
ಪ್ರಥಮಾಶ್ರಮನಿಷ್ಠಸ್ಯ ಕಿಂ ತು ನಾದ್ಯಾಪಿ ಮೇ ವ್ರತಂ || ೯ ||

ವೇದಾಧ್ಯಯನಶೀಲಸ್ಯ ಪಾರಂ ನೀತಂ ಗುರೋಃ ಕುಲೇ |
ಆಶ್ರಮೇ ಯತ್ರ ಯೋ ಧರ್ಮೋ ರಕ್ಷಣೀಯಸ್ಸ ಪಂಡಿತೈಃ |
ವಿವಾಹೋಽಯಮತೋ ಮನ್ಯೇ ನ ಧರ್ಮ ಇತಿ ಕನ್ಯಕಾಃ || ೧೦ ||

|| ವಸಿಷ್ಠ ಉವಾಚ ||

ಆಕರ್ಣ್ಯ ತಸ್ಯ ವಾಕ್ಯಾನಿ ತಮೂಚುಸ್ತಾ ವರಸ್ತ್ರಿಯಃ |
ಸಕಲಧ್ವನಿ ಸೋತ್ಕಂಠಾಃ ಕೋಕಿಲಾ ಇವ ಮಾಧವೇ || ೧೧ ||

---

೮. ವಸಿಷ್ಠನು ಹೇಳಿದನು-ಅವರು ಹೀಗೆಂದು ಎನ್ನಲು ಆ ಬ್ರಾಹ್ಮಣ ಕುಮಾರನು ಅವರ ಕೈ ಮಧ್ಯದಲ್ಲಿ ಸಿಕ್ಕಿಕೊಂಡು ಅವರನ್ನು ಕುರಿತು ಇಂತೆಂದನು.

೯. ಋಷಿಪುತ್ರನು ಹೇಳಿದನು-ನೀವು ಹೇಳುವ ಮಾತು ಮಂಗಳಕರ ವಾದುದೂ ಪ್ರೀಯವಾದುದೂ ಆಗಿದೆ. ಆದರೆ ನಾನು ಇನ್ನೂ ಮೊದಲನೆಯ ಆಶ್ರಮವಾದ ಬ್ರಹ್ಮಚರ್ಯದಲ್ಲಿದ್ದೇನೆ. ನನ್ನ ವ್ರತವು ಇನ್ನೂ ಮುಗಿದಿಲ್ಲ.

೧೦. ನಾನು ವೇದಾಧ್ಯಯನವನ್ನು ಮಾಡುತ್ತಿದ್ದೇನೆ. ಗುರುಕುಲದಲ್ಲಿ ಆ ವೇದಾಧ್ಯಯನ ವ್ರತವು ಇನ್ನೂ ಕೊನೆಗಂಡಿರುವುದಿಲ್ಲ. ಯಾವ ಆಶ್ರಮದಲ್ಲಿ ಯಾವ ಧರ್ಮವನ್ನು ಅನುಸರಿಸಬೇಕೋ ಆ ಆಶ್ರಮದಲ್ಲಿ ಆ ಧರ್ಮವನ್ನು ಕಷ್ಟಪಟ್ಟು ಕಾಪಾಡಿಕೊಳ್ಳಬೇಕು. ಆದ್ದರಿಂದ ಈಗ ವಿವಾಹವು ನನಗೆ ಧರ್ಮ ಸಮ್ಮತವಲ್ಲವೆಂಬುದಾಗಿ ನನಗೆ ಕಾಣಿಸುತ್ತದೆ.

೧೧. ವಸಿಷ್ಠನು ಹೇಳಿದನು-ಅವನ ಈ ಮಾತನ್ನು ಅವರು ಕೇಳಿ ವಸಂತ ಋತುವಿನಲ್ಲಿ ಕೋಗಿಲೆಗಳು ಆಸೆಯಿಂದ ತಮ್ಮ ಜಾಣತನದಿಂದ ಮನೋಹರ ವಾಗಿ ಕೂಗುವಂತೆ ಆಸೆಯಿಂದ ಕಲಕಲಧ್ವನಿ ಮಾಡುತ್ತ ಅವನನ್ನು ಕುರಿತು ಇಂತೆಂದರು.

॥ ಕನ್ಯಾ ಊಚುಃ ॥

ಧರ್ಮಾದರ್ಥೋಽರ್ಥತಃ ಕಾಮಃ ಕಾಮಾದ್ಧರ್ಮಫಲೋದಯಃ ।
ಇತ್ಯೇವಂ ನಿರ್ಣಯಂ ಶಾಸ್ತ್ರೇ ವರ್ಣಯಂತಿ ವಿಪಶ್ಚಿತಃ ॥ ೧೨ ॥

ಸ ಕಾಮೋ ಧರ್ಮಬಾಹುಳ್ಯಾತ್ ಪುರತಸ್ತೇ ಸಮುತ್ಥಿತಃ ।
ಸೇವ್ಯತಾಂ ವಿವಿಧೈರ್ಭೋಗೈಃ ಸ್ವರ್ಗಭೂಮಿರಿಯಂ ಯತಃ ॥ ೧೩ ॥

॥ ವಸಿಷ್ಠ ಉವಾಚ ॥

ಶ್ರುತ್ವಾ ತದ್ವಚನಂ ತಾಸಾಂ ಪ್ರಾಹ ಗಂಭೀರಯಾಗಿರಾ ॥ ೧೪ ॥

॥ ಋಷಿಕುಮಾರ ಉವಾಚ ॥

ತಥ್ಯಂ ವೋ ವಚನಂ ಕಿಂ ತು ಸಮಾಪ್ಯೈತತ್ಸ್ವಕಂ ವ್ರತಂ ।
ಪ್ರಾಪ್ಯಾನುಜ್ಞಾಂ ಗುರೋಃ ಕುರ್ವೇ ವಿವಾಹಂ ಕರ್ಮ ನಾನ್ಯಥಾ ॥ ೧೫ ॥

---

೧೨. ಕನ್ಯೆಯರು ಹೇಳಿದರು– ಧರ್ಮದಿಂದ ಅರ್ಥವೂ ಅರ್ಥದಿಂದ ಕಾಮವೂ ಆ ಕಾಮದಿಂದ ಧರ್ಮವೂ ಉಂಟಾಗುತ್ತವೆ. ಈ ರೀತಿಯಾಗಿ ನಿರ್ಣಯವಾಗಿರುವುದನ್ನು ಶಾಸ್ತ್ರಕಾರರೇ ಹೇಳಿದ್ದಾರೆ.

೧೩. ಧರ್ಮವು ಅಧಿಕವಾದ್ದರಿಂದ ಅದರಿಂದ ಬರಬೇಕಾದ ಆ ಕಾಮವು ನಿನ್ನ ಎದುರಿಗೇ ಪ್ರತ್ಯಕ್ಷವಾಗಿ ಬಂದು ನಿಂತುಕೊಂಡಿರುವುದು. ಇದು ಸ್ವರ್ಗ ಭೂಮಿಯಾಗಿರುವುದರಿಂದ ಆ ಕಾಮವನ್ನು ನಾನಾಬಗೆಯಾದ ಭೋಗಗಳನ್ನು ಅನುಭವಿಸುತ್ತ ಸೇವಿಸು.

೧೪. ವಸಿಷ್ಠನು ಹೇಳಿದನು–ಈತನು ಅವರ ಮಾತನ್ನು ಕೇಳಿ ಗಂಭೀರ ವಾದ ಮಾತಿನಿಂದ ಇಂತೆಂದನು.

೧೫. ಋಷಿಕುಮಾರನು ಹೇಳಿದನು–ಎಲೈ ಸುಂದರಿಯರಿರಾ ! ನೀವು ಹೇಳಿದುದು ಸತ್ಯವಾದ ಮಾತು. ಆದರೆ ನಾನು ನನ್ನ ಈ ವೇದವ್ರತವನ್ನು ಮುಗಿಸಿಕೊಂಡು ಗುರುವಿನ ಅನುಜ್ಞೆಯನ್ನು ಪಡೆದು ಆಮೇಲೆ ವಿವಾಹವನ್ನು ಮಾಡಿಕೊಳ್ಳುತ್ತೇನೆ. ಅದುವರೆಗೂ ಮಾಡಿಕೊಳ್ಳುವುದಿಲ್ಲ.

॥ ವಸಿಷ್ಠ ಉವಾಚ ॥

ಇತ್ಯುಕ್ತಾಃ ಪುನರೂಚುಸ್ತಾ ಸ್ಫುಟಂ ಮೂರ್ಖೋಽಸಿ ಸುಂದರ ॥ ೧೬ ॥

ಸಿದ್ಧೌಷಧಂ ಬ್ರಹ್ಮರಸಾಯನಂ ಚ
ಸಿದ್ಧಿರ್ನಿಧಿಃ ಸಾಧುಕುಲಾ ವರಾಂಗನಾಃ ।
ಮಂತ್ರಸ್ತಥಾ ಸಿದ್ಧರಸಶ್ಚ ಧರ್ಮತೋ
ಮುನೇನಿಷೇವ್ಯಾಃ ಸುಧಿಯಾ ಸಮಾಗತಾಃ ॥ ೧೭ ॥

ಕಾರ್ಯಂ ತು ದೈವಾದ್ಯದಿ ಸಿದ್ಧಿಮಾಗತಂ
ತಸ್ಮಿನ್ನುಪೇಕ್ಷಾಂ ನ ಚ ಯಾಂತಿ ನೀತಿಗಾಃ ।
ಯಸ್ಮಾದುಪೇಕ್ಷಾ ನ ಪುನಃ ಫಲಪ್ರದಾ
ತಸ್ಮಾನ್ನ ದೀರ್ಘೀಕರಣಂ ಪ್ರಶಸ್ಯತೇ ॥ ೧೮ ॥

---

೧೬. ವಸಿಷ್ಠನು ಹೇಳಿದನು–ಆ ಬ್ರಹ್ಮಚಾರಿಯು ಹೀಗೆನ್ನಲು ಆ ಹೆಂಗಸರು ಎಲೈ ಸುಂದರನೇ ! ನೀನು ಖಂಡಿತವಾಗಿಯೂ ದಡ್ಡನಾಗಿದ್ದೀಯೆ. ಅದು ವ್ಯಕ್ತವಾಗಿ ಕಾಣುತ್ತದೆ.

೧೭. ಎಲೈ ಮುನಿಯೆ ! ಸಿದ್ಧಿಯನ್ನು ಹೊಂದಿರುವ ಔಷಧವು, ಬ್ರಹ್ಮನು, ರಸಾಯನವು, ಸಿದ್ಧಿಯು, ನಿಧಿಯು, ಸಾಧುಗಳ ಗುಂಪು, ಉತ್ತಮರಾದ ಸ್ತ್ರೀಯರು, ಮಂತ್ರವು, ಸಿದ್ಧಿಯನ್ನುಂಟುಮಾಡುವ ರಸವು ಇವೆಲ್ಲವನೂ ಬಂದ ಕೂಡಲೇ ಬಿಡದೆ ಬುದ್ಧಿವಂತನಾದವನು ಅನುಭವಿಸಬೇಕು.

೧೮. ತನಗೆ ಬೇಕಾದ ಕೆಲಸವು ಸಿದ್ಧಿಯನ್ನು ಹೊಂದುತ್ತಾ ಬಂದಾಗ ಬಿಡಬಾರದು. ಅದರಲ್ಲಿಯೂ ಕೂಡ ನೀತಿಜ್ಞರು ಉಪೇಕ್ಷೆಯನ್ನು ಮಾಡಬಾರದು. ಉಪೇಕ್ಷೆ ಮಾಡಿದರೆ ಅವು ಮತ್ತೆ ಫಲವನ್ನು ಕೊಡುವುದಿಲ್ಲ. ಅಲ್ಲದೆ ನಿದಾನಮಾಡುವಿಕೆಯೂ ಕೂಡ ಯೋಗ್ಯವಾಗುವುದಿಲ್ಲ

ವಿಷಾದಪ್ಯಮೃತಂ ಗ್ರಾಹ್ಯಮಮೇಧ್ಯಾದಪಿ ಕಾಚನಂ ।
ನೀಚಾದಪ್ಯುತ್ತಮಾಂ ವಿದ್ಯಾಂ ಸ್ತ್ರೀರತ್ನಂ ದುಷ್ಕುಲಾದಪಿ ॥ ೧೯ ॥

ಸಾಂದ್ರಾನುರಾಗಾಃ ಕುಲಜನ್ಮನಿರ್ಮಲಾಃ
ಸ್ನೇಹಾರ್ದ್ರಚಿತ್ತಾಃ ಸುಗಿರಃ ಸ್ವಯಂವರಾಃ ।
ಕನ್ಯಾಃ ಸುರೂಪಾಃ ಕಿಲ ಚಾರುಲೋಚನಾ
ಧನ್ಯಾ ಲಂಭತೇತ್ರ ನರಾಸ್ತು ನೇತರೇ ॥ ೨೦ ॥

ಕ್ವ ವಯಂ ಸುರಸುಂದರ್ಯಃ ಕ್ವ ಭವಾಂಸ್ತಾಪಸೋ ವರಃ ।
ದುರ್ಘಟಸ್ಯ ವಿಧಾನೇ ಹಿ ಮನ್ಯೇ ಧಾತಾತಿಪಂಡಿತಃ ॥ ೨೧ ॥

---

೧೯. ಅಮೃತವು ವಿಷದಲ್ಲಿದ್ದರೂ ಅದನ್ನು ಬಿಡಬಾರದು. ತೆಗೆದುಕೊಳ್ಳಬೇಕು. ಸುವರ್ಣವು ಅಮೇಧ್ಯದ ಮಧ್ಯದಲ್ಲಿ ಬಿದ್ದಿದ್ದರೂ ಬಿಡದೆ ತೆಗೆದುಕೊಳ್ಳಬೇಕು. ಉತ್ತಮವಾದ ವಿದ್ಯೆಯು ಅಯೋಗ್ಯನಲ್ಲಿದ್ದರೂ ತೆಗೆದುಕೊಳ್ಳಬೇಕು. ಉತ್ತಮವಾದ ಹೆಂಗಸು ನೀಚ ಕುಲದಲ್ಲಿ ಹುಟ್ಟಿದ್ದರೂ ಪರಿಗ್ರಹಿಸಬೇಕು.

೨೦. ಪೂರ್ಣವಾದ ಪ್ರೀತಿಯಿಂದ ಕೂಡಿದ, ಕುಲಜನ್ಮಗಳಲ್ಲಿ ಶುದ್ಧರಾದ, ಸ್ನೇಹದಿಂದ ಕೂಡಿರುವ ಮನಸ್ಸುಳ್ಳ, ರಮಣೀಯವಾಗಿ ಮಾತನಾಡುತ್ತಿರುವ, ತಾವಾಗಿಯೇ ವರಿಸಿ ಬಂದಿರುವ, ಸುಂದರಿಯರಾದ, ಮನೋಹರವಾದ ನೋಟವುಳ್ಳ, ಕನ್ಯೆಯರನ್ನು ಧನ್ಯರಾದವರು ಹೊಂದುತ್ತಾರೆಯೇ ಹೊರತು ಎಲ್ಲರೂ ಹೊಂದಲಾರರು.

೨೧. ದೇವತಾ ಸ್ತ್ರೀಯರೂ ಸುಂದರಿಯರೂ ಆದ ನಾವೆಲ್ಲಿ ? ತಪಸ್ವಿಯಾಗಿ ವಿಷಯಸುಖವನ್ನರಿಯದವನಾದ ನೀನೆಲ್ಲಿ ! ಈ ರೀತಿಯಾಗಿ ಅನನುರೂಪರಾಗಿರುವವರನ್ನು ದೇವರು ಸೇರಿಸುವುದನ್ನು ನೋಡಿದರೆ ಆ ಬ್ರಹ್ಮನು ಬಹು ಜಾಣನೆಂದು ಕಾಣುತ್ತದೆ. ನೀನು ನಮಗೆ ಸರಿಯಲ್ಲದವನಾದರೂ ನಿನ್ನನ್ನು ನಾವು ಮೋಹಿಸಿ ಬಂದಿದ್ದೇವೆ.

ತಸ್ಮಾದಸ್ಮಾನಿದಾನೀಂ ತು ಸ್ವೀಕುರ್ಯಾತ್ಮಂಗಳಂ ಭವಾನ್ ।
ಗಾಂಧರ್ವೇಣ ವಿವಾಹೇನ ನ ಜೀವಾಮೋನ್ಯಥಾ ವಯಂ ‖ ೨೨ ‖

‖ ವಸಿಷ್ಠ ಉವಾಚ ‖

ಶ್ರುತವಾಕ್ಯಸ್ತತಃ ಪ್ರಾಹ ಬ್ರಾಹ್ಮಣೋ ವೇದವಿತ್ತಮಃ ‖ ೨೩ ‖

‖ ಋಷಿಕುಮಾರ ಉವಾಚ ‖

ಭೋ ಮೃಗಾಕ್ಷ್ಯಃ ಕಥಂ ತ್ಯಾಜ್ಯೋ ಧರ್ಮೋ ಧರ್ಮಧನೈರ್ನರೈಃ ।
ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚೇತಿ ಚತುಷ್ಟಯಂ ‖ ೨೪ ‖

ಯಥೋಕ್ತಂ ಸಫಲಂ ಜ್ಞೇಯಂ ವಿಪರೀತಂ ತು ನಿಷ್ಫಲಂ ।
ನಾಕಾಲೇಹಂ ವ್ರತೀ ಕುರ್ಯಾಮತೋ ದಾರಪರಿಗ್ರಹಂ ‖ ೨೫ ‖

ನ ಕ್ರಿಯಾಫಲಮಾಪ್ನೋತಿ ಕ್ರಿಯಾಕಾಲಂ ನ ವೇತ್ತಿ ಯಃ ।
ಯತೋ ಧರ್ಮವಿಚಾರೇಸ್ಮಿನ್ ಪ್ರಸಕ್ತಂ ಮಮ ಮಾನಸಂ ‖ ೨೬ ‖

---

೨೨. ನಾವು ನೀನು ಅನುರೂಪನಲ್ಲವೆಂದು ತಿಳಿದೂ ನಿನ್ನನ್ನು ಮೋಹಿಸಿ ಬಂದಿದ್ದೇವೆ. ಆದ್ದರಿಂದ ಈ ಮಂಗಳ ಸ್ವರೂಪರಾದ ನಮ್ಮನ್ನು ಗಾಂಧರ್ವ ವಿವಾಹ ವಿಧಿಯಿಂದ ಸ್ವೀಕರಿಸು. ಇಲ್ಲದಿದ್ದರೆ ನಾವು ಬದುಕುವುದೇ ಇಲ್ಲ.

೨೩. ವಸಿಷ್ಠನು ಹೇಳಿದನು– ಅವರು ಈ ಮಾತು ಹೇಳಿದುದನ್ನು ಕೇಳಿ ವೇದದಲ್ಲಿ ನಿಪುಣನಾದ ಆ ಬ್ರಾಹ್ಮಣನು ಇಂತೆಂದನು.

೨೪-೨೬. ಋಷಿಕುಮಾರನು ಹೇಳಿದನು-ಎಲೈ ಮೃಗಾಕ್ಷಿಯರಿರಾ ! ಧರ್ಮ ವೇಧನವಾಗಿ ಉಳ್ಳ ತಾಪಸರು ಧರ್ಮವನ್ನು ಹೇಗೆ ತಾನೆ ಬಿಡುವರು ? ಧರ್ಮ, ಅರ್ಥ, ಕಾಮ, ಮೋಕ್ಷಗಳು ಅವುಗಳನ್ನು ಶಾಸ್ತ್ರೋಕ್ತವಾಗಿ ಆಚರಿಸಿದರೆ ಸಫಲ ವಾಗುತ್ತವೆ. ಆ ರೀತಿಯನ್ನು ಮೀರಿ ಸೇವಿಸಿದರೆ ಅವೆಲ್ಲವೂ ಫಲವಿಲ್ಲದೆ ಹೋಗುತ್ತವೆ. ನಾನು ಬೇರೆಯಾದ ವ್ರತದಲ್ಲಿರತಕ್ಕವನು. ಆದ್ದರಿಂದ ಅಕಾಲ ದಲ್ಲಿ ಮದುವೆಯನ್ನು ಮಾಡಿಕೊಳ್ಳುವುದಿಲ್ಲ. ಯಾವನು ಯಾವ ಕಾಲದಲ್ಲಿ ಯಾವ ಕೆಲಸವನ್ನು ಮಾಡಬೇಕೋ ಆ ಕಾಲದಲ್ಲಿ ಆ ಕೆಲಸವನ್ನು ಅವನು ಮಾಡದಿದ್ದರೆ ಅದರ ಫಲವನ್ನು ಅವನು ಹೊಂದಲಾರನು. ನನ್ನ ಮನಸ್ಸು ಧರ್ಮವನ್ನು

**ತಸ್ಮಾಚ್ಛೃಣುತ ಹೇ ಕನ್ಯಾಃ ಸಮೀಹೇ ನ ಸ್ವಯಂವರಂ ॥ ೨೭ ॥**

**॥ ವಸಿಷ್ಠ ಉವಾಚ ॥**

**ಏವಂ ಶ್ರುತ್ವಾ ಽಽಶಯಂ ತಸ್ಯ ಸಮಾಕ್ಷ್ಯೈ ವಂ ಪರಸ್ಪರಂ ।**
**ಕರಾತ್ಕರಂ ವಿಮುಚ್ಯಾಥ ಜಗ್ರಾಹಾಂಘ್ರಿಂ ಪ್ರಮೋಹಿನೀ ॥ ೨೮ ॥**

**ಭುಜೌ ಜಗೃಹತುಸ್ತಸ್ಯ ಸುಶೀಲಾ ಸುಸ್ವರಾ ತದಾ ।**
**ಆಲಿಂಗ ಸುತಾರಾ ಸಾ ಚುಚುಂಬಾಸ್ಯಂ ಚ ಚಂದ್ರಿಕಾ ॥ ೨೯ ॥**

**ತಥಾಪಿ ನಿರ್ವಿಕಾರೋಽಸೌ ಪ್ರಲಯಾನಲಸನ್ನಿಭಃ ।**
**ಶಶಾಪ ಬ್ರಹ್ಮಚಾರೀ ತು ಕೋಪೇನಾತ್ಯಂತಮೂರ್ಛಿತಃ ॥ ೩೦ ॥**

**॥ ಋಷಿಕುಮಾರ ಉವಾಚ ॥**

**ಪಿಶಾಚ್ಯ ಇವ ಮಾಂ ಲಗ್ನಾಸ್ತತ್ಪಿಶಾಚ್ಯೋ ಭವಿಷ್ಯಥ ॥ ೩೧ ॥**

---

ವಿಚಾರಮಾಡುವುದರಲ್ಲಿ ಆಸಕ್ತವಾಗಿದೆ. ಆದ್ದರಿಂದ ಎಲೈ ಕನ್ಯೆಯರೇ ! ಕೇಳಿರಿ. ನಾನು ಸ್ವಯಂವರವನ್ನು ಮಾಡಿಕೊಳ್ಳಲು ಅಪೇಕ್ಷೆಪಡುವುದಿಲ್ಲ.

೨೮ ವಸಿಷ್ಠನು ಹೇಳಿದನು-ಆಗ ಹೆಂಗಸರು ಇವನ ಅಭಿಪ್ರಾಯವನ್ನು ತಿಳಿದುಕೊಂಡು ತಮ್ಮ ಕೈಗಳ ಕಟ್ಟನ್ನು ಬಿಟ್ಟುಬಿಟ್ಟರು. ಪ್ರಮೋಹಿನಿಯೆಂಬುವಳು ಒಡನೆಯೇ ಆತನ ಕಾಲುಗಳನ್ನು ಹಿಡಿದುಕೊಂಡಳು.

೨೯. ಸುಶೀಲೆಯೂ, ಸುಸ್ವರಳೂ ಅವನ ತೋಳುಗಳನ್ನು ಹಿಡಿದುಕೊಂಡರು. ಸುತಾರೆಯು ಅವನನ್ನು ಆಲಿಂಗಿಸಿಕೊಂಡಳು. ಚಂದ್ರಿಕೆಯು ಆತನನ್ನು ಹಿಡಿದು ಮುಖವನ್ನು ಚುಂಬಿಸಿದಳು.

೩೦. ಅವರೆಲ್ಲರೂ ಇವನಿಗೆ ವಿಕಾರ ಹುಟ್ಟುವಂತೆ ಎಷ್ಟು ಪ್ರಯತ್ನಪಟ್ಟರೂ ಅವನು ವಿಕಾರವನ್ನು ಹೊಂದಲೇ ಇಲ್ಲ. ಪ್ರಲಯಕಾಲದ ಅಗ್ನಿಗೆ ಸಮನಾದ ಆ ಬ್ರಹ್ಮಚಾರಿಯು ಬಹು ಕೋಪಗೊಂಡು ಅವರನ್ನು ಶಪಿಸಿದನು.

೩೧. ಋಷಿಕುಮಾರನು ಹೇಳಿದನು-ನೀವು ಪಿಶಾಚಿಗಳಂತೆ ನನ್ನನ್ನು ಹಿಡಿದುಕೊಂಡಿರುವುದರಿಂದ ನೀವೂ ಕೂಡ ಪಿಶಾಚಿಗಳಾಗಿರಿ.

॥ ವಸಿಷ್ಠ ಉವಾಚ ॥

ಏವಂ ತೇನಾಶು ಶಪ್ತಾಸ್ತಾಸ್ತಂ ತ್ಯಕ್ತ್ವಾ ಪುರತಃ ಸ್ಥಿತಾಃ　　॥ ೩೨ ॥

॥ ಕನ್ಯಾ ಊಚುಃ ॥

ಕಿಮೇತಚ್ಚೇಷ್ಟಿತಂ ಪಾಪ ಅನಾಗಸಿ ಜನೇ ತ್ವಯಾ ।
ಪ್ರಿಯಕೃತ್ಯೇಽಪ್ರಿಯಂ ಕರ್ತಾ ಧಿಕ್ತಾಂ ಧರ್ಮಜ್ಞತಾಂ ತವ　　॥ ೩೩ ॥

ಅನುರಕ್ತೇಷು ಭಕ್ತೇಷು ಮಿತ್ರೇಷು ದ್ರೋಹಕಾರಿಣಃ ।
ಪುಂಸೋ ಲೋಕದ್ವಯೇ ಸೌಖ್ಯಂ ನ ವಿಂದಂತೀತಿ ನಶ್ಶ್ರುತಂ ।
ತಸ್ಮಾದ್ಭವಾಂಶ್ಚ ನಶ್ಶಾಪಾತ್ಪಿಶಾಚೋ ಭವ ಸತ್ವರಂ　　॥ ೩೪ ॥

॥ ವಸಿಷ್ಠ ಉವಾಚ ॥

ಇತ್ಯುಕ್ತ್ವೋಪರತಾ ಬಾಲಾ ನಿಶ್ಶ್ವಸಂತ್ಯಃ ಕ್ಷುಧಾಕುಲಾಃ ।
ತದ್ವೈವಾನ್ಯೋನ್ಯಸಂರಂಭಾತ್ತಸ್ಮಿನ್ ಸರಸಿ ಪಾರ್ಥಿವ　　॥ ೩೫ ॥

---

೩೨. ವಸಿಷ್ಠನು ಹೇಳಿದನು-ಅವನು ಹೀಗೆ ಶಾಪವನ್ನು ಕೊಡಲು ಅವರೆಲ್ಲರೂ ಒಡನೆಯೇ ಆತನನ್ನು ಬಿಟ್ಟು ಎದುರಿಗೆ ಬಂದು ನಿಂತುಕೊಂಡರು.

೩೩. ಕನ್ಯೆಯರು ಹೇಳಿದರು-ಎಲೈ ಪಾಪಿಯೆ! ನಿರಪರಾಧಿಗಳಾದ ನಮ್ಮಲ್ಲಿ ನೀನು ಏನು ಮಾಡಿಬಿಟ್ಟೆ! ಪ್ರಿಯವಾದ ಕೆಲಸವನ್ನು ಮಾಡಲು ಬಂದವರಲ್ಲಿ ಕೆಡಕನ್ನು ಮಾಡಬಹುದೆ? ನಿನ್ನ ಆ ಧರ್ಮ ಬುದ್ಧಿಗೆ ಧಿಕ್ಕಾರವಿರಲಿ.

೩೪. ಅನುರಾಗವನ್ನು ಹೊಂದಿ ಬಂದವರಲ್ಲಿಯೂ ಭಕ್ತರಲ್ಲಿಯೂ ಮಿತ್ರರಲ್ಲಿಯೂ ಯಾವನು ದ್ರೋಹವನ್ನು ಮಾಡುವನೋ ಅಂತಹ ಮನುಷ್ಯನಿಗೆ ಇಹಪರಗಳೆರಡರಲ್ಲಿಯೂ ಸೌಖ್ಯವು ಸಿಕ್ಕುವುದಿಲ್ಲವೆಂದು ನಾವು ಕೇಳಿದ್ದೇವೆ. ಆದ್ದರಿಂದ ನೀನು ಕೂಡ ಜಾಗ್ರತೆಯಾಗಿ ಪಿಶಾಚಿಯಾಗು.

೩೫. ವಸಿಷ್ಠನು ಹೇಳಿದನು-ಈ ರೀತಿಯಾಗಿ ಆ ಕನ್ಯೆಯರೂ ಆ ಬ್ರಹ್ಮಚಾರಿಯೂ ಆ ಸರೋವರದ ಬಳಿಯಲ್ಲಿ ಒಬ್ಬರಿಗೊಬ್ಬರು ಕೋಪದಿಂದ ಶಾಪವನ್ನು ಕೊಟ್ಟುಕೊಂಡು ಸುಮ್ಮನಾದರು. ಒಡನೆಯೇ ಹಸಿವು ಬಾಯಾರಿಕೆಯಿಂದ ಬಾಧಿತರಾದರು.

ತಾಃ ಕನ್ಯಾ ಬ್ರಹ್ಮಚಾರೀ ಚ ಸರ್ವೇ ಪಿಶಾಚತಾಂ ಗತಾಃ ।
ಪಿಶಾಚ್ಯಶ್ಚ ಪಿಶಾಚಶ್ಚ ಕ್ರಂದಮಾನಾಸ್ಸುದಾರುಣಂ ॥ ೩೬ ॥

ಕ್ಷಪಯಂತಿ ವಿಪಾಕಂ ತಂ ಪೂರ್ವೋಪಾತ್ತಸ್ಯ ಕರ್ಮಣಃ ।
ಸ್ವಕಾಲೇ ಪ್ರಭವತ್ಯೇವ ಪೂರ್ವೋಪಾತ್ತಂ ಶುಭಾಶುಭಂ ॥ ೩೭ ॥

ಸ್ವಚ್ಛಾಯಮಿವ ದುರ್ವಾರಂ ದೇವನಾಮಪಿ ಪಾರ್ಥಿವ ।
ಕ್ರಂದಂತಿ ಪಿತರಸ್ತಾಸಾಂ ಮಾತರಸ್ತತ್ರ ತಸ್ಯ ಚ ॥ ೩೮ ॥

ಹಾ ಪ್ರಮಾದಶ್ಚ ಬಾಲಾನಾಂ ದೋಷೋ ಹಿ ದುರತಿಕ್ರಮಃ ।
ತತ ಊರ್ಧ್ವಂ ಪಿಶಾಚಾಸ್ತ ಆಹಾರಾರ್ಥಂ ಸುದುಃಖಿತಾಃ ॥ ೩೯ ॥

ಇತಶ್ಚೇತಶ್ಚ ಧಾವಂತೋ ವಸಂತಿ ಸರಸಸ್ತಟೇ ।
ಏವಂ ಬಹುತಿಥೇ ಕಾಲೇ ಲೋಮಶೋ ಮುನಿಸತ್ತಮಃ ॥ ೪೦ ॥

---

೩೬–೪೪. ಆ ಕನ್ಯೆಯರೂ ಆ ಬ್ರಹ್ಮಚಾರಿಯೂ ಎಲ್ಲರೂ ಪಿಶಾಚಿಗಳಾದರು. ಆ ಹೆಣ್ಣು ಪಿಶಾಚಿಗಳೂ, ಗಂಡು ಪಿಶಾಚಿಯೂ ಗಟ್ಟಿಯಾಗಿ ಕೂಗಿ ಅಳುತ್ತಾ ಹಿಂದೆ ತಾವು ಮಾಡಿದ ಕರ್ಮಫಲದ ಪಾಪವನ್ನು ಅನುಭವಿಸುತ್ತಾ ಕಳೆಯುತ್ತಿದ್ದರು. ಹಿಂದಿನಕಾಲದಲ್ಲಿ ಮಾಡಿದ ಶುಭಾಶುಭಗಳು ಅವುಗಳ ಕಾಲ ಬಂದಾಗ ಫಲವನ್ನು ಕೊಟ್ಟೇಕೊಡುತ್ತವೆ. ಮನುಷ್ಯನು ತನ್ನ ನೆರಳನ್ನು ಮೀರುವುದಕ್ಕಾಗದಿರುವಂತೆ ಆ ಶುಭಾಶುಭಗಳನ್ನು ದೇವತೆಗಳೂ ಮೀರಲಾರರು. ಆ ಕನ್ಯೆಯರ ತಾಯಿಯರೂ, ತಂದೆಯವರೂ ಕೂಡ ದುಃಖಪಡುತ್ತಿರುವರು. ಅಹೋ! ಆ ಬಾಲೆಯರು ಮಾಡಿದ ಪ್ರಮಾದವು ಎಷ್ಟರಮಟ್ಟಿಗೆ ದೊಡ್ಡದಾಯಿತು! ದೋಷವು ಫಲವನ್ನು ಕೊಟ್ಟೇಕೊಡುವುದು. ಮೀರಲಾಗ ವುದಿಲ್ಲ. ಹೀಗಿರುತ್ತಿರಲು ಆ ಪಿಶಾಚಗಳು ಆಹಾರಕ್ಕೋಸ್ಕರ ದುಃಖಪಟ್ಟುಕೊಂಡು ಆ ಸರೋವರದ ದಡದಲ್ಲಿ ಅಲ್ಲಿಂದಿಲ್ಲಿ ಗೆಇಲ್ಲಿಂದಲ್ಲಿಗೆ ಓಡಾಡುತ್ತಿದ್ದುವು. ಹೀಗೆ ಬಹುಕಾಲವು ಕಳೆದಮೇಲೆ ಲೋಮಶನೆಂಬ ಬ್ರಾಹ್ಮಣ ಶ್ರೇಷ್ಠನು ಪುಷ್ಯಮಾಸದ

ಪೌಷಸ್ಯ ಚ ಚತುರ್ದಶ್ಯಾಮಚ್ಛೋದೇ ಸ್ನಾತುಮಾಗತಃ ।
ತಂ ದೃಷ್ಟ್ವಾ ಬ್ರಾಹ್ಮಣಂ ಸರ್ವೇ ಪಿಶಾಚಾಃ ಕ್ಷುತ್ಸಮಾಕುಲಾಃ ॥ ೪೧ ॥

ಧಾವಂತೋ ಹಂತುಕಾಮಾಸ್ತೇ ಮಿಲಿತ್ವಾ ಯೂಥವರ್ತಿನಃ ।
ದಹ್ಯಮಾನಾಃ ಸುತೀಕ್ಷ್ಣೇನ ತೇಜಸಾ ಲೋಮಶಸ್ಯ ಚ ॥ ೪೨ ॥

ಅಸಮರ್ಥಾಃ ಪುರಃ ಸ್ಥಾತುಂ ತೇ ಸರ್ವೇ ದೂರತಃ ಸ್ಥಿತಾಃ ।
ತತ್ರ ವೇದನಿಧಿರ್ವಿಪ್ರಃ ತದೈವ ಹಿ ಸಮಾಗತಃ ॥ ೪೩ ॥

ಸಮೀಕ್ಷ್ಯ ಲೋಮಶಂ ರಾಜನ್ ಸಾಷ್ಟಾಂಗಂ ಪ್ರಣಿಪತ್ಯ ಚ ।
ಉವಾಚ ಸೂನೃತಾಂ ವಾಚಂ ಕೃತ್ವಾ ಶಿರಸಿ ಚಾಂಜಲಿಂ ॥ ೪೪ ॥

॥ ವೇದನಿಧಿರುವಾಚ ॥

ಮಹಾಭಾಗ್ಯೋದಯೇ ವಿಪ್ರ ಸಾಧೂನಾಂ ಸಂಗತಿರ್ಭವೇತ್ ।
ಗಂಗಾದಿಸರ್ವತೀರ್ಥೇಷು ಯೋ ನರಃ ಸ್ನಾತಿ ಸರ್ವದಾ ॥ ೪೫ ॥

---

ಚತುರ್ದಶಿಯ ದಿವಸ ಆ ಅಚ್ಛೋದದಲ್ಲಿ ಸ್ನಾನ ಮಾಡಲು ಬಂದನು. ಆ ಬ್ರಾಹ್ಮಣನನ್ನು ನೋಡಿದೊಡನೆಯೇ ಆ ಪಿಶಾಚಗಳೆಲ್ಲವೂ ಹಸಿವುಗೊಂಡು ಅವನನ್ನು ಕೊಲ್ಲಲು ಓಡುತ್ತ ಬಂದುವು. ಒಟ್ಟಿಗೆ ಸೇರಿಕೊಂಡುವು. ಆದರೆ ಆ ಲೋಮಶನ ತೇಜಸ್ಸಿನಿಂದ ಸುಡಲ್ಪಡುತ್ತಾ ಅವನ ಎದುರಿಗೆ ನಿಲ್ಲಲಾರದೆ ದೂರಕ್ಕೆ ಓಡಿಹೋಗಿ ನಿಂತುಕೊಂಡುವು. ಆ ಸರೋವರದಲ್ಲಿ ಸ್ನಾನಮಾಡಲು ವೇದನಿಧಿಯೂ ಬಂದನು. ಆ ಲೋಮಶನನ್ನು ನೋಡಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಕೈ ಮುಗಿದುಕೊಂಡು ಮೃದುವಾಗಿ ಇಂತೆಂದನು.

೪೫-೪೭. ವೇದನಿಧಿಯು ಹೇಳಿದನು-ಎಲೈ ವಿಪ್ರನೇ ! ಮಹಾಭಾಗ್ಯವು ಉಂಟಾಗುವಾಗ ಸಾಧುಗಳ ಸಹವಾಸವು ಸಿಕ್ಕುತ್ತದೆ. ಗಂಗೆಯೇ ಮುಂತಾದ ತೀರ್ಥಗಳಲ್ಲಿ ಯಾವನು ಯಾವಾಗ ಸ್ನಾನಮಾಡುತ್ತಿರುವನೋ ಯಾವನು

**ಯಃ ಕರೋತಿ ಸತಾಂ ಸಂಗಂ ತಯೋಃ ಸತ್ಸಂಗತಿರ್ವರಾ ।**
**ಗುರೂಣಾಂ ಸಂಗನೋ ವಿಪ್ರ ದೃಷ್ಟಾದೃಷ್ಟಫಲಪ್ರದಃ ॥ ೪೬ ॥**

**ಸ್ವರ್ಗದೋ ರೋಗಹಾರೀ ಚ ಕಿಂ ತು ಸೋಪದ್ರವೀ ನ ತು ॥ ೪೭ ॥**

**॥ ವಸಿಷ್ಠ ಉವಾಚ ॥**

**ಇತ್ಯುಕ್ತ್ವಾ ಕಥಯಾಮಾಸ ಪೂರ್ವವೃತ್ತಾಂತಮದ್ಭುತಂ ॥ ೪೮ ॥**

**॥ ವೇದನಿಧಿರುವಾಚ ॥**

**ಇಮಾ ಗಂಧರ್ವಕನ್ಯಾಸ್ತಾ ವಟುಃ ಸೋಽಯಂ ಮಮಾತ್ಮಜಃ ।**
**ಸರ್ವೇ ಪಿಶಾಚರೂಪೇಣ ಮಿಥಶ್ಶಾಪವಿಮೋಹಿತಾಃ ॥ ೪೯ ॥**

---

ಸ್ನಾನಾದಿಗಳನ್ನು ಮಾಡದೆ ಸತ್ಪುರುಷರ ಸಹವಾಸವನ್ನೇ ಮಾಡುತ್ತಿರುವನೋ ಇವರಿಬ್ಬರಲ್ಲಿ ಸತ್ಪುರುಷರ ಸಹವಾಸವನ್ನು ಮಾಡಿದವನೇ ಶ್ರೇಷ್ಠನು. ಎಲೈ ವಿಪ್ರನೇ ! ಗುರುಗಳ ಸಂಗವು ಕಾಣುವ ವತ್ತು ಕಾಣದಿರುವ ಫಲವನ್ನು ಕೊಡುತ್ತದೆ. ಸತ್ಸಂಗವು ಅವುಗಳನ್ನೂ ಸ್ವರ್ಗವನ್ನೂ ಕೊಡುತ್ತದೆ. ರೋಗವನ್ನೂ ನಾಶಮಾಡುತ್ತದೆ ಆದರೆ ತೊಂದರೆಯನ್ನು ಕೊಡುತ್ತಾ ಒಳ್ಳೆಯದನ್ನುಂಟು ಮಾಡುವುದಿಲ್ಲ.

೪೮. ವಸಿಷ್ಠನು ಹೇಳಿದನು—ಹೀಗೆಂದು ಹೇಳುತ್ತಾ ಇವರ ಅದ್ಭುತವಾದ ಪೂರ್ವದ ಕಥೆಯುನ್ನು ಹೇಳಿದನು.

೪೯. ವೇದನಿಧಿಯು ಹೇಳಿದನು—ಆ ಹೆಣ್ಣು ಪಿಶಾಚಿಗಳೆಲ್ಲರೂ ಗಂಧರ್ವ ಕನ್ಯೆಯರು. ಈ ಗಂಡುಪಿಶಾಚಿಯು ನನ್ನ ಮಗನು. ಇವರು ಒಬ್ಬರಿಗೊಬ್ಬರು ಕೋಪದಿಂದ ಶಾಪವನ್ನು ಕೊಟ್ಟುಕೊಂಡು ಆ ಶಾಪದಿಂದ ಹೀಗೆ ಪಿಶಾಚಿಗಳಾಗಿದ್ದಾರೆ.

ದೀನಾನನಾಶ್ಚ ತಿಷ್ಠಂತಿ ತವಾಗ್ರೇ ಮುನಿಸತ್ತಮ ।
ತ್ವದ್ದರ್ಶನೇನ ಬಾಲಾನಾಂ ನಿಸ್ತಾರೋದ್ಯ ಭವಿಷ್ಯತಿ ।
ಸೂರ್ಯೋದಯೇ ತಮಸ್ತೋಮಃ ಕಿಂ ನ ಲೀಯೇತ ಗಹ್ವರೇ ॥ ೫೦ ॥

॥ ವಸಿಷ್ಠ ಉವಾಚ ॥

ಶ್ರುತ್ವೈವಂ ಲೋಮಶೋ ರಾಜನ್ ಕೃಪಾದ್ರೀಕೃತಮಾನಸಃ ।
ಪ್ರತ್ಯುವಾಚ ಮಹಾತೇಜಾಸ್ತಂ ಮುನಿಂ ಪುತ್ರದುಃಖಿತಂ ॥ ೫೧ ॥

॥ ಲೋಮಶ ಉವಾಚ ॥

ಮತ್ಪ್ರಸಾದಾಚ್ಚ ಬಾಲಾನಾಂ ಸ್ಮೃತಿಸ್ಸಪದಿ ಜಾಯತಾಂ ।
ಧರ್ಮಂ ಚ ವಚ್ಮಿ ತಂ ಯೇನ ಮಿಥಃ ಶಾಪೋ ಲಯಂ ವ್ರಜೇತ್ ॥ ೫೨ ॥

॥ ವೇಧನಿಧಿರುವಾಚ ॥

ಮಹರ್ಷೇ ಕಥ್ಯತಾಂ ಧರ್ಮೋ ಮುಚ್ಯೇರನ್ ಯೇನ ಬಾಲಕಾಃ ।
ನಾಯಂ ಕಾಲೋ ವಿಲಂಬಸ್ಯ ಶಾಪಾಗ್ನಿರ್ದಾರುಣೋ ಯತಃ ॥ ೫೩ ॥

---

೫೦. ಎಲೈ ಋಷಿಯೇ! ದೀನತೆಯಿಂದ ಕಾಂತಿಗುಂದಿದ ಮುಖವುಳ್ಳವುಗಳಾಗಿ ನಿನ್ನ ಮುಂದೆ ನಿಂತುಕೊಂಡಿವೆ. ನಿನ್ನ ದರ್ಶನವಾದುದರಿಂದ ಇವುಗಳ ಶಾಪವು ಈಗ ಹೋಗುವುದು. ಸೂರ್ಯೋದಯವಾದೊಡನೆಯೇ ಕತ್ತಲೆಯು ಗವಿಗಳಲ್ಲಿ ಅಡಗಿಕೊಳ್ಳುತ್ತದೆಯಷ್ಟೆ!

೫೧. ವಸಿಷ್ಠನು ಹೇಳಿದನು–ತೇಜೋವಂತನಾದ ಲೋಮಶನು ಈ ಮಾತನ್ನು ಕೇಳಿ ದಯೆಯಿಂದ ಕೂಡಿದವನಾಗಿ ಪುತ್ರನ ದುಃಖದಿಂದ ದುಃಖಗೊಂಡ ವೇದನಿಧಿಯನ್ನು ಕುರಿತು ಇಂತೆಂದನು.

೫೨. ಲೋಮಶನು ಹೇಳಿದನು–ನನ್ನ ಅನುಗ್ರಹದಿಂದ ಈ ಬಾಲಕರಿಗೆ ಹಿಂದಿನ ಜನ್ಮದ ಜ್ಞಾನವುಂಟಾಗಲಿ. ಅನಂತರ ಅವರ ಶಾಪಗಳು ಹೋಗುವಂತೆ ಧರ್ಮದ ಕೆಲಸವನ್ನು ಉಪದೇಶಮಾಡುತ್ತೇನೆ.

೫೩. ವೇದನಿಧಿಯು ಹೇಳಿದನು–ಎಲೈ ಮಹರ್ಷಿಯೆ! ಆ ಧರ್ಮವನ್ನು ಹೇಳು. ಅದರಿಂದ ಈ ಬಾಲಕರು ಪಿಶಾಚತ್ವವನ್ನು ಕಳೆದುಕೊಳ್ಳಲಿ. ಇದು ಸಾವಕಾಶ ಮಾಡುವ ಕಾಲವಲ್ಲವು. ಶಾಪಾಗ್ನಿಯು ಬಹು ಕ್ರೂರವಾದುದು.

|| ಲೋಮಶ ಉವಾಚ ||

ಮಯಾ ಸಾರ್ಧಂ ಪ್ರಕುರ್ವಂತು ಮಾಘಸ್ನಾನಂ ವಿಧಾನತಃ |
ಶಾಪಾನ್ಮೋಕ್ಷ್ಯಂತಿ ಮಾಘಾಂತೇ ನಾನ್ಯಥಾ ನಿಷ್ಕೃತಿರ್ಭವೇತ್ || ೫೪ ||

ಶಾಪಃ ಪಾಪಫಲಂ ವಿಪ್ರ ಪಾಪನಾಶೋ ಭವೇನ್ನೃಣಾಂ |
ಮಾಘಸ್ನಾನೇನ ಸತ್ತೀರ್ಥೇ ಮಯೇಯಂ ನಿಶ್ಚಿತಾ ಮತಿಃ || ೫೫ ||

ಸಪ್ತಜನ್ಮಕೃತಂ ಪಾಪಂ ವರ್ತಮಾನಂ ಚ ದಾರುಣಂ |
ಮಾಘಸ್ನಾನಂ ದಹೇತ್ ಕೃತ್ಯಂ ಪುಣ್ಯತೀರ್ಥಂ ವಿಶೇಷತಃ || ೫೬ ||

ಪ್ರಾಯಶ್ಚಿತ್ತಂ ನ ಪಶ್ಯಂತಿ ಯಸ್ಮಿನ್ ಪಾಪೇ ಮುನೀಶ್ವರಾಃ |
ಪಾತಕಂ ಪುಣ್ಯತೀರ್ಥೇಷು ನಶ್ಯೇತ್ತದಪಿ ಮಾಘತಃ || ೫೭ ||

---

೫೪. ಲೋಮಶನು ಹೇಳಿದನು–ಶಾಸ್ತ್ರದಲ್ಲಿ ಹೇಳಿರುವಂತೆ ಇವರು ನನ್ನೊಡನೆ ಮಾಘಸ್ನಾನವನ್ನು ಮಾಡಲಿ. ಮಾಘಮಾಸವು ಮುಗಿಯುವುದರೊಳಗೆ ಇವರು ಈ ಶಾಪದಿಂದ ಮುಕ್ತಿಯನ್ನು ಪಡೆಯುತ್ತಾರೆ. ಇನ್ನಾವ ರೀತಿಯಲ್ಲಿಯೂ ಈ ಶಾಪವು ಹೋಗುವುದಿಲ್ಲ.

೫೫. ಎಲೈ ಬ್ರಾಹ್ಮಣನೆ ! ಶಾಪವೆಂಬುದು ಪಾಪದ ಫಲವು. ಒಳ್ಳೆಯ ತೀರ್ಥದಲ್ಲಿ ಮಾಘಸ್ನಾನ ಮಾಡುವುದರಿಂದ ಆ ಪಾಪವು ಹೋಗುತ್ತದೆ. ಹೀಗೆಂದು ನಾನು ತಿಳಿದಿದ್ದೇನೆ.

೫೬. ಪುಣ್ಯಕರವಾದ ತೀರ್ಥಗಳಲ್ಲಿ ಮಾಘಸ್ನಾನವನ್ನು ಮಾಡಿದರೆ ಏಳು ಜನ್ಮಗಳಲ್ಲಿ ಮಾಡಿದ ಬಹು ಕ್ರೂರವಾದ ಪಾಪಗಳನ್ನಾದರೂ ಅದು ನಾಶಮಾಡುತ್ತದೆ.

೫೭. ಮುನಿಶ್ರೇಷ್ಠರು ಯಾವ ಪಾಪಗಳಿಗೆ ಪ್ರಾಯಶ್ಚಿತ್ತವನ್ನೇ ತಿಳಿಯರೋ ಅಂತಹ ದಾರುಣವಾದ ಪಾಪಗಳು ಕೂಡ ಪುಣ್ಯ ತೀರ್ಥಗಳಲ್ಲಿ ಮಾಘಸ್ನಾನ ಮಾಡಿದರೆ ನಾಶವಾಗುತ್ತವೆ. ಇದು ನಿಶ್ಚಯವು.

ಜ್ಞಾನಕೃನ್ಮಾನಸೇ ಮಾಘಸ್ತಸ್ಮಾನ್ಮೋಕ್ಷಫಲಪ್ರದಃ ।
ಹಿಮವತ್ಪೃಷ್ಠತೀರ್ಥೇಷು ಸರ್ವಪಾಪಪ್ರಣಾಶನಃ ॥ ೫೮ ॥

ಇಂದ್ರಲೋಕಪ್ರದೋಽಚ್ಛೋದೇ ನಿರ್ದಿಷ್ಟೋ ವೇದವಾದಿಭಿಃ ।
ಸರ್ವಕಾಮಪ್ರದೋ ಮಾಘೋ ಮೋಕ್ಷಕೃದ್ಬದರೀವನೇ ॥ ೫೯ ॥

ಪಾಪಹಾ ದುಃಖಹಾರೀ ಚ ಸರ್ವಕಾಮಫಲಪ್ರದಃ ।
ರುದ್ರಲೋಕಪ್ರದೋ ಮಾಘೋ ನಾರ್ಮದಃ ಪಾಪನಾಶನಃ ॥ ೬೦ ॥

ಯಾಮುನಃ ಸೂರ್ಯಲೋಕಾಯ ಭವೇತ್ಕಲ್ಮಷನಾಶನಃ ।
ಸಾರಸ್ವತೋಽಘವಿಧ್ವಂಸೀ ಬ್ರಹ್ಮಲೋಕಪ್ರದಸ್ತಥಾ ॥ ೬೧ ॥

---

೫೮. ಮಾನಸ ಸರೋವರದಲ್ಲಿ ಮಾಘಸ್ನಾನ ಮಾಡಿದರೆ ಜ್ಞಾನವು ಬರುತ್ತದೆ. ಆದರಿಂದ ಮೋಕ್ಷವು ಲಭಿಸುತ್ತದೆ. ಹಿಮವಂತನ ತಪ್ಪಲಲ್ಲಿರುವ ತೀರ್ಥಗಳಲ್ಲಿ ಮಾಘಸ್ನಾನ ಮಾಡಿದರೆ ಎಲ್ಲಾ ಪಾಪಗಳೂ ಹೋಗುತ್ತವೆ. ಇದರಲ್ಲಿ ಸಂದೇಹವಿಲ್ಲ.

೫೯. ಅಚ್ಛೋದಸರೋವರದಲ್ಲಿ ಮಾಘಸ್ನಾನ ಮಾಡಿದರೆ ಇಂದ್ರ ಲೋಕವು ಸಿಕ್ಕುತ್ತದೆಂದು ವೇದವಾದಿಗಳು ಹೇಳುತ್ತಾರೆ. ಬದರಿಕಾಶ್ರಮದಲ್ಲಿ ಮಾಘಸ್ನಾನವನ್ನು ಮಾಡಿದರೆ ಇಷ್ಟಾರ್ಥಗಳೆಲ್ಲಾ ಕೈಗೂಡಿ ಮೋಕ್ಷವು ಬರುತ್ತದೆ.

೬೦. ನರ್ಮದಾ ನದಿಯಲ್ಲಿ ಮಾಘಸ್ನಾನ ಮಾಡಿದರೆ ಪಾಪಗಳೂ ದುಃಖಗಳೂ ನಾಶವಾಗುತ್ತವೆ. ಇಷ್ಟಾರ್ಥಗಳೆಲ್ಲವೂ ಕೈಗೂಡುತ್ತವೆ. ರುದ್ರ ಲೋಕವನ್ನೂ ಕೊಡುತ್ತದೆ.

೬೧ ಯಮುನೆಯಲ್ಲಿ ಮಾಡಿದ ಮಾಘಸ್ನಾನವು ಸೂರ್ಯಲೋಕವನ್ನು ಕೊಡುತ್ತದೆ. ಪಾಪಗಳನ್ನು ನಾಶಮಾಡುತ್ತದೆ. ಸರಸ್ವತೀ ನದಿಯಲ್ಲಿ ಮಾಘ ಸ್ನಾನವು ಪಾಪವನ್ನು ನಾಶಮಾಡಿ ಬ್ರಹ್ಮ ಲೋಕವನ್ನು ಕೊಡುತ್ತದೆ.

ವಿಶಾಲಫಲದೋ ಮಾಘೋ ವಿಶಾಲಾಯಾಂ ದ್ವಿಜೋತ್ತಮ ।
ಪಾತಕೇಂಧನದಾವಾಗ್ನಿರ್ಗರ್ಭಹೇತುಕ್ರಿಯಾಪಹಃ ॥ ೬೨ ॥

ವಿಷ್ಣುಲೋಕಾಯ ಮೋಕ್ಷಾಯ ಜಾಹ್ನವೀ ಪರಿಕೀರ್ತಿತಾ ।
ಸರಯೂರ್ಗಂಡಕೀ ಸಿಂಧುಶ್ಚಂದ್ರಭಾಗಾ ಚ ಕೌಶಿಕೀ ॥ ೬೩ ॥

ತಾಪೀ ಗೋದಾವರೀ ಭೀಮಾ ಪಯೋಷ್ಣೀ ಕೃಷ್ಣವೇಣಿಕಾ ।
ಕಾವೇರೀ ತುಂಗಭದ್ರಾ ಚ ಯಾಶ್ಚಾನ್ಯಾಶ್ಚ ಸಮುದ್ರಗಾಃ ॥ ೬೪ ॥

ಆಸು ಮಾಘೀ ನರೋ ಯಾತಿ ಸ್ವರ್ಗಲೋಕಂ ವಿಕಲ್ಮಷಃ ।
ನೈಮಿಷೇ ವಿಷ್ಣುಸಾರೂಪ್ಯಂ ಪುಷ್ಕರೇ ಬ್ರಹ್ಮಣೋಂತಿಕಂ ॥ ೬೫ ॥

ಆಖಂಡಲಸ್ಯ ಲೋಕೋ ಹಿ ಕುರುಕ್ಷೇತ್ರೇಷು ಮಾಘತಃ ।
ಮಾಘೋ ದೇವಹ್ರದೇ ವಿಪ್ರ ಯೋಗಸಿದ್ಧಿಫಲಪ್ರದಃ ॥ ೬೬ ॥

---

೬೨. ವಿಶಾಲಾ ನದಿಯಲ್ಲಿ ಮಾಘಸ್ನಾನ ಮಾಡಿದರೆ ಅದು ಪಾಪವನ್ನು ನಾಶಮಾಡಿ ಬಹುವಾದ ಫಲವನ್ನು ಕೊಡುತ್ತದೆ. ಪಾಪವೆಂಬ ಸೌದೆಗೆ ಕಾಳ್ಗಿಚ್ಚಾಗಿರುತ್ತದೆ. ಗರ್ಭಕ್ಕೆ ಕಾರಣವಾದ ಕ್ರಿಯೆಗಳನ್ನು ನಾಶಮಾಡುತ್ತದೆ.

೬೩–೬೫ ಗಂಗಾನದಿಯಲ್ಲಿ ಸ್ನಾನಮಾಡಿದರೆ ವಿಷ್ಣುಲೋಕವು ಸಿಕ್ಕುತ್ತದೆ. ಸರಯು, ಗಂಡಕಿ, ಸಿಂಧು, ಚಂದ್ರಭಾಗೆ, ಕಾಶಿಕ, ತಪತಿ, ಗೋದಾವರಿ, ಭೀಮರಥಿ, ಪಯೋಷ್ಣೀ, ಕೃಷ್ಣವೇಣಿಕೆ, ಕಾವೇರಿ, ತುಂಗಭದ್ರೆ, ಇನ್ನೂ ಸಮುದ್ರವನ್ನು ಸೇರುವ ಯಾವ ನದಿಗಳಿವೆಯೋ ಅವುಗಳಲ್ಲಿ ಮಾಘಸ್ನಾನಮಾಡಿದವನು ಪಾಪಗಳನ್ನು ಕಳೆದುಕೊಂಡು ಸ್ವರ್ಗಲೋಕವನ್ನು ಹೊಂದುವನು. ನೈಮಿಷದಲ್ಲಿ ಮಾಡಿದ ಮಾಘಸ್ನಾನವು ವಿಷ್ಣು ಸಾರೂಪ್ಯವನ್ನೂ ಪುಷ್ಕರದಲ್ಲಿ ಮಾಡಿದ ಮಾಘಸ್ನಾನವು ಬ್ರಹ್ಮಸಾಯುಜ್ಯವನ್ನೂ ಕೊಡುತ್ತವೆ.

೬೬. ಕುರುಕ್ಷೇತ್ರದಲ್ಲಿ ಮಾಘಸ್ನಾನವನ್ನು ಮಾಡಿದರೆ ಇಂದ್ರಲೋಕವೂ ದೇವಹ್ರದದಲ್ಲಿ ಮಾಘಸ್ನಾನ ಮಾಡಿದರೆ ಯೋಗಸಿದ್ಧಿಗಳೂ ಸಿಕ್ಕುತ್ತವೆ.

ಪ್ರಭಾಸೇ ಮಕರಾದಿತ್ಯೇ ಸ್ನಾನಾದ್ರುದ್ರಗಣೋ ಭವೇತ್ ।
ದೇವಕ್ಯಾಂ ದೇವತಾದೇಹೊ ನರೋ ಭವತಿ ಮಾಘತಃ　　॥ ೬೭ ॥

ಮಾಘಸ್ನಾನೇನ ಭೋ ವಿಪ್ರ ಗೋಮತ್ಯಾಮಪುನರ್ಭವಃ ।
ಹೇಮಕೂಟೇ ಮಹಾಕಾಲೇ ಓಂಕಾರೇಪ್ಯಮರೇಶ್ವರೇ　　॥ ೬೮ ॥

ನೀಲಕಂಠಹ್ರದೇ ಮಾಘಾದ್ರುದ್ರಲೋಕೇ ಮಹೀಯತೇ ।
ಸರ್ವಾಸಾಂ ಸರಿತಾಂ ವಿಪ್ರ ಸಂಗಮೇ ಮಕರೇ ರವೌ　　॥ ೬೯ ॥

ಸ್ನಾನೇನ ಸರ್ವಕಾಮಾನಾಮವಾಪ್ತಿರ್ಜಾಯತೇ ನೃಣಾಂ ।
ಮಾಘಸ್ತು ಪ್ರಾಪ್ಯತೇ ಧನ್ಯೈಃ ಪ್ರಯಾಗೇ ದ್ವಿಜಸತ್ತಮ ।
ಅಪುನರ್ಭವದಂ ತತ್ರ ಸಿತಾಸಿತಜಲಂ ಕಿಲ　　॥ ೭೦ ॥

ಗಾಯಂತಿ ದೇವಾಸ್ಸತತಂ ದಿವಿಷ್ಠಾ
ಮಾಘಃ ಪ್ರಯಾಗೇ ಕಿಲ ನೋ ಭವಿಷ್ಯತಿ ।
ಸ್ನಾತಾ ನರಾ ಯತ್ರ ನ ಗರ್ಭವೇದನಾಂ
ಪಶ್ಯಂತಿ ತಿಷ್ಠಂತ್ಯಪಿ ವಿಷ್ಣುಸನ್ನಿಧೌ　　॥ ೭೧ ॥

---

೬೭-೭೧. ಪ್ರಭಾಸಕ್ಷೇತ್ರದಲ್ಲಿ ಮಾಘಸ್ನಾನಮಾಡಿದರೆ ರುದ್ರನ ಗಣವಾಗಿ ಹುಟ್ಟುತ್ತಾನೆ. ದೇವಕಿಯಲ್ಲಿ ಮಾಘಸ್ನಾನಮಾಡಿದರೆ ಅವನಿಗೆ ದೇವತಾ ದೇಹವು ಬರುತ್ತದೆ ಎಲೈ ಬ್ರಾಹ್ಮಣನೇ! ಗೋಮತಿಯಲ್ಲಿ ಮಾಘಸ್ನಾನ ಮಾಡಿದರೆ ಪುನರ್ಜನ್ಮವಿಲ್ಲ. ಹೇಮಕುಟದ ಮಹಾಕಾಲ ಓಂಕಾರೇಶ್ವರ ಅಮರೇಶ್ವರ ನೀಲಕಂಠಹ್ರದ ಇವುಗಳಲ್ಲಿ ಮಾಘಮಾಸದಲ್ಲಿ ಸ್ನಾನಮಾಡಿದರೆ ರುದ್ರಲೋಕದಲ್ಲಿ ಸುಖಿಸುತ್ತಾನೆ. ಸೂರ್ಯನು ಮಕರರಾಶಿಗೆ ಬಂದಾಗ (ಮಾಘಮಾಸದಲ್ಲಿ) ಯಾವ ನದಿಯ ಸಂಗಮದಲ್ಲಿಯೇ ಆಗಲಿ ಸ್ನಾನ ಮಾಡಿದರೂ ಜನರಿಗೆ ಇಷ್ಟಾರ್ಥಗಳೆಲ್ಲವೂ ಲಭಿಸುತ್ತವೆ. ಎಲೈ ಬ್ರಾಹ್ಮಣ ಶ್ರೇಷ್ಠನೆ! ಪ್ರಯಾಗದಲ್ಲಿ ಮಾಘಸ್ನಾನವು ಧನ್ಯರಿಗೆ ಮಾತ್ರ ಸಿಕ್ಕುತ್ತದೆ. ಆ ಪ್ರಯಾಗದಲ್ಲಿ ಗಂಗೆಯಮುನೆಗಳಲ್ಲಿ ಸ್ನಾನಮಾಡಿದರೆ ಮನುಷ್ಯನಿಗೆ ಪುನ ರ್ಜನ್ಮವೇ ಇರುವುದಿಲ್ಲ. ದೇವತೆಗಳು ಕೂಡ ಸ್ವರ್ಗದಲ್ಲಿದ್ದುಕೊಂಡೇ ಪ್ರಯಾ ಗದಲ್ಲಿ ನಮಗೆ ಮಾಘಸ್ನಾನವು ಸಿಕ್ಕೀತೆ? ಎಂದುಕೊಳ್ಳುತ್ತಿರುತ್ತಾರೆ. ಆ ಪ್ರಯಾಗದಲ್ಲಿ ಮಾಘದಲ್ಲಿ ಸ್ನಾನಮಾಡಿದರೆ ಅವರು ವಿಷ್ಣು ಸನ್ನಿಧಿಯನ್ನು ಸೇರುತ್ತಾರಲ್ಲದೆ ಹುಟ್ಟುವುದೇ ಇಲ್ಲವು.

ಮಜ್ಜಂತಿ ಯೇಽಪಿ ತ್ರಿದಿನಂ ತು ಮಾನವಾಃ
ತೀರ್ಥೇ ಪ್ರಯಾಗೇ ಬಹುಪಾಪಕಂಚುಕಾಃ ।
ಮಜ್ಜಂತಿ ತೇ ನೋ ನಿರಯೇಷು ಧರ್ಮಿಣಃ
ಸ್ವರ್ಗೇಽಪ್ಸರೋಭಿರ್ವಿಹರಂತಿ ದೇವವತ್ ॥ ೭೨ ॥

ತೀರ್ಥೈರ್ವ್ರತೈರ್ದಾನತಪೋಭಿರಧ್ವರೈಃ
ಸಾರ್ಧಂ ವಿಧಾತ್ರಾ ತುಲಯಾ ಧೃತಃ ಪುರಾ ।
ಮಾಘಃ ಪ್ರಯಾಗಸ್ಯ ತಯೋರ್ದ್ವಯೋರಭೂತ್
ಮಾಘೋ ಗರೀಯಾನತ ಏವ ಸೋಽಧಿಕಃ ॥ ೭೩ ॥

ವಾತಾಂಬುಪರ್ಣಾಶನದೇಹಶೋಷಣೈ
ಸ್ತಪೋಭಿರುಗ್ರೈಶ್ಚಿರಕಾಲಸಂಚಿತೈಃ ।
ಯೋಗೈರ್ನ ಸಂಯಾತಿ ನರಾಃ ಸತಾಂ ಗತಿಂ
ಸ್ನಾನಾತ್ಪ್ರಯಾಗಸ್ಯ ಚ ಯಾತಿ ಯಾಂ ಗತಿಂ ॥ ೭೪ ॥

---

೭೨. ಯಾವ ಮನುಷ್ಯನು ಪ್ರಯಾಗದಲ್ಲಿ ಮೂರುದಿವಸ ಸ್ನಾನ ಮಾಡುವನೋ ಅವನು ಬಹುವಾದ ಪಾಪಗಳನ್ನು ಮಾಡಿದ್ದರೂ ನರಕದಲ್ಲಿ ಬೀಳುವುದೇ ಇಲ್ಲವು. ಅಲ್ಲದೆ ಧರ್ಮವನ್ನು ಹೊಂದಿ ಸ್ವರ್ಗದಲ್ಲಿ ದೇವತೆಗಳಂತೆ ಅಪ್ಸರಸ್ತ್ರೀಯರ ಜೊತೆಯಲ್ಲಿ ವಿಹರಿಸುತ್ತಾನೆ.

೭೩. ತೀರ್ಥಗಳು, ವ್ರತಗಳು, ದಾನಗಳು, ತಪಸ್ಸುಗಳು, ಯಾಗಗಳು ಇವುಗಳನ್ನು-ಒಂದು ಕಡೆಯಲ್ಲಿಯೂ ಪ್ರಯಾಗದ ಮಾಘವನ್ನು ಮತ್ತೊಂದು ಕಡೆಯಲ್ಲಿಯೂ ತಕ್ಕಡಿಯೊಳಕ್ಕೆ ಬ್ರಹ್ಮನು ಹಾಕಿ ತೂಗಿದನು. ಇವುಗಳಲ್ಲಿ ಪ್ರಯಾಘದ ಮಾಘವೇ ಭಾರವಾಗಿದ್ದಿತು. ಆದ್ದರಿಂದ ಅದು ಅಷ್ಟು ಮಹಿಮೆಯುಳ್ಳದು.

೭೪. ಪ್ರಯಾಗದಲ್ಲಿ ಮಾಘಸ್ನಾನಮಾಡಿದರೆ ಮನುಷ್ಯನು ಯಾವ ಗತಿಯನ್ನು ಹೊಂದುವನೋ ಆ ಗತಿಯನ್ನು ಗಾಳಿಯನ್ನು ಸೇವಿಸುಕೊಂಡು ತಪಸ್ಸು ಮಾಡಿದರಾಗಲಿ ನೀರನ್ನು ಕುಡಿದುಕೊಂಡಿದ್ದು ತಪಸ್ಸನ್ನು ಮಾಡಿದ ರಾಗಲಿ ಎಲೆಯನ್ನು ತಿಂದುಕೊಂಡಿದ್ದು ತಪಸ್ಸನ್ನು ಮಾಡಿದರಾಗಲಿ ಉಪವಾಸದಿಂದ ದೇಹವನ್ನು ಶೋಷಿಸಿಕೊಂಡು ತಪಸ್ಸನ್ನು ಮಾಡಿದರೇ ಆಗಲಿ ಬಹುಕಾಲ ಉಗ್ರವಾದ ತಪಸ್ಸುಗಳನ್ನು ಮಾಡಿದರೇ ಆಗಲಿ ಯೋಗಾಭ್ಯಾಸವನ್ನು ಮಾಡಿದರೇನೇ ಆಗಲಿ ಇವೊಂದರಿಂದಲೂ ಆ ಗತಿಯನ್ನು ಹೊಂದಲಾರನು.

ಸ್ನಾತಾಶ್ಚ ಯೇ ವೈ ಮೃಗಭಾಸ್ಕರೋದಯೇ
ತೀರ್ಥೇ ಪ್ರಯಾಗೇ ಸುರಸಿಂಧುಸಂಗಮೇ ।
ತೇಷಾಂ ಗೃಹದ್ವಾರಮಲಂಕರೋತಿ ಕಿಂ
ಭೃಂಗಾವಳೀ ಕುಂಜರಕರ್ಣತಾಡಿತಾ ॥ ೭೫ ॥

ಯೋ ರಾಜಸೂಯಾದ್ಧಯಮೇಧಯಜ್ಞತಃ
ಸ್ನಾನಾತ್ಫಲಂ ಸಂಪ್ರದದಾತಿ ಚಾಧಿಕಂ ।
ಪಾಪಾನಿ ಸರ್ವಾಣಿ ವಿಲೋಪ್ಯ ಲೀಲಯಾ
ನೂನಂ ಪ್ರಯಾಗಃ ಸ ಕಥಂ ನ ವರ್ಣ್ಯತೇ ॥ ೭೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಪಿಶಾಚ ವಿಮೋಕ್ಷಣಂ ನಾಮ ಅಷ್ಟಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೫. ಪ್ರಯಾಗದಲ್ಲಿ ಗಂಗಾಸಿಂಧುಗಳ ಸಂಗಮದಲ್ಲಿ ಮಕರ ಮಾಘದಲ್ಲಿ ಯಾರು ಸ್ನಾನಮಾಡುತ್ತಾರೆಯೋ ಅವರ ಮನೆಬಾಗಿಲನ್ನು ಮದ್ದಾನೆಗಳು ಅಲಂಕರಿಸುತ್ತವೆಯೋ ? ಇಲ್ಲ. ಎಂದರೆ ಇರುವಾಗ ಉತ್ಕೃಷ್ಟವಾದ ಭೋಗಗಳನ್ನು ಅನುಭವಿಸುತ್ತಿದ್ದು ಕೊನೆಯಲ್ಲಿ ಮುಕ್ತಿಯನ್ನು ಹೊಂದುತ್ತಾರೆ.

೭೬. ಯಾವ ಪ್ರಯಾಗವು ತನ್ನಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಪಾಪಗಳನ್ನು ನಾಶಮಾಡಿ ರಾಜಸೂಯ ಅಶ್ವಮೇಧಗಳ ಯಜ್ಞಗಳ ಫಲಕ್ಕಿಂತಲೂ ಹೆಚ್ಚುಫಲವನ್ನು ಕೊಡುತ್ತದೆಯೋ ಅಂತಹ ಪ್ರಯಾಗವನ್ನು ವರ್ಣಿಸುವುದಕ್ಕೆ ಆದೀತೇ !

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಪಿಶಾಚ ವಿಮೋಕ್ಷಣ ಎಂಬ ಇನ್ನೂರ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕೋನಪಂಚಾಶದಧಿಕದ್ವಿಶತತಮೋಽಧ್ಯಾಯಃ ॥



॥ ವಸಿಷ್ಠ ಉವಾಚ ॥

**ಅತ್ರ ತೇ ಕಥಯಿಷ್ಯಾಮಿ ಇತಿಹಾಸಂ ಪುರಾತನಂ ।**
**ಪುರಾ ಕೃತಯುಗೇ ರಾಜನ್ ದೇಶೇ ಮಾಲವಸಂಜ್ಞಕೇ ॥ ೧ ॥**

**ಅವಂತಿವಿಷಯೇ ರಾಜಾ ವೀರಸೇನೋಽಭವತ್ಪುರಾ ।**
**ನರ್ಮದಾತೀರಮಾಶ್ರಿತ್ಯ ರಾಜಸೂಯಂ ಚಕಾರ ಹ ॥ ೨ ॥**

**ಷೋಡಶೈರಶ್ವಮೇಧೈಶ್ಚ ಸ್ವರ್ಣವೇದಿವಿರಾಜಿತೈಃ ।**
**ಸ್ವರ್ಣಭೂಷಣಯೂಪಾಢ್ಯೈ ರೇಜೇ ಸೋಽಪಿ ಯಥಾವಿಧಿ ॥ ೩ ॥**

---

### ಇನ್ನೂರ ನಲವತ್ತೊಂಭತ್ತನೆಯ ಅಧ್ಯಾಯವು.



೧-೨. ವಸಿಷ್ಠನು ಹೇಳಿದನು–ಈ ವಿಷಯದಲ್ಲಿ ನಿನಗೆ ಒಂದು ಹಿಂದಿನ ಕಥೆಯನ್ನು ಹೇಳುತ್ತೇನೆ. ಕೇಳು. ಪೂರ್ವದಲ್ಲಿ ಕೃತಯುಗದಲ್ಲಿ ಮಾಲವ ದೇಶದಲ್ಲಿ ಅವಂತಿಯೆಂಬ ಊರಿನಲ್ಲಿ ವೀರಸೇನನೆಂಬ ದೊರೆಯಿದ್ದನು. ಅವನು ನರ್ಮದಾನದಿಯ ದಡದಲ್ಲಿ ರಾಜಸೂಯ ಯಾಗವನ್ನು ಮಾಡಿದನು.

೩. ಹದಿನಾರು ಅಶ್ವಮೇಧಯಾಗಗಳನ್ನು ಮಾಡಿದನು. ಆತನು ಯಾಗಮಾಡುವಾಗ ಚಿನ್ನದ ಜಗುಲಿಯನ್ನೇ ಅಗ್ನಿಗಳಿಗೆ ಕಟ್ಟಿಸಿದ್ದನು. ಯೂಪಸ್ತಂಭಗಳಿಗೆ ಚಿನ್ನದ ಒಡವೆಯನ್ನೇ ಹಾಕಿ ಸರಿಯಾದ ದಕ್ಷಿಣೆಯನ್ನು ಕೊಟ್ಟು ಶಾಸ್ತ್ರದಲ್ಲಿ ಹೇಳಿರುವಂತೆ ಮಾಡಿದನು.

ಪ್ರದದೌ ಧನರಾಶೀಂಶ್ಚ ದ್ವಿಜೇಭ್ಯಃ ಪರ್ವತೋಪಮಾನ್ ।
ವದಾನ್ಯೋ ದೇವತಾಭಕ್ತೋ ಗೋಪ್ರದಶ್ಚ ಸುವರ್ಣದಃ ॥ ೪ ॥

ಬ್ರಾಹ್ಮಣೋ ಭದ್ರಕೋ ನಾಮ ಮೂರ್ಖೋ ಹೀನಕುಲಸ್ತಥಾ ।
ಕೃಷೀವಲೋ ದುರಾಚಾರಃ ಸರ್ವಧರ್ಮಬಹಿಷ್ಕೃತಃ ॥ ೫ ॥

ಸೀರಕರ್ಮಸಮುದ್ವಿಗ್ನೋ ಬಂಧುಭಿಶ್ಚ ಸಮುಜ್ಝಿತಃ ।
ಇತಸ್ತತಃ ಪರಿಭ್ರಮ್ಯ ನಿರ್ಗತೋ ವೃತ್ತಿಪೀಡಿತಃ ॥ ೬ ॥

ದೈವತಃ ಸಾರ್ಥವಾಹಶ್ಚ ಪ್ರಯಾಗಂ ಸ ಸಮಾಗತಃ ।
ಮಾಹಾಮಾಘೀಂ ಪುರಸ್ಕೃತ್ಯ ಸಸ್ನೌ ತತ್ರ ದಿನತ್ರಯಂ ॥ ೭ ॥

ಅನಘಃ ಸ್ನಾನಮಾತ್ರೇಣ ಭೂತ್ವಾ ಹಿ ಸ ದ್ವಿಜೋತ್ತಮಃ ।
ಪ್ರಯಾಗಾಚ್ಚಲಿತಸ್ತತ್ರ ಪುನರ್ಯಸ್ಮಾತ್ಸಮಾಗತಃ ॥ ೮ ॥

---

೪. ಬ್ರಾಹ್ಮಣರಿಗೆ ಪರ್ವತದಷ್ಟು ಹಣದರಾಶಿಗಳನ್ನೇ ದಾನವಾಗಿ ಕೊಟ್ಟನು. ಉದಾರನಾಗಿಯೂ ದೇವತೆಗಳಲ್ಲಿ ಭಕ್ತಿಯುಳ್ಳವನಾಗಿಯೂ ಗೋವುಗಳನ್ನು ದಾನಮಾಡುತ್ತಲೂ ಚಿನ್ನವನ್ನು ದಾನಮಾಡುತ್ತಲೂ ಇದ್ದನು.

೫-೬. ಭದ್ರಕನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಮೂರ್ಖನು. ಜಾತಿಗೆಟ್ಟಿದ್ದವನು. ವ್ಯವಸಾಯವನ್ನು ಮಾಡುವವನು. ದುರಾಚಾರಿಯು. ಎಲ್ಲ ಧರ್ಮಗಳಿಂದಲೂ ಹೊರಗಾದವನು. ಉಳುವುದರಲ್ಲಿಯೇ ಯಾವಾಗಲೂ ಆಸೆಯೂ ಆತುರವೂ ಉಳ್ಳವನು. ಬಂಧುಗಳೆಲ್ಲರಿಂದಲೂ ಬಿಡಲ್ಪಟ್ಟವನು. ಅಲ್ಲಲ್ಲಿ ಓಡಿಯಾಡುತ್ತಿದ್ದು ತನ್ನ ಕೆಲಸದಿಂದ ಜುಗುಪ್ಸೆಹೊಂದಿ ಹೊರಗೆ ಹೊರಟನು.

೭. ಯಾವುದೋ ಪುಣ್ಯದ ದೆಸೆಯಿಂದ ಪ್ರಯಾಣಿಕ ವರ್ತಕರ ಗುಂಪಿನಲ್ಲಿ ಸೇರಿಕೊಂಡು ಪ್ರಯಾಗಕ್ಕೆ ಹೋದನು. ಆಗ ಮಹಾಮಾಘವಾಗಿದ್ದಿತು. ಆಗ ಆ ಪ್ರಯಾಗದಲ್ಲಿ ಮೂರುದಿನಗಳು ಸ್ನಾನಮಾಡಿದನು.

೮. ಆ ಬ್ರಾಹ್ಮಣನು ಅಲ್ಲಿ ಸ್ನಾನಮಾಡಿದುದರಿಂದಲೇ ಪಾಪಗಳನ್ನೆಲ್ಲಾ ಕಳೆದುಕೊಂಡು ಮತ್ತೆ ಆ ಪ್ರಯಾಗದಿಂದ ಹಿಂದಿರುಗಿಬಂದನು.

**ಸ ರಾಜಾ ಸೋಽಪಿ ವಿಪ್ರಶ್ಚ ವಿಪನ್ನಾವೇಕದಾ ತದಾ ।**
**ತಯೋರ್ಗತಿಂ ಸಮಂ ದೃಷ್ಟ್ವಾ ಮಯಾ ಶಕ್ರಸ್ಯ ಸನ್ನಿಧೌ ॥ ೯ ॥**

**ತೇಜೋ ರೂಪಂ ಬಲಂ ಸೈನ್ಯಂ ದೇವಯಾನಂ ವಿಭೂಷಣಂ ।**
**ಕಲ್ಪದ್ರುಮಂಜರಿಮಾಲಾಗೀತಾನೃತ್ಯಂ ಸಮಂ ತಯೋಃ ॥ ೧೦ ॥**

**ಇತಿ ದೃಷ್ಟ್ವಾ ಹಿ ಮಾಹಾತ್ಮ್ಯಂ ಕ್ಷೇತ್ರಸ್ಯ ಕಥಮುಚ್ಯತೇ ।**
**ಮಾಘಸ್ಸಿತಾಸಿತೇ ವಿಪ್ರ ರಾಜಸೂಯಸಮೋ ಭವೇತ್ ॥ ೧೧ ॥**

**ಧನುಸ್ತ್ರಿಂಶತ್ಸುವಿಸ್ತೀರ್ಣೇ ಸಿತನೀಲಾಂಬುಸಂಗಮೇ ।**
**ಮಾಘೀ ನ ಪುನರಾವೃತ್ತೀ ರಾಜಸೂಯೀ ಪುನಃ ಪತೇತ್ ॥ ೧೨ ॥**

**ಮಾಘಮಾಸೇ ಯದಾ ಕೋಽಪಿ ಸಿತಾಸಿತಜಲಂ ಸ್ಪೃಶೇತ್ ।**
**ಸ ಧನ್ಯೋ ಯಸ್ಸ್ಪೃಶೇತ್ತಂ ತು ಮಹಾಪಾತಕಹಾ ಹಿ ಸಃ ॥ ೧೩ ॥**

---

೯. ಆ ದೊರೆಯೂ ಆ ಬ್ರಾಹ್ಮಣನೂ ಒಂದೇಸಾರಿ ಸತ್ತರು. ಅವರಿಬ್ಬರೂ ಇಂದ್ರನ ಬಳಿಯಲ್ಲಿ ಒಂದೇ ಸಮವಾದ ಸ್ಥಿತಿಯಲ್ಲಿರುವುದನ್ನು ನೋಡಿದೆನು.

೧೦. ಅವರಿಬ್ಬರಿಗೂ ತೇಜಸ್ಸು. ರೂಪು, ಬಲ, ಸೈನ್ಯ, ವಿಮಾನ ಒಡವೆ ಕಲ್ಪವೃಕ್ಷದ ಹೂವಿನ ಮಾಲೆ, ಗೀತ, ನೃತ್ಯ ಎಲ್ಲವೂ ಒಂದೇ ರೀತಿಯಾಗಿದ್ದುವು.

೧೧. ಇದನ್ನು ನಾನೇ ನೋಡಿದ್ದರಿಂದ ಕ್ಷೇತ್ರದಲ್ಲಿ ಮಾಘದ ಮಹಿಮೆಯು ಉತ್ತಮವೆಂದು ಹೇಳುತ್ತೇನೆ. ಮಾಘಮಾಸದ ಸ್ನಾನವು ಪ್ರಯಾಗದಲ್ಲಿ ಗಂಗೆಯಮುನೆಗಳ ಸಂಗಮದಲ್ಲಿ ರಾಜಸೂಯ ಯಾಗಕ್ಕೆ ಸಮವಾಗುತ್ತದೆ.

೧೨. ಆ ಪ್ರಯಾಗದಲ್ಲಿ ಗಂಗೆಯಮುನೆಗಳ ಸಂಗಮದಲ್ಲಿ ಮೂವತ್ತು ಧನುಸ್ಸು ಪ್ರಮಾಣಗಳ ಸಂಗಮದ ಅಗಲದಲ್ಲಿ ಮಾಘಸ್ನಾನಮಾಡಿದವನು ಮತ್ತೆ ಹುಟ್ಟುವುದಿಲ್ಲ. ರಾಜಸೂಯ ಯಾಗಮಾಡಿದವನು ಮತ್ತೆ ಹುಟ್ಟುತ್ತಾನೆ.

೧೩. ಮಾಘಮಾಸದಲ್ಲಿ ಯಾವಾಗಲಾದರೂ ಒಂದುಸಾರಿ ಆ ಗಂಗೆ ಯಮುನೆಗಳ ಸಂಗಮದಲ್ಲಿ ನೀರನ್ನು ಮುಟ್ಟಿದ್ದೇ ಆದರೆ ಅವನೇ ಧನ್ಯನು. ಅವನನ್ನು ಮುಟ್ಟಿದವನೂ ಕೂಡ ಮಹಾಪಾಪಗಳನ್ನು ನಾಶಮಾಡಿಕೊಳ್ಳುತ್ತಾನೆ.

ಕಿಮತ್ರ ಬಹುನೋಕ್ತೇನ ಶ್ರೂಯತಾಂ ದ್ವಿಜ ನಿಶ್ಚಿತಂ ।
ಸಮುದ್ಭೂತಫಲಂ ಪಾಪಂ ತೀರ್ಥೇ ಮಾಘಃ ಪ್ರಣಾಶಯೇತ್ ॥ ೧೪ ॥

ಅತ್ರ ತೇ ಕಥಯಿಷ್ಯಾಮಿ ಸಾವಧಾನಮತಿಶ್ಶೃಣು ।
ಪಿಶಾಚಮೋಕ್ಷಣಂ ನಾಮ ಇತಿಹಾಸಂ ಪುರಾತನಂ ॥ ೧೫ ॥

ಶೃಣ್ವಂತ್ವಪ್ಸರಸೋ ಬಾಲಾಃ ಶೃಣೋತು ತ್ವತ್ಸುತಸ್ತಥಾ ।
ಮತ್ಪ್ರಸಾದಾತ್ ಸ್ಮೃತಿರ್ಲಬ್ಧ್ವಾ ಪೈಶಾಚ್ಯಾನ್ಮುಕ್ತಿಕಾಮಿನಃ ॥ ೧೬ ॥

ಪುರಾದೇವದ್ಯುತಿರ್ವಿಪ್ರೋ ವೈಷ್ಣವೋ ವೇದಪಾರಗಃ ।
ಪಿಶಾಚಂ ಮೋಕ್ಷಯಾಮಾಸ ಕರುಣಾಪ್ಲುತಮಾನಸಃ ॥ ೧೭ ॥

---

೧೪. ಎಲೈ ರಾಜನೇ! ಕೇಳು. ಬಹುವಾಗಿ ಹೇಳಿದುದರಿಂದ ಪ್ರಯೋಜನವೇನು? ನಿಶ್ಚಯವಾದ ವಿಷಯವನ್ನು ಹೇಳುತ್ತೇನೆ. ಪಾಪವು ಫಲೋನ್ಮುಖವಾಗಿ ಕೆಟ್ಟ ಫಲವನ್ನು ಕೊಡುತ್ತಿದ್ದರೂ ಕೂಡ ತೀರ್ಥದಲ್ಲಿ ಈ ಮಾಘಸ್ನಾನವು ಅದನ್ನು ನಾಶಮಾಡುತ್ತದೆ.

೧೫. ಈ ವಿಷಯದಲ್ಲಿ ಪಿಶಾಚಮೋಕ್ಷಣವೆಂಬ ಒಂದು ಇತಿಹಾಸವನ್ನು ಹೇಳುತ್ತೇನೆ. ಅದನ್ನು ಸಾವಧಾನವಾಗಿ ಕೇಳು.

೧೬. ನನ್ನ ಅನುಗ್ರಹದಿಂದ ಈ ಪಿಶಾಚಗಳಿಗೆ ಹಿಂದಿನ ಜನ್ಮದ ಸ್ಮೃತಿಯು ಬಂದಿರುವುದು. ಆದ್ದರಿಂದ ಆ ಅಪ್ಸರಸ್ತ್ರೀಯರೂ ನಿನ್ನ ಮಗನೂ ಈ ಕಥೆಯನ್ನು ಕೇಳಲಿ.

೧೭. ಪೂರ್ವದಲ್ಲಿ ದೇವದ್ಯುತಿಯೆಂಬವನೊಬ್ಬ ವೇದವನ್ನು ಓದಿದ ವೈಷ್ಣವನಾದ ಬ್ರಾಹ್ಮಣನಿದ್ದನು. ಅವನು ಕರುಣೆಯುಳ್ಳವನಾಗಿ ಪಿಶಾಚ ಜನ್ಮವನ್ನು ಹೋಗಲಾಡಿಸಿದನು.

॥ ವೇದನಿಧಿರುವಾಚ ॥

ಕುತ್ರ ಸ್ಥಿತಃ ಕಸ್ಯ ಪುತ್ರೋ ನಿಯಮಃ ಕೋಽಸ್ಯ ಚಾಭವತ್ ।
ಕೇನ ವಾ ವೈಷ್ಣವೀ ವೃತ್ತಿಃ ಕಃ ಪಿಶಾಚಶ್ಚ ಮೋಕ್ಷಿತಃ ॥ ೧೮ ॥

ಏತದ್ವಿಸ್ತರತಸ್ಸರ್ವಂ ಕೀರ್ತಯ ತ್ವಂ ಮಹಾಮುನೇ ।
ಕೌತೂಹಲಂ ಮಹಾಪುಣ್ಯಂ ಶ್ರೋತುಂ ಮೇ ತ್ವತ್ಪ್ರಸಾದತಃ ॥ ೧೯ ॥

॥ ಲೋಮಶ ಉವಾಚ ॥

ಲಕ್ಷಪ್ರಸ್ರವಣೇರಣ್ಯೇ ಸರಸ್ವತ್ಯಾ ವಿನಿರ್ಗಮೇ ।
ತತ್ರಾಶ್ರಮಪದಂ ತಸ್ಯ ಶೈಲಮಾಶ್ರಿತ್ಯ ಶೋಭತೇ ॥ ೨೦ ॥

ಶಾಲೈಸ್ತಾಲೈಸ್ತಮಾಲೈಶ್ಚ ಬಿಲ್ವೈರ್ವಕುಲಪಾಟಲೈಃ ।
ಚಿಂಚೀಣೀಚಾರುಬಿಲ್ವೈಶ್ಚ ಚೂತಚಂಪಕಕಾನನೈಃ ॥ ೨೧ ॥

---

೧೮. ವೇದನಿಧಿಯು ಹೇಳಿದನು–ಅವನೆಲ್ಲಿದ್ದನು ? ಯಾರ ಮಗನು ? ಅವನ ನಿಯಮವೇನು ? ವೈಷ್ಣವವೃತ್ತಿಯನ್ನೇಕೆ ಹೊಂದಿದ್ದನು ? ಯಾವ ಪಿಶಾಚಿಯನ್ನು ಬಿಡುಗಡೆ ಮಾಡಿದನು ?

೧೯. ಈ ವಿಷಯವನ್ನು ವಿಸ್ತಾರವಾಗಿ ನೀನು ಹೇಳು. ಎಲೈ ಮುನಿಯೇ! ನನಗೆ ಬಹುವಾಗಿ ಕುತೂಹಲವಿದೆ. ಮಹಾ ಪುಣ್ಯವಾದ ಇದನ್ನು ನಿನ್ನ ಅನುಗ್ರಹದಿಂದ ಕೇಳುತ್ತೇನೆ.

೨೦. ಲೋಮಶನು ಹೇಳಿದನು.— ಲಕ್ಷಪ್ರಸ್ರವಣವೆಂಬ ಒಂದು ಅರಣ್ಯವುಂಟು. ಅದು ಸರಸ್ವತಿ ನದಿಯ ಮೂಲದಲ್ಲಿದೆ. ಅಲ್ಲಿ ಅವನ ಆಶ್ರಮ ವಿರುವುದು. ಅದು ಬೆಟ್ಟದ ತಪ್ಪಲಿನಲ್ಲಿ ಶೋಭಿಸುತ್ತಿದೆ.

೨೧–೨೮. ಮತ್ತಿಮರ, ತಾಳೆಮರ, ಹೊಂಗೆಮರ, ಬಿಲ್ವಪತ್ರೇಮರ, ಪಗಡೆಮರ, ಪಾದರಿಮರ, ಹುಣಿಸೆ, ಕಿರುಬಿಲ್ವಪತ್ರೆ, ಮಾವು, ಸಂಪಿಗೆ, ಹುಲಿಗಿಲಿ

ಕರಂಜೈಃ ಕೋವಿದಾರೈಶ್ಚ ಕೇಸರೈಃ ಕುಜರಾಶನೈಃ ।
ತಿಲಕೈಃ ಕರ್ಣಿಕಾರೈಶ್ಚ ಕುಂಭೀಖದಿರತಿಂದುಕೈಃ ॥ ೨೨ ॥

ವಾನೀರೈಶ್ಚೈಲುಜಂಬೀರೈಃ ಪೀಲೂದುಂಬರವೇತಸೈಃ ।
ಸಾಕ್ಷೋಟೈರಾಟರೂಷೈಶ್ಚ ಕ್ಷೀರಿಕಾಕರಮರ್ದಕೈಃ ॥ ೨೩ ॥

ಬೀಜಪೂರೈಸ್ಸನಾರಂಗೈರಂಭಾರಾಜಿವಿರಾಜಿತೈಃ ।
ಪನಸೈರಸವದ್ಭಿಶ್ಚ ನಾರಿಕೇಲೈಃ ಸದಾಫಲೈಃ ॥ ೨೪ ॥

ಸಪ್ತಚ್ಛದೈಸ್ತ್ರಿಪರ್ಣೈಶ್ಚ ಶಿರೀಷಾಮಲಕೈಃ ಶುಭೈಃ ।
ಕರ್ಕಂದೂಲಕುಚೈರಕ್ಷೈಃ ಪಾರಿಭದ್ರೈರ್ವಚಾದಿಭಿಃ ॥ ೨೫ ॥

ಕೇತಕೈಸ್ಸಿಂಧುವಾರೈಶ್ಚ ತಗರೈಃ ಕುಂದಮಲ್ಲಕೈಃ ।
ಪದ್ಮೇಂದೀವರಕಹ್ಲಾರೈರ್ಮಾಲತೀಯೂತಿಕಾದಿಭಿಃ ॥ ೨೬ ॥

ಮಾಲತೀನೋಗರೈಶ್ಚೈವ ಜಾತೀಫಲವಿರಾಜಿತೈಃ ।
ಪುನ್ನಾಗೈಃ ಕಿಂಶುಕೈಶ್ಚೈವ ಬದರೀತುಲಸೀದ್ರುಮೈಃ ॥ ೨೭ ॥

ಆಶ್ರಮೋ ರಮಣೀಯಸ್ತು ದ್ರುಮೈರ್ನಾನಾವಿಧೈರ್ದ್ವಿಜ ।
ಮಧ್ಯೇವನಂ ನದೀ ಯಾತಿ ಪುಣ್ಯತೋಯಾ ಸರಸ್ವತೀ ॥ ೨೮ ॥

---

ಮರ ಕಂಚುವಾಳ, ಕೇಸರ, ಆನೆಬ್ಯಾಲ, ತಿಲಕ. ಬೆಟ್ಟದಾವರೆ, ತ್ಯಾಗ, ಕಗ್ಗಲಿ, ತೂಬರು, ನೀರುಹಬ್ಬೆ, ಕಾಗೆತೂಬರು, ನಿಂಬೆ, ಗೋಣಿ, ಅತ್ತಿ, ನೀರು ಹಬ್ಬೆ, ಆಲ, ಆಡುಸೋಗೆ, ಕ್ಷೀರಿಕೆ, ಕರಮರ್ದಕ, ಬೀಜಪೂರ. ಹೆರಳೆ, ಬಾಳೆ, ಹಲಸು, ತೆಂಗು, ಏಳೆಲೆಬಾಳೆ, ಮೂರೆಲೆಬಾಳೆ, ಬಾಗೆ, ಹರಳು, ಎಗಚಿ, ಕಿತ್ತಲೆ ತಾರೆ, ಬೇವು, ಬಜೆ, ತಾಳೆ, ಲಕ್ಕಿ, ತಗ್ಗಿ, ಕಾಡುಮಲ್ಲಿಗೆ, ಮಲ್ಲಿಗೆ, ಪದ್ಮ, ಇಂದೀವರ, ಕಹ್ಲಾರ, ಜಾಜಿ, ಗರುಗ, ಕಿರುಜಾಜಿ, ಹೆಜ್ಜಾಜಿ, ಸುರಹೊನ್ನೆ, ಮುತ್ತುಗ, ದೊಡ್ಡಎಗಚಿ, ತುಲಸೀ. ಇವೇ ಮುಂತಾದ ಅನೇಕ ಬಗೆಯ ಮರಗಳಿಂದಲೂ ಗಿಡಗಳಿಂದಲೂ ಆ ಆಶ್ರಮವು ರಮಣೀಯವಾಗಿದ್ದಿತು. ಆ ವನದ ಮಧ್ಯದಲ್ಲಿ ಪುಣ್ಯಪ್ರದವಾದ ಸರಸ್ವತೀ ನದಿಯು ಹರಿಯುತ್ತದೆ.

ಕೂಜನ್ತಿ ಸಾರಸಾಸ್ತತ್ರ ಮದಸ್ನಿಗ್ಧಕಲಂ ಸದಾ ।
ನಂದಂತಿ ಕೋಕಿಲಾಸ್ತತ್ರ ಕೂಜಂತಿ ಚ ಮಧುವ್ರತಾಃ ॥ ೨೯ ॥

ಬಹುಕೋಲಾಹಲಂ ವಿಪ್ರ ತದ್ವನಂ ಶುಕಸಾರಿಭಿಃ ।
ಚರಂತಿ ವಿವಿಧಾಸ್ತತ್ರ ಶ್ವಾಪದಾಃ ಕಾನನೋತ್ತಮೇ ॥ ೩೦ ॥

ಸದಾಫಲಂ ಸದಾಪುಷ್ಪಂ ಪರಾಗಕಣಧೂಸರಂ ।
ಆಚ್ಛನ್ನಂ ಕಾನನಂ ಸರ್ವಂ ಮಧುವೃಕ್ಷೈಃ ಸಮಂತತಃ ॥ ೩೧ ॥

ನವಪಲ್ಲವಸಂಜಾತಮಂಜದೀವರವಲ್ಲಿಭಿಃ ।
ಆಶ್ಲಿಷ್ಟಮಭಿತೋ ರಮ್ಯಂ ಪ್ರಿಯಾಭಿರಿವ ವಲ್ಲಭೈಃ ॥ ೩೨ ॥

ತಸ್ಯ ಶಾಪಭಯಾತ್ತ್ರಸ್ತಾ ಝುಂಝೂವಾತಾಃ ಪ್ರವಾಂತಿ ನ ।
ನ ವರ್ಷಂತ್ಯಶ್ಮನೋ ಮೇಘಾ ನ ಶೋಷಯತಿ ಭಾಸ್ಕರಃ ॥ ೩೩ ॥

---

೨೯-೩೦. ಸಾರಸ ಪಕ್ಷಿಗಳು ಮದದಿಂದ ಮನೋಹರವಾಗಿ ಯಾವಾಗಲೂ ಕೂಗುತ್ತವೆ. ಕೋಗಿಲೆಗಳು ಮನೋಹರವಾಗಿ ಕೂಗುತ್ತಾ ಸಂಚರಿಸುತ್ತವೆ. ದುಂಭಿಗಳು ಝೇಂಕರಿಸುತ್ತಿರುತ್ತವೆ. ಗಿಣಿ ಸಾರಿಕೆಗಳು ಆ ಕಾಡಿನಲ್ಲಿ ಯಾವಾಗಲೂ ಬಹುವಾಗಿ ಕೂಗುತ್ತಿರುತ್ತವೆ. ಆ ಕಾನನದಲ್ಲಿ ಕಾಡು ಮೃಗಗಳು ಯಾವಾಗಲೂ ಸಂಚರಿಸುತ್ತಿರುತ್ತವೆ.

೩೧. ಆ ವನವು ಯಾವಾಗಲೂ ಹೂವು ಹಣ್ಣುಗಳಿಂದ ಕೂಡಿಕೊಂಡಿರುವುದು. ಹೂವಿನ ಧೂಳು ಬೇಕಾದಂತೆ ಬಿದ್ದಿರುವುದು. ಉತ್ತಮವಾದ ರುಚಿಯಾದ ಹಣ್ಣನ್ನು ಕೊಡುವ ಮರಗಳು ಎಲ್ಲಾ ಕಡೆಯಲ್ಲಿಯೂ ತುಂಬಿವೆ.

೩೨. ಹೊಸ ಹೊಸದಾಗಿ ಹೊರಟಿರುವ ಚಿಗುರುಗಳಿಂದಲೂ ಹೂಗಳ ಗೊಂಚಲುಗಳಿಂದ ಕೂಡಿರುವ ಬಳ್ಳಿಗಳಿಂದಲೂ ಆ ಕಾಡಿನಲ್ಲಿರುವ ಭೂಮಿಯು ಪ್ರಿಯನನ್ನು ಪ್ರಿಯೆಯರು ಆಲಂಗಿಸಿಕೊಂಡಂತೆ ಆಲಿಂಗಿಸಿಕೊಂಡಿವೆ.

೩೩. ಆ ಋಷಿಯ ಶಾಪದ ಹೆದರಿಕೆಯಿಂದ ಮಳೆಯಿಂದ ಕೂಡಿದ ಬಿರುಗಾಳಿಯು ಅಲ್ಲಿ ಸಂಚರಿಸುವುದಿಲ್ಲ. ಮೇಘಗಳು ಆಲಿಗಲ್ಲುಗಳನ್ನು ಸುರಿಸುವುದಿಲ್ಲ. ಸೂರ್ಯನೂ ಹೆಚ್ಚು ಕಿರಣವನ್ನು ಬಿಟ್ಟು ಒಣಗಿಸುವುದಿಲ್ಲ.

ವನಂ ನಿರುಪದ್ರವಂ ತದ್ಧಿ ಸದಾ ಸಿದ್ಧನಿಷೇವಿತಂ ।
ಆಹ್ಲಾದಜನನಂ ನಿತ್ಯಂ ವನಂ ಚೈತ್ರರಥಂ ಯಥಾ ॥ ೩೪ ॥

ತಸ್ಮಿನ್ವಸತಿ ಧರ್ಮಾತ್ಮಾ ದೇವದ್ಯುತಿರ್ದ್ವಿಜೋತ್ತಮಃ ।
ಪುತ್ರಃ ಸುಮಿತ್ರವಿಪ್ರಸ್ಯ ಲಬ್ಧೋ ಲಕ್ಷ್ಮೀಪತೇರ್ವರಾತ್ ॥ ೩೫ ॥

ನಿಯಮಃ ಶ್ರೂಯತಾಂ ತಸ್ಯ ಸರ್ವದಾ ನಿಯತಾತ್ಮನಃ ।
ಗ್ರೀಷ್ಮೇ ತು ಪಂಚಾಗ್ನಿತಪಾ ರವೌ ನ್ಯಸ್ತವಿಲೋಚನಃ ॥ ೩೬ ॥

ವರ್ಷಾಕಾದಂಬಿನೀ ಯಾವತ್ ವರ್ಷಾಸ್ವಭ್ರಾವಕಾಶಕಃ ।
ವಾತೇ ಪ್ರವಾತಿ ನಿಷ್ಕಂಪೋ ದುಸ್ಸಹೇ ಹಿಮವಾನಿವ ॥ ೩೭ ॥

ವಸತ್ಯಪ್ಸು ಚ ಹೇಮಂತೇ ಹ್ರದೇ ಸಾರಸ್ವತೇ ದ್ವಿಜ ।
ಉಪಸ್ಪೃಶತಿ ಕಾಲೇ ಸ ತ್ರಿವಾರಂ ವಾರಿ ನಿರ್ಮಲಂ ॥ ೩೮ ॥

---

೩೪. ಆ ವನದಲ್ಲಿ ಯಾವ ತೊಂದರೆಯೂ ಇರುತ್ತಿರಲಿಲ್ಲ. ಯಾವಾಗಲೂ ಸಿದ್ಧರು ಅಲ್ಲಿರುತ್ತಿರುವರು. ಕುಬೇರನ ಉದ್ಯಾನವನವಾದ ಚೈತ್ರರಥದಂತೆ ಯಾವಾಗಲೂ ಆ ವನವು ಸಂತೋಷವನ್ನೇ ಉಂಟು ಮಾಡುತ್ತಿರುವುದು.

೩೫. ಇಂತಹ ಆ ವನದಲ್ಲಿ ಧರ್ಮಾತ್ಮನೂ, ಬ್ರಾಹ್ಮಣೋತ್ತಮನೂ ಆದ ಆ ದೇವದ್ಯುತಿಯು ವಾಸಿಸುತ್ತಿದ್ದನು. ಅವನು ಸುಮಿತ್ರನೆಂಬ ಬ್ರಾಹ್ಮಣನ ಮಗನು. ಲಕ್ಷ್ಮೀಪತಿಯಾದ ಶ್ರೀ ವಿಷ್ಣುವಿನ ವರದಿಂದ ಅವನನ್ನು ಹೊಂದಿದ್ದನು.

೩೬–೩೭. ಅವನು ಯಾವಾಗಲೂ ಬಿಡದೆ ನಿಯಮಗಳನ್ನು ಅನುಸರಿಸುತ್ತಿದ್ದನು. ಅವನ ನಿಯಮಗಳನ್ನು ಕೇಳು ಗ್ರೀಷ್ಮಋತುವಿನಲ್ಲಿ ಸೂರ್ಯನನ್ನು ನೋಡುತ್ತಾ ಪಂಚಾಗ್ನಿಗಳ ಮಧ್ಯದಲ್ಲಿ ತಪಸ್ಸುಮಾಡುವನು. ಮಳೆಗಾಲದಲ್ಲಿ ಮಳೆಯ ಮೋಡಗಳು ಹೋಗುವವರೆಗೂ ಆ ಮಳೆಯಲ್ಲಿಯೇ ತಪಸ್ಸು ಮಾಡುವನು. ದೊಡ್ಡದಾಗಿ ತಡೆಯಲಾಗದಂತೆ ಗಾಳಿಯು ಬೀಸುತ್ತಿರುವಾಗಲೂ ಹಿಮವಂತನಂತೆ ಅಲ್ಲಾಡದೆ ಇರುತ್ತ ತಪಸ್ಸುಮಾಡುವನು.

೩೮–೪೦. ಹೇಮಂತಋತುವಿನಲ್ಲಿ ಸಾರಸ್ವತಹ್ರದವೆಂಬ ಸರೋವರದ ನೀರಿನಲ್ಲಿ ನಿಂತುಕೊಂಡು ತಪಸ್ಸನ್ನು ಮಾಡುವನು. ಹೊತ್ತಿಗೆ ಸರಿಯಾಗಿ ದಿನಕ್ಕೆ

ಪಿತೄನ್ ದೇವಾನ್ ಋಷೀನ್ ನಿತ್ಯಂ ಸಂತರ್ಪಯತಿ ಶ್ರದ್ಧಯಾ ।
ವಹ್ನೌ ಜುಹೋತಿ ವೈತಾನೇ ಶ್ರದ್ಧಯಾತಿಥಿಪೂಜಕಃ ॥ ೩೯ ॥

ಚಾಂದ್ರಾಯಣವಿಧಾನೇನ ಕಾಲಂ ನಯತಿ ಸರ್ವದಾ ।
ಬ್ರಹ್ಮಯಜ್ಞಪರೋ ನಿತ್ಯಂ ಸತ್ಯವಾದೀ ಜಿತೇಂದ್ರಿಯಃ ॥ ೪೦ ॥

ಭ್ರಮನ್ ವಿಶ್ರಮ್ಯ ವಿಶ್ರಾನ್ತಃ ಪ್ರಪದ್ಯೈಃ ಪ್ರಾರ್ಥಯನ್ ಹರಿಂ ।
ಸ್ವಯಂ ವಿಗಳಿತೈಃ ಪುಷ್ಪೈಃ ಫಲೈರ್ವೃತ್ತಿಂ ಸಮೀಹತೇ ॥ ೪೧ ॥

ಅನುದ್ವಿಗ್ನಸ್ತಪೋನಿಷ್ಠೋ ವೇದವೇದಾಂಗಪಾರಗಃ ।
ಧಮನೀವಿಕರಾಲೋಽಸಾವಸ್ಥಿಮಾತ್ರಕಳೇಬರಃ ॥ ೪೨ ॥

ಇತ್ಥಂ ಜಗಾಮ ವರ್ಷಾಣಾಂ ಸಹಸ್ರಂ ತಸ್ಯ ತದ್ವನೇ ।
ತದಾ ಜಜ್ವಾಲ ಶೈಲೋಽಸೌ ತಪಸಾ ತಸ್ಯ ತೇಜಸಾ ॥ ೪೩ ॥

---

ಮೂರುಬಾರಿ ಸ್ನಾನಮಾಡುವನು. ಶ್ರದ್ಧೆಯಿಂದ ದೇವ ಪಿತೃ ಋಷಿಗಳಿಗೆ ನಿತ್ಯವೂ ತರ್ಪಣವನ್ನು ಕೊಡುವನು. ಯಾಗಗಳನ್ನು ಮಾಡುತ್ತಿರುವನು. ಅಗ್ನಿಹೋತ್ರವನ್ನು ಇಟ್ಟುಕೊಂಡಿರುವನು. ಅತಿಥಿಗಳನ್ನು ಶ್ರದ್ಧೆಯಿಂದ ಪೂಜಿಸುವನು. ಚಾಂದ್ರಾಯಣವ್ರತದ ವಿಧಾನದಿಂದ ಕಾಲವನ್ನು ಕಳೆಯುತ್ತಿರುವನು. ಬ್ರಹ್ಮಯಜ್ಞದಲ್ಲಿ ಬಹು ಆಸಕ್ತನು. ಸತ್ಯವಾದಿಯು. ಜಿತೇಂದ್ರಿಯನು.

೪೧. ಓಡಿಯಾಡುತ್ತಲಿದ್ದು ಆಯಾಸವಾದಾಗ ಕಾಲುಗಳ ಹೆಬ್ಬೆಟ್ಟಿನಲ್ಲಿ ನಿಂತುಕೊಂಡು ಹರಿಯನ್ನು ಸ್ತೋತ್ರಮಾಡುವನು. ತಾವಾಗಿಯೇ ಬಿದ್ದ ಹಣ್ಣುಗಳಿಂದ ಹೊಟ್ಟೆಹೊರೆದುಕೊಳ್ಳಬೇಕೆಂದು ಆಶಿಸುತ್ತಿರುವನು.

೪೨. ಯಾವಾಗಲೂ ಆತುರವಾಗಲಿ ಭ್ರಾಂತಿಯಾಗಲಿ ಇಲ್ಲವೇ ಇಲ್ಲ. ವೇದವೇದಾಂಗಗಳಲ್ಲಿ ಬಹುಪಂಡಿತನು. ದೇಹದಲ್ಲಿ ಮಾಂಸವೆಂಬುದೇ ಇಲ್ಲದೆ ಮೂಳೆಯೆಲ್ಲವೂ ಕಾಣುತ್ತ ವಿಕಾರವಾಗಿದ್ದನು. ಆ ಮೂಳೆಗಳಮೇಲೆ ನರಗಳು ಸುತ್ತಿಕೊಂಡು ವಿಕಾರವಾಗಿ ಕಾಣುತ್ತಿದ್ದುವು.

೪೩. ಹೀಗೆ ನಿಯಮನಿಷ್ಠನಾದ ಅವನಿಗೆ ಆ ವನದಲ್ಲಿ ಸಾವಿರವರ್ಷಗಳು ಕಳೆದುವು. ಆಗ ಈತನ ತಪಸ್ಸಿನ ತೇಜಸ್ಸಿನಿಂದ ಆ ಪರ್ವತವೇ ಅಗ್ನಿಯಂತೆ ಕಾಂತಿಯಿಂದ ಪ್ರಕಾಶಿಸುತ್ತಿದ್ದಿತು.

ಸೋಢುಂ ನ ಶಕ್ಯತೇ ಭೂತೈಸ್ತಪಸ್ತಸ್ಯ ಮಹಾತ್ಮನಃ ।
ವೈಶ್ವಾನರ ಇವಾಭಾತಿ ಪ್ರಜ್ವಲಂಸ್ತಪಸಾ ದ್ವಿಜಃ ॥ ೪೪ ॥

ಗತವೈರಾಣಿ ಭೂತಾನಿ ಸಮಜಾಯಂತ ತದ್ವನೇ ।
ಮೃಗವ್ಯಾಘ್ರಾಖುಮಾರ್ಜಾರಾ ಮಿಥಃ ಕ್ರೀಡಂತಿ ನಿರ್ಭಯಾಃ ॥ ೪೫ ॥

ಅನ್ಯೋಽಪಿ ಸಂಯಮಸ್ತಸ್ಯ ಶ್ರೂಯತಾಮತಿದುರ್ಲಭಃ ॥
ನಾರಾಯಣಂ ತ್ರಿಕಾಲಂ ಸಃ ಸಂಪೂಜಯತಿ ನಿತ್ಯಶಃ ॥ ೪೬ ॥

ಪುಷ್ಪಾಣಾಂ ತು ಸಹಸ್ರೇಣ ವಿಕಚೇನ ಸುಗಂಧಿನಾ ।
ವೇದಸೂಕ್ತವಿಧಾನೇನ ವಿಷ್ಣುಧ್ಯಾನಪರಾಯಣಃ ॥ ೪೭ ॥

ವಿಷ್ಣೋಃ ಸಂಪ್ರೀತಯೇ ವಿಪ್ರಃ ಕುರುತೇ ಕರ್ಮ ಚಾಖಿಲಂ ।
ದಧೀಚೇರ್ವರದಾನಾತ್ಸಃ ಸಂಜಾತೋ ವರವೈಷ್ಣವಃ ॥ ೪೮ ॥

---

೪೪. ಭೂತಗಳು ಆ ಮಹಾತ್ಮನು ತಪಸ್ಸುಮಾಡುತ್ತಿದ್ದರೆ ಅದನ್ನು ತಡೆಯಲಾರವು. ಅವನು ಈ ತಪಸ್ಸಿನ ತೇಜಸ್ಸಿನಿಂದ ಬೆಂಕಿಯಂತೆ ಪ್ರಕಾಶಿಸುತ್ತಿದ್ದನು.

೪೫. ಆಗ ಅಲ್ಲಿರುವ ಪ್ರಾಣಿಗಳು ಅಗಂತುಕವಾದ ಸ್ವಾಭಾವಿಕವಾದ ವೈರಗಳನ್ನು ಬಿಟ್ಟುಬಿಟ್ಟವು. ಹುಲಿಹುಲ್ಲೆಗಳೂ ಇಲಿಬೆಕ್ಕುಗಳೂ ತಮ್ಮ ವೈರವನ್ನು ಬಿಟ್ಟು ಭಯವಿಲ್ಲದೆ ವಿಹರಿಸುತ್ತಿದ್ದುವು.

೪೬-೪೭. ಅವನು ಮಾಡುತ್ತಿರುವ ದುರ್ಲಭವಾದ ನಿಯಮಗಳನ್ನು ಕೇಳು ಅವನು ಶ್ರೀಮನ್ನಾರಾಯಣನನ್ನು ಮೂರುಕಾಲದಲ್ಲಿಯೂ ಪೂಜಿಸುವನು. ಅದಕ್ಕೋಸ್ಕರವಾಗಿ ಅರಳಿರುವ ಸುವಾಸನೆಯುಳ್ಳ ಹೂಗಳನ್ನು ತರುವನು ಅವು ಗಳಿಂದ ಪೂಜಿಸುವಾಗ ವೇದಸೂಕ್ತಗಳನ್ನು ಹೇಳಿ ಪೂಜಿಸುವನು ವಿಷ್ಣುವಿನ ಧ್ಯಾನದಲ್ಲಿಯೇ ಮಗ್ನನಾಗಿರುವನು.

೪೮. ಅವನು ತಾನು ಮಾಡುವ ಕೆಲಸಗಳನ್ನೆಲ್ಲಾ ವಿಷ್ಣುವಿನ ಪ್ರೀತಿಗೋಸ್ಕರಲೇ ಮಾಡುತ್ತಿರುವನು. ಅವನು ಧಧೀಚಿಋಷಿಯ ವರದಾನದಿಂದ ಈ ರೀತಿಯಾಗಿ ವೈಷ್ಣವನಾಗಿ ಹುಟ್ಟಿದವನು.

ಏಕದಾ ಮಾಸಿ ವೈಶಾಖೇ ಏಕಾದಶ್ಯಾಂ ಮಹಾಮುನಿಃ ।
ಪೂಜಾಂ ಕೃತ್ವಾ ಹರೇ ರಮ್ಯಾಂ ವಿಚಿತ್ರಾಮಕರೋತ್ ಸ್ತುತಿಂ ॥ ೪೯ ॥

ತದೈವ ಖಗಮಾರುಹ್ಯ ದೇವದೇವೋ ಹರಿಸ್ಸ್ವಯಂ ।
ಆಜಗಾಮ ಪುರಸ್ತಸ್ಯ ತಯಾ ಸ್ತುತ್ಯಾತಿಹರ್ಷಿತಃ ॥ ೫೦ ॥

ತಂ ದೃಷ್ಟ್ವಾ ಗರುಡಾರೂಢಂ ಪ್ರತ್ಯಕ್ಷಂ ಜಲದಚ್ಛವಿಂ ।
ಚತುರ್ಬಾಹುಂ ವಿಶಾಲಾಕ್ಷಂ ಸರ್ವಾಲಂಕಾರಭೂಷಿತಂ ॥ ೫೧ ॥

ಉದ್ಭೂತಪುಲಕೋ ವಿಪ್ರಃ ಸಾನಂದಜಲಲೋಚನಃ ।
ಜಗಾಮ ಶಿರಸಾ ಭೂಮೌ ಕೃತಕೃತ್ಯಮನಾಸ್ತದಾ ॥ ೫೨ ॥

---

೪೯. ಒಂದು ಸಾರಿ ಆ ಮುನಿಯು ವೈಶಾಖಮಾಸದ ಏಕಾದಶಿಯ ದಿವಸ ಹರಿಗೆ ಪೂಜೆಯನ್ನು ಮಾಡಿ ವಿಚಿತ್ರವಾದ ಸ್ತೋತ್ರವನ್ನು ಹೇಳಲು ಮೊದಲಿಟ್ಟನು.

೫೦. ಆ ಸ್ತೋತ್ರದಿಂದ ಸಂತೋಷಪಟ್ಟು ಹರಿಯು ಒಡನೆಯೇ ಗರುಡನನ್ನು ಹತ್ತಿಕೊಂಡು ಆ ಋಷಿಯ ಎದುರಿಗೆ ಬಂದನು.

೫೧–೫೨. ಗರುಡನಮೇಲೆ ಕುಳಿತಿರುವ, ಪ್ರತ್ಯಕ್ಷನಾಗಿ ಬಂದಿರುವ, ಕಾಲ ಮೇಘದಂತೆ ಬಣ್ಣವುಳ್ಳ, ನಾಲ್ಕುತೋಳುಗಳುಳ್ಳ, ವಿಶಾಲವಾದ ಕಣ್ಣುಗಳುಳ್ಳ, ಎಲ್ಲಾ ಅಲಂಕಾರಗಳನ್ನೂ ತೊಟ್ಟಿರುವ, ಆ ಸ್ವಾಮಿಯನ್ನು ನೋಡಿ ಆ ಬ್ರಾಹ್ಮಣನಿಗೆ ಮೈಗೂದಲು ಸಂತೋಷದಿಂದ ನಿಮಿರಲು ನಮಿಸಿ ಆನಂದದ ಕಣ್ಣೀರನ್ನು ಸುರಿಸತೊಡಗಿದನು. ಒಡನೆಯೇ ಕೃತಕೃತ್ಯನಾಗಿ ಸಾಷ್ಟಾಂಗ ನಮಸ್ಕಾರವನ್ನು ಮಾಡುತ್ತ ಭೂಮಿಯಲ್ಲಿ ಮಲಗಿದನು.

ನ ಮಮೌ ತೇನ ಹರ್ಷೇಣ ಸ ಬ್ರಹ್ಮಾಂಡೋದರೇಪಿ ಹಿ ।
ನ ಸಸ್ಮಾರ ನಿಜಂ ದೇಹಂ ಬ್ರಹ್ಮಭೂತ ಇವಾಭವತ್ ।
ತತಃ ಸಂಭಾವಿತಃ ಪ್ರೀತ್ಯಾ ಹರಿಣಾ ವೈಷ್ಣವೋ ಮುನಿಃ ॥ ೫೩ ॥

॥ ಹರಿರುವಾಚ ॥

ದೇವದ್ಯುತೇ ವಿಜಾನಾಮಿ ಮದ್ಭಕ್ತಸ್ತ್ವಂ ಮದಾಶ್ರಯಃ ।
ಸನ್ನಸ್ಯಾಖಿಲಕರ್ಮಾಣಿ ಮದ್ಭಾವೋ ಮನ್ಮನಾಃ ಸದಾ ।
ವರಂ ಬ್ರೂಹಿ ಪ್ರಸನ್ನೋಽಸ್ಮಿ ಸ್ತೋತ್ರೇಣಾನೇನ ತೇನಘ ॥ ೫೪ ॥

॥ ಲೋಮಶ ಉವಾಚ ॥

ಇತಿ ಶ್ರುತ್ವಾ ಹರೇರ್ವಾಕ್ಯಂ ಪ್ರತ್ಯುವಾಚ ಸ ತಾಪಸಃ ॥ ೫೫ ॥

---

೫೩. ಅವನಿಗೆ ಆ ಹರ್ಷವು ಹೆಚ್ಚಲು ಅದರಿಂದ ಕೂಡಿ ತನ್ನನ್ನು ಹಿಡಿಯಲು ಬ್ರಹ್ಮಾಂಡವೇ ಸಾಲದಂತಾದನು. ತನ್ನ ದೇಹದ ಪ್ರಜ್ಞೆಯೇ ಅವನಿಗಾಗಲಿಲ್ಲ. ಬ್ರಹ್ಮನಲ್ಲಿ ಸೇರಿದಂತೆಯೇ ಆದನು. ಅನಂತರ ಹರಿಯು ಆ ಮುನಿಯನ್ನು ಗೌರವಿಸಿದನು.

೫೪. ಹರಿಯು ಹೇಳಿದನು–ಎಲೈ ದೇವದ್ಯುತಿಯೆ ? ನೀನು ನನ್ನ ಭಕ್ತನೂ ನನ್ನನ್ನೇ ಆಶ್ರಯವಾಗಿ ಉಳ್ಳವನೂ ಆಗಿದ್ದೀಯೆ, ಎಂದು ಬಲ್ಲೆನು. ಎಲ್ಲಾ ಕರ್ಮಗಳನ್ನೂ ಬಿಟ್ಟು ಸನ್ಯಾಸವನ್ನು ಹೊಂದಿ ನನ್ನಲ್ಲಿಯೇ ಭಾವವನ್ನಿಟ್ಟು ನನ್ನಲ್ಲಿಯೇ ಮನಸ್ಸುಳ್ಳವನಾಗಿ ಇರು. ಈ ಸ್ತೋತ್ರದಿಂದ ಪ್ರಸನ್ನನಾಗಿದ್ದೇನೆ. ವರವನ್ನು ಕೇಳಿಕೋ.

೫೫. ಲೋಮಶನು ಹೇಳಿದನು–ಹರಿಯು ಹೀಗೆ ಹೇಳಿದುದನ್ನು ಕೇಳಿ ಆ ತಾಪಸನು ಪ್ರತ್ಯುತ್ತರವನ್ನು ಕೊಟ್ಟನು.

॥ ದೇವದ್ಯುತಿರುವಾಚ ॥

ದೇವದೇವಾರವಿಂದಾಕ್ಷ ಸ್ವಮಾಯಾಧೃತ ವಿಗ್ರಹ ।
ತ್ವದ್ದರ್ಶನಾತ್ಸದಾ ದೇವ ದುರ್ಲಭೋ ನಾಪರೋ ವರಃ ॥ ೫೬ ॥

ಬ್ರಹ್ಮಾದಯಃ ಸುರಾಸ್ಸರ್ವೇ ಯೋಗಿನಃ ಸನಕಾದಯಃ ।
ತ್ವಾಂ ಸಾಕ್ಷಾತ್ಕರ್ತುಮಿಚ್ಛನ್ತಿ ಸಿದ್ಧಾಶ್ಚ ಕಪಿಲಾದಯಃ ॥ ೫೭ ॥

ಅಹಂ ಮಮೇತಿ ದೇಹಸ್ಯ ಮೋಹಮೂಲಾಃ ಶುಭಾಶುಭಾಃ ।
ಸಹೇತುಕಾಶ್ಚ ದಹ್ಯಂತೇ ತ್ವಯಿ ದೃಷ್ಟೇ ಪರಾವರೇ ॥ ೫೮ ॥

ಜನ್ಮನಃ ಕರ್ಮಣೋ ಬುದ್ಧೇರಾವಿರ್ಭೂತಂ ಫಲಂ ಮಮ ।
ಯದ್ದೃಷ್ಟೋಽಸಿ ಜಗನ್ನಾಥ ಪ್ರಾರ್ಥಯೇ ಕಿಮತಃ ಪರಂ ॥ ೫೯ ॥

---

೫೬. ದೇವದ್ಯುತಿಯು ಹೇಳಿದನು–ದೇವದೇವನೇ ! ಅರವಿಂದಾಕ್ಷನೆ ! ತನ್ನ ಮಾಯೆಯಿಂದಲೇ ಧರಿಸಿರುವ ಶರೀರವುಳ್ಳವನೇ ! ನಿನ್ನ ದರ್ಶನಕ್ಕಿಂತಲೂ ಬೇರೆ ವರವು ಬೇಕಾಗುವುದೆ ? ಯಾವಾಗಲೂ ದರ್ಶನವನ್ನು ಕೊಡುತ್ತಿರು.

೫೭. ಬ್ರಹ್ಮ, ದೇವತೆಗಳು, ಯೋಗಿಗಳು ಸನಕಾದಿಗಳೇ ಮುಂತಾದವರೂ ಮತ್ತು ಕಪಿಲನೂ ಕೂಡ ನಿನ್ನನ್ನು ಸಾಕ್ಷಾತ್ಕಾರಮಾಡಿಕೊಳ್ಳಲು ಇಚ್ಛಿಸುತ್ತಾರೆ.

೫೮. ನಾನು ನನ್ನದು ಎಂಬ ಭಾವನೆಗಳು ಈ ದೇಹಕ್ಕೆ ಸಂಬಂಧಪಟ್ಟುವು. ಇವುಗಳಿಗೆ ಉಂಟಾಗುವ ಒಳ್ಳೆಯದು ಕೆಟ್ಟದ್ದು ಇವು ಆ ದೇಹದಲ್ಲಿರುವ ಜ್ಞಾನಕ್ಕೆ ಸಂಬಂದಪಟ್ಟುದು. ಪರಮಾತ್ಮನಾದ ನಿನ್ನನ್ನು ಕಂಡರೆ ಇವೆಲ್ಲವೂ ನಾಶವಾಗುತ್ತವೆ.

೫೯. ನನ್ನ ಜನ್ಮಕ್ಕೂ, ಕರ್ಮಕ್ಕೂ, ನನ್ನ ಬುದ್ಧಿಗೂ, ಫಲವು ಈಗ ಉಂಟಾಯಿತು. ನೀನು ನನ್ನ ಕಣ್ಣಿಗೆ ಕಂಡುದೇ ಒಂದು ಸುಯೋಗವಾಗಿರುವುದು ಇದಕ್ಕಿಂತಲೂ ನಾನು ಮತ್ತೇನನ್ನು ಕೇಳಿಕೊಳ್ಳಲಿ !

ನ ವರಾರ್ಥಂ ಹಿ ದೇವೇಶ ತ್ವತ್ಪಾದಪಂಕಜಂ ಹೃದಿ ।
ಚಿಂತಯಾಮ್ಯನಿಶಂ ಭಕ್ತ್ಯಾ ತ್ವದ್ಗತೇನಾಂತರಾತ್ಮನಾ　　॥ ೬೦ ॥

ಇಮಮೇವ ವರಂ ಯಾಚೇತ್ವದ್ಭಕ್ತಿರಚಲಾ ಮಮ ।
ಅಸ್ತು ಮೈ ಕೇವಲಾ ನಾಥ ಪ್ರಾರ್ಥಯೇ ನಾಪರಂ ವರಂ　　॥ ೬೧ ॥

॥ ಲೋಮಶ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಪ್ರಸನ್ನಹೃದಯಸ್ತದಾ ।
ಪ್ರತ್ಯುವಾಚ ಪ್ರಸನ್ನಾತ್ಮಾ ಏವಮಸ್ತು ದ್ವಿಜೋತ್ತಮ　　॥ ೬೨ ॥

ಅನ್ಯಸ್ತೇ ತಪಸಃ ಕಶ್ಚಿತ್ಪ್ರತ್ಯೂಹೋ ನ ಭವಿಷ್ಯತಿ ।
ಏತಚ್ಚ ತ್ವತ್ಕೃತಂ ಸ್ತೋತ್ರಂ ಯೇ ಪಠಿಷ್ಯಂತಿ ಮಾನವಾಃ　　॥ ೬೩ ॥

---

೬೦. ಎಲೈ ಸ್ವಾಮಿಯೆ ? ನಿನ್ನಲ್ಲಿ ಭಕ್ತಿಯಿಟ್ಟುಕೊಂಡು ನಿನ್ನಲ್ಲಿ ಮನಸ್ಸುಳ್ಳವನಾಗಿ ನಿನ್ನ ಪಾದಪಂಕಜಗಳನ್ನು ವರವನ್ನು ಹೊಂದುವುದ ಕ್ಕೋಸ್ಕರ ಭಜಿಸುತ್ತಲಿಲ್ಲ.

೬೧. ಆದರೆ ಇದೊಂದು ವರವನ್ನು ಮಾತ್ರ ಕೇಳಿಕೊಳ್ಳುತ್ತೇನೆ. ನಿನ್ನಲ್ಲಿ ನನಗೆ ಅಚಲವಾದ ಭಕ್ತಿಯೊಂದು ಮಾತ್ರ ಯಾವಾಗಲೂ ಇರಲಿ. ಇದಕ್ಕಿಂತಲೂ ಮತ್ತೊಂದನ್ನು ನಾನು ಕೇಳಿಕೊಳ್ಳುವುದಿಲ್ಲ.

೬೨. ಲೋಮಶನು ಹೇಳಿದನು-ಅವನ ಮಾತನ್ನು ಕೇಳಿ ಸ್ವಾಮಿಯು ಪ್ರಸನ್ನವಾದ ಮನಸ್ಸುಳ್ಳವನಾಗಿ ಹಾಗೆಯೇ ಆಗಲೆಂದು ಹೇಳಿದನು.

೬೩-೬೪ ಇದೂ ಅಲ್ಲದೆ ನಿನ್ನ ತಪಸ್ಸಿಗೆ ಯಾವಾಗಲೂ ವಿಘ್ನವು ಬರದಿರಲಿ. ನೀನು ಹೇಳಿರುವ ಈ ಸ್ತೋತ್ರವನ್ನು ಯಾವ ಮನುಷ್ಯನು ಓದುವನೋ ಅವನಿಗೆ ನನ್ನ ವಿಷಯದಲ್ಲಿ ನಿಶ್ಚಲವಾದ ಭಕ್ತಿಯೂ ಉಂಟಾಗಲಿ.

ತೇಷಾಂ ಮದ್ವಿಷಯಾ ಭಕ್ತಿಃ ನಿಶ್ಚಲಾ ಚ ಭವಿಷ್ಯತಿ ।
ಧರ್ಮಕಾರ್ಯಂ ಚ ಯತ್ಕಿಂಚಿತ್ಸಾಂಗಂ ಸರ್ವಂ ಭವಿಷ್ಯತಿ ॥ ೬೪ ॥

ಜ್ಞಾನೇನ ಪರಮಾ ನಿಷ್ಠಾ ತೇಷಾಂ ಸ್ಥಾಸ್ಯ ಸರ್ವದಾ ॥ ೬೫ ॥

॥ ಲೋಮಶ ಉವಾಚ ॥

ಇತ್ಯುಕ್ತ್ವಾಂತರ್ಹಿತೋ ಭೂಯೋ ದೇವದೇವೋ ಜನಾರ್ದನಃ ।
ದೇವದ್ಯುತಿಸ್ತದಾರಭ್ಯ ನಾರಾಯಣಪರೋ ಭವತ್ ॥ ೬೬ ॥

॥ ವೇದನಿಧಿರುವಾಚ ॥

ಮಹರ್ಷೇನುಗೃಹೀತೋಸ್ಮಿ ಕಥಯಾ ಪಾವನೀಕೃತಃ ।
ಅನಯಾ ವಿಷ್ಣುಸಂಗಿನ್ಯಾ ಗಂಗಯೇವಾಹಮದ್ಯ ವೈ ॥ ೬೭ ॥

ಕಿಂ ತತ್ ಸ್ತೋತ್ರಂ ತದಾಖ್ಯಾಹಿ ಪ್ರಸನ್ನೋ ಯೇನ ಮಾಧವಃ ।
ತಸ್ಯಾನಘಸ್ಯ ವಿಪ್ರಸ್ಯ ಮಹತ್ಕೌತೂಹಲಂ ಮಮ ॥ ೬೮ ॥

---

ಅವರು ಮಾಡಿದ ಯಾವುದಾದರೂ ಒಂದು ಧರ್ಮಕಾರ್ಯವು ಸಣ್ಣದಾಗಿದ್ದರೂ ಅದು ಸಾಂಗವಾಗಿ ಆಗಲಿ. ಅವರು ಸರಿಯಾದ ಜ್ಞಾನವನ್ನು ಹೊಂದಿ ಬಹು ಶ್ರದ್ಧೆಯನ್ನು ಶಾಶ್ವತವಾಗಿರುವಂತೆ ಹೊಂದುತ್ತಾರೆ.

೬೬. ಲೋಮಶನು ಹೇಳಿದನು–ಹೀಗೆಂದು ಹೇಳಿ ದೇವದೇವನಾದ ಜನಾರ್ದನನು ಅಂತರ್ಧಾನವನ್ನು ಹೊಂದಿದನು. ಅದು ಮೊದಲುಗೊಂಡು ದೇವದ್ಯುತಿಯು ನಾರಾಯಣನಲ್ಲಿಯೇ ಮನಸ್ಸಿಟ್ಟುಕೊಂಡಿದ್ದನು.

೬೭. ವೇದನಿಧಿಯು ಹೇಳಿದನು–ಎಲೈ ಮಹರ್ಷಿಯೆ! ಈ ಕಥೆಯಿಂದ ನಾನು ಪಾವನನಾದೆನು. ವಿಷ್ಣುವಿನ ಸಂಬಂಧವಾದ ಈ ಕಥೆಯು ಗಂಗೆಯು ಪುರುಷರನ್ನು ಪವಿತ್ರರನ್ನಾಗಿ ಮಾಡುವಂತೆ ನನ್ನನ್ನು ಪವಿತ್ರನನ್ನಾಗಿ ಮಾಡಿದೆ.

೬೮ ಆ ಉತ್ತಮೋತ್ತಮನಾದ ಬ್ರಾಹ್ಮಣನಿಗೆ ಮಾಧವನು ಯಾವ ಸ್ತೋತ್ರದಿಂದ ಪ್ರಸನ್ನನಾದನೋ ಆ ಸ್ತೋತ್ರವನ್ನು ಹೇಳು. ನನಗೆ ಬಹಳ ಆಸೆಯಿದೆ.

ತ್ವತ್ಪ್ರಸಾದಾದಹಂ ವಿಪ್ರ ಮನ್ಯೇ ಪ್ರಾಪ್ತಂ ಮನೋರಥಂ ।
ಮಹತಾಂ ಸಂಗತಿಃ ಕಸ್ಯ ಮಹತ್ವಾಯ ನ ಕಲ್ಪತೇ ॥ ೬೯ ॥

॥ ಲೋಮಶ ಉವಾಚ ॥

ಕಥಯಾಮಿ ರಹಸ್ಯಂ ತೇ ಯಜ್ಜಪ್ತಂ ಸ್ತೋತ್ರಮುತ್ತಮಂ ।
ಪ್ರಾಗ್ಗೃಹೀತಂ ಸುಪರ್ಣೇನ ಗರುಡಾನ್ಮಮ ಚಾಗತಂ ॥ ೭೦ ॥

ಅಧ್ಯಾತ್ಮಗರ್ಭಸಾರಂ ತನ್ಮಹೋದಯಕರಂ ಶುಭಂ ।
ಸರ್ವಪಾಪಹರಂ ವಿಪ್ರ ಹ್ಯಾತ್ಮಜ್ಞಾನಕರಂ ಪರಂ ॥ ೭೧ ॥

ಓಂ ನಮೋಭಗವತೇ ವಾಸುದೇವಾಯ ನಮೋ ವಿಶ್ವಾಯ ಚಕ್ರಿಣೇ ।
ಭಕ್ತಪ್ರಿಯಾಯ ಕೃಷ್ಣಾಯ ಜಗನ್ನಾಥಾಯ ತೇಜಸೇ ॥ ೭೨ ॥

---

೬೯. ಎಲೈ ವಿಪ್ರನೇ! ನಿನ್ನ ಅನುಗ್ರಹದಿಂದ ನನ್ನ ಇಷ್ಟಾರ್ಥವು ಕೈಗೂಡಿತೆಂದು ತಿಳಿದಿದ್ದೇನೆ. ಮಹಾತ್ಮರ ಸಹವಾಸವು ಯಾರಿಗೆ ತಾನೆ ಮಹತ್ವವನ್ನು ಉಂಟುಮಾಡುವುದಿಲ್ಲ!

೭೦. ಲೋಮಶನು ಹೇಳಿದನು–ಅವನು ಹೇಳಿದ ಉತ್ತಮವಾದ ಸ್ತೋತ್ರವನ್ನು ಹೇಳುತ್ತೇನೆ ಅದು ರಹಸ್ಯವಾದುದು. ಮೊದಲು ಇದು ಗರುಡನಿಗೆ ತಿಳಿಯಿತು. ಗರುಡನಿಂದ ನನಗೆ ಬಂದಿತು.

೭೧. ಆತ್ಮಜ್ಞಾನವನ್ನು ಹೊಂದಿರುವ ಸಾರವಾದ ಅಂಶವು. ಬಹುವಾದ ಶ್ರೇಯಸ್ಸನ್ನು ಹೊಂದಿರತಕ್ಕದ್ದು. ಶುಭವಾದುದು. ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ. ಆತ್ಮದ ಜ್ಞಾನವನ್ನು ಚೆನ್ನಾಗಿ ಉಂಟುಮಾಡಿಕೊಡುತ್ತದೆ.

೭೨. ಭಗವಂತನಾದ ವಾಸುದೇವನಿಗೆ ನಮಸ್ಕಾರವು. ಪ್ರಪಂಚ ರೂಪನಾದ ಸ್ವಾಮಿಗೆ ನಮಸ್ಕಾರವು. ಚಕ್ರವನ್ನು ಧರಿಸಿರುವವನಿಗೆ ನಮಸ್ಕಾರವು. ಭಕ್ತರಲ್ಲಿಯೇ ಪ್ರೀತಿಯುಳ್ಳವನಿಗೆ ನಮಸ್ಕಾರವು. ಕೃಷ್ಣನಿಗೆ ನಮಸ್ಕಾರವು. ಜಗನ್ನಾಥನಿಗೆ ನಮಸ್ಕಾರವು. ತೇಜೋರೂಪನಿಗೆ ನಮಸ್ಕಾರವು.

ಸ್ತೋತಾ ಸ್ತುತ್ಯಃ ಸ್ತುತಿಃ ಸರ್ವಂ ಜಗದ್ವಿಷ್ಣುಮಯಂ ಸದಾ ।
ತದಾ ಸಂಸ್ತೂಯತೇ ಕೇನ ಭಕ್ತಿರ್ಭೇದಕರೀ ನೃಣಾಂ ॥ ೭೩ ॥

ಯಸ್ಯ ದೇವಸ್ಯ ನಿಶ್ವಾಸೋ ವೇದಾಸ್ಸಾಂಗಾಃ ಸಸೂತ್ರಕಾಃ ।
ಕಾ ಸ್ತುತಿಃ ಪ್ರಮುದೇ ತಸ್ಯ ಭಕ್ತ್ಯಾಹಂ ಮುಖರೋಭವಂ ॥ ೭೪ ॥

ವೇದೋ ನ ವಕ್ತಿ ಯಂ ಸಾಕ್ಷಾನ್ನ ಚ ವಾಗ್ವೇತ್ತಿ ನೋ ಮನಃ ।
ಮದ್ವಿಧಸ್ತಂ ಕಥಂ ಸ್ತೌತಿ ಭಕ್ತಿಯುಕ್ತೋ ನ ಕಿಂ ವದೇತ್ ॥ ೭೫ ॥

ಬ್ರಹ್ಮಾದಿಬ್ರಹ್ಮ ವಿಷ್ಣೋ ತ್ವಂ ತ್ವಮೇವ ಬ್ರಹ್ಮಣೋ ವಪುಃ ।
ಸ್ರಷ್ಟಾ ಬ್ರಹ್ಮನಿದಾನಂ ಚ ಶುದ್ಧಬ್ರಹ್ಮ ತ್ವಮೇವ ಚ ॥ ೭೬ ॥

---

೭೩. ನೀನೇ ಸ್ತೋತ್ರಮಾಡುವವನು. ನೀನೇ ಸ್ತುತಿಯು. ಜಗತ್ತೆಲ್ಲವೂ ವಿಷ್ಣು ಮಯವಾದುದುದೇ. ನಿನ್ನನ್ನು ಯಾರು ಭಕ್ತಿಯಿಂದ ಸುತ್ತಿಸುವರೋ ಆಗ ಅವರಿಗೆ ಪ್ರತ್ಯಕ್ಷನಾಗುತ್ತೀಯೆ.

೭೪. ಯಾವ ಸ್ವಾಮಿಯ ಉಸಿರುಬಿಡುವಿಕೆಯೋ ವೇದಗಳೂ ವೇದಾಂಗಗಳೂ ಸೂತ್ರಗಳೂ ಆಗಿವೆಯೋ ಅಂತಹ ಸ್ವಾಮಿಯನ್ನು ಸ್ತುತಿಸುವುದಕ್ಕೆ ಸಾಧ್ಯವಾಗುತ್ತದೆಯೆ? ಆದರೂ ಕೂಡ ಅವನಿಗೆ ಸಂತೋಷ ವುಂಟಾಗಲು ಅವನಲ್ಲಿರುವ ಭಕ್ತಿಯಿಂದ ಮಾತುಗಳಲ್ಲಿ ಒಂದೆರಡನ್ನು ಹೇಳ ಬೇಕಾಯಿತು.

೭೫ ವೇದವೂ ಕೂಡ ಯಾವ ಸ್ವಾಮಿಯನ್ನು ಪ್ರತ್ಯಕ್ಷವಾಗಿ ಕಾಣುವಂತೆ ಹೇಳುವುದಕ್ಕಾಗುವುದಿಲ್ಲವೋ ಮಾತಿಗೆ ಕೂಡ ಯಾವನು ನಿಲುಕುವುದಿಲ್ಲವೋ, ಮನಸ್ಸಿಗೂ ಸಹ ಅಗೋಚರನೋ, ಅಂತಹವನನ್ನು ನನ್ನಂತಹವನು ಏನೆಂದು ಸ್ತುತಿಸಿಯೇನು? ಭಕ್ತಿಯು ಬಂದರೂ ಕೂಡ ಏನೆಂದು ಹೊಗಳಲಾದೀತು?

೭೬. ನೀನು ಬ್ರಹ್ಮನಿಗೆ ಮೊದಲನೆಯ ಬ್ರಹ್ಮನು. ವಿಷ್ಣುವೂ ನೀನೆ. ಬ್ರಹ್ಮನಿಗೆ ದೇಹವು. ಸೃಷ್ಟಿಸುವವನು. ಬ್ರಹ್ಮನಿಗೆ ಕಾರಣಭೂತನು. ಶುದ್ಧನಾದ ಬ್ರಹ್ಮನೂ ನೀನೇ ಆಗಿದ್ದೀಯೆ.

ಕೋಽಯಂ ಕಾಯಸ್ತ್ವವ ವಿಭೋ ಭಿತ್ವಾ ಸ್ಪೃಷತಿ ಕಾಯಿನಂ ।
ಕಾಯದೋಷೈರನಾಘ್ರಾತಸ್ತಯಾ ತ್ವಂ ಭಾಸಿ ಯೋಗಿನಾಂ ॥ ೭೭ ॥

ದೇಹಭಾವೇನ ಜಾಗರ್ತಿ ನ ನಿದ್ರಾತಿ ನಿಜಾತ್ಮನಿ ।
ಸುಖಸಂದೋಹಬುದ್ಧಿರ್ಯಾ ಸಾ ತ್ವಂ ವಿಷ್ಣೋ ನ ಸಂಶಯಃ ॥ ೭೮ ॥

ಮಹದಾದಿದ್ವಿಧಾಭಾವಾಸ್ತಥಾ ವೈಕಾರಿಕಾ ಗುಣಾಃ ।
ತ್ವಮೇವ ನಾಥ ತತ್ಸರ್ವಂ ನಾನಾತ್ವಂ ಮೂಢಕಲ್ಪನಾ ॥ ೭೯ ॥

ಕೇಶಕೇಶವರೂಪಾಭಿಃ ಕಲ್ಪನಾಭಿಃ ಸ್ಮೃತಿಸ್ತಥಾ ।
ತ್ವಮೇವ ಕಥ್ಯಸೇ ಬ್ರಹ್ಮ ಪುತ್ರಾದಿಭಿಃ ಪುಮಾನಿವ ॥ ೮೦ ॥

---

೭೭. ಎಲೈ ಸ್ವಾಮಿಯೆ! ನಿನ್ನ ದೇಹವು ಎಂಥದು? ಆ ದೇಹವೂ ಕೂಡ ನಿನ್ನ ದೇಹದಿಂದಲೇ ಹೊರಗೆ ಬಂದು ಮತ್ತೊಬ್ಬನನ್ನು ಮುಟ್ಟುತ್ತದೆಯಲ್ಲ! ದೇಹವನ್ನು ಹೊಂದುವ ದೋಷದಿಂದ ನೀನು ಕೂಡಿದವನೇ ಅಲ್ಲ. ಆ ದೇಹವಿಲ್ಲದವನಾಗಿಯೇ ನೀನು ಯೋಗಿಗಳಿಗೆ ಕಾಣುತ್ತೀಯೆ.

೭೮. ಎಲೈ ವಿಷ್ಣುವೆ! ನೀನು ದೇಹವನ್ನು ಹೊಂದಿರುವನಂತೆ ಎಚ್ಚರವಾಗಿದ್ದೀಯೆ. ನೀನು ನಿದ್ದೆಮಾಡುವುದೇ ಇಲ್ಲ. ಎಲ್ಲರಿಗೂ ಸುಖಕರವಾದ ಯಾವ ಬುದ್ಧಿಯಿದೆಯೋ ಅದೇ ನೀನಾಗಿದ್ದೀಯೆ. ಸಂಶಯವಿಲ್ಲ.

೭೯. ಮಹತ್ವ ಅಣುತ್ವರೂಪವಾದ ಎರಡು ರೂಪಗಳೂ ಅಂತೆಯೇ ವಿಕಾರವಾದ ಗುಣಗಳೂ ಅವೆಲ್ಲವೂ ಕೂಡಾ ನೀನೇ ಆಗಿದ್ದೀಯೆ. ಅವೆಲ್ಲವೂ ಬೇರೆ ಬೇರೆಯಾಗಿವೆ ಎಂಬುದು ಮೂಢರು ಹೇಳತಕ್ಕ ಮಾತಾಗಿದೆ.

೮೦. ಕೇಶ ಕೇಶವ ಮುಂತಾದ ರೂಪಗಳನ್ನು ಕಲ್ಪಿಸಿಕೊಂಡು ನೀನು ಹರಡಿಕೊಂಡಿದ್ದೀಯೆ. ಮಕ್ಕಳು ತಂದೆಯನ್ನು ನಾನಾಬಗೆಯಾಗಿ ಹೇಳುತ್ತಿರುವಂತೆ ನೀನು ನಾನಾಬಗೆಯಾಗಿ ಹೇಳಲ್ಪಡುತ್ತಿದ್ದೀಯೆ.

ವಿದೋಷಂ ವಿಗುಣಂ ಚೈಕಂ ಚಿನ್ಮೂರ್ತವಖಿಲಂ ಜಗತ್ ।
ಕವೀನಾಂ ಭಾತಿ ಯದ್ರೂಪಂ ತಂ ವಿಷ್ಣುಂ ನೌಮಿ ನಿರ್ಗುಣಂ ॥ ೮೧ ॥

ಯಸ್ಮಿನ್ ಜ್ಞಾತೇ ನ ಕುರ್ವಂತಿ ಕರ್ಮಾಚಾರಶ್ರುತೇರಿತಂ ।
ನೀರೇಷಣಾ ಜಗನ್ಮಿತ್ರಂ ಶುದ್ಧಂ ಬ್ರಹ್ಮ ನಮಾಮಿ ತತ್ ॥೮೨ ॥

ಕಾಮಯಜ್ಞಾನ್ ಪ್ರಜಾರ್ಥಂ ಚ ಏಷಣಾಭ್ಯಸ್ಸಮುತ್ಥಿತಾನ್ ।
ಲೋಕಮಾತ್ಮೈವ ಪಶ್ಯಂತೋ ಯಂ ಬುದ್ಧ್ವೈವಂ ಚರಾಚರಂ ॥ ೮೩ ॥

ಸ್ವಂ ಸ್ವೇತರಂ ಚ ಸನ್ಮಾತ್ರಂ ಯತ್ಪ್ರಬೋಧಾದುಪಾಸತೇ ।
ಯೋಗಿನಃ ಸರ್ವಭೂತೇಷು ಸದ್ರೂಪಂ ನೌಮಿ ತಂ ಹರಿಂ ॥ ೮೪ ॥

---

೮೧. ದೋಷಗಳಿಲ್ಲದಿರುವ, ಗುಣಗಳಿಲ್ಲದ, ಚಿನ್ಮೂರ್ತಿಯಾದ, ಜಗತ್ತೆಲ್ಲವನ್ನೂ ವ್ಯಾಪಿಸಿರುವ, ದೂರದೃಷ್ಟಿಯಿಂದ ಯೋಗ್ಯರಾದವರಿಗೆ ಕಾಣಲು ಯೋಗ್ಯನಾದ, ಆ ವಿಷ್ಣುವನ್ನು ನಮಸ್ಕರಿಸುತ್ತೇನೆ.

೮೨. ಯಾವ ಸ್ವಾಮಿಯನ್ನು ನೋಡಿದೊಡನೆಯೇ ಅವರು ಶ್ರುತಿಯಲ್ಲಿ ಹೇಳಿದ ಕರ್ಮಗಳನ್ನು ಮಾಡುವುದನ್ನೇ ಬಿಟ್ಟು ಬಿಡುವರೋ ಅಂತಹ ಇಚ್ಛಾರಹಿತನಾದ, ಜಗತ್ತಿಗೆ ಮಿತ್ರನಾದ, ಶುದ್ಧಬ್ರಹ್ಮನನ್ನು ನಮಸ್ಕರಿಸುತ್ತೇನೆ.

೮೩. ಪುತ್ರೇಷಣ, ದಾರೇಷಣ, ಧನೇಷಣಗಳೆಂಬ ಇಚ್ಛೆಗಳಿಂದ ಕಾಮಯಜ್ಞ(ಕಾಮವನ್ನೇ ಅನುಭವಿಸುವಿಕೆ)ವನ್ನು, ಮಕ್ಕಳಿಗೋಸ್ಕರ ಮಾತ್ರ ಅನುಭವಿಸುತ್ತಾ ನಿಷ್ಕಾಮರಾಗಿರುವ ಜನರು ಯಾವ ನಿನ್ನನ್ನು ಆತ್ಮವೆಂದೇ ತಿಳಿದು ನೋಡುವರೋ ಅಂತಹ ನಿನಗೆ ನಮಸ್ಕಾರವು.

೮೪. ಯೋಗಿಗಳು ಯಾವ ಸ್ವಾಮಿಯನ್ನು ತಿಳಿದಕೂಡಲೇ ತನ್ನನ್ನೂ ಪರರನ್ನೂ ಸದ್ರೂಪವೆಂದು ನೋಡುತ್ತಾ ಎಲ್ಲಾ ಪ್ರಾಣಿಗಳಲ್ಲಿಯೂ ಒಂದೇ ರೀತಿಯಾಗಿ ಪೂಜಿಸುತ್ತಾರೆಯೋ ಅಂತಹ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

ಬ್ರಹ್ಮಾಹಮಿತಿ ಗಾಯಂತಿ ಯಂ ಜ್ಞಾತ್ವೈಕಂ ವರಾ ಜನಾಃ ।
ಪಶ್ಯಂತೋ ಹಿ ತ್ವಯಾ ತುಲ್ಯಂ ದೇವಂ ತಂ ನೌಮಿ ಮಾಧವಂ ॥ ೮೫ ॥

ಮಾಯಾ ಮೋಹೋ ವಿಚಿತ್ರಾಭಸ್ತಥಾಹಂ ಮಮತಾ ನೃಣಾಂ ।
ವಿಲೀಯಂತೇ ವಿದಿತ್ವಾ ಯಂ ನಮಸ್ತಸ್ಮೈ ಚಿದಾತ್ಮನೇ ॥ ೮೬ ॥

ಮೋಹಾನಲಲಸಜ್ಜ್ವಾಲಾಜ್ಜ್ವಲಂಲ್ಲೋಕೇಷು ಸರ್ವದಾ ।
ಯನ್ನಾಮಾಂಭೋಧರಚ್ಛಾಯಾಂ ಪ್ರವಿಷ್ಟೋ ನ ತು ದಹ್ಯತೇ ॥ ೮೭ ॥

ಪ್ರಯಾಣೇ ವಾಽಪ್ರಯಾಣೇ ವಾ ಯನ್ನಾಮ ಸ್ಮರತಾಂ ನೃಣಾಂ ।
ಸದ್ಯೋ ನಶ್ಯತಿ ಪಾಪೌಘೋ ನಮಸ್ತಸ್ಮೈ ಚಿದಾತ್ಮನೇ ॥ ೮೮ ॥

---

೮೫. ಉತ್ತಮ ಪುರುಷರು ಯಾವ ಸ್ವಾಮಿಯನ್ನು ನೋಡಿದಮೇಲೆ ನಾನೇ ಬ್ರಹ್ಮನೆಂಬದಾಗಿ ಎಂದು ಕೊಳ್ಳುತ್ತ ಆ ಸ್ವಾಮಿಗೆ ಸಮವಾಗಿಯೇ ತಿಳಿದುಕೊಳ್ಳುತ್ತಾರೆಯೋ ಅಂತಹ ಸ್ವಾಮಿಗೆ ನಾನು ನಮಸ್ಕರಿಸುತ್ತೇನೆ.

೮೬. ಮಾಯೆ, ನಾನಾಬಗೆಯಾದ ಮೋಹ, ಅಹಂಕಾರ, ಮಮಕಾರ ಗಳು, ಯಾವ ಸ್ವಾಮಿಯನ್ನು ತಿಳಿದೊಡನೆಯೇ ನಾಶವಾಗುತ್ತವೆಯೋ ಅಂತಹ ಚಿದ್ರೂಪನಿಗೆ ನಮಸ್ಕಾರವು.

೮೭. ಮೋಹವೆಂಬ ಬೆಂಕಿಯುಜ್ವಾಲೆಯಿಂದಲೇ ಯಾವಾಗಲೂ ಬೇಯುತ್ತಿರುವವನಾಗಿದ್ದರೂ ಯಾವ ಸ್ವಾಮಿಯ ನಾಮವೆಂಬ ಮೇಘದ ನೆರಳನ್ನು ಆಶ್ರಯಿಸಿದರೆ ಆ ಬೆಂಕಿಯಿಂದ ಸುಡಲ್ಪಡುವುದಿಲ್ಲವೋ ಅಂತಹ ಸ್ವಾಮಿಗೆ ನಮಸ್ಕಾರವು.

೮೮ ಪ್ರಯಾಣ ಮಾಡುವಾಗಲಾಗಲೀ ಸುಮ್ಮನಿರುವಾಗಲಾಗಲೀ ಯಾವ ಸ್ವಾಮಿಯ ನಾಮಸ್ಮರಣೆಯನ್ನು ಮಾಡಿದರೆ ಮನುಷ್ಯರ ಪಾಪಗಳು ಹೋಗುತ್ತವೆಯೋ ಅಂತಹ ಚಿತ್‌ಸ್ವರೂಪನಾದ ಸ್ವಾಮಿಗೆ ನಮಸ್ಕಾರವು.

ಯಸ್ಯ ಸ್ಮರಣಮಾತ್ರೇಣ ನ ಮೋಹೋ ನೈವ ದುರ್ಗತಿಃ ।
ನ ರೋಗೋ ನೈವ ದುಃಖಾನಿ ತಮನಂತಂ ನಮಾಮ್ಯಹಂ ॥ ೮೯ ॥

ಕಾಮಯಂತೇ ಪ್ರಜಾ ನೈವ ಹ್ಯೇಷಣಾಭ್ಯಃ ಸಮುತ್ಥಿತಾಃ ।
ಲೋಕಮಾತ್ಮೇತಿ ಪಶ್ಯಂತೋ ಯಂ ಬುದ್ಧ್ವೈಕಚರಾ ಜನಾಃ ॥ ೯೦ ॥

ಶಬ್ದಾರ್ಥಃ ಸಂವಿದರ್ಥಶ್ಚ ವಿಷ್ಣೋರ್ನಾಸ್ತಿ ಪರೋ ಯದಿ ।
ಸತ್ಯೇನ ತೇನ ಸಂಸಾರೋ ನ ಮಾಂ ಸ್ಪೃಶತು ಮಾಧವ ॥ ೯೧ ॥

ನಾರಾಯಣೋ ಜಗದ್ವ್ಯಾಪೀ ಯದಿ ವೇದಾದಿಸಮ್ಮತಃ ।
ಸತ್ಯೇನ ತೇನ ನಿರ್ವಿಘ್ನಾ ವಿಷ್ಣುಭಕ್ತಿರ್ಮಮಾಸ್ತು ವೈ ॥ ೯೨ ॥

ಯೋನಿಬೀಜಂ ವಿನಾ ಬೀಜಂ ಬೀಜೇ ಯೋ ಜೀವಭಾಷಿತಃ ।
ಸ ವಿಷ್ಣುರ್ಭವಬೀಜಂ ಮೇ ಸಿತವಿದ್ಯಾಸಿನಾ ದ್ಯತು ॥ ೯೩ ॥

---

೮೯. ಯಾವ ಸ್ವಾಮಿಯನ್ನು ಸ್ಮರಿಸಿದರೆ ಮೋಹವಾಗಲೀ, ನರಕವಾಗಲೀ ಬರುವುದಿಲ್ಲವೋ ರೋಗದುಃಖಗಳೂ ಬಾಧಿಸುವುದಿಲ್ಲವೋ ಅಂತಹ ಅನಂತನನ್ನು ನಮಸ್ಕರಿಸುತ್ತೇನೆ

೯೦. ಜನರು ಯಾವ ಸ್ವಾಮಿಯನ್ನು ತಿಳಿದ ಕೂಡಲೇ ಆಸೆಗಳಿಂದ ಹೊರಹೊಮ್ಮಿದ ವಸ್ತುಗಳನ್ನು ಅಪೇಕ್ಷಿಸದೆ ಲೋಕವೇ ಆತ್ಮವೆಂಬದಾಗಿ ತಿಳಿಯುತ್ತಾರೆಯೋ ಅಂತಹ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೯೧. ಶಬ್ದಾರ್ಥವೂ ಭಾವಾರ್ಥವೂ ಎಲ್ಲವೂ ಕೂಡ ಯಾವ ವಿಷ್ಣುವಿನಿಂದ ಹೊರತಾಗಿರುವುದಿಲ್ಲವೋ ಆ ಸತ್ಯದಿಂದಲೇ ಸಂಸಾರವು ನನ್ನನ್ನು ಮುಟ್ಟದಿರಲಿ.

೯೨. ಜಗದ್ವ್ಯಾಪಿಯಾದ ನಾರಾಯಣನೇ ವೇದಗಳಿಗೂ ಸಮ್ಮತನಾಗಿದ್ದರೆ ಆ ಸತ್ಯದಿಂದಲೇ ನನಗೆ ನಿರ್ವಿಘ್ನವಾದ ವಿಷ್ಣುಭಕ್ತಿಯುಂಟಾಗಲಿ.

೯೩. ಯೋನಿಯಿಂದ ಈಚೆಗೆ ಬರದಿರುವ ಬೀಜಕ್ಕೆಲ್ಲವೂ ಮುಖ್ಯಬೀಜವಾದ, ಯಾವಸ್ವಾಮಿಯಿರುವನೋ ಅವನು ಸಂಸಾರಬೀಜವನ್ನು ಆತ್ಮವಿದ್ಯೆಯೆಂಬ ಕತ್ತಿಯಿಂದ ಕತ್ತರಿಸಲಿ.

ತ್ರಿತಸುರ್ನಟವಿದ್ಯಸ್ತು ಸೃಷ್ಟಿಸ್ಥಿತಿಲಯೋಷು ಚ ।
ಗುಣೈರ್ಭವತಿ ಕಾರ್ಯೇಷು ಸ ಪ್ರಸೀದತು ಮೇ ಹರಿಃ　　|| ೯೪ ||

ದಶಭೇದಾವತೀರ್ಣೋ ಯೋ ಧರ್ಮತ್ರಾಣಾಯ ಕೇವಲಂ ।
ಅಭ್ಯರ್ಥಿತಃ ಸುರಗಣೈಃ ಸ ಪ್ರಸೀದತು ಮೇ ಹರಿಃ　　|| ೯೫ ||

ಬ್ರಹ್ಮಾದಿಸ್ತಂಬಪರ್ಯಂತಂ ಪ್ರಾಣಿಹೃನ್ಮಂದಿರೇಽಮಲಃ ।
ಏಕೋ ವಸತಿ ಯೋ ದೇವಃ ಸ ಪ್ರಸೀದತು ಮೇ ಹರಿಃ　　|| ೯೬ ||

ಇಚ್ಛಾಂ ಚಕ್ರೇ ಸದೇವಾಗ್ರೇ ಯ ಏಕಃ ಸ್ಯಾಂ ಬಹುಸ್ತಥಾ ।
ಪ್ರವಿಷ್ಟೋ ದೇವತಾಃ ಸೃಷ್ಟ್ವಾ ಸ ಪ್ರಸೀದತು ಮೇ ಹರಿಃ　　|| ೯೭ ||

---

೯೪. ಬ್ರಹ್ಮ ವಿಷ್ಣು ಶಿವಾತ್ಮಕವಾದ ದೇಹವು ಸೃಷ್ಟಿ ಸ್ಥಿತಿ ಲಯಗಳಲ್ಲಿ ನಿನ್ನಿಂದ ಧರಿಸಲ್ಪಡುತ್ತದೆ. ಅವೆಲ್ಲವೂ ಕೂಡ ಆಯಾಕಾಲದ ಗುಣಗಳಿಂದ ನಿನ್ನಲ್ಲಿ ಉಂಟಾಗುತ್ತದೆ. ಅಂತಹ ಹರಿಯೇ ! ನೀನು ನನಗೆ ಪ್ರತ್ಯಕ್ಷನಾಗು.

೯೫. ಯಾವ ಸ್ವಾಮಿಯು ಧರ್ಮವನ್ನು ಕಾಪಾಡುವುದಕ್ಕೋಸ್ಕರವೇ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ ಹತ್ತು ಅವತಾರಗಳನ್ನು ಮಾಡಿರುವನೋ ಅಂತಹ ಹರಿಯು ನನಗೆ ಪ್ರತ್ಯಕ್ಷನಾಗಲಿ.

೯೬. ಬ್ರಹ್ಮನು ಮೊದಲುಗೊಂಡು ಸಣ್ಣ ಕಡ್ಡಿಯವರೆಗೆ ಇರುವ ಪ್ರಾಣಿಗಳ ಹೃದಯವೆಂಬ ಮನೆಯಲ್ಲಿ ಯಾವ ನಿರ್ಮಲವಾದ ಸ್ವಾಮಿಯು ವಾಸಮಾಡುವನೋ ಅವನು ನನಗೆ ಪ್ರಸನ್ನನಾಗಲಿ.

೯೭. ಯಾವ ಸ್ವಾಮಿಯು ಪ್ರಪಂಚವನ್ನು ಸೃಷ್ಟಿಮಾಡುವಾಗ ಆದಿಯಲ್ಲಿಯೇ ಒಬ್ಬನಾದ ತಾನೇ ಅನೇಕವಾಗಿ ಆಗಬೇಕೆಂದು ಇಚ್ಛೆಯನ್ನು ಮಾಡಿಕೊಂಡು ಅಂತಾಪನೋ ಮತ್ತು ದೇವತೆಗಳನ್ನೂ ಸೃಷ್ಟಿಮಾಡಿ ಅನಂತರ ತನ್ನ ಜಾಗಕ್ಕೆ ಹೊರಟುಹೋದನೋ ಅಂತಹ ಹರಿಯು ನನಗೆ ಪ್ರಸನ್ನನಾಗಲಿ.

ಹೃತ್ಖಗಃ ಖಸಮಃ ಖಾದಿಃ ಖಾತೀತಃ ಖಕ್ರಿಯಃ ಖಗಃ ।
ಖಂ ಬ್ರಹ್ಮ ಖಾದಿ ಭುಕ್ತ್ವಾಂತೇ ಖಮೂರ್ತಿಸ್ತ್ವಂ ಮಖಾಶನಃ ॥ ೯೮ ॥

ಯದ್ಭಾಸಾ ಯನ್ಮುದಾ ಯಸ್ಯ ಸತ್ತ್ವಾಯಾ ಸ ತತಂ ಜಗತ್ ।
ಜಾಡ್ಯಂ ದುಃಖಮಸತ್ವಂ ಚ ಭವಾನೇವ ತನ್ಮಯಃ ॥ ೯೯ ॥

ತ್ವತ್ಸ್ಪೃಷ್ಟಂ ಮೋದತೇ ಸರ್ವಂ ತ್ವತ್ತ್ಯಕ್ತಮಶುಚಿರ್ಭವೇತ್ ।
ತ್ವತ್ಸಂಗತೋಽಪ್ಯಸಂಗಸ್ತ್ವಂ ವಿಕಾರಸ್ತೇನ ತೇ ನ ಹಿ ॥ ೧೦೦ ॥

---

೯೮. ನೀನು ಹೃದಯವೆಂಬ ಆಕಾಶದಲ್ಲಿದ್ದೀಯೆ. ಆಕಾಶಕ್ಕೆ ಸಮನಾಗಿದ್ದೀಯೆ. ಆಕಾಶಕ್ಕೂ ಆದಿಯು. ಆಕಾಶಕ್ಕೂ ಮೀರಿದವನು. ಇಂದ್ರಿಯಗಳಿಗೆ ಸಿಕ್ಕದವನು. ಇಂದ್ರಿಯಗಳ ಕ್ರಿಯೆಯುಳ್ಳವನು. ಅಂತರಿಕ್ಷ ಸಂಚಾರಿಯು. ಇಂದ್ರಿಯಸ್ವರೂಪನು. ಬ್ರಹ್ಮನು. ಇಂದ್ರಿಯ ಸುಖಗಳನ್ನು ಅನುಭವಿಸುತ್ತೀಯೆ. ಯಾಗದಲ್ಲಿ ಹವಿಸ್ಸನ್ನು ತಿನ್ನುತ್ತೀಯೆ.

೯೯. ಈ ಪ್ರಪಂಚವು ಯಾವನ ತೇಜಸ್ಸಿನಿಂದ ಪ್ರಕಾಶಿಸುತ್ತದೆಯೋ, ಯಾವನ ಸಂತೋಷದಿಂದ ಆವರಿಸಿಕೊಂಡಿದೆಯೋ, ಯಾವನ ಜಡತ್ವದಿಂದಲೇ ಜಡತ್ವವನ್ನು ಹೊಂದಿದೆಯೋ, ಯಾವನ ದುಃಖದಿಂದಲೇ ದುಃಖವನ್ನು ಹೊಂದಿರುವುದೋ ಒಟ್ಟಿನಲ್ಲಿ ಯಾವನ ರೂಪವಾಗಿಯೇ ಇದೆಯೋ ಅಂತಹ ವಿಷ್ಣುವು ನನಗೆ ಪ್ರಸನ್ನನಾಗಲಿ.

೧೦೦. ನಿನ್ನ ವಿಷಯವನ್ನು ಕೇಳಿದರೇನೇ ಎಲ್ಲವೂ ಸಂತೋಷಪಡುತ್ತವೆ. ನಿನ್ನನ್ನು ಬಿಟ್ಟ ಪದಾರ್ಥವೆಲ್ಲವೂ ಲೋಕದಲ್ಲಿ ಅಶುಚಿಯಾಗುತ್ತವೆ. ನಿನ್ನ ಸಹವಾಸದಲ್ಲಿದ್ದರೂ ಅವು ಸಂಗವನ್ನು ಹೊಂದಿದಂತಿರುವುದಿಲ್ಲ. ಆಯಾ ಪದಾರ್ಥಗಳಿಂದಲೇ ನೀನು ವಿಕಾರವನ್ನು ಹೊಂದಿದಂತೆ ಕಾಣುತ್ತೀಯೆ. ಅಂತಹ ನಿನಗೆ ನಮಸ್ಕಾರವು.

**ಕೇಚಿದ್ಬುದ್ಧಿಂ ಪರೇ ಪ್ರಾಣಂ ಮನೋಽಹಂಕಾರಮಾತರಂ ।**
**ಕೇಚಿಚ್ಚ ಕಾಯಂ ಚೈತನ್ಯಂ ಕಾಯಮಾತ್ರಂ ಪರೇಽಥವಾಃ ॥ ೧೦೧ ॥**

**ಕೇಚಿತ್ತು ಪುರುಷಂ ಶಬ್ದಂ ಬ್ರಹ್ಮ ಕೇಚಿತ್ಪರೇ ಶಿವಂ ।**
**ಭಕ್ತಿಂ ಚ ಚಿನ್ಮಯೀಂ ಕೇಚಿತ್ ಗೋವಿಂದಂ ತ್ವಾಂ ಕುಮಾರ್ಗಗಾಃ ॥೧೦೨॥**

**ತೀರ್ಥಾತೀರ್ಥಮಧಿಷ್ಠಾಯ ಕೇಶಾಕೇಶಿ ಮಿಥೋ ಜನಾಃ ।**
**ಯದ್ವದಂತಿ ಪುನಸ್ತ್ವಾಂ ಹಿ ಚಿತ್ಸದಾನಂದಲಕ್ಷಣಂ ॥ ೧೦೩ ॥**

**ಯೋಗಜ್ಞಂ ಭೂತಚೈತನ್ಯಂ ಚಾರ್ವಾಕಾಸ್ತ್ವಾಮುಪಾಸತೇ ।**
**ಸೌಗತಾ ಬ್ರುವತೇ ತರ್ಕೈಸ್ತ್ವಾಂ ಬುದ್ಧಿಂ ಕ್ಷಣಭಂಗುರಾಂ ॥ ೧೦೪ ॥**

---

೧೦೧. ಕೆಲವರು ನಿನ್ನನ್ನು ಪ್ರಾಣವೆಂಬುದಾಗಿಯೂ ಕೆಲವರು ಬುದ್ಧಿಯೆಂಬುದಾಗಿಯೂ ಕೆಲವರು ಮನಸ್ಸೆಂದೂ ಕೆಲವರು ಅಹಂಕಾರವೆಂದೂ ಕೆಲವರು ದೇಹವೆಂದೂ ಕೆಲವರು ಚೈತನ್ಯವೆಂದೂ ಮತ್ತೆ ಕೆಲವರು ದೇಹದಿಂದ ಕೂಡಿದ ಚೈತನ್ಯವೆಂದೂ ಹೇಳುತ್ತಾರೆ.

೧೦೨. ಕೆಲವರು ನಿನ್ನನ್ನು ಪುರುಷನೆಂದೂ ಕೆಲವರು ಶಬ್ದಸ್ವರೂಪನೆಂದೂ ಕೆಲವರು ಬ್ರಹ್ಮನೆಂದೂ ಕೆಲವರು ಭಕ್ತಿಯೆಂದೂ ಕೆಲವರು ಚಿನ್ಮಯನೆಂದೂ ಅಯೋಗ್ಯರಾದ ಮತ್ತೆ ಕೆಲವರು ದನಕಾಯುವವನೆಂದೂ ಹೇಳುತ್ತಾರೆ.

೧೦೩. ಕೆಲವು ಜನರು ಯೋಗ್ಯರಿಂದ ಸರಿಯಾದ ಜ್ಞಾನವನ್ನು ಹೊಂದುತ್ತಾರೆ. ಮತ್ತೆ ಕೆಲವರು ಅಲ್ಪಜ್ಞರಿಂದ ಅಲ್ಪಜ್ಞಾನವನ್ನು ಹೊಂದುತ್ತಾರೆ. ಆ ಎರಡು ಗುಂಪಿನವರೂ ಚಿತ್‌ಸ್ವರೂಪನಾದ ನಿನ್ನ ವಿಷಯವನ್ನೇ ಚರ್ಚಿಸುತ್ತಾ ಯಾವಾಗಲೂ ಜಗಳವಾಡುತ್ತಿರುವರು.

೧೦೪. ಯೋಗವನ್ನು ಬಲ್ಲ ನೀನು ಪ್ರಾಣಿಗಳಿಗೆ ಚೈತನ್ಯ ಸ್ವರೂಪನೆಂದು ಚಾರ್ವಾಕರು ನಿನ್ನನ್ನು ಸೇವಿಸುತ್ತಾರೆ. ಸೌಗತರೆಂಬ ಮತದವರು ತರ್ಕದಿಂದ ಊಹಿಸುತ್ತಾ ನಿನ್ನನ್ನು ಕ್ಷಣಭಂಗುರವಾದ ಬುದ್ಧಿಯೆಂದೆನ್ನುತ್ತಾರೆ.

**ಶರೀರಪರಿಮಾಣಂ ತ್ವಾಂ ಮನ್ಯಂತೇ ಜಿನದೇವತಾಃ ।**
**ಧ್ಯಾಯಂತಿ ಪುರುಷಂ ಸಾಂಖ್ಯಾಸ್ತ್ವಾಮೇವ ಪ್ರಕೃತೇಃ ಪರಂ ॥ ೧೦೫ ॥**

**ಜನ್ಮಾದಿರಹಿತಂ ಪೂರ್ವಂ ಚಿತ್ಸದಾನಂದಲಕ್ಷಣಂ ।**
**ತ್ವಾಮೌಪನಿಷದಾ ಬ್ರಹ್ಮ ಚಿಂತಯಂತಿ ಪರಾತ್ಪರಂ ॥ ೧೦೬ ॥**

**ಖಾದಿಭೂತಾನಿ ದೇಹಶ್ಚ ಮನೋಬುದ್ಧೀಂದ್ರಿಯಾಣಿ ಚ ।**
**ವಿದ್ಯಾವಿದ್ಯೇ ತ್ವಮೇವಾತ್ರ ನಾನ್ಯತ್ತ್ವತ್ತೋಽಸ್ತಿ ಕಿಂಚನ ॥ ೧೦೭ ॥**

**ತ್ವಮಗ್ನಿಸ್ತ್ವಂ ಹವಿಸ್ತ್ವಂ ಸ್ರುಕ್ ದೀಕ್ಷಿತಾನಾಂ ಕ್ರಿಯಾಕ್ಷಯೇ ।**
**ತ್ವಂ ಸೇತುಸ್ಸರ್ವಭೂತಾನಾಂ ತ್ವಮೇವ ಶರಣಂ ಮಮ ॥ ೧೦೮ ॥**

**ಯುವತೀನಾಂ ಯಥಾ ಯೂನಿ ಯೂನಾಂ ಚ ಯುವತೌ ಯಥಾ ।**
**ಮನೋಭಿರಮತೇ ತದ್ವನ್ಮನೋ ಮೇ ರಮತಾಂ ತ್ವಯಿ ॥ ೧೦೯ ॥**

---

೧೦೫. ಜೈನರು ನಿನ್ನನ್ನು ಶರೀರಿಯೆನ್ನಾಗಿ ತಿಳಿಯುತ್ತಾರೆ. ಮತ್ತು ಆಯಾ ದೇಹದಷ್ಟೇ ಪ್ರಮಾಣವುಳ್ಳವನನ್ನಾಗಿಯೂ ತಿಳಿಯುತ್ತಾರೆ. ಸಾಂಖ್ಯರು ಆ ನಿನ್ನನ್ನು ಪ್ರಕೃತಿಗಿಂತಲೂ ಪರನಾದ ಪುರುಷನನ್ನಾಗಿ ಧ್ಯಾನಿಸುತ್ತಾರೆ.

೧೦೬. ನೀನು ಜನ್ಮವಿಲ್ಲದವನು. ನಿನಗೆ ಆದಿಯಾದವರೇ ಇಲ್ಲ. ನೀನೇ ಚಿದ್ರೂಪನು. ಸದ್ರೂಪನು. ಆನಂದ ರೂಪನು. ನೀನೇ ಉಪನಿಷತ್ತಿನಲ್ಲಿ ಹೇಳಲ್ಪಟ್ಟಿರುವ ಬ್ರಹ್ಮನೆಂದೂ ಪರಸ್ವರೂಪನೆಂದೂ ನಿನ್ನನ್ನು ಉಪನಿಷತ್ತಿನಂತೆ ನಡೆಯುವವರು ಧ್ಯಾನಿಸುತ್ತಾರೆ.

೧೦೭. ಆಕಾಶ ಮುಂತಾದ ಭೂತಗಳೂ ನೀನೇ ಆಗಿದ್ದೀಯೇ. ದೇಹವೂ ಮನಸ್ಸೂ ಬುದ್ಧಿಯೂ ಇಂದ್ರಿಯಗಳೂ ನೀನೇ ಆಗಿದ್ದೀಯೆ. ವಿದ್ಯೆಯೂ ಅವಿದ್ಯೆಯೂ ನೀನೇ ಆಗಿದ್ದೀಯೆ. ನಿನ್ನಿಂದ ಹೊರತಾದುದು ಇಲ್ಲವೇ ಇಲ್ಲ.

೧೦೮. ನೀನೇ ಅಗ್ನಿಯು, ನೀನೇ ಹವಿಸ್ಸು, ನೀನೇ ಸ್ರುಕ್ಕು, ನೀನೇ ದೀಕ್ಷಿತರ ಅಕ್ಷಯವಾದ ಕ್ರಿಯೆಯು. ನೀನೆ ಎಲ್ಲಾ ಪ್ರಾಣಿಗಳಿಗೂ ದುಃಖವನ್ನು ದಾಟಿಸುವ ಸೇತುವೆಯು. ನೀನೇ ನನಗೆ ರಕ್ಷಕನು.

೧೦೯ ಯುವತಿಯರ ಮನಸ್ಸು ಯುವಕರಲ್ಲಿಯೂ ಯುವಕರ ಮನಸ್ಸು ಯುವತಿಯರಲ್ಲಿಯೂ ರಮಿಸುವಂತೆ ನನ್ನ ಮನಸ್ಸು ನಿನ್ನಲ್ಲಿ ಯಾವಾಗಲೂ ರಮಿಸಲಿ.

ಅಪಿ ಪಾಪಂ ದುರಾಚಾರಂ ನರಂ ತ್ವಾಂ ಪ್ರಣತಂ ಹರೇ ।
ನೇಕ್ಷಂತೇ ಕಿಂಕರಾ ಯಾಮ್ಯಾ ಉಲೂಕಾಸ್ತಪನಂ ಯಥಾ ॥ ೧೧೦ ॥

ತಾಪತ್ರಯಮುಖೌಘಶ್ಚ ತಾವತ್ಪೀಡಯತೇ ಜನಂ ।
ಯಾವನ್ನಾಶ್ರಯತೇ ಮರ್ತ್ಯೋ ಭಕ್ತ್ಯಾ ತ್ವತ್ಪಾದಪಂಕಜಂ ॥ ೧೧೧ ॥

ಯಂ ನ ಸ್ಪೃಶಂತಿ ಗುಣಜಾತಿಶರೀರಧರ್ಮಾ
ಯಂ ನ ಸ್ಪೃಶಂತಿ ಗತಯಃ ಖಮಿವೇಂದ್ರಿಯಾಣಾಂ ।
ಯಂ ನ ಸ್ಪೃಶಂತಿ ಮುನಯೋ ಗತಸಂಗಮೋಹಾಃ
ತಸ್ಮೈ ನಮೋ ಭಗವತೇ ಹರಯೇ ಪ್ರತೀಚೇ ॥ ೧೧೨ ॥

ಯದ್ಧ್ಯಾನಸಂಚಯನತೂರ್ಣವಶೀಕೃತಾಂಗಾಂ
ಐಶ್ವರ್ಯಚಾರುಗುಣಿತಾಂ ಸುಖಮೋಕ್ಷಲಕ್ಷ್ಮೀಂ ।
ಆಲಿಂಗ್ಯ ಶೇರತ ಇಹಾತ್ಮಸುಖೈಕಲಾಭಾಃ
ತಸ್ಮೈ ನಮೋಽಸ್ತು ಹರಯೇ ಮುನಿಸೇವಿತಾಯ ॥ ೧೧೩ ॥

---

೧೧೦. ಪಾಪಿಗಳಾದರೂ, ದುರಾಚಾರಿಗಳಾದರೂ ಯಾರು ನಿನ್ನನ್ನು ನಮಸ್ಕರಿಸುತ್ತಾರೆಯೋ ಅವರನ್ನು ಯಮನ ಕಿಂಕರರು ಗೂಬೆಗಳು ಸೂರ್ಯನನ್ನು ನೋಡಲಾಗದಂತೆ ನೋಡಲಾರರು.

೧೧೧. ಮನುಷ್ಯನು ಎಲ್ಲಿಯವರೆಗೆ ಭಕ್ತಿಯಿಂದ ನಿನ್ನ ಪಾದಪದ್ಮಗಳನ್ನು ಆಶ್ರಯಿಸುವುದಿಲ್ಲವೋ ಅಲ್ಲಿಯುವರೆಗೂ ಅವನನ್ನು ತಾಪತ್ರಯಗಳು ಪೀಡಿಸುತ್ತವೆ.

೧೧೨. ಗುಣಧರ್ಮ, ಜಾತಿಧರ್ಮ, ಶರೀರಧರ್ಮಗಳು ಯಾವನನ್ನು ಮುಟ್ಟುವುದಿಲ್ಲವೋ, ಇಂದ್ರಿಯಗಳ ಗತಿಯು ಆಕಾಶವನ್ನು ಮುಟ್ಟಲಾಗದಂತೆ ಯಾವನನ್ನು ಮುಟ್ಟುವುದಿಲ್ಲವೋ, ಮೋಹವನ್ನೂ ಸಂಗವನ್ನೂ ಕಳೆದುಕೊಂಡಿರುವ ಮುನಿಗಳೂ ಯಾವನನ್ನು ಮುಟ್ಟಲಾರರೋ, ಅಂತಹ ಪೂರ್ವಿಕನಾದ ಭಗವಂತನಿಗೆ ನಮಸ್ಕಾರವು.

೧೧೩. ಆತ್ಮನನ್ನು ಧ್ಯಾನಿಸುತ್ತಾ ಆ ಸುಖದಲ್ಲಿಯೇ ಇದ್ದು ಯೋಗಿಗಳು ಯಾವ ಸ್ವಾಮಿಯನ್ನು ಬೇಗನೆ ವಶಪಡಿಸಿಕೊಂಡು ನಿರಂತರವೂ ಧ್ಯಾನಿಸುತ್ತಾ ಐಶ್ವರ್ಯದಿಂದ ಕೂಡಿದ ಮೋಕ್ಷವೆಂಬ ಲಕ್ಷ್ಮಿಯನ್ನು ಬೇಗನೆ ವಶಪಡಿಸಿಕೊಂಡು

ಜನ್ಮಾದಿಭಾವವಿಕೃತೇರ್ವಿರಹಸ್ವಭಾವೋ
ಯಸ್ಮಿನ್ನಯಂ ಪರಿಧುನೋತಿ ಷಡೂರ್ಮಿವರ್ಗಂ ।
ಯಂ ತಾಡಯಂತಿ ನ ಸದಾ ಮದನಾದಿದೋಷಾಃ
ತಂ ವಾಸುದೇವಮಮಲಂ ಪ್ರಣತೋಸ್ಮಿ ಹೃದ್ಯಂ ॥ ೧೧೪ ॥

ಸ್ಥೂಲಂ ವಿಲಾಪ್ಯ ಕರಣಂ ಕರಣೇ ನಿದಾನಂ
ತತ್ಕಾರಣಂ ಕರಣಕಾರಣವರ್ಜಿತೇ ಚ ।
ಇತ್ಥಂ ವಿಲಾಪ್ಯ ಯಮಿನಃ ಪ್ರವಿಶಂತಿ ಯತ್ರ
ತಸ್ಮೈ ನಮೋಸ್ತು ಹರಯೇ ಮುನಿಸೇವಿತಾಯ ॥ ೧೧೫ ॥

ಯದ್ಧ್ಯಾನಸಂಗತಮಲಂ ವಿಜಹಾತ್ಯವಿದ್ಯಾಂ
ಯದ್ಧ್ಯಾನವಹ್ನಿಪತಿತಂ ಜಗದೇತಿ ದಾಹಂ ।
ಯದ್ಧ್ಯಾನಮುಲ್ಲಸದಸಿದ್ಧ್ಯತಿ ಸಂಶಯಾಬ್ಧಿಂ
ತಂ ತ್ವಾಂ ಹರಿಂ ವಿಶದಬೋಧಘನಂ ನಮಾಮಿ ॥ ೧೧೬ ॥

---

ಆಕೆಯನ್ನು ಆಲಂಗಿಸಿಕೊಂಡು ಮಲಗುತ್ತಾರೆಯೋ ಅಂತಹ ಮುನಿಗಳಿಂದ ಸೇವಿತನಾದ ಹರಿಯನ್ನು ನಮಸ್ಕರಿಸುತ್ತೇನೆ.

೧೧೪ ಅರಿಷಡ್ವರ್ಗಗಳನ್ನು ನಾಶಮಾಡುವ, ಮನ್ಮಥನೆಂಬುವನ ದೋಷಗಳನ್ನು ಹೊಂದದಿರುವ, ಹುಟ್ಟುಸಾವು ಮುಂತಾದ ವಿಕಾರಗಳನ್ನು ಹೊಂದದಿರುವ, ಪವಿತ್ರನಾದ, ಮನೋಹರನಾದ, ವಾಸುದೇವನನ್ನು ನಮಸ್ಕರಿಸುತ್ತೇನೆ.

೧೧೫. ಯಾವ ಪದಾರ್ಥವಿಲ್ಲದಿದ್ದರೆ ಕೆಲಸವು ನಡೆಯುವುದೇ ಇಲ್ಲವೋ ಅದು ಕರಣವು. ಯಾವ ಪದಾರ್ಥವು ಸದ್ಯದಲ್ಲಿ ಆ ಕೆಲಸವನ್ನು ನಿರ್ವಹಿಸಿದೆಯೋ ಅದು ಕಾರಣವು. ಯೋಗಿಗಳು ಕರಣಕಾರಣಗಳಿಲ್ಲದ ಯಾವ ಸ್ವಾಮಿಯ ರೂಪವಾದ ಕರಣದಲ್ಲಿ ತಮ್ಮ ಇಂದ್ರಿಯಗಳನ್ನು ಕಾಯಿಸಿ (ಧ್ಯಾನಿಸಿ) ಕೊನೆಗೆ ಮುನಿಸೇವಿತವಾದ ಯಾವ ಸ್ವಾಮಿಯಲ್ಲಿಯೇ ಸೇರಿಹೋಗುತ್ತಾರೆಯೋ ಆ ಸ್ವಾಮಿಗೆ ನಮಸ್ಕಾರವು.

೧೧೬. ಯಾವ ಸ್ವಾಮಿಯ ಧ್ಯಾನವನ್ನು ಮಾಡುವುದರಿಂದ ಜನರು ಅವಿದ್ಯೆ (ಮಾಯೆ) ಯನ್ನು ಕಳೆದುಕೊಳ್ಳುತ್ತಾರೆಯೋ ಯಾವ ಸ್ವಾಮಿಯ ಧ್ಯಾನವೆಂಬ ಬೆಂಕಿಯಲ್ಲಿ ಬೀಳುವುದರಿಂದ ಪ್ರಪಂಚವು ಬಹು ದಾಹವನ್ನು

**ಚರಾಚರಾಣಿ ಸರ್ವಾಣಿ ಭೂತಾನ್ಯಸ್ಯ ಹರೇಃ ಪುರಾ ।**
**ಯಥಾತ್ರ ತೇನ ಸತ್ಯೇನ ಪುರಸ್ತಿಷ್ಠತು ಮೇ ಹರಿಃ    ॥ ೧೧೭ ॥**

**ಯಥಾ ನಾರಾಯಣಃ ಸರ್ವಂ ಜಗತ್ ಸ್ಥಾವರಜಂಗಮಂ ।**
**ತೇನ ಸತ್ಯೇನ ಮೇ ದೇವಃ ಸ್ವಂ ದರ್ಶಯತು ಕೇಶವಃ    ॥ ೧೧೮ ॥**

**ಭಕ್ತಿರ್ಯಥಾ ಹರೌ ಮೇಽಸ್ತಿ ತದ್ವತ್ ಶ್ರೇಷ್ಠಾ ಗುರೌ ಯದಿ ।**
**ಮಮಾಸ್ತಿ ತೇನ ಸತ್ಯೇನ ಸ್ವಂ ದರ್ಶಯತು ಕೇಶವಃ    ॥ ೧೧೯ ॥**

**ತಸ್ಯೈವಂ ಶಪಥೈಸ್ಸತ್ಯೈಃ ಭಕ್ತಿಂ ತಸ್ಯಾನುಚಿಂತಯನ್ ।**
**ದರ್ಶಯಾಮಾಸ ಚಾತ್ಮಾನಂ ಸಂಪ್ರೀತಃ ಪುರುಷೋತ್ತಮಃ    ॥ ೧೨೦ ॥**

---

ಕಳೆದುಕೊಳ್ಳುತ್ತದೆಯೋ ಯಾವ ಸ್ವಾಮಿಯ ಧ್ಯಾನವೆಂಬ ಪ್ರಕಾಶಮಾನವಾದ ಕತ್ತಿಯು ಸಂಶಯವನ್ನು ನಾಶಮಾಡುತ್ತದೆಯೋ ಅಂತಹ ನಿರ್ಮಲಜ್ಞಾನಸ್ವರೂಪನಾದ ಹರಿಯನ್ನು ನನುಸ್ಮರಿಸುತ್ತೇನೆ.

೧೧೭. ಚರಚರಾತ್ಮಕವಾದ ಪ್ರಾಣಿಗಳೆಲ್ಲ ಪೂರ್ವದಲ್ಲಿ ಯಾವ ಹರಿಯಿಂದ ಹುಟ್ಟಿದುವೋ ಆ ಸತ್ಯದಿಂದಲೇ ಹರಿಯು ನನ್ನೆದುರಿಗೆ ಕಾಣಲಿ.

೧೧೮. ಯಾವ ನಾರಾಯಣನೇ ಜಗತ್ತಿನಲ್ಲಿರುವ ಸ್ಥಾವರ ಜಂಗಮರ ರೂಪವಾಗಿ ಬೆಳಗುತ್ತಿರುವನೋ ಆ ಸತ್ಯದಿಂದಲೇ ಆ ಸ್ವಾಮಿಯು ನನಗೆ ಪ್ರತ್ಯಕ್ಷನಾಗಲಿ.

೧೧೯. ನನಗೆ ಹರಿಯಲ್ಲಿರುವ ಭಕ್ತಿಯಂತೆಯೇ ಶ್ರೇಷ್ಠವಾದ ಭಕ್ತಿಯು ಗುರುವಿನಲ್ಲಿಯೂ ಇರುತ್ತಿದ್ದರೆ ಆ ಸತ್ಯದಿಂದಲೇ ಆ ಸ್ವಾಮಿಯು ನನಗೆ ಪ್ರತ್ಯಕ್ಷನಾಗಲಿ.

೧೨೦ ಆತನು ಈ ರೀತಿಯಾಗಿ ತನ್ನ ಸತ್ಯದ ಮಾತುಗಳಿಂದ ಶಪಥವನ್ನು ಮಾಡುತ್ತ ಆ ಹರಿಯಲ್ಲಿ ಭಕ್ತಿಯನ್ನು ಇಡುತ್ತಿರುವುದನ್ನು ನೋಡಿ ಆ ಪುರುಷೋತ್ತಮನಾದ ಆ ಸ್ವಾಮಿಯು ತನ್ನನ್ನು ತೋರಿಸಿಕೊಂಡನು.

ತದಾ ದತ್ವಾ ವರಂ ತಸ್ಮೈ ಪೂರಯಿತ್ವಾ ಮನೋರಥಂ ।
ಜಗಾಮ ಕಮಲಾಕಾಂತಃ ಸ್ತುತ್ವಾ ವಿಪ್ರೇಣ ತೋಷಿತಃ ॥ ೧೨೧ ॥

ಕೃತಕೃತ್ಯೋ ದ್ವಿಜಸ್ಸೋಽಪಿ ವಾಸುದೇವಪರಾಯಣಃ ।
ಶಿಷ್ಯೈಸ್ಸಾರ್ಧಂ ಜಪನ್ ಸ್ತೋತ್ರಂ ತಸ್ಮಿನ್ನಾಸ್ತೇ ತಪೋವನೇ ॥ ೧೨೨ ॥

ಕೀರ್ತಯೇದ್ಯ ಇದಂ ಸ್ತೋತ್ರಂ ಶೃಣುಯಾದಪಿ ಮಾನವಃ ।
ಅಶ್ವಮೇಧಸ್ಯ ಯಜ್ಞಸ್ಯ ಪ್ರಾಪ್ನೋತ್ಯವಿಕಲಂ ಫಲಂ ॥ ೧೨೩ ॥

ಆತ್ಮವಿದ್ಯಾಪ್ರಬೋಧಂ ಚ ಲಭತೇ ಬ್ರಾಹ್ಮಣಃ ಸದಾ ।
ನ ಪಾಪೇ ಜಾಯತೇ ಬುದ್ಧಿಃ ನೈವ ಪಶ್ಯತ್ಯಮಂಗಳಂ ॥ ೧೨೪ ॥

ಬುದ್ಧಿಸ್ವಾಸ್ಥ್ಯಂ ಮನಸ್ಸ್ವಾಸ್ಥ್ಯಂ ಸ್ವಾಸ್ಥ್ಯಮೈಂದ್ರಿಯಕಂ ತಥಾ ।
ನೃಣಾಂ ಭವತಿ ಸರ್ವೇಷಾಂ ಸಮ್ಯಕ್ ಸ್ತೋತ್ರಸ್ಯ ಕೀರ್ತನಾತ್ ॥ ೧೨೫ ॥

---

೧೨೧. ಆಗ ಆ ಸ್ವಾಮಿಯು ಅವನಿಗೆ ವರವನ್ನು ಕೊಟ್ಟು ಅವನ ಇಷ್ಟಾರ್ಥವನ್ನು ನೆರವೇರಿಸಿ ಅವನ ಸ್ತುತಿಯಿಂದ ಸಂತೋಷಪಟ್ಟು ಹೊರಟು ಹೋದನು.

೧೨೨. ಆಗ ಆ ವಾಸುದೇವನಲ್ಲಿಯೇ ಮನಸ್ಸುಳ್ಳ ಆ ಬ್ರಾಹ್ಮಣನು ಕೃತಕೃತ್ಯನಾಗಿ ಈ ಸ್ತೋತ್ರವನ್ನು ಶಿಷ್ಯರೊಡನೆ ಜಪಿಸುತ್ತಾ ಆ ಆಶ್ರಮದಲ್ಲಿಯೇ ಇದ್ದುಕೊಂಡಿದ್ದಾನೆ.

೧೨೩. ಈ ಸ್ತೋತ್ರವನ್ನು ಕೇಳುವ ಮನುಷ್ಯರು ಅಶ್ವಮೇಧಯಾಗದ ಪೂರ್ತಿಯಾದ ಫಲವನ್ನು ಹೊಂದುತ್ತಾರೆ.

೧೨೪. ಬ್ರಾಹ್ಮಣನು ಇದನ್ನು ಓದಿದರೆ ಆತ್ಮಜ್ಞಾನವನ್ನು ಹೊಂದುತ್ತಾನೆ. ಪಾಪದಲ್ಲಿ ಬುದ್ಧಿಯು ಉಂಟಾಗುವುದಿಲ್ಲ. ಅವನಿಗೆ ಅಮಂಗಲಗಳಾವುವೂ ಉಂಟಾಗುವುದಿಲ್ಲ.

೧೨೫. ಈ ಸ್ತೋತ್ರವನ್ನು ಓದುವುದರಿಂದ ಎಲ್ಲರಿಗೂ ಬುದ್ಧಿಯು ಸ್ಥಿರವಾಗಿರುತ್ತದೆ. ಮನಸ್ಸು ಸ್ವಸ್ಥವಾಗಿರುತ್ತದೆ. ಇಂದ್ರಿಯಗಳು ಸ್ವಸ್ಥವಾಗಿರುತ್ತವೆ. ಇದು ಖಂಡಿತ.

ವಿಚಾರ್ಯಾರ್ಥಂ ಪಠೇದ್ಯಸ್ತು ಶೃಣುಯಾದಪಿ ಮಾನವಃ ।
ಸ ವಿಧೂಯೇಹ ಪಾಪಾನಿ ಲಭತೇ ವೈಷ್ಣವಂ ಪದಂ ॥ ೧೨೬ ॥

ವಾಂಛಿತಂ ಲಭತೇ ಕಾಮಾನ್ ಪುತ್ರಾನ್ ಪ್ರಾಪ್ನೋತ್ಯನುತ್ತಮಾನ್ ।
ದೀರ್ಘಮಾಯುರ್ಬಲಂ ವೀರ್ಯಂ ಲಭತೇ ಚ ಸದಾ ಪರಃ ॥ ೧೨೭ ॥

ತಿಲಪಾತ್ರಸಹಸ್ರೇಣ ಗೋಸಹಸ್ರೇಣ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಯ ಇಮಾಂ ಕೀರ್ತಯೇತ್ ಸ್ತುತಿಂ ॥ ೧೨೮ ॥

ಧರ್ಮಾರ್ಥಕಾಮಮೋಕ್ಷಾಣಾಂ ಯಂ ಯಂ ಕಾಮಯತೇ ಸದಾ ।
ಅಚಿರಾತ್ತಮವಾಪ್ನೋತಿ ಸ್ತೋತ್ರೇಣಾನೇನ ಮಾನವಃ ॥ ೧೨೯ ॥

ಆಚಾರೇ ವಿನಯೇ ಧರ್ಮೇ ಜ್ಞಾನೇ ತಪಸಿ ಸನ್ನಯೇ ।
ನೃಣಾಂ ಭವತಿ ನಿತ್ಯಂ ಧೀರಿಮಾಂ ಸಂಶೃಣ್ವತಾಂ ಸ್ತುತಿಂ ॥ ೧೩೦ ॥

---

೧೨೬. ಈ ಸ್ತೋತ್ರದ ಅರ್ಥವನ್ನು ತಿಳಿದುಕೊಂಡು ಓದುವವನೂ ಇದರ ಅರ್ಥವನ್ನು ತಿಳಿದುಕೊಳ್ಳುವವನೂ ಪಾಪವನ್ನು ಕಳೆದುಕೊಂಡು ವಿಷ್ಣುಪದವನ್ನು ಹೊಂದುತ್ತಾರೆ.

೧೨೭. ಈ ಸ್ತೋತ್ರವನ್ನು ಓದುವವನು ಇಷ್ಟಾರ್ಥಗಳನ್ನು ಹೊಂದುತ್ತಾನೆ ಉತ್ತಮರಾದ ಪುತ್ರರನ್ನು ಹೊಂದುತ್ತಾನೆ. ದೀರ್ಘಾಯುಸ್ಸನ್ನೂ ಬಲವನ್ನೂ ವೀರ್ಯವನ್ನೂ ಹೊಂದುತ್ತಾನೆ.

೧೨೮. ಎಳ್ಳು ಹಾಕಿ ಸಾವಿರ ಆ ಎಳ್ಳು ಪಾತ್ರೆಗಳನ್ನು ದಾನಮಾಡಿದ ಫಲವನ್ನೂ ಸಾವಿರ ಗೋವುಗಳನ್ನು ದಾನಮಾಡಿದ ಫಲವನ್ನೂ ಈ ಸ್ತೋತ್ರವನ್ನು ಹೇಳಿದವನು ಹೊಂದುತ್ತಾನೆ.

೧೨೯. ಈ ಸ್ತೋತ್ರವನ್ನು ಹೇಳುತ್ತಿದ್ದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಯಾವಾವುದನ್ನು ಯಾವಾಗ ಅಪೇಕ್ಷಿಸುತ್ತಾನೆಯೋ ಅವನ್ನು ಆ ಒಡನೆಯೇ ಹೊಂದುತ್ತಾನೆ.

೧೩೦. ಈ ಸ್ತೋತ್ರವನ್ನು ಕೇಳುವವರ ಬುದ್ಧಿಯು ಆಚಾರ, ನಿಯಮ, ಧರ್ಮ, ಜ್ಞಾನ, ತಪಸ್ಸು, ನೀತಿ ಇವುಗಳಲ್ಲಿ ಚೆನ್ನಾಗಿ ನಿಲ್ಲುತ್ತದೆ.

ಮಹಾಪಾತಕಯುಕ್ತೋಽಪಿ ತಥಾ ಯುಕ್ತೋಽಪಪಾತಕೈಃ ।
ಸದ್ಯೋ ಭವತಿ ಶುದ್ಧಾತ್ಮಾ ಸ್ತೋತ್ರಸ್ಯ ಪಠನಾತ್ ಸಕೃತ್ ॥ ೧೩೧ ॥

ಪ್ರಜ್ಞಾಲಕ್ಷ್ಮೀಯಶಃಕೀರ್ತಿಜ್ಞಾನಧರ್ಮವಿವರ್ಧನಂ ।
ದುಷ್ಟಗ್ರಹೋಪಶಮನಂ ಸರ್ವಾಶುಭವಿನಾಶನಂ ॥ ೧೩೨ ॥

ಸರ್ವವ್ಯಾಧಿಹರಂ ಪಥ್ಯಂ ಸರ್ವಾರಿಷ್ಟನಿಷೂದನಂ ।
ದುರ್ಗತೇಸ್ತರಣಂ ಸ್ತೋತ್ರಂ ಪಠಿತವ್ಯಂ ಜಿತಾತ್ಮಭಿಃ ॥ ೧೩೩ ॥

ನಕ್ಷತ್ರಗ್ರಹಪೀಡಾಸು ರಾಜದೈವಭಯೇಷು ಚ ।
ಅಗ್ನಿಚೌರನಿಪಾತೇಷು ಸದ್ಯಸ್ಸಂಕೀರ್ತಯೇದಿದಂ ॥ ೧೩೪ ॥

ಸಿಂಹವ್ಯಾಘ್ರಭಯಂ ನಾಸ್ತಿ ನಾಭಿಚಾರಭಯಂ ತಥಾ ।
ಭೂತಪ್ರೇತಪಿಶಾಚೇಭ್ಯೋ ರಾಕ್ಷಸೇಭ್ಯಸ್ತಥೈವ ಚ ॥ ೧೩೫ ॥

---

೧೩೧. ಮಹಾಪಾಪಗಳಿಂದ ಕೂಡಿರುವವನೂ ಅಂತೆಯೇ ಉಪಪಾಪಗಳಿಂದ ಕೂಡಿದವನೂ ಈ ಸ್ತೋತ್ರವನ್ನು ಪಠಿಸುವುದರಿಂದ ಒಡನೆಯೇ ಶುದ್ಧರಾಗುವರು.

೧೩೨-೧೩೩. ಇದನ್ನು ಜಿತಮನಸ್ಸಿಂದ ಓದಿದರೆ ಪ್ರಜ್ಞೆಯೂ, ಲಕ್ಷ್ಮಿಯೂ, ಯಶಸ್ಸೂ, ಕೀರ್ತಿಯೂ, ಜ್ಞಾನವೂ ಹೆಚ್ಚುತ್ತವೆ. ದುಷ್ಟಗ್ರಹಗಳು ನಾಶಹೊಂದುತ್ತವೆ ಎಲ್ಲಾ ಅಮಂಗಳಗಳನ್ನೂ ನಾಶಮಾಡುತ್ತದೆ. ರೋಗಗಳೆಲ್ಲವೂ ಹೋಗುತ್ತವೆ. ಹಿತಕಾರಿಯು. ಅರಿಷ್ಟಗಳೆಲ್ಲವೂ ನಾಶವಾಗುತ್ತವೆ. ಕಷ್ಟದಿಂದ ಪಾರಾಗುತ್ತಾನೆ. ಆದ್ದರಿಂದ ಇದನ್ನು ಖಂಡಿತವಾಗಿ ಓದಬೇಕು.

೧೩೪. ನಕ್ಷತ್ರಪೀಡೆ, ಗ್ರಹಪೀಡೆ, ರಾಜಭಯ, ದೈವಭಯ, ಅಗ್ನಿಭಯ, ಕಳ್ಳರಭಯ, ಇವು ಪ್ರಾಪ್ತವಾದಾಗ ಈ ಸ್ತೋತ್ರವನ್ನು ಹೇಳಬೇಕು.

೧೩೫-೧೩೬. ಈ ಸ್ತೋತ್ರವನ್ನು ಓದಿದರೆ ಭಯವಿರುವುದಿಲ್ಲ. ಭೂತ, ಪ್ರೇತ, ಪಿಶಾಚಿಗಳಿಂದಲೂ, ರಾಕ್ಷಸರಿಂದಲೂ ಭಯವಿರುವುದಿಲ್ಲ. ಮಾಟಮಸಣಿಗಳಿಂದಲೂ ಭಯವಿರುವುದಿಲ್ಲ. ಪೂತನ, ಜೃಂಭಕ ಮುಂತಾದ ದುಷ್ಟಗ್ರಹಗಳ

ಪೂತನಾಜೃಂಭಕೇಭ್ಯಶ್ಚ ವಿಘ್ನೇಭ್ಯಶ್ಚೈವ ಸರ್ವದಾ ।
ನೃಣಾಂ ಕ್ವಚಿದ್ಭಯಂ ನಾಸ್ತಿ ಸ್ತವೇ ಹ್ಯಸ್ಮಿನ್ ಪ್ರಕೀರ್ತಿತೇ ॥ ೧೩೬ ॥

ವಾಸುದೇವಸ್ಯ ಪೂಜಾಂ ಯಃ ಕೃತ್ವಾ ಸ್ತೋತ್ರಮುದೀರಯೇತ್ ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೩೭ ॥

ಗಂಗಾದಿಪುಣ್ಯತೀರ್ಥೇಷು ಯಾ ಸ್ನಾನೇನಾಪ್ಯತೇ ಗತಿಃ ।
ತಾಂ ಗತಿಂ ಸಮವಾಪ್ನೋತಿ ಪಠನ್ ಪುಣ್ಯಾಮಿಮಾಂ ಸ್ತುತಿಂ ॥ ೧೩೮ ॥

ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾಪಿ ಯಃ ಪಠೇತ್ ।
ಸರ್ವದಾ ಸರ್ವಕಾರ್ಯೇಷು ಸೋಽಕ್ಷಯಂ ಸುಖಮಶ್ನುತೇ ॥ ೧೩೯ ॥

ಚತುರ್ಣಾಂ ಸಾಂಗವೇದಾನಾಂ ತ್ರಿರಾವರ್ತೇಷು ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಸ್ವಧೀಯಾನಸ್ಸಕೃನ್ನರಃ ॥ ೧೪೦ ॥

---

ಭಯವೂ ಇರುವುದಿಲ್ಲ. ವಿಘ್ನಗಳು ಬರುವುದೇ ಇಲ್ಲ. ಈ ರೀತಿಯಾಗಿ ಯಾವುದರಿಂದಲೂ ಎಲ್ಲಿಯೂ ಭಯವಿರುವುದಿಲ್ಲ.

೧೩೭. ವಾಸುದೇವನ ಪೂಜೆಯನ್ನು ಮಾಡಿ ಯಾವನು ಈ ಸ್ತೋತ್ರವನ್ನು ಹೇಳುವನೋ ಅವನಿಗೆ ಪದ್ಮದ ಎಲೆಯಮೇಲೆ ಬಿದ್ದ ನೀರು ಅದಕ್ಕೆ ಅಂಟದಂತೆ ಪಾಪವು ಅಂಟುವುದಿಲ್ಲ.

೧೩೮ ಗಂಗೆಯೇ ಮುಂತಾದ ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡಿದರೆ ಮನುಷ್ಯನು ಯಾವ ಗತಿಯನ್ನು ಹೊಂದುತ್ತಾನೆಯೋ ಆ ಗತಿಯನ್ನು ಈ ಸ್ತೋತ್ರವನ್ನು ಪಠಿಸುವುದರಿಂದ ಹೊಂದುತ್ತಾನೆ.

೧೩೯. ಒಂದು ಹೊತ್ತಾಗಲಿ, ಎರಡು ಹೊತ್ತಾಗಲಿ, ಮೂರು ಹೊತ್ತಾಗಲಿ, ಯಾವನು ಇದನ್ನು ಹೇಳುತ್ತಾನೆಯೋ ಅವನಿಗೆ ಯಾವಾಗಲೂ ಎಲ್ಲಾ ಕೆಲಸಗಳಲ್ಲಿಯೂ ಅಕ್ಷಯವಾದ ಸುಖವು ಉಂಟಾಗುತ್ತದೆ.

೧೪೦. ನಾಲ್ಕು ವೇದಗಳನ್ನು ಸಾಂಗವಾಗಿ ಮೂರುಬಾರಿ ಪಠಿಸಿದರೆ ಯಾವ ಫಲವು ಬರುತ್ತದೆಯೋ ಆ ಫಲವು ಈ ಸ್ತೋತ್ರವನ್ನು ಒಂದು ಬಾರಿ ಓದಿದರೆ ಬರುತ್ತದೆ.

ಅಕ್ಷಯಂ ಧನಮಾಪ್ನೋತಿ ಸ್ತ್ರೀಣಾಂ ಭವತಿ ವಲ್ಲಭಃ ।
ಪೂಜಾಂ ವಿಂದತಿ ಲೋಕೇಽಸ್ಮಿನ್ ಶ್ರದ್ಧಯಾ ಸಂಸ್ಮರನ್ ಸ್ತುತಿಂ ॥ ೧೪೧ ॥

ಸರ್ವದಾ ಸಂಪದಾ ಯುಕ್ತೋ ವಿಪದಂ ನೈವ ಪಶ್ಯತಿ ।
ಗೋಭಿರ್ನ ಹೀಯತೇ ಸ್ತೋತ್ರಂ ನಿತ್ಯಂ ಯಃ ಕೀರ್ತಯೇದಿದಂ ॥ ೧೪೨ ॥

ಅಲಕ್ಷ್ಮೀಃ ಕಾಲಕರ್ಣೀ ಚ ದುಸ್ಸ್ವಪ್ನಂ ದುಷ್ಟಚಿಂತನಂ ।
ಸದ್ಯೋ ನಶ್ಯತಿ ಭಕ್ತಾನಾಂ ಯ ಏನಂ ಶೃಣುಯಾತ್ ಸ್ತವಂ ॥ ೧೪೩ ॥

ಪ್ರಾತರುತ್ಥಾಯ ಯೋಧೀತೇ ಶುಚಿರ್ವಿಷ್ಣುಪರಾಯಣಃ ।
ಅಕ್ಷಯಂ ಲಭತೇ ಸೌಖ್ಯಮಿಹ ಲೋಕೇ ಪರತ್ರ ಚ ॥ ೧೪೪ ॥

ದೇವದ್ಯುತಿಪ್ರಣೀತಂ ವೈ ವಿಷ್ಣುಪ್ರೀತಿಕರಂ ಶುಭಂ ।
ವಿಷ್ಣುಪ್ರಸಾದಜನನಂ ವಿಷ್ಣುದರ್ಶನಕಾರಣಂ ॥ ೧೪೫ ॥

---

೧೪೧. ಶ್ರದ್ಧೆಯಿಂದ ಈ ಸ್ತುತಿಯನ್ನು ಸ್ಮರಿಸಿದರೆ ಅಕ್ಷಯವಾದ ಧನವು ಸಿಕ್ಕುತ್ತದೆ. ಹೆಂಗಸರಿಗೆ ಬಹು ಪ್ರೀತಿಪಾತ್ರನಾಗುತ್ತಾನೆ. ಲೋಕದಲ್ಲಿ ಎಲ್ಲರೂ ಇವನನ್ನು ಪೂಜಿಸುತ್ತಾರೆ.

೧೪೨. ನಿತ್ಯವೂ ಇದನ್ನು ಕೇಳುತ್ತಿದ್ದರೆ ಯಾವಾಗಲೂ ಸಂಪತ್ತು ಇದ್ದೇ ಇರುತ್ತದೆ. ವಿಪತ್ತುಗಳನ್ನು ನೋಡುವುದೇ ಇಲ್ಲ. ಯಾವಾಗಲೂ ಗೋವುಗಳು ಇದ್ದೇ ಇರುತ್ತವೆ.

೧೪೩. ಈ ಸ್ತೋತ್ರವನ್ನು ಕೇಳಿದವನಿಗೆ ಅಲಕ್ಷ್ಮಿಯೂ ಕಾಲಕರ್ಣಿಯೂ ದುಸ್ವಪ್ನವೂ ಕೆಟ್ಟಯೋಚನೆಗಳೂ ಒಡನೆಯೇ ಹೋಗುತ್ತವೆ.

೧೪೪. ಈ ಸ್ತೋತ್ರವನ್ನು ಬೆಳಗ್ಗೆ ಎದ್ದು ಯಾವನು ಶುಚಿಯಾಗಿ ವಿಷ್ಣುವಿನಲ್ಲಿಯೇ ಭಕ್ತಿಯನ್ನಿಟ್ಟು ಓದುತ್ತಾನೆಯೋ ಅವನು ಇಹಪರಗಳಲ್ಲಿ ಅಕ್ಷಯವಾದ ಸೌಖ್ಯವನ್ನು ಹೊಂದುತ್ತಾನೆ.

೧೪೫–೪೬. ಈ ಸ್ತೋತ್ರವು ದೇವದ್ಯುತಿಯಿಂದ ನಿರ್ಮಿತವಾದುದು. ವಿಷ್ಣುವಿಗೆ ಪ್ರೀತಿಕರವಾದುದು. ವಿಷ್ಣುವಿನ ಅನುಗ್ರಹವನ್ನು ಕೊಡತಕ್ಕದ್ದು.

**ಯೋಗಸಾರಮಿದಂ ನಾಮ ಸ್ತೋತ್ರಂ ಪರಮಪಾವನಂ ।**
**ಯಃ ಪಠೇತ್ ಸತತಂ ಭಕ್ತ್ಯಾ ವಿಷ್ಣುಲೋಕಂ ಸ ಗಚ್ಛತಿ ॥ ೧೪೬ ॥**

**ಇತಿ ತೇ ಕಥಿತಂ ಸ್ತೋತ್ರಂ ಗುಹ್ಯಂ ಪಾಪಪ್ರಣಾಶನಂ ।**
**ಅತ ಊರ್ಧ್ವಂ ಪ್ರವಕ್ಷ್ಯಾಮಿ ಪಿಶಾಚಸ್ಯ ಚ ಮೋಕ್ಷಣಂ ॥ ೧೪೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಮಾಘಮಾಹಾತ್ಮ್ಯೇ ವಸಿಷ್ಠ ದಿಲೀಪ ಸಂವಾದೇ ಯೋಗಸಾರಸ್ತೋತ್ರಕಥನಂ ನಾಮ ಏಕೋನಪಂಚಾಶದಧಿಕದ್ವಿಶತತಮೋಽಧ್ಯಾಯಃ**

---

ವಿಷ್ಣುವನ್ನು ದರ್ಶನಮಾಡುವುದಕ್ಕೆ ಕಾರಣವಾದುದು. ಈ ಸ್ತೋತ್ರಕ್ಕೆ ಯೋಗಸಾರವೆಂದು ಹೆಸರು. ಪರಮ ಪಾವನವಾದುದು. ಇಂತಹ ಇದನ್ನು ಭಕ್ತಿಯಿಂದ ಓದಿದರೆ ವಿಷ್ಣುಲೋಕವನ್ನು ಹೊಂದುತ್ತಾನೆ.

೧೪೭. ಈ ರೀತಿಯಾಗಿ ಗುಟ್ಟಾದ ಪಾಪಪ್ರಣಾಶಕವಾದ ಸ್ತೋತ್ರವನ್ನು ಹೇಳಿದೆನು. ಇನ್ನು ಮೇಲೆ ಪಿಶಾಚಗಳ ಮೋಕ್ಷವನ್ನು ಹೇಳುತ್ತೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಯೋಗಸಾರಸ್ತೋತ್ರ ಕಥನವೆಂಬ ಇನ್ನೂರ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಶದಧಿಕದ್ವಿಶತತಮೋಽಧ್ಯಾಯಃ ||



|| ಲೋಮಶ ಉವಾಚ ||

ಶ್ರೂಯತಾಂ ಯೇ ಪಿಶಾಚಾಶ್ಚ ಮೋಚಿತಾಸ್ತೇನ ತದ್ವನೇ |
ಆಸೀದ್ರಾಜಾ ಚಿತ್ರನಾಮಾ ದ್ರಾವಿಡೇ ವಿಷಯೇ ಪುರಾ || ೧ ||

ಸೋಮಾನ್ವಯೇ ಮಹಾಕ್ಷತ್ರೀ ಶೂರಃ ಶಸ್ತ್ರಾಸ್ತ್ರಪಾರಗಃ |
ಗಜವಾಜಿರಥೌಘೈಶ್ಚ ಸಂಪನ್ನೋ ವಿಕ್ರಮೈಸ್ತಥಾ || ೨ ||

ಸ್ವರ್ಣೈರ್ನಾನಾವಿಧೈರತ್ನೈಃ ಪೂರ್ಣಕೋಶೋ ಮಹಾಧನಃ |
ಮಧ್ಯೇನಾರೀಸಹಸ್ರಂ ತು ಸದಾ ಕ್ರೀಡತಿ ಭೂಪತಿಃ || ೩ ||

---

## ಇನ್ನೂರ ಐವತ್ತನೆಯ ಅಧ್ಯಾಯವು



೧. ಲೋಮಶನು ಹೇಳಿದನು—ಆ ಪಿಶಾಚಗಳು ಆ ವನದಲ್ಲಿ ಹೇಗೆ ಮುಕ್ತಿಯನ್ನು ಅವನಿಂದ ಹೊಂದಿದುವೆಂಬುದನ್ನು ಕೇಳು. ಪೂರ್ವದಲ್ಲಿ ದ್ರಾವಿಡ ದೇಶದಲ್ಲಿ ಚಿತ್ರನಾಮನೆಂಬ ರಾಜನೊಬ್ಬನಿದ್ದನು.

೨. ಅವನು ಚಂದ್ರವಂಶದ ಮಹಾಕ್ಷತ್ರಿಯನು. ಶೂರನು. ಶಸ್ತ್ರಗಳಲ್ಲಿ ಗಟ್ಟಿಗನು ಅಸ್ತ್ರಗಳಲ್ಲಿ ಗಟ್ಟಿಗನು. ಆನೆ, ಕುದುರೆ, ರಥಗಳು ಅವನಲ್ಲಿ ಪೂರ್ಣವಾಗಿದ್ದುವು. ಬಹು ಪರಾಕ್ರಮಿಯು.

೩. ಅನೇಕವಾದ ಚಿನ್ನವೂ ರತ್ನಗಳೂ ಅವನ ಬೊಕ್ಕಸದಲ್ಲಿ ಹೆಚ್ಚಾಗಿದ್ದುವು. ಯಾವಾಗಲೂ ಅನೇಕ ಜನ ಶ್ರೇಷ್ಠರಾದ ಹೆಂಗಸರ ಮಧ್ಯದಲ್ಲಿಯೇ ಕ್ರೀಡಿಸುತ್ತಿದ್ದನು.

ಸ್ತ್ರೈಣಃ ಕಾಮೀ ಸದಾ ಲುಬ್ಧಃ ಚಂಡಕೋಪಸ್ಸ ಪಾರ್ಥಿವಃ ।
ನ ಕರೋತಿ ವಚೋ ಧರ್ಮ್ಯಂ ಸಚಿವೈಸ್ಸಮುದೀರಿತಂ ॥ ೪ ॥

ವಿಷ್ಣುಂ ನಿಂದತಿ ಸೋತ್ಯರ್ಥಂ ವೈಷ್ಣವಾನ್ ದ್ವೇಷ್ಟಿ ಸರ್ವದಾ ।
ಕೋಽಸೌ ವಿಷ್ಣುಃ ಕ್ವ ದೃಷ್ಟೋಽಸೌ ಕ್ವ ಚಾಸ್ತೇ ಕೇನ ಕೀರ್ತ್ಯತೇ ॥ ೫ ॥

ಇತ್ಥಂ ನ ಸಹಿತೇ ವಿಷ್ಣುಂ ಸ ರಾಜಾ ದೈವಮೋಹಿತಃ ।
ನಾರಾಯಣಂ ಭಜಂತೇ ಯೇ ತಾನ್ ಪೀಡಯತಿ ಕೋಪಿತಃ ॥ ೬ ॥

ನ ಬ್ರಾಹ್ಮಣಂ ನ ವೇದಾಂಶ್ಚ ವೈದಿಕಂ ಕರ್ಮ ನ ವ್ರತಂ ।
ನ ದಾನಂ ಮನ್ಯತೇ ದಾತುಂ ಪಾಷಂಡಸ್ಥಿತಿಸಂಸ್ಥಿತಃ ॥ ೭ ॥

ಅನೀತ್ಯಾ ಚಂಡದಂಡೈಶ್ಚ ಪ್ರಜಾಪೀಡಾಂ ಕರೋತಿ ಸಃ ।
ನಿಷ್ಠುರೋ ನಿರ್ದಯಃ ಕ್ರೂರಃ ಪುಣ್ಯಕಾರ್ಯಪರಾಙ್ಮುಖಃ ॥ ೮ ॥

---

೪. ಯಾವಾಗಲೂ ಹೆಂಗಸರ ಗುಂಪಿನಲ್ಲಿಯೇ ಇರುತ್ತಿರುವನು. ಕಾಮಿಯು, ಲೋಭಿಯು, ಬಹು ಕೋಪವುಳ್ಳವನು. ಒಳ್ಳೆಯ ಧರ್ಮವಾದ ಮಾತನ್ನು ಸಚಿವರು ಹೇಳಿದರೂ ಅದನ್ನು ಮಾಡುತ್ತಿರಲಿಲ್ಲ.

೫. ಅವನು ಬಹುವಾಗಿ ವಿಷ್ಣುವನ್ನು ನಿಂದಿಸುತ್ತಿದ್ದನು. ವೈಷ್ಣವರನ್ನು ದ್ವೇಷಿಸುತ್ತಿದ್ದನು. ಈ ವಿಷ್ಣುವೆಂಬುವನಾರು? ಎಲ್ಲಿದ್ದಾನೆ? ಯಾರು ಕಂಡಿದ್ದಾರೆ? ಯಾವನು ಹೊಗಳುತ್ತಾನೆ? ಎಂದು ಧಿಕ್ಕರಿಸುತ್ತಿದ್ದನು.

೬. ಆ ರಾಜನು ದೇವರ ಮಾಯೆಯಿಂದ ಅಜ್ಞಾನವನ್ನು ಹೊಂದಿ ವಿಷ್ಣುವೆಂದರೇನೇ ಸಹಿಸುತ್ತಿರಲಿಲ್ಲ. ಅಲ್ಲದೆ ನಾರಾಯಣನನ್ನು ಯಾರು ಭಜಿಸುತ್ತಾರೆಯೋ ಅವರನ್ನು ಕೋಪದಿಂದ ತೊಂದರೆಪಡಿಸುತ್ತಿದ್ದನು

೭. ಬ್ರಾಹ್ಮಣರನ್ನು ಆಗಲೀ ವೇದಗಳನ್ನಾಗಲೀ ವೈದಿಕ ಕರ್ಮಗಳನ್ನಾಗಲೀ ವ್ರತಗಳನ್ನಾಗಲೀ ಗೌರವಿಸುತ್ತಿರಲಿಲ್ಲ. ದಾನ ಕೊಡುವುದೇ ಬೇಕಿಲ್ಲವಾಗಿದ್ದಿತು. ನಾಸ್ತಿಕನಾಗಿಯೇ ಯಾವಾಗಲೂ ಇರುತ್ತಿರುವನು.

೮. ನ್ಯಾಯವನ್ನು ಬಿಟ್ಟು ಕೆಟ್ಟ ರೀತಿಯಿಂದಲೂ ಬಹು ಉಗ್ರವಾದ ಶಿಕ್ಷೆಗಳಿಂದಲೂ ಪ್ರಜೆಗಳನ್ನು ಪೀಡಿಸುತ್ತಿದ್ದನು. ನಿಷ್ಠುರನಾಗಿಯೂ, ನಿರ್ದಯನಾಗಿಯೂ, ಕ್ರೂರನಾಗಿಯೂ ಇದ್ದು ಪುಣ್ಯಕರ್ಮಗಳನ್ನು ಮಾಡದೇನೆ ಇರುತ್ತಿದ್ದನು.

ಚ್ಯುತಾಚಾರೋಽಚ್ಯುತದ್ವೇಷ್ಟಾ ಚ್ಯುತಾಗ್ನಿಶ್ಚ ಚ್ಯುತಕ್ರಿಯಃ ।
ಸೋಽನುಶಾಸ್ತಿ ಪ್ರಜಾ ಭೂಪಃ ಕಾಲರೂಪ ಇವಾಪರಃ ॥ ೯ ॥

ತತೋ ಬಹುತಿಥೇ ಕಾಲೇ ಸ ರಾಜಾ ಪಂಚತಾಂ ಗತಃ ।
ವೈದಿಕೇನ ವಿಧಾನೇನ ನ ಲೇಭೇ ಜೋರ್ಧ್ವದೈಹಿಕಂ ॥ ೧೦ ॥

ಅಥ ಕಿಂಕರಯೂಥೇನ ಪೀಡ್ಯಮಾನೋ ಭೃಶಂ ತಥಾ ।
ಅಯಂ ಕೀಲಮಯೇ ಮಾರ್ಗೇ ತಪ್ತಾಂಗಾರಪ್ರಪೂರಿತೇ ॥ ೧೧ ॥

ಚಂಡಾರ್ಕರಶ್ಮಿಸಂತಪ್ತೇ ವೃಕ್ಷಚ್ಛಾಯಾವಿವರ್ಜಿತೇ ।
ತಪ್ತಾಂಗಾರಪ್ರಕೀರ್ಣೇ ಚ ವಹ್ನಿಜ್ವಾಲಾಸಮಾಕುಲೇ ॥ ೧೨ ॥

ಲೋಹಕುಂಡೈಶ್ಚ ಕಾಕೋಲೈರ್ಹನ್ಯಮಾನಃ ಸುದಾರುಣೈಃ ।
ವೃಕೈರ್ದಂಷ್ಟ್ರಾಕರಾಲೈಶ್ಚ ಶ್ವಭಿರ್ಘೋರೈಶ್ಚ ಭಕ್ಷಿತಃ ॥ ೧೩ ॥

---

೯. ಆಚಾರದಲ್ಲಿ ಆಸಕ್ತನಾಗದೆ ಬಿಟ್ಟುಬಿಟ್ಟಿದ್ದನು. ಅಚ್ಯುತನನ್ನು ದ್ವೇಷಿಸುತ್ತಿದ್ದನು. ಅಗ್ನಿಯಲ್ಲಿ ಯಾವ ಹೋಮಾದಿಕಾರ್ಯಗಳನ್ನೂ ಮಾಡುತ್ತಿರಲಿಲ್ಲ. ಒಳ್ಳೆಯ ಕೆಲಸಗಳೊಂದನ್ನೂ ಆಚರಿಸುತ್ತಿರಲಿಲ್ಲ. ಅವನು ತನ್ನ ಪ್ರಜೆಗಳನ್ನು ಯಮನ ಅವತಾರದಂತೆ ಇದ್ದುಕೊಂಡು ಶಿಕ್ಷಿಸುತ್ತಿದ್ದನು.

೧೦. ಹೀಗೆ ಬಹುಕಾಲವು ಕಳೆದ ಮೇಲೆ ಆ ರಾಜನು ಸತ್ತುಹೋದನು. ವೈದಿಕವಾದ ರೀತಿಯಿಂದ ದೇಹಸಂಸ್ಕಾರವನ್ನಾಗಲೀ ಅಪರಕರ್ಮಗಳನ್ನಾಗಲೀ ಹೊಂದಲಿಲ್ಲ.

೧೧-೧೪. ಅನಂತರದಲ್ಲಿ ಯಮನ ಆಳುಗಳು ಅವನನ್ನು ಮುಳ್ಳುಗಳನ್ನು ಹರಡಿರುವ, ಕೆಂಡಗಳನ್ನು ಚೆಲ್ಲಿರುವ, ಕ್ರೂರವಾದ ಸೂರ್ಯನಿಂದ ಕಾದಿರುವ, ಮರದ ನೆರಳಿಲ್ಲದ, ಕೆಂಡವನ್ನು ಕೆಡವಿಕೊಂಡು ಬೆಂಕಿಯು ಎಲ್ಲಾ ಕಡೆಯಲ್ಲಿಯೂ ಉರಿಯುತ್ತಿರುವ, ಕಬ್ಬಿಣದ ಕೊಕ್ಕುಗಳುಳ್ಳ ಹದ್ದುಗಳು ಮೇಲುಮೇಲೆ ಬಂದು ಹೊಡೆಯುತ್ತಿರುವ, ದಾರಿಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಆ ದಾರಿಯಲ್ಲಿ ಕ್ರೂರವಾದ ತೋಳಗಳೂ ಹುಲಿಗಳೂ ನಾಯಿಗಳೂ ಅವನನ್ನು

ಶೃಣ್ವನ್ ಕ್ರಂದಿತಮನ್ಯೇಷಾಂ ನೃಣಾಂ ಕಿಲ್ಬಿಷಕಾರಿಣಾಂ ।
ಜಗಾಮ ಪಾರ್ಥಿವೋ ಲೋಕಮನ್ತಕಸ್ಯ ಭಯಾವಹಂ ॥ ೧೪ ॥

ಶೃಣು ದ್ವಿಜ ಗತಿಂ ತಸ್ಯ ತಸ್ಮಿನ್ ಲೋಕೇ ಸುದಾರುಣಂ ।
ನಿರಯಾನ್ನಿರಯಂ ಯಾತಃ ಪರ್ಯಾಯೇಣ ಸ ಭೂಪತಿಃ ॥ ೧೫ ॥

ಆದೌ ಪಪಾತ ತಾಮಿಸ್ರೇ ದಾರುಣೇ ಭೂರಿದುಃಖದೇ ।
ಪುನಶ್ಚೈವಾಂಧತಾಮಿಸ್ರೇ ಯತ್ರ ದುಃಖಂ ಚ ದುಸ್ಸಹಂ ॥ ೧೬ ॥

ಗತೋಽನಂತರಮತ್ಯುಗ್ರಂ ಮಹಾರೌರವರೌರವಂ ।
ನರಕಂ ಕಾಲಮತ್ಯುಗ್ರಂ ಮಹಾನರಕಮೇವ ಚ ॥ ೧೭ ॥

ಪಶ್ಚಾನ್ನಿಮಗ್ನಸ್ಸ ಭೂಪಾಲೋ ದುಸ್ತರೇ ದುಃಖಮೂರ್ಛಿತಃ ।
ಸಂಯಮನ್ಯಾಂ ಮಹಾವೀಚೌ ತಪನೇ ಸಂಪ್ರತಾಪಿತಃ ॥ ೧೮ ॥

---

ಕಚ್ಚುತ್ತಿದ್ದುವು. ಅನೇಕಜನ ಪಾಪಿಗಳು ಅಳುತ್ತಿರುವುದನ್ನು ಕೇಳುತ್ತಿದ್ದನು. ಇಂತಹ ಭಯಂಕರವಾದ ದಾರಿಯಲ್ಲಿ ಆ ರಾಜನು ಯಮನ ಪಟ್ಟಣಕ್ಕೆ ಹೋಗುತ್ತಿದ್ದನು.

೧೫. ಎಲೈ ದೊರೆಯೇ! ಆ ಯಮಲೋಕದಲ್ಲಿ ಅವನಿಗಾದ ಭಯಂಕರವಾದ ಗತಿಯನ್ನು ಕೇಳು. ಅವನು ಒಂದಾದಮೇಲೊಂದು ಭಯಂಕರವಾದ ನರಕಕ್ಕೆ ಕ್ರಮವಾಗಿ ಹೋಗುತ್ತಿದ್ದನು.

೧೬. ಇವನನ್ನು ಮೊದಲು ಬಹು ದುಃಖಕರವಾದ ಅಂಧತಾಮಿಸ್ರವೆಂಬ ನರಕಕ್ಕೆ ಹಾಕಿದರು. ಅನಂತರ ದುಃಖವನ್ನು ತಡೆಯಲಾಗದ ಅಂಧತಾಮಿಸ್ರಕ್ಕೆ ಹಾಕಿದರು.

೧೭-೧೮. ಅನಂತರ ಅತ್ಯುಗ್ರವಾಗಿರುವ ರೌರವ ಮಹಾರೌರವ ನರಕಗಳನ್ನು ಹೊಂದಿದನು. ಅನಂತರ ಕಾಲ ಅತ್ಯುಗ್ರ ಮಹಾನರಕಗಳನ್ನು ಹೊಂದಿದನು. ಅನಂತರ ಬಹು ಕಷ್ಟಕರವಾದ ಸಂಯಮನಿಯಲ್ಲಿ ಹೋಗಿ ಬಿದ್ದನು. ಅನಂತರ ಮಹಾವೀಚಿಯಲ್ಲಿಯೂ, ಆಮೇಲೆ ತಪನದಲ್ಲಿಯೂ ಕಷ್ಟಪಟ್ಟನು. ಈ ರೀತಿಯಾಗಿ ದುಃಖಪಡುತ್ತ ಎಲ್ಲಾ ನರಕಗಳಲ್ಲಿಯೂ ಬೀಳುತ್ತಿದ್ದನು.

ಪಪಾತಾನಂತರಂ ರಾಜಾ ದಂಃಖಾಗ್ನಿಪ್ಲುಷ್ಟಮಾನಸಃ ।
ಸಂಘಾತಂ ಚೈವ ಕಾಕೋಲಂ ಕುಟ್ಮಲಂ ಪೂತಿಮೃತ್ತಿಕಂ ॥ ೧೯ ॥

ಲೋಹಶಂಕುಂ ಮೃಗೀಯಂತ್ರಪಂಥಾನಂ ಶಾಲ್ಮಲೀಂ ನದೀಂ ।
ಪ್ರವಿಷ್ಟೋಽಥ ಮಹಾಭೀಮಂ ದುರ್ದರ್ಶಂ ದುರ್ಗಮಂ ಪುನಃ ॥ ೨೦ ॥

ಅಸಿಪತ್ರವನಂ ಚೈವ ಲೋಹಚಾರಕಮೇವ ಚ ।
ಏವಮೇತೇಷು ಸರ್ವೇಷು ಪತಿತ್ವಾ ಪಾಪಕೃನ್ನೃಪಃ ॥ ೨೧ ॥

ಅವಿಂದನ್ನರಕೇ ಘೋರೇ ಸಂತಾಪಂ ಯಾತನಾಮಯಂ ।
ವಿಷ್ಣುಪ್ರದ್ವೇಷದೋಷೇಣ ಯುಗಾನಾಮೇಕಸಪ್ತತಿಂ ॥ ೨೨ ॥

ಭುಕ್ತ್ವಾ ಚ ಯಾತನಾ ಯಾಮೀಃ ನಿಸ್ತೀರ್ಣೋ ನರಕಾನ್ನೃಪಃ ।
ಸ ಮರ್ತ್ಯೇ ಗಿರಿರಾಜೇ ತು ಪಿಶಾಚೋಽಭೂತ್ತದಾ ಮಹಾನ್ ॥ ೨೩ ॥

---

೧೯-೨೧. ಸಂಘಾತ, ಕಾಕೋಲ, ಕುಡ್ಮಲ, ಪೂತಿಮೃತ್ತಿಕೆ, ಲೋಹಶಂಕು, ಮೃಗೀಯಂತ್ರ, ಶಾಲ್ಮಲಿ, ಮಹಾಭೀಮ, ಅಸಿಪತ್ರವನ, ಲೋಹಚಾರಕ, ಇವೇ ಮುಂತಾದ ಭಯಂಕರವಾದ ನರಕಗಳನ್ನು ಅನುಭವಿಸಿದನು. ಈ ರೀತಿಯಾಗಿ ಆ ಯಮಕಿಂಕರರು ಅವನನ್ನು ಎಲ್ಲಾ ನರಕಗಳಲ್ಲಿಯೂ ಹಾಕುತ್ತಿದ್ದರು.

೨೨. ಈ ರಾಜನು ವಿಷ್ಣುವಿನಲ್ಲಿ ದ್ವೇಷ ಮಾಡಿದ ದೋಷದಿಂದ ಘೋರವಾದ ನರಕಗಳಲ್ಲಿ ಎಪ್ಪತ್ತೊಂದು ಯುಗಗಳವರೆಗೂ ಯಾತನೆಯನ್ನು ಅನುಭವಿಸಿದನು.

೨೩. ಈ ರೀತಿಯಾಗಿ ಯಮನ ಯಾತನೆಗಳನ್ನು ಅನುಭವಿಸಿ ಅದರಿಂದ ಮುಕ್ತನಾಗಿ ನರಲೋಕದಲ್ಲಿರುವ ಹಿಮವಂತನಲ್ಲಿ ದೊಡ್ಡ ಪಿಶಾಚಿಯಾಗಿ ಹುಟ್ಟಿದನು.

ಸ ಭ್ರಾಮ್ಯತಿ ದಿಶಸ್ಸರ್ವಾಃ ವನೇ ತಸ್ಮಿನ್ ಬುಭುಕ್ಷಿತಃ ।
ನ ಪಶ್ಯತ್ಯಶನಂ ತೋಯಂ ಭ್ರಮತೇ ಚ ಸದಾ ಗಿರೌ ॥ ೨೪ ॥

ಕದಾಚಿತ್ಪರ್ಯಟನ್ ಸೋಥ ಪಿಶಾಚಃ ಶೋಕಪೀಡಿತಃ ।
ಲಕ್ಷಪ್ರಸ್ರವಣೇರಣ್ಯೇ ಪ್ರವಿಷ್ಟೋ ಭಾವಿಸತ್ಫಲಃ ॥ ೨೫ ॥

ಬಿಭೀತಕತರುಚ್ಛಾಯಾಂ ಸಮಾಶ್ರಿತ್ಯ ಸ ದುಃಖಿತಃ ।
ಹಾ ಹತೋಸ್ಮೀತಿ ಚಾಕ್ರಂದದ್ ಘೋರಮುಚ್ಚೈಃ ಪುನಃ ಪುನಃ ॥ ೨೬ ॥

ಕ್ಷುತ್ತೃಡ್ಭ್ಯಾಂ ಮುಹ್ಯಮಾನಸ್ಯ ಸರ್ವಭೂತದ್ರುಹೋ ಮಮ ।
ಜನ್ಮನೋಸ್ಯ ದುರಂತಸ್ಯ ಕಥಮಂತೋ ಭವಿಷ್ಯತಿ ॥ ೨೭ ॥

ಅಹೋ ಪಾಪಸಮುದ್ರೇಸ್ಮಿನ್ ದುಃಖಕಲ್ಲೋಲಮಾಲಿನಿ ।
ಕರಾವಲಂಬನಂ ಕೋ ಮೇ ನಿಮಗ್ನಸ್ಯ ಪ್ರದಾಸ್ಯತಿ ॥ ೨೮ ॥

---

೨೪. ಹಸಿವುಗೊಂಡವನಾಗಿ ಆ ಕಾಡಿನಲ್ಲಿ ಎಲ್ಲಾ ಕಡೆಗೂ ಅಲೆದಾಡುತ್ತಿದ್ದನು. ಆದರೂ ಆ ಪರ್ವತದಲ್ಲಿ ನೀರನ್ನಾಗಲೀ ಅನ್ನವನ್ನಾಗಲೀ ಅವನು ಹೊಂದಲಿಲ್ಲ.

೨೫. ಆ ಪಿಶಾಚವು ಹೀಗೆ ದುಃಖಪಡುತ್ತ ತಿರುಗಾಡುತ್ತಿದ್ದು ಕೊನೆಗೆ ಮುಂದೆ ಹೊಂದಬೇಕಾದ ಒಳ್ಳೆಯ ಫಲದಿಂದ ಲಕ್ಷಪ್ರಸ್ರವಣವೆಂಬ ಅರಣ್ಯಕ್ಕೆ ನುಗ್ಗಿತು.

೨೬-೨೮. ಅಲ್ಲಿ ದುಃಖಪಡುತ್ತ ಆಯಾಸದಿಂದ ಒಂದು ತಾರೆಯ ಮರದ ನೆರಳಿನಲ್ಲಿ ಕುಳಿತುಕೊಂಡಿತು. ಅಯ್ಯೋ! ಕೆಟ್ಟೆನು. ಎಂಬುದಾಗಿ ಘಟ್ಟಿಯಾಗಿ ಅಳುತ್ತಿದ್ದಿತು. ಹಸಿವು, ಬಾಯಾರಿಕೆಗಳಿಂದ ಕಷ್ಟಪಡುತ್ತಿರುವ, ಎಲ್ಲಾ ಪ್ರಾಣಿಗಳಿಗೂ ತೊಂದರೆಯನ್ನು ಕೊಡುತ್ತಿರುವ, ನನ್ನ ಈ ಪಿಶಾಚ ಜನ್ಮವನ್ನು ಕೊನೆಗಾಣಿಸುವವರಾರು? ದುಃಖವೇ ಬಹುವಾಗಿರುವ ಈ ಪಾಪಸಮುದ್ರದಿಂದ ಹೊರಗೆ ಬರಲು ಯಾರು ನನಗೆ ಕೈಹಿಡಿದು ಸಹಾಯಮಾಡುವರು? ಎಂದು

**ಇತ್ಥಂ ತಸ್ಯ ಪಿಶಾಚಸ್ಯ ರೋದನಂ ದೀನಚೇತಸಃ |**
**ದೇವದ್ಯುತಿರಧೀಯಾನಃ ಶುಶ್ರಾವ ಕರುಣಾಮಯಂ || ೨೯ ||**

**ಸಮಾಗತ್ಯ ತತಸ್ತತ್ರ ತಂ ಪಿಶಾಚಂ ದದರ್ಶ ಸಃ |**
**ವಿಕರಾಲಮುಖಂ ದೀನಂ ಪಿಶಾಚಂ ಪಿಂಗಳಾಕೃತಿಂ | || ೩೦ ||**

**ಊರ್ಧ್ವಮೂರ್ಧಜಕೃಷ್ಣಾಂಗಂ ಯಮದೂತಮಿವಾಪರಂ |**
**ಲೋಲಜಿಹ್ವಂ ಚಲದ್ದೃಷ್ಟಿಂ ದೀರ್ಘಜಂಘಂ ಶಿರಾಕುಲಂ || ೩೧ ||**

**ದೀರ್ಘೋಷ್ಠಂ ಶುಷ್ಕತುಂಡಂ ಚ ಗರ್ತಾಕ್ಷಂ ಶುಷ್ಕಪಂಜರಂ |**
**ಅಥಾಮುಂ ಕೌತುಕಾವಿಷ್ಟಂ ಪಪ್ರಚ್ಛ ಮುನಿಸತ್ತಮಃ || ೩೨ ||**

**ಕೋ ಹಿ ತ್ವಂ ಭೀಷಣಾಕಾರಃ ಕುತೋ ರೋದಿಷಿ ದಾರುಣಂ |**
**ಅವಸ್ಥೇಯಂ ಕುತೋ ಬ್ರೂಹಿ ಕಿಂ ನಾಹಂ ಕರವಾಣಿ ತೇ || ೩೩ ||**

---

ಅಳುತ್ತಿರಲು ಈ ದೀನತೆಯಿಂದ ಕೂಡಿದ ಅಳುವು ಆ ವೇದಾಭ್ಯಾಸ ಮಾಡುತ್ತಿದ್ದ ದೇವದ್ಯುತಿಯ ಕಿವಿಗೆ ಬಿದ್ದು ಬಹುವಾಗಿ ದಯೆಯನ್ನು ಹುಟ್ಟಿಸಿತು.

೩೦-೩೨. ಅಲ್ಲಿಂದ ಬಂದು ಆ ಪಿಶಾಚವನ್ನು ನೋಡಿದನು. ಅದು ಭಯಂಕರವಾದ ಮುಖವುಳ್ಳದ್ದಾಗಿಯೂ, ದೀನತೆಯುಳ್ಳದ್ದಾಗಿಯೂ, ಹೊಂಬಣ್ಣವಾದ ಬಣ್ಣವುಳ್ಳದ್ದಾಗಿಯೂ ಮೇಲಕ್ಕೆದ್ದುಕೊಂಡಿರುವ ತಲೆಗೂದಲುಗಳುಳ್ಳದ್ದಾಗಿಯೂ ಕಪ್ಪುಬಣ್ಣವುಳ್ಳದ್ದಾಗಿಯೂ ಇದ್ದಿತು. ಮತ್ತೊಬ್ಬ ಯಮನ ಆಳಿನಂತಿದ್ದ, ಅಲ್ಲಾಡಿಸುತ್ತಿರುವ ನಾಲಗೆಯುಳ್ಳ, ಚಂಚಲವಾದ ದೃಷ್ಟಿಯಿಂದ ಕೂಡಿದ, ಉದ್ದವಾದ ತೊಡೆಯುಳ್ಳ, ಮೈಯೆಲ್ಲವೂ ನರಗಳಿಂದ ಕೂಡಿದಂತೆ ಕಾಣುತ್ತಿರುವ, ಉದ್ದವಾದ ಕೆಳದುಟಿಯುಳ್ಳ, ಒಣಕಲು ಮುಖದಿಂದ ಕೂಡಿದ, ಕಣ್ಣು ಗುಳಿಬಿದ್ದಿರುವ, ದೇಹವೆಲ್ಲವೂ ಒಣಕಲು ಒಣಕಲಾಗಿಯೂ, ಇದ್ದುಕೊಂಡು ಅದು ಇದ್ದಿತು. ಇದನ್ನು ನೋಡಿ ಆ ಮುನಿಯು ಆಶ್ಚರ್ಯಪಟ್ಟು ನೋಡುತ್ತ ಇಂತೆಂದು ಕೇಳಿದನು.

೩೩. ಭಯಂಕರವಾದ ಆಕಾರವುಳ್ಳ ನೀನಾರು? ನೀನು ಹೀಗೆ ದಾರುಣವಾಗಿ ಅಳಲು ಕಾರಣವೇನು? ಈ ಅವಸ್ಥೆಯು ಏಕೆ ಬಂದಿತು? ನಾನು ನಿನಗೆ ಏನು ಮಾಡಬೇಕು? ಇವೆಲ್ಲವನ್ನೂ ಹೇಳು.

ಮಮಾಶ್ರಮಪ್ರವಿಷ್ಟಾ ಹಿ ದುಃಖಭಾಜೋಽಪಿ ಜಂತವಃ ।
ಮೋದಂತೇ ಕೇವಲಂ ಸರ್ವೇ ವೈಷ್ಣವೇ ಭವನೇ ಯಥಾ　　॥ ೩೪ ॥

ವದ ತ್ವಂ ಸತ್ವರಂ ಭದ್ರ ದುಃಖಸ್ಯೈತಸ್ಯ ಕಾರಣಂ ।
ಕಾಲಕ್ಷೇಪಂ ನ ಕುರ್ವಂತಿ ಪ್ರಾಪ್ತೇಽರ್ಥೇ ಹಿ ಮನೀಷಿಣಃ　　॥ ೩೫ ॥

॥ ಲೋಮಶ ಉವಾಚ ॥

ಶ್ರುತ್ವೈತದ್ವಚನಂ ಪ್ರೀತಃ ಪಿಶಾಚಸ್ತ್ಯಕ್ತರೋದನಃ ।
ಉವಾಚ ದೀನಯಾ ವಾಚಾ ಪ್ರಶ್ರಯಾವನತಸ್ತದಾ　　॥ ೩೬ ॥

॥ ಪಿಶಾಚ ಉವಾಚ ॥

ಸರ್ವಾಂಗವ್ಯಾಪಿಸಂತಾಪಂ ಜಹಾರ ತ್ವದ್ವಚೋ ಮಯಿ ।
ಗ್ರೀಷ್ಮೇ ದಾವಾನಲೋದ್ಭೂತಂ ವರ್ಷನ್ಮೇಘ ಇವಾಚಲೇ　　॥ ೩೭ ॥

---

೩೪. ದುಃಖಿಗಳಾಗಿದ್ದವರೂ ನನ್ನ ಆಶ್ರಮವನ್ನು ಪ್ರವೇಶಿಸಿದ ಮೇಲೆ ವಿಷ್ಣುವಿನ ಭವನವಾದ ವೈಕುಂಠದಲ್ಲಿ ಸುಖಿಸುವಂತೆ ಅವರು ಸುಖಿಸಬೇಕು.

೩೫. ಎಲೈ ಭದ್ರನೇ! ಈ ದುಃಖಕ್ಕೆ ನೀನು ಕಾರಣವನ್ನು ಬೇಗನೇ ಹೇಳು. ಬುದ್ಧಿವಂತರಾದದರು ಸಮಯ ಬಂದಾಗ ಸಾವಕಾಶವನ್ನು ಮಾಡುವುದಿಲ್ಲ.

೩೬. ಲೋಮಶನು ಹೇಳಿದನು—ಪಿಶಾಚಿಯು ಈ ಮಾತನ್ನು ಕೇಳಿ ಅಳುವಿಕೆಯನ್ನು ನಿಲ್ಲಿಸಿ ನಮ್ರತೆಯಿಂದ ಬಗ್ಗಿಕೊಂಡು ದೀನವಾದ ಮಾತಿನಿಂದ ಇಂತೆಂದಿತು.

೩೭. ಪಿಶಾಚಿಯು ಹೇಳಿತು—ಗ್ರೀಷ್ಮಕಾಲದಲ್ಲಿ ಕಾಳ್ಗಿಚ್ಚಿನಿಂದ ಬೆಟ್ಟಕ್ಕೆ ಉಂಟಾದ ಬೇಗೆಯನ್ನು ಮೇಘವು ನಾಶಮಾಡುವಂತೆ ನಿನ್ನ ಈ ಮಾತು ನನ್ನ ಮೈಯ್ಯಲ್ಲೆಲ್ಲವನ್ನೂ ಆವರಿಸಿಕೊಂಡಿರುವ ಸಂತಾಪವನ್ನು ನಾಶಮಾಡುತ್ತಿದೆ.

ಯನ್ಮೇಽಸ್ತಿ ಸುಕೃತಂ ಕಿಂಚಿತ್ತೇನ ದೃಷ್ಟೋಽಸಿ ಭೋ ದ್ವಿಜ ।
ನ ಹ್ಯಸಂಚಿತಪುಣ್ಯಾನಾಂ ಸದ್ಭಿರೇಕತ್ರ ಸಂಸ್ಥಿತಿಃ ॥ ೩೮ ॥

॥ ಲೋಮಶ ಉವಾಚ ॥

ಇತ್ಯುಕ್ತ್ವಾ ಕಥಯಾಮಾಸ ಪೂರ್ವವೃತ್ತಾಂತಮಾತ್ಮನಃ ॥ ೩೯ ॥

॥ ಪಿಶಾಚ ಉವಾಚ ॥

ವಿಷ್ಣುದ್ವೇಷಪ್ರಭಾವೇನ ದಶಾಮೇತಾಮಹಂ ಗತಃ ।
ಯನ್ನಾಮಸ್ಮರಣಾನ್ಮುಕ್ತೋ ನರೋ ವಿಷ್ಣುಪದಂ ವ್ರಜೇತ್ ॥ ೪೦ ॥

ಪಾಪಿಷ್ಠಸ್ಯ ಹರೌ ತಸ್ಮಿನ್ ಮಮ ದ್ವೇಷೋಽಭವದ್ದ್ವಿಜ ।
ಯಃ ಪಾಲಯತಿ ಭೂತಾನಿ ಧರ್ಮಂ ಪಾತಿ ಜಗತ್ತ್ರಯೇ ॥ ೪೧ ॥

---

೩೮. ಎಲೈ ಬ್ರಾಹ್ಮಣನೇ! ನನ್ನಲ್ಲಿ ಸ್ವಲ್ಪವಾದರೂ ಪುಣ್ಯವಿರುವ ಕಾರಣ ದಿಂದಲೇ ನಿನ್ನನ್ನು ನಾನು ನೋಡಿದ್ದೇನೆ. ಪುಣ್ಯಮಾಡದಿದ್ದವರು ಸಜ್ಜನ ರೊಡನೆ ಕೂಡಲು ಆಗುವುದೇ ಇಲ್ಲವು.

೩೯. ಲೋಮಶನು ಹೇಳಿದನು-ಹೀಗೆಂದು ಹೇಳಿ ಆ ಪಿಶಾಚವು ತನ್ನ ಹಿಂದಿನ ಕಥೆಯೆಲ್ಲವನ್ನೂ ಕ್ರಮವಾಗಿ ಹೇಳಿತು.

೪೦. ಪಿಶಾಚಿಯು ಹೇಳಿತು-ವಿಷ್ಣುವನ್ನು ದ್ವೇಷಿಸುತ್ತ ಬಂದ ಕಾರಣದಿಂದ ನನಗೆ ಈ ರೀತಿಯಾದ ಸ್ಥಿತಿಯು ಬಂದಿತು. ಯಾವ ವಿಷ್ಣುವನ್ನು ಸ್ಮರಣೆ ಮಾಡಿದರೆ ಮನುಷ್ಯನು ಮುಕ್ತನಾಗಿ ವೈಕುಂಠವನ್ನು ಹೊಂದುವನೋ ಅಂತಹ ವಿಷ್ಣುವನ್ನು ದ್ವೇಷಿಸಿದೆನು.

೪೧. ಯಾವನು ಮೂರು ಲೋಕದ ಪ್ರಾಣಿಗಳನ್ನೂ ಕಾಪಾಡುತ್ತ ಧರ್ಮವನ್ನು ರಕ್ಷಿಸುವನೋ ಅಂತಹ ವಿಷ್ಣುವಿನಲ್ಲಿ ಪಾಪಿಷ್ಠನಾದ ನನಗೆ ದ್ವೇಷವು ಹುಟ್ಟಿತು.

ಯೋಽನ್ತರಾತ್ಮಾ ತು ಭೂತಾನಾಂ ತಸ್ಮಿನ್ ದ್ವೇಷೋ ಮಮಾಭವತ್ ।
ಕರ್ಮಣಾಂ ಫಲದೋ ಯಶ್ಚ ಸರ್ವವೇದೇಷು ಪಠ್ಯತೇ　　॥ ೪೨ ॥

ತಪೋಭಿರಿಜ್ಯತೇ ವಿಪ್ರೈಃ ಸ ಮದ್ವೇಷಪದಂ ಗತಃ ।
ತ್ಯಕ್ತಕ್ರಿಯೈಃ ಪ್ರಿಯಾರಣ್ಯೈಃ ನಿಸ್ಸಂಗೈಕಚರೈಶ್ಚ ಯಃ　　॥ ೪೩ ॥

ವೇದಾಂತೇ ಯತಿಭಿಶ್ಚಿಂತ್ಯಃ ಸ ಮದ್ವೇಷ್ಯೋ ಹರಿರ್ದ್ವಿಜ ।
ಬ್ರಹ್ಮಾದಯಸ್ಸುರಾಸ್ಸರ್ವೇ ಯೋಗಿನಸ್ಸನಕಾದಯಃ　　॥ ೪೪ ॥

ಮುಕ್ತ್ಯರ್ಥಮರ್ಚಯನ್ತೀಹ ಸ ವಿಷ್ಣುರ್ದ್ವೇಷಿತೋ ಮಯಾ ।
ಆದಿಮಧ್ಯಾವಸಾನಂ ಯೋ ವಿಶ್ವಸ್ಯಾಸ್ಯ ಸನಾತನಃ　　॥ ೪೫ ॥

ಯಸ್ಯ ನಾಸ್ತ್ಯಾದಿಮಧ್ಯಾನ್ತಂ ಸ ಮೇ ದ್ವೇಷಪಥಂ ಯಯೌ ।
ಯನ್ಮಯಾ ಸುಕೃತಂ ಕರ್ಮ ವಿಹಿತಂ ಪೂರ್ವಜನ್ಮನಿ　　॥ ೪೬ ॥

---

೪೨. ಕರ್ಮಗಳೆಲ್ಲಕ್ಕೂ ಫಲವನ್ನು ಕೊಡುವವನೆಂದು ಎಲ್ಲಾ ವೇದಗಳೂ ಯಾವನನ್ನು ಹೊಗಳುತ್ತವೆಯೋ ಯಾವನು ಎಲ್ಲಾ ಪ್ರಾಣಿಗಳಿಗೂ ಅಂತರಾತ್ಮನೋ, ಅಂತಹ ಸ್ವಾಮಿಯಲ್ಲಿ ನನಗೆ ದ್ವೇಷವು ಹುಟ್ಟಿತು.

೪೩. ಕ್ರಿಯೆಗಳನ್ನು ಮಾಡುವುದನ್ನು ಬಿಟ್ಟು ಎಲ್ಲರಿಗೂ ಪ್ರೀತಿಯನ್ನು ಉಂಟುಮಾಡುತ್ತಾ ಒಬ್ಬರ ಸಹವಾಸವನ್ನೂ ಸೇರದೆ ಇರುವವರೂ ಯೋಗಿಗಳೂ ಯಾವನನ್ನು ಧ್ಯಾನಿಸುತ್ತಾರೆಯೋ ಬ್ರಾಹ್ಮಣರು ತಪಸ್ಸಿನಿಂದಲೇ ಯಾವನನ್ನು ಪೂಜಿಸುತ್ತಾರೆಯೋ ಅವನನ್ನು ನಾನು ದ್ವೇಷಿಸಿದೆನು.

೪೪–೪೮. ವೇದಾಂತದಲ್ಲಿ ಯಾವನನ್ನು ಯತಿಗಳು ಚಿಂತಿಸುವರೋ ಅವನನ್ನು ದ್ವೇಷಿಸಿದೆನು. ಬ್ರಹ್ಮಾದಿಗಳೂ ದೇವತೆಗಳೂ ಯೋಗಿಗಳೂ ಸನಕಾದಿಗಳೂ ಮುಕ್ತಿಗೋಸ್ಕರ ಯಾವನನ್ನು ಪೂಜಿಸುವರೋ ಅಂತಹ ವಿಷ್ಣುವನ್ನು ದ್ವೇಷಿಸಿದೆನು. ಯಾವನು ಸ್ಥಿರವಾಗಿರುವನೋ ಯಾವನು ಪ್ರಪಂಚದ ಆದಿ ಮಧ್ಯ ಕೊನೆಗಳಲ್ಲಿಯೂ ಇರುವನೋ ಯಾವನಿಗೆ ಆದಿ ಮಧ್ಯ ಅಂತ್ಯಗಳು ಇಲ್ಲವೋ ಅವನು ನನ್ನ ದ್ವೇಷಕ್ಕೆ ಗುರಿಯಾದನು. ನಾನು ಪೂರ್ವಜನ್ಮದಲ್ಲಿ

ವಿಷ್ಣುದ್ವೇಷಾಗ್ನಿನಾ ದಗ್ಧಂ ತತ್ಸರ್ವಂ ಭಸ್ಮಸಾದಭೂತ್ ।
ಕಥಂಚಿದಸ್ಯ ಪಾಪಸ್ಯ ಸೀಮಾಂ ಪಶ್ಯಾಮಿ ಚೇದಹಂ ॥ ೪೭ ॥

ಮುಕ್ತ್ವಾ ನಾರಾಯಣಂ ನಾನ್ಯಂ ಸ್ಮರಯಿಷ್ಯಾಮಿ ದೇವತಾಂ ।
ವಿಷ್ಣುದ್ವೇಷಾಚ್ಚಿರಂ ಭುಕ್ತಾಃ ಮಯಾ ನರಕವೇದನಾಃ ॥ ೪೮ ॥

ನರಕಾನ್ನಿರ್ಗತಸ್ಸೋಽಹಂ ಪೈಶಾಚೀಂ ಯೋನಿಮಾಗತಃ ।
ಅಧುನಾ ಕರ್ಮವಾತೈಃ ಕೈರಪ್ಯಾನೀತಸ್ತ್ವದಾಶ್ರಮಂ ॥ ೪೯ ॥

ಯತ್ರ ತ್ವದ್ದರ್ಶನಾರ್ಕಾನ್ಮೇ ನಷ್ಟಂ ದುಃಖಮಯಂ ತಮಃ ।
ಪ್ರಾಪ್ಯತೇ ಮರಣಂ ಯತ್ರ ವಂದನಂ ಶ್ರೀಃ ಸುಖಂ ವಧೂಃ ॥ ೫೦ ॥

ಸ ತತ್ರ ನೀಯತೇ ತೇನ ಕರ್ಮಣಾ ಗಲಹಸ್ತಿನಾ ।
ಇದಾನೀಮುಚಿತಂ ಬ್ರೂಹಿ ಕರ್ಮಪೈಶಾಚ್ಯನಾಶನಂ ॥
ಪರೋಪಕಾರಕಾರ್ಯೇ ಹಿ ನ ಧನ್ಯಾ ಮಂದಗಾಮಿನಃ ॥ ೫೧ ॥

---

ಯಾವ ಸುಕೃತವನ್ನು ಮಾಡಿದ್ದೆನೋ ಅದೆಲ್ಲವೂ ಕೂಡ ಈ ವಿಷ್ಣುದ್ವೇಷವೆಂಬ ಬೆಂಕಿಯಿಂದ ಸುಟ್ಟು ಬೂದಿಯಾಯಿತು. ಹೇಗಾದರೂ ನಾನು ಈ ಪಾಪದ ಕೊನೆಯನ್ನು ಮುಟ್ಟಿದರೆ ಆ ಮೇಲೆ ಈ ನಾರಾಯಣನನ್ನು ಬಿಟ್ಟು ಬೇರೆಯಾದ ದೇವರನ್ನು ಸ್ಮರಿಸುವುದೇ ಇಲ್ಲ. ಈ ವಿಷ್ಣುವನ್ನು ದ್ವೇಷಮಾಡಿ ನಾನು ಬಹು ದಿನಗಳವರೆಗೆ ನರಕಯಾತನೆಯನ್ನು ಅನುಭವಿಸಿದೆನು.

೪೯-೫೧. ನರಕವನ್ನು ಅನುಭವಿಸಿ ಹೊರಗೆ ಬಂದು ಪಿಶಾಚಿಯ ಜನ್ಮದಲ್ಲಿ ಹುಟ್ಟಿದೆನು. ಈಗ ಯಾವುದೋ ಕರ್ಮದ ಗಾಳಿಯ ಹೊಡೆತದಿಂದ ನಿನ್ನ ಆಶ್ರಮಕ್ಕೆ ಹೊಡೆದು ತರಲ್ಪಟ್ಟೆನು. ಈಗ ಈ ನಿನ್ನ ಆಶ್ರಮದಲ್ಲಿ ನಿನ್ನ ದರ್ಶನವೆಂಬ ಸೂರ್ಯನ ದೆಸೆಯಿಂದ ನನ್ನ ದುಃಖವೆಂಬ ಕತ್ತಲೆಯು ಅಡಗಿ ಹೋಯಿತು ಯಾವ ಜಾಗದಲ್ಲಿ ಸಾಯುವುದರಿಂದ ಗೌರವವೂ, ಲಕ್ಷ್ಮಿಯು ಸುಖವೂ, ದೇವತಾಸ್ತ್ರೀಯರೂ ಸಿಕ್ಕುವರೋ ಅಂತಹ ಜಾಗಕ್ಕೆ ಈ ಕರ್ಮವು ಕತ್ತನ್ನು ಹಿಡಿದು ನೂಕಿಕೊಂಡು ಹೋಗುತ್ತದೆ. ಈಗ ಈ ಪಿಶಾಚತ್ವವು ಹೋಗುವ ಒಂದು ಕರ್ಮವನ್ನು ಹೇಳು. ಪರರಿಗೆ ಉಪಕಾರಮಾಡುವ ಕೆಲಸದಲ್ಲಿ ಸಾವಕಾಶಮಾಡುವವರು ಧನ್ಯರಾಗುವುದಿಲ್ಲ.

॥ ದೇವದ್ಯುತಿರುವಾಚ ॥

ಅಹೋ ಮುಷ್ಣಾತಿ ಮಾಯೇಯಂ ದೇವಾಸುರನೃಣಾಮಪಿ ।
ಯಯಾ ದೇವೇಷ್ವಪಿ ದ್ವೇಷೋ ಜಾಯತೇ ಧರ್ಮನಾಶನಃ ॥ ೫೨ ॥

ಸ್ರಷ್ಟಾ ಪಾಲಯಿತಾ ಹಂತಾ ಜಗತಾಂ ಯೋ ಮಹೇಶ್ವರಃ ।
ಆತ್ಮಾ ಚ ಸರ್ವಭೂತಾನಾಂ ತಂ ಮೂಢೋ ದ್ವೇಷ್ಟಿ ಕಃ ಕಥಂ ॥ ೫೩ ॥

ಭವಂತಿ ಸರ್ವಕರ್ಮಾಣಿ ಸಫಲಾನಿ ಯದರ್ಪಣಾತ್ ।
ತದ್ಭಕ್ತಿವಿಮುಖೋ ಮರ್ತ್ಯಃ ಕೋ ನ ಯಾತಿ ಹಿ ದುರ್ಗತಿಂ ॥ ೫೪ ॥

ಶ್ರುತಿಸ್ಮೃತಿಸದಾಚಾರವಿಹಿತಂ ಕರ್ಮ ಕೇವಲಂ ।
ಸೇವಿತವ್ಯಂ ಚತುರ್ವರ್ಣ್ಯೈರ್ಭಜನ್ನಾರಾಯಣಂ ಸದಾ ॥ ೫೫ ॥

---

೫೨. ದೇವದ್ಯುತಿಯು ಹೇಳಿದನು—ಯಾವ ವಿಷ್ಣುವಿನ ಮಾಯೆಯಿಂದ ದೇವತೆಗಳ ಮೇಲೆಯೂ ಕೂಡ ಧರ್ಮನಾಶಕವಾದ ದ್ವೇಷವು ಹುಟ್ಟುವುದೋ ಅಂತಹ ವಿಷ್ಣುವಿನ ಮಾಯೆಯು ದೇವತೆಗಳು, ಅಸುರರು, ಮನುಷ್ಯರನ್ನೂ ಬಿಡದೆ ಆವರಿಸುತ್ತದೆ. ಇದು ಬಹಳ ಆಶ್ಚರ್ಯವು.

೫೩. ಯಾವನು ಮಹೇಶ್ವರನೋ, ಯಾವನು ಜಗತ್ತನ್ನು ಕಾಪಾಡುವನೋ, ಸೃಷ್ಟಿಸುವನೋ, ನಾಶವನ್ನು ಮಾಡುವನೋ, ಯಾವನು ಎಲ್ಲಾ ಪ್ರಾಣಿಗಳಿಗೂ, ಆತ್ಮಸ್ವರೂಪನೋ ಅವನನ್ನು ಯಾವ ಮೂಢನು ತಾನೆ ಹೇಗೆ ದ್ವೇಷಿಸಿಯಾನು?

೫೪. ಕರ್ಮಗಳೆಲ್ಲವನ್ನೂ ಮಾಡಿದ ಮೇಲೆ ಅದನ್ನು ಯಾವ ಸ್ವಾಮಿಗೆ ಅರ್ಪಿಸುವುದರಿಂದ ಕರ್ಮಗಳು ಸಫಲವಾಗುತ್ತವೆಯೋ ಅಂತಹ ಸ್ವಾಮಿಗೆ ಪೂಜೆಮಾಡದೆ ಇರುವ ಮನುಷ್ಯನು ಯಾವನು ತಾನೇ ನರಕವನ್ನು ಹೊಂದುವುದಿಲ್ಲ!

೫೫. ಶ್ರುತಿ, ಸ್ಮೃತಿ, ಸದಾಚಾರಗಳಿಂದ ವಿಹಿತವಾಗಿರುವ ಕರ್ಮಗಳನ್ನು ಚತುರ್ವರ್ಣದವರೂ ಮಾಡಬೇಕು. ನಾರಾಯಣನನ್ನು ಯಾವಾಗಲೂ ಭಜಿಸುತ್ತಿರಬೇಕು.

ಅನ್ಯಥಾ ನಿರಯಂ ಯಾತಿ ವಿಮಾರ್ಗಾಗಮಸೇವನಾತ್ ।
ಅತೋ ವೇದವಿರುದ್ಧಾರ್ಥಂ ಶಾಸ್ತ್ರೋಕ್ತಂ ಕರ್ಮ ಸಂತ್ಯಜೇತ್ ॥ ೫೬ ॥

ಸ್ವಬುದ್ಧಿರಚಿತೈಶ್ಶಾಸ್ತ್ರೈಃ ಪ್ರತಾರ್ಯೇಹ ಚ ಬಾಲಿಶಾನ್ ।
ವಿಘ್ನಂತಿ ಶ್ರೇಯಸೋ ಮಾರ್ಗಂ ಲೋಕನಾಶಾಯ ಕೇವಲಂ ॥ ೫೭ ॥

ವಿಷ್ಣುಂ ನಿಂದಂತಿ ವೇದಾಂಶ್ಚ ತಪೋ ನಿಂದಂತಿ ಸದ್ದ್ವಿಜಂ ।
ತೇನ ತೇ ನಿರಯಂ ಯಾನ್ತಿ ಅಸಚ್ಛಾಸ್ತ್ರನಿಷೇವಣಾತ್ ॥ ೫೮ ॥

ಅಯಮೇವ ಯಥಾ ರಾಜಾ ದ್ರಾವಿಡೋ ನಿರಯಂ ಗತಃ ।
ದ್ವಿಷನ್ನಾರಾಯಣಂ ದೇವಂ ದೇವದೇವಂ ಜಗದ್ಗುರುಂ ॥ ೫೯ ॥

ತಸ್ಮಾದ್ದ್ವೇಷಂ ಹಿ ದೇವೇಷು ಗೋಷು ಚ ಬ್ರಾಹ್ಮಣೇಷು ಚ ।
ಸಂತ್ಯಜೇತ್ಪುಣ್ಯಕಾಮೋತ್ರ ವೇದಬಾಹ್ಯಾಂ ತ್ಯಜೇತ್ಕ್ರಿಯಾಂ ॥ ೬೦ ॥

---

೫೬. ಹಾಗೆ ಮಾಡದೆ ಕೆಟ್ಟ ಮಾರ್ಗದಲ್ಲಿ ಹೋಗುವುದರಿಂದ ನರಕವನ್ನು ಹೊಂದುತ್ತಾನೆ. ಆದ್ದರಿಂದ ವೇದಕ್ಕೆ ವಿರುದ್ಧವಾಗಿ ಶಾಸ್ತ್ರಗಳಲ್ಲಿ ಹೇಳಿರುವ ಕರ್ಮಗಳನ್ನು ಮಾಡಬಾರದು.

೫೭. ಕೆಲವರು ತಮ್ಮ ಬುದ್ಧಿಗೆ ಹೊಳೆದಂತೆ ಶಾಸ್ತ್ರಗಳನ್ನು ಕಲ್ಪಿಸಿ ತಿಳಿಯದವರನ್ನು ಮೋಸಪಡಿಸಿ ಶ್ರೇಯಸ್ಸಿನ ಮಾರ್ಗವನ್ನು ನಾಶಮಾಡಿ ಲೋಕವನ್ನು ನಾಶಮಾಡುತ್ತಾರೆ.

೫೮. ವಿಷ್ಣುವನ್ನು ನಿಂದಿಸುತ್ತ ತಪಸ್ಸನ್ನೂ ಬ್ರಾಹ್ಮಣರನ್ನೂ ನಿಂದಿಸುತ್ತ ಅಯೋಗ್ಯವೂ ವೇದವಿರುದ್ಧವೂ ಆದ ಶಾಸ್ತ್ರವನ್ನು ಅಧ್ಯಯನ ಮಾಡುವುದರಿಂದ ಅವರು ನರಕಕ್ಕೆ ಹೊಗುತ್ತಾರೆ.

೫೯. ಈ ದ್ರಾವಿಡ ರಾಜನು ದೇವದೇವನೂ ಜಗದ್ಗುರುವೂ ಆದ ನಾರಾಯಣನನ್ನು ದ್ವೇಷಿಸುತ್ತಾ ನರಕವನ್ನು ಹೊಂದಿದ ಹಾಗೆ ಈ ಸ್ವಾಮಿಯನ್ನು ದ್ವೇಷಿಸುವವರು ನರಕವನ್ನು ಹೊಂದುತ್ತಾರೆ.

೬೦. ಪುಣ್ಯವನ್ನು ಅಪೇಕ್ಷಿಸುವವನು ದೇವತೆಗಳಲ್ಲಿಯೂ, ಗೋವುಗಳಲ್ಲಿಯೂ ಬ್ರಾಹ್ಮಣರಲ್ಲಿಯೂ ದ್ವೇಷವನ್ನು ಬಿಡಬೇಕು. ವೇದವಿರುದ್ಧವಾದ ಕೆಲಸವನ್ನು ಬಿಡಬೇಕು.

॥ ಲೋಮಶ ಉವಾಚ ॥

ಇತ್ಯುಕ್ತ್ವಾ ಕಥಯಾಮಾಸ ಪಿಶಾಚಾಯ ಹಿತಂ ಮುನಿಃ ॥ ೬೧ ॥

॥ ದೇವದ್ಯುತಿರುವಾಚ ॥

ಪ್ರಯಾಗಂ ಗಚ್ಛ ಭೋ ಭದ್ರ ಮಾಘಮಾಸಂ ವಿಚಾರಯನ್ ।
ತತ್ರ ತೇ ನಿಶ್ಚಿತಾ ಮುಕ್ತಿಃ ಪೈಶಾಚ್ಯಾನ್ನಾತ್ರ ಸಂಶಯಃ ॥ ೬೨ ॥

ತತ್ರ ಸ್ನಾತ್ವಾ ದಿವಂ ಯಾಂತಿ ಶ್ರುತಿರೇಷಾ ಪುರಾತನೀ ।
ವಿಜಹಾತಿ ನರಸ್ತತ್ರ ಪ್ರಾಕ್ತನಂ ಕರ್ಮ ದುಷ್ಕೃತಂ ॥ ೬೩ ॥

ಪ್ರಯಾಗಸ್ನಾನತೋ ನಾನ್ಯತ್ಪುಣ್ಯಂ ತದಧಿಕಂ ಪರಂ ।
ಪ್ರಾಯಶ್ಚಿತ್ತಂ ತಪೋರೂಪಂ ದಾನರೂಪಂ ಕ್ರಿಯಾತ್ಮಕಂ ॥ ೬೪ ॥

ಯಾಗಯೋಗಾಧಿಕಂ ವಿದ್ಧಿ ಪ್ರಯಾಗಂ ಪಾಪನಾಶನಂ ।
ಸ್ವರ್ಗಾಪವರ್ಗಯೋರ್ದ್ವಾರಂ ತತ್ಪೃಥಿವ್ಯಾಮಪಾವೃತಂ ॥ ೬೫ ॥

---

೬೧. ಲೋಮಶನು ಹೇಳಿದನು-ಹೀಗೆಂದು ಹೇಳಿ ಆ ದೇವದ್ಯುತಿಯು ಆ ಪಿಶಾಚಿಗೆ ಹಿತವಾದ ಕರ್ಮವನ್ನು ಹೇಳಿದನು.

೬೨. ವೇದದ್ಯುತಿಯು ಹೇಳಿದನು–ಅಪ್ಪ! ನೀನು ಮಾಘಮಾಸ ಬರುವುದನ್ನೇ ವಿಚಾರಿಸುತ್ತಾ ಆ ಮಾಘಮಾಸದ ವೇಳೆಗೆ ಪ್ರಯಾಗಕ್ಕೆ ಹೋಗು. ಅಲ್ಲಿ ನಿನ್ನ ಪಿಶಾಚಿತನವು ಖಂಡಿತವಾಗಿಯೂ ಹೋಗುವುದು ಸಂಶಯವಿಲ್ಲ.

೬೩. ಅಲ್ಲಿ ಸ್ನಾನಮಾಡಿದರೆ ಸ್ವರ್ಗವನ್ನು ಹೊಂದುತ್ತಾರೆ. ಎಂದು ಬಹುಕಾಲದ ಶ್ರುತಿಯೇ ಹೇಳುತ್ತದೆ. ಅಲ್ಲಿನ ಸ್ನಾನಮಾಡುವುದರಿಂದ ಮನುಷ್ಯನು ತನ್ನ ಪಾಪಕರ್ಮಗಳನ್ನು ಕಳೆದುಕೊಳ್ಳುತ್ತಾನೆ.

೬೪. ಪ್ರಯಾಗದಲ್ಲಿ ಸ್ನಾನಮಾಡುವುದಕ್ಕಿಂತಲೂ ಪುಣ್ಯಕರವಾದುದು ಮತ್ತೊಂದಿಲ್ಲ. ಅದು ಬಹಳ ದೊಡ್ಡದಾದ ಪ್ರಾಯಶ್ಚಿತ್ತವು. ತಪಸ್ಸಿನ ರೂಪವಾದುದು. ಅಲ್ಲಿ ಮಾಡುವ ದಾನವೂ ಕ್ರಿಯಾರೂಪವಾದ ತಪಸ್ಸಾಗಿರುವುದು.

೬೫. ಆ ಪ್ರಯಾಗಸ್ನಾನವು ಯಾಗ ಯೋಗಗಳಿಗಿಂತಲೂ ಹೆಚ್ಚಿನದು. ಪಾಪನಾಶಕರವಾದುದು. ಸ್ವರ್ಗಮೋಕ್ಷಗಳಿಗೆ ಬಾಗಿಲು. ಭೂಮಿಯಲ್ಲಿ ಸ್ವರ್ಗಮೋಕ್ಷಗಳಿಗೆ ತೆಗೆದಿರುವ ಬಾಗಿಲು ಈ ಪ್ರಯಾಗವೊಂದೇ ಆಗಿರುವುದು.

ಸಿತಾಸಿತೋದವೇಣೀ ಯಾ ತಾಂ ಹಿತ್ವಾ ಭುವಿ ನಾಪರಾ ।
ಪಾಪಾನ್ನಿಗಡಬಂಧಸ್ಯ ಚ್ಛೇದನೇ ವೈ ಕುಠಾರಿಕಾ ॥ ೬೬ ॥

ಕ್ವ ವಿಷ್ಣುಃ ಸೂರ್ಯತೇಜೋಗ್ನಿರ್ಗಂಗಾಯಮುನಸಂಗಮಃ ।
ಕ್ವ ವರಾಕೀ ನೃಣಾಂ ತುಚ್ಛಪಾಪರಾಶಿಸ್ತೃಣಾಹುತಿಃ ॥ ೬೭ ॥

ಮಲೀಮಸಘನಧ್ವಂಸೀ ಯಥಾ ನಭಸಿ ಚಂದ್ರಮಾಃ ।
ಭಾತಿ ಪಾಪಕ್ಷಯಾದೂರ್ಧ್ವಂ ನರೋ ವೇಣೀಜಲಾಪ್ಲುತಃ ॥ ೬೮ ॥

ಸಿತಾಸಿತಸ್ಯಮಾಹಾತ್ಮ್ಯಮಹಂ ವಕ್ತುಂ ನ ತೇ ಕ್ಷಮಃ ।
ಯತ್ತ್ರೋಯಕಣಸಂಸ್ಪೃಷ್ಟೋ ಮುಕ್ತಃ ಕೇರಲಕೋ ದ್ವಿಜಃ ॥ ೬೯ ॥

---

೬೬. ಗಂಗಾ ಯಮುನೆಗಳ ಪ್ರವಾಹವನ್ನು ಬಿಟ್ಟರೆ ಭೂಮಿಯಲ್ಲಿ ಮೋಕ್ಷ ವನ್ನು ಕೊಡತಕ್ಕದ್ದು ಮತ್ತೊಂದಿಲ್ಲ. ಪಾಪವನ್ನು ಮಾಡಿ ಆ ಸಂಕೋಲೆ ಯಿಂದ ಕಟ್ಟಲ್ಪಟ್ಟವನಿಗೆ ಆ ಸರಪಣಿಯನ್ನು ಕಡಿಯುವುದರಲ್ಲಿ ಇದು ಕೊಡಲಿ ಯಾಗಿದೆ.

೬೭. ವಿಷ್ಣುವಿನ ತೇಜಸ್ಸೆಷ್ಟರದು? ಸೂರ್ಯನ ತೇಜಸ್ಸು, ಅಗ್ನಿಯ ತೇಜಸ್ಸುಗಳೆಷ್ಟರವು? ಗಂಗಾ ಯಮುನಾಗಳ ಸಂಗಮವು ಎಷ್ಟು ಮಹತ್ತರ ವಾದುದು? ಅಲ್ಪವಾದ ಈ ಮನುಷ್ಯರ ಪಾಪರಾಶಿಯೆಂಬುದು ಎಷ್ಟು ಚಿಕ್ಕದು? ಇದು ಬೆಂಕಿಗೆ ಒಂದು ಹುಲ್ಲುಕಡ್ಡಿಯನ್ನು ಹಾಕಿದಂತೆ ಅಲ್ಲಿ ಸ್ನಾನಮಾಡು ವುದರಿಂದ ನಾಶವಾಗಿ ಹೋಗುತ್ತದೆ.

೬೮. ಆ ಕಪ್ಪಗಿರುವ ಕತ್ತಲೆಯನ್ನು ನಾಶಮಾಡುವ ಚಂದ್ರನು ಆಕಾಶ ದಲ್ಲಿ ಪ್ರಕಾಶಿಸುವಂತೆ ಈತನು ಗಂಗಾ ಯಮುನೆಗಳ ಸಂಗಮದಲ್ಲಿ ಸ್ನಾನಮಾಡಿ ಪಾಪವನ್ನು ಕಳೆದುಕೊಂಡು ಅನಂತರ ಪ್ರಕಾಶಿಸುತ್ತಾನೆ.

೬೯. ಈ ಗಂಗೆ ಯಮುನೆಗಳ ಮಹಿಮೆಯನ್ನು ನಾನು ಹೇಳುವುದಕ್ಕೆ ಶಕ್ತಿ ಸಾಲದು. ಈ ಗಂಗೆಯಮುನೆಗಳ ನೀರಿನ ತುಂತುರನ್ನು ಮುಟ್ಟಿ ದೊಡನೆಯೇ ಕೇರಳದೇಶದ ದ್ವಿಜನು ಮುಕ್ತನಾದನು.

|| ಲೋಮಶ ಉವಾಚ ||

ಇತಿ ವಾಕ್ಯಂ ಮುನೇಃ ಶ್ರುತ್ವಾ ಪಿಶಾಚಸ್ತುಷ್ಟಮಾನಸಃ |
ಮುಕ್ತದುಃಖ ಇವ ಪ್ರೀತಃ ಪಪ್ರಚ್ಛ ಪ್ರಣಯಾನ್ಮುನಿಂ ॥ ೭೦ ॥

|| ಪಿಶಾಚ ಉವಾಚ ||

ಕಥಂ ಕೇರಲದೇಶೀಯೋ ದ್ವಿಜೋ ಮುಕ್ತೋ ಮಹಾಮುನೇ |
ಏತಂ ಕಥಯ ವೃತ್ತಾಂತಂ ಸಂಸೃಜ್ಯ ಕರುಣಾಂ ಮಯಿ ॥ ೭೧ ॥

|| ದೇವದ್ಯುತಿರುವಾಚ ||

ಪಿಶಾಚ ಶೃಣು ಪುಣ್ಯಾನ್ಮೇ ಕಥಾಂ ಕಥಯತಶ್ಶುಭಾಂ |
ಕೇರಲೇ ವಸುನಾಮಾ ಚ ಬ್ರಾಹ್ಮಣೋ ವೇದಪಾರಗಃ ॥ ೭೨ ॥

ದಾಯಾದ್ಯೈರ್ಹೃತಭೂಮಿಸ್ತು ನಿರ್ಧನೋ ಬಂಧುವರ್ಜಿತಃ |
ಜನ್ಮಭೂಮಿಂ ಪರಿತ್ಯಜ್ಯ ಮಹಾದುಃಖೇನ ನಿರ್ಗತಃ || ೭೩ ||

---

೭೦. ಲೋಮಶನು ಹೇಳಿದನು—ದೇವದ್ಯುತಿಯ ಈ ಮಾತನ್ನು ಕೇಳಿ ಪಿಶಾಚಿಗೆ ಬಹಳ ಸಂತೋಷವಾಯಿತು. ದುಃಖವನ್ನು ಕಳೆದುಕೊಂಡಂತೆಯೇ ಸಂತೋಷಪಡುತ್ತಾ ಆ ಋಷಿಯನ್ನು ನಮ್ರತೆಯಿಂದ ಇಂತೆಂದು ಕೇಳಿತು.

೭೧. ಪಿಶಾಚಿಯು ಹೇಳಿತು—ಎಲೈ ಮುನಿಯೆ! ಕೇರಲದೇಶದ ಬ್ರಾಹ್ಮಣನು ಹೇಗೆ ಮುಕ್ತಿಯನ್ನು ಹೊಂದಿದನು? ನನ್ನಲ್ಲಿ ದಯೆಯಿಟ್ಟು ಈ ವೃತ್ತಾಂತವನ್ನು ಹೇಳು.

೭೨. ದೇವದ್ಯುತಿಯು ಹೇಳಿದನು—ಎಲೈ ಪಿಶಾಚಿಯೆ! ಉತ್ತಮವಾದ ಕಥೆಯನ್ನು ಹೇಳುತ್ತೇನೆ, ಕೇಳು. ಕೇರಲದೇಶದಲ್ಲಿ ವಸುವೆಂಬ ಒಬ್ಬ ವೇದವನ್ನು ಓದಿದ ಬ್ರಾಹ್ಮಣನಿದ್ದನು.

೭೩. ಅವನ ಭೂಮಿಯೆಲ್ಲವನ್ನೂ ದಾಯಾದಿಗಳು ಕಿತ್ತುಕೊಂಡರು. ಹಣವಿಲ್ಲದೆ ಹೋಯಿತು. ಬಂಧುಗಳು ಕೈಬಿಟ್ಟರು ಆಗ ಅವನ ಜನ್ಮಸ್ಥಳವನ್ನು ಬಿಟ್ಟು ಬಹು ದುಃಖಪಡುತ್ತ ಹೊರಟನು.

**ದೇಶಾದ್ದೇಶಂ ಪರಿಭ್ರಮ್ಯ ಕಾಲೇನ ಮಹತಾ ಪುನಃ |**
**ಪ್ರವಿಶ್ಯ ಸ ಮಹಾರಣ್ಯಮೀಷದ್ವ್ಯಾಧಿಪ್ರಪೀಡಿತಃ ॥ ೭೪ ॥**

**ಗಚ್ಛಂಸ್ತೀರ್ಥಾಂತರಂ ಶ್ರಾಂತಃ ಕ್ಷುತ್‌ಕ್ಷಾಮೋ ವಿಂಧ್ಯಪರ್ವತೇ |**
**ದುರ್ಭಿಕ್ಷೇಣ ಮೃತಿಂ ಲೇಭೇ ನ ತದಾ ಚೋರ್ಧ್ವದೈಹಿಕೀಂ ॥ ೭೫ ॥**

**ತೇನ ಕರ್ಮವಿಪಾಕೇನ ತತ್ರೈವ ಗಿರಿಗಹ್ವರೇ |**
**ಪ್ರೇತೀಭೂತಶ್ಚಿರಂ ಕಾಲಮನುವಾಸ ನಿರ್ಜನೇ ವನೇ ॥ ೭೬ ॥**

**ಶೀತಾತಪಪರಿಕ್ಲಿಷ್ಟೋ ನಿರಾಹಾರೋ ನಿರೂದಕಃ |**
**ದಿಗಂಬರೋಽನುಪಾನತ್ಕೋ ಹಾಹೇತಿ ಕಥಯನ್ ಗಿರಂ ॥ ೭೭ ॥**

**ಇತಸ್ತತಃ ಪರಿಭ್ರಮ್ಯ ವಾಯುಭೂತಸ್ಸ ಕೇರಲಃ |**
**ದ್ವಿಜೋ ನ ಶರಣಂ ಲೇಭೇ ನ ಸುಖಂ ಕುತ್ರ ಚಿತ್ತದಾ ॥ ೭೮ ॥**

---

೭೪. ಬಹುಕಾಲದವರೆಗೂ ದೇಶದೇಶದಲ್ಲೆಲ್ಲಾ ಸುತ್ತಿದನು. ಒಂದು ಸಾರಿ ಒಂದು ದೊಡ್ಡ ಅರಣ್ಯಕ್ಕೆ ಹೋದನು. ಅಲ್ಲಿ ಸ್ವಲ್ಪ ರೋಗವು ಪ್ರಾಪ್ತವಾಯಿತು.

೭೫. ತೀರ್ಥಗಳಿಗೆ ಹೋಗುತ್ತ ಹಸಿವು ಬಾಯಾರಿಕೆಗಳಿಂದ ಬಳಲಿ ಆ ವಿಂಧ್ಯಪರ್ವತದ ಸಮೀಪದಲ್ಲಿ ದುರ್ಭಿಕ್ಷದಿಂದ ಏನೂ ಸಿಕ್ಕದೆ ಮರಣಹೊಂದಿದನು. ಆತನಿಗೆ ಅಪರ ಕರ್ಮಗಳಾವುವೂ ನಡೆಯಲಿಲ್ಲ.

೭೬. ಆ ಕರ್ಮದ ಫಲದಿಂದ ಆ ಬೆಟ್ಟದ ಗುಹೆಯಲ್ಲಿಯೇ ಪ್ರೇತನಾಗಿದ್ದುಕೊಂಡು ಆ ನಿರ್ಜನವಾದ ಕಾಡಿನಲ್ಲಿಯೇ ಅಲೆಯುತ್ತಿದ್ದನು.

೭೭. ಆ ಪಿಶಾಚಿಯು ಬಿಸಿಲು ಚಳಿಗಳಿಂದ ತೊಂದರೆಪಡುತ್ತ ಬಟ್ಟೆಯಿಲ್ಲದೆ, ಕಾಲಿಗೆ ಕೆರವಿಲ್ಲದೆ, ಅನ್ನ ನೀರುಗಳಿಲ್ಲದೆ ಹಾ ಹಾ ಎಂದು ಕೂಗಿಕೊಳ್ಳುತ್ತ ಅಲೆಯುತ್ತಿದ್ದಿತು.

೭೮. ಆ ಕೇರಲನು ವಾಯುವಿನ ರೂಪವನ್ನು ಹೊಂದಿ ಎಲ್ಲಾ ಕಡೆಯಲ್ಲಿಯೂ ಅಲೆಯುತ್ತಲಿದ್ದನು. ಯಾರೂ ರಕ್ಷಕರು ಸಿಕ್ಕಲೇ ಇಲ್ಲ. ಸುಖವೆಂಬುದಂತೂ ಸ್ವಲ್ಪವೂ ಇಲ್ಲವೇ ಇಲ್ಲ.

ಸ ಶೋಚತಿ ಸ್ವ ದುಃಖಾರ್ತೋ ನೈವ ಪಶ್ಯತಿ ಸದ್ಗತಿಂ ।
ಸರ್ವದಾದತ್ತದಾನೋಽಸೌ ಭುಂಕ್ತೇ ಸ್ವಕರ್ಮಣಃ ಫಲಂ　　|| ೭೯ ||

ಹವಿರ್ಜುಹ್ವತಿ ನಾಗ್ನೌ ಯೇ ಗೋವಿಂದಂ ನಾರ್ಚಯಂತಿ ಚ
ಭಜಂತಿ ನಾತ್ಮವಿದ್ಯಾಂ ಯೇ ಸುತೀರ್ಥವಿಮುಖಾಶ್ಚ ಯೇ　　|| ೮೦ ||

ಸುವರ್ಣಂ ವಸ್ತ್ರತಾಂಬೂಲಂ ರತ್ನಮನ್ನಂ ಫಲಂ ಜಲಂ ।
ಆರ್ತೇಭ್ಯೋ ನ ಪ್ರಯಚ್ಛಂತಿ ಸರ್ವೇ ತೇಽಕೃತದಾನಕಾಃ　　|| ೮೧ ||

ಬ್ರಹ್ಮಸ್ವಂ ಚ ಪರಸ್ವಂ ಚ ಸ್ತ್ರೀಧನಾನಿ ಹರಂತಿ ಯೇ ।
ಬಲೇನ ಛದ್ಮನಾ ವಾಪಿ ಧೂರ್ತಾಶ್ಚ ಪರವಂಚಕಾಃ　　|| ೮೨ ||

ದಾಂಭಿಕಾಃ ಕುಹಕಾಶ್ಚೋರಾ ಯೇ ಚಾನ್ಯೇ ಬಕವೃತ್ತಯಃ ।
ಬಾಲವೃದ್ಧಾತುರಸ್ತ್ರೀಷು ನಿರ್ದಯಾಸ್ಸತ್ಯವರ್ಜಿತಾಃ　　|| ೮೩ ||

---

೭೯. ದುಃಖದಿಂದ ಕೂಡಿಕೊಂಡು ಅಳುತ್ತಿದ್ದಿತು. ಒಳ್ಳೆಯ ಗತಿಯೆಂಬುದೇ ಅದಕ್ಕಿರಲಿಲ್ಲ ಯಾವಾಗಲೂ ದಾನವನ್ನು ತೆಗೆದುಕೊಳ್ಳುತ್ತಿದ್ದುದರಿಂದ ಅದರ ಫಲವನ್ನು ಅನುಭವಿಸುತ್ತಿದ್ದನು.

೮೦-೮೧. ಯಾರು ಅಗ್ನಿಯಲ್ಲಿ ಹೋಮ ಮಾಡುವುದಿಲ್ಲವೋ ಯಾರು ಗೋವಿಂದನನ್ನು ಪೂಜಿಸುವುದಿಲ್ಲವೋ ಯಾರು ವೇದಾಂತವನ್ನು ಓದುವುದಿಲ್ಲವೋ ಯಾರು ತೀರ್ಥಯಾತ್ರೆಗಳನ್ನು ಮಾಡುವುದಿಲ್ಲವೋ, ಯಾರು ಚಿನ್ನ ಬಟ್ಟೆ, ತಾಂಬೂಲ, ರತ್ನ, ಅನ್ನ, ಹಣ್ಣು, ನೀರು ಇವನ್ನು ತೊಂದರೆಪಡುತ್ತಿರುವವರಿಗೆ ಕೊಡುವುದಿಲ್ಲವೋ ಇವರಿಗೆಲ್ಲಾ ದಾನಮಾಡದವರೆಂದು ಹೆಸರು.

೮೨ ಬ್ರಾಹ್ಮಣನ ಪದಾರ್ಥ, ಪರರ ಪದಾರ್ಥ, ಹೆಂಗಸರ ಪದಾರ್ಥ ಇವನ್ನು ಯಾರು ಬಲಾತ್ಕಾರದಿಂದಾಗಲಿ, ಮೋಸದಿಂದಾಗಲಿ ತೆಗೆದುಕೊಳ್ಳುತ್ತಾರೆಯೋ, ಅವರು ಧೂರ್ತರು ಪರವಂಚಕರು.

೮೩. ಡಂಭಾಚಾರದಿಂದಿರುವವರು, ಕುಹಕಿಗಳು, ಕಳ್ಳರು, ಬಕನಂತೆ ಕಪಟವಾಗಿರುವವರು, ಹೆಂಗಸರು ಮಕ್ಕಳು ಮುದುಕರಲ್ಲಿ ನಿರ್ದಯವಾಗಿರುವವರು, ಸತ್ಯವನ್ನಾಡದೇ ಇರುವವರು, ಇವರೆಲ್ಲರೂ ಪಾಪಿಗಳು.

ಅಗ್ನಿದಾ ಗರದಾ ಯೇ ಚ ಯೇ ಚಾನ್ಯೇ ಕೂಟಸಾಕ್ಷಿಣಃ ।
ಅಗ ಮ್ಯಾಗಾಮಿನಸ್ಸರ್ವೇ ಯೇ ಚಾನ್ಯೇ ಗ್ರಾಮಯಾಜಕಾಃ ॥ ೮೪ ॥

ಪಿತೃಮಾತೃಸ್ನುಷಾಪತ್ಯಸ್ವದಾರತ್ಯಾಗಿನಶ್ಚ ಯೇ ।
ಯೇ ಕದರ್ಯಾಶ್ಚ ಯೇ ಲುಬ್ಧಾ ನಾಸ್ತಿಕಾ ಧರ್ಮದೂಷಕಾಃ ॥ ೮೫ ॥

ತ್ಯಜಂತಿ ಸ್ವಾಮಿನಂ ಯುದ್ಧೇ ತ್ಯಜಂತಿ ಶರಣಾಗತಂ ।
ಗವಾಂ ಭೂಮೇಶ್ಚ ಹರ್ತಾರೋ ಯೇ ಚಾನ್ಯೇ ರತ್ನದೂಷಕಾಃ ॥ ೮೬ ॥

ಮಹಾಕ್ಷೇತ್ರೇಷು ಸರ್ವೇಷು ಪ್ರತಿಗ್ರಹರತಾಶ್ಚ ಯೇ ।
ಪರದ್ರೋಹರತಾ ಯೇ ಚ ತಥಾ ಚ ಪ್ರಾಣಿಹಿಂಸಕಾಃ ॥ ೮೭ ॥

ಪರಾಪವಾದಿನಃ ಪಾಪಾ ದೇವತಾಗುರುನಿಂದಕಾಃ ।
ಕುಪ್ರತಿಗ್ರಾಹಿಣಃ ಸರ್ವೇ ಸಂಭವಂತಿ ಪುನಃ ಪುನಃ ॥ ೮೮ ॥

ಪ್ರೇತರಾಕ್ಷಸಪೈಶಾಚತಿರ್ಯಗ್ವೃಕ್ಷಕುಯೋನಿಷು ।
ನ ತೇಷಾಂ ಸುಖಲೇಶೋಽಸ್ತಿ ಇಹಲೋಕೇ ಪರತ್ರ ಚ ॥ ೮೯ ॥

---

೮೪-೮೯. ಮನೆಗೆ ಬೆಂಕಿ ಹಾಕುವವರು, ವಿಷ ಹಾಕುವವರು, ಸುಳ್ಳು ಸಾಕ್ಷಿ ಹೇಳುವವರು, ತಾನು ರಮಿಸಬಾರದವರಲ್ಲಿ ರಮಿಸುವವರು, ಗ್ರಾಮಕ್ಕೆ ಪುರೋಹಿತರಾದವರು, ತಾಯಿ ತಂದೆ ಸೊಸೆ ಮಕ್ಕಳು ಹೆಂಡತಿ ಇವರನ್ನು ಬಿಟ್ಟುಬಿಟ್ಟವರು, ಕೃಪಣರು, ಲೋಭಿಗಳು, ನಾಸ್ತಿಕರು, ಧರ್ಮನಿಂದಕರು, ಯುದ್ಧದಲ್ಲಿ ತನ್ನ ಸ್ವಾಮಿಯನ್ನು ಬಿಟ್ಟುಬಿಡುವವರು, ಶರಣಾಗತರನ್ನು ಬಿಟ್ಟು ಬಿಡುವವರು, ಗೋಮಾಳವನ್ನು ಕದಿಯುವವರು, ಉತ್ತಮ ಪದಾರ್ಥವನ್ನು ದೂಷಿಸುವವರು, ಮಹಾಕ್ಷೇತ್ರಗಳಲ್ಲಿ ದಾನ ತೆಗೆದುಕೊಳ್ಳುವವರು, ಪರರಿಗೆ ದ್ರೋಹಮಾಡುವವರು, ಪ್ರಾಣಿಹಿಂಸಕರು, ಪರರ ಮೇಲೆ ಅಪವಾದವನ್ನು ಹೊರಿಸುವವರು, ದೇವತೆಗಳನ್ನೂ ಗುರುಗಳನ್ನೂ ನಿಂದಿಸುವವರು, ಕೆಟ್ಟ ಪದಾರ್ಥಗಳ ದಾನವನ್ನು ತೆಗೆದುಕೊಳ್ಳುವವರು, ಇವರೆಲ್ಲರೂ ಪ್ರೇತ, ರಾಕ್ಷಸ, ಪೈಶಾಚ, ಕ್ರಿಮಿ, ಕೀಟ, ಮರ ಈ ಜಾತಿಗಳಲ್ಲಿ ಮತ್ತೆ ಮತ್ತೆ ಹುಟ್ಟುತ್ತಾರೆ. ಅಂತಹವರಿಗೆ ಈ ಲೋಕದಲ್ಲಿಯಾಗಲೀ ಪರಲೋಕದಲ್ಲಿಯಾಗಲೀ ಸ್ವಲ್ಪವೂ ಸುಖವಿರುವುದಿಲ್ಲ.

ತಸ್ಮಾತ್ತ್ಯಕ್ತ್ವಾ ನಿಷಿದ್ಧಾರ್ಥಂ ವಿಹಿತಂ ಕರ್ಮ ಚಾಚರೇತ್ |
ಯಜ್ಞಂ ದಾನಂ ತಪಸ್ತೀರ್ಥಂ ಮಂತ್ರಂ ದೇವಂ ಗುರುಂ ಭಜೇತ್ ॥ ೯೦ ॥

ವಿಪಾಕಂ ಕರ್ಮಣೋ ದೃಷ್ಟ್ವಾ ಯೋನಿಕೋಟಿಷು ದುಸ್ತರಂ |
ಚತುರ್ಭಿರಪಿ ವರ್ಣೈಸ್ತು ಸೇವ್ಯೋ ಧರ್ಮೋ ನಿರಂತರಂ ॥ ೯೧ ॥

॥ ಲೋಮಶ ಉವಾಚ ॥

ಇತಿ ಪ್ರೇತಗತಿಂ ದೃಷ್ಟ್ವಾ ಪಾಪಬೀಜೋತ್ಥಿತಾಂ ಹಿ ಸಃ |
ಕೃತ್ವಾ ಧರ್ಮೋಪದೇಶಂ ಚ ಪುನಸ್ತಸ್ಮೈ ದ್ವಿಜೋಬ್ರವೀತ್ ॥ ೯೨ ॥

॥ ದೇವದ್ಯುತಿರುವಾಚ ॥

ಇತ್ಥಂ ಸ ಕೇರಳಃ ಪ್ರೇತೋ ವರ್ತಮಾನೋ ಗಿರೌ ತದಾ |
ಅತಿವಾಹ್ಯ ಚಿರಂ ಕಾಲಮಪಶ್ಯತ್ಪಥಿಕಂ ಪಥಿ ॥ ೯೩ ॥

ವಹಂತಂ ದ್ವಿಕರಂಡಂ ಚ ವೇಣೀಪಾನೀಯಭಾಂಡಕಂ |
ಗಾಯಂತಂ ಪ್ರಮುದಾ ದೇವಂ ಪುಣ್ಯಶ್ಲೋಕಂ ಜನಾರ್ದನಂ ॥ ೯೪ ॥

---

೯೦-೯೧. ಆದ್ದರಿಂದ ಕೆಟ್ಟವುಗಳನ್ನು ಬಿಟ್ಟುಬಿಟ್ಟು ಯೋಗ್ಯವಾದ ಕರ್ಮಗಳನ್ನು ಮಾಡಬೇಕು. ಯಜ್ಞ, ದಾನ, ತಪಸ್ಸು, ತೀರ್ಥ, ಮಂತ್ರ, ದೇವರು, ಗುರು. ಇವರನ್ನು ಸೇವಿಸಬೇಕು. ಆದ್ದರಿಂದ ಈ ನಾಲ್ಕು ವರ್ಣದವರೂ ಕರ್ಮದ ಕೆಟ್ಟ ಸ್ಥಿತಿಯನ್ನೂ ಕೆಟ್ಟ ಜನ್ಮದಲ್ಲಿ ಹುಟ್ಟುವಿಕೆಯನ್ನೂ ನೋಡಿ ಯಾವಾಗಲೂ ಧರ್ಮವನ್ನು ಸೇವಿಸಬೇಕು.

೯೨. ಲೋಮಶನು ಹೇಳಿದನು—ಆ ಬ್ರಾಹ್ಮಣನು ಪಾಪಬೀಜದಿಂದ ಹುಟ್ಟಿರುವ ಆ ಪ್ರೇತದ ಸ್ಥಿತಿಯನ್ನು ನೋಡಿ ಅದಕ್ಕೆ ಧರ್ಮೋಪದೇಶವನ್ನು ಮಾಡಿ ಮತ್ತೆ ಇಂತೆಂದು ಹೇಳಿದನು.

೯೩ ದೇವದ್ಯುತಿಯು ಹೇಳಿದನು—ಈ ರೀತಿಯಾಗಿ ಆ ಕೇರಳ ಪ್ರೇತವು ಆ ಬೆಟ್ಟದಲ್ಲಿರುತ್ತಿರಲು ಕೆಲವು ಕಾಲ ಕಳೆಯಿತು. ಅನಂತರ ದಾರಿಯಲ್ಲಿ ಬರುತ್ತಿದ್ದ ಒಬ್ಬ ಪ್ರಯಾಣಿಕನನ್ನು ನೋಡಿತು.

೯೪. ಅವನು ಎರಡು ಗಡಿಗೆಗಳಲ್ಲಿ ಗಂಗೆಯಮುನೆಗಳ ನೀರನ್ನು ತುಂಬಿಕೊಂಡು ಅದನ್ನು ಅಡ್ಡೆಯಲ್ಲಿ ಹೊತ್ತುಕೊಂಡು ಜನಾರ್ದನನನ್ನು ಸ್ತುತಿಸುತ್ತ ಬರುತ್ತಿದ್ದನು.

ತಂ ದೃಷ್ಟ್ವಾ ಸಹಸಾ ಪ್ರೇತೋ ಮಾರ್ಗರೋಧಂ ಚಕಾರ ವೈ ।
ದರ್ಶಯಾಮಾಸ ಚಾತ್ಮಾನಂ ಮಾ ಭೈಷೀರಿತ್ಯುವಾಚ ಹ ॥ ೯೫ ॥

ಪಾನೀಯಂ ಪಾತುಮಿಚ್ಛಾಮಿ ತ್ವತ್ತಃ ಕಾರ್ಪಟಿಕೋತ್ತಮ ।
ನ ದಾಸ್ಯಸಿ ಜಲಂ ಚೇನ್ಮಾಂ ಪ್ರಾಣಾ ಯಾಸ್ಯಂತಿ ಮೇ ದೃಢಂ ॥
ಇತಿ ಪ್ರೇತವಚಶ್ಶ್ರುತ್ವಾ ಪಾಂಥಃ ಪ್ರತ್ಯಾಹ ಕೌತುಕಾತ್ ॥ ೯೬ ॥

॥ ಕಾರ್ಪಟಿಕ ಉವಾಚ ॥

ಕಸ್ತ್ವಂ ದುಃಖಾಭಿಭೂತಸ್ತು ಕೃಶೋ ಮ್ಲಾನೋ ದಿಗಂಬರಃ ।
ಜೀವಶೇಷೋ ಮುಮೂರ್ಷುಶ್ಚ ವಿಕೃತೋ ಭಯವರ್ಧನಃ ॥ ೯೭ ॥

ನವಧೂಮಮಯಾಕಾರಶ್ಚಂಚಲಶ್ಚಲಲೋಚನಃ ।
ಪದ್ಭ್ಯಾಮಸ್ಪೃಷ್ಟಭೂಮಿಸ್ತ್ವಂ ನಿರ್ಮಾಂಸೋದರಬಾಹುಕಃ ॥ ೯೮ ॥

---

೯೫. ಆ ಕೇರಳ ಪ್ರೇತವು ಅವನನ್ನು ನೋಡಿ ದಾರಿಯಲ್ಲಿ ಅಡ್ಡಗಟ್ಟಿ ಕೊಂಡಿತು. ಮತ್ತು ತನ್ನನ್ನು ತೋರಿಸಿಕೊಳ್ಳುತ್ತ ಹೆದರ ಬೇಡವೆಂದು ಎನ್ನುತ್ತಿದ್ದಿತು.

೯೬. ಎಲೈ ಪ್ರಯಾಣಿಕನೇ ! ನೀರನ್ನು ಕೊಡು. ಕುಡಿಯಲು ಬಯಸುತ್ತೇನೆ. ನೀನು ನೀರನ್ನು ಕೊಡದಿದ್ದರೆ ನನ್ನ ಪ್ರಾಣಗಳು ಹೋಗು ತ್ತವೆ. ಖಂಡಿತ ಎಂದಿತು. ಪ್ರೇತದ ಈ ಮಾತನ್ನು ಕೇಳಿ ಪ್ರಯಾಣಿಕನು ಆಶ್ಚರ್ಯಪಟ್ಟು ಇಂತೆಂದನು.

೯೭. ಅಡ್ಡೆಯ ನೀರಿನ ಪ್ರಯಾಣಿಕನು ಹೇಳಿದನು–ನಿನಾರು? ದುಃಖ ವನ್ನೇಕೆ ಪಡುತ್ತಿದ್ದಿಯೆ ! ಕೃಶನಾಗಿಯೂ, ಕಾಂತಿಯಿಲ್ಲದೆಯೂ, ದಿಗಂಬರ ನಾಗಿಯೂ ಇದ್ದೀಯೆ ? ಕಾರಣವೇನು ? ಜೀವಹೋಗುವಂತಿದ್ದೀಯೆ. ಮೂರ್ಛೆ ಬರುವಂತಿದ್ದಿಯೇ. ವಿಕಾರವಾಗಿದ್ದೀಯೆ. ನೋಡಿದರೆ ಭಯವಾಗುವಂತಿದ್ದೀಯೆ.

೯೮. ಹೊಸಹೊಗೆಯಂತಿದ್ದೀಯೆ. ಕಣ್ಣುಗಳು ಚಲಿಸುತ್ತಿವೆ. ಕಾಲನ್ನು ನೆಲದ ಮೇಲೆ ಇಟ್ಟಿಲ್ಲ. ಹೊಟ್ಟೆಯಲ್ಲಿಯೂ ತೋಳುಗಳಲ್ಲಿಯೂ ಮಾಂಸಗಳಿಲ್ಲ.

|| ದೇವದ್ಯುತಿರುವಾಚ ||

ಇತಿ ತದ್ವಚನಂ ಶ್ರುತ್ವಾ ಪ್ರೇತೋ ವಾಕ್ಯಮಥಾಬ್ರವೀತ್ || ೯೯ ||

|| ಪ್ರೇತ ಉವಾಚ ||

ಶೃಣು ಧಾರ್ಮಿಕ ತೇ ವಚ್ಮಿ ಯೇನಾಹಮೀದೃಶೋಽಭವಂ ।
ಬ್ರಾಹ್ಮಣೋಽದತ್ತದಾನೋಽಹಂ ಲೋಭೀ ಚ ಮಲಿನಕ್ರಿಯಃ || ೧೦೦ ||

ಪರಾನ್ನೇನ ಸದಾ ಪುಷ್ಟ ಏಕಾಕೀ ಮಿಷ್ಟಭುಕ್ ಸದಾ ।
ಮಯಾ ದತ್ತಾ ನ ಭಿಕ್ಷಾಪಿ ಹನ್ತಕಾರೋ ನ ಪುಷ್ಕಲಃ || ೧೦೧ ||

ನ ಕೃತೋ ವೈಶ್ವದೇವಶ್ಚ ಪ್ರಕ್ಷಿಪ್ತೋ ನ ಬಹಿರ್ಬಲಿಃ ।
ಭೂತಾನಾಂ ತು ತೃಷಾರ್ತಾನಾಂ ನ ಹೃತಾ ಪಯಸಾ ತೃಷಾ || ೧೦೨ ||

ಕದಾಚಿತ್ಪಿತರೋ ನೈವ ತರ್ಪಿತಾ ಅಟತಾ ಮಹೀಂ ।
ನ ಚ ಶ್ರಾದ್ಧಂ ಕೃತಂ ಕ್ವಾಪಿ ಪೂಜಿತಾ ನೈವ ದೇವತಾಃ || ೧೦೩ ||

---

೯೯. ದೇವದ್ಯುತಿಯು ಹೇಳಿದನು–ಆ ಪ್ರಯಾಣಿಕನ ಮಾತನ್ನು ಕೇಳಿ ಪ್ರೇತವು ಇಂತೆಂದಿತು.

೧೦೦. ಪ್ರೇತವು ಹೇಳಿತು–ಎಲೈ ಧಾರ್ಮಿಕನೆ ! ನಾನು ಈ ರೀತಿಯಾಗಿ ಏತಕ್ಕೆ ಆದೆನೆಂಬುದನ್ನು ಹೇಳುತ್ತೇನೆ, ಕೇಳು. ನಾನು ಬ್ರಾಹ್ಮಣನು. ದಾನ ಮಾಡಲಿಲ್ಲ. ಲೋಭಿಯು. ಕೆಟ್ಟಕೆಲಸಗಳನ್ನೇ ಮಾಡುತ್ತಿದ್ದೆನು.

೧೦೧. ಇತರರ ಮನೆಯಲ್ಲಿಯೇ ಅನ್ನವನ್ನು ತಿಂದುಕೊಂಡು ಬೆಳೆದೆನು. ಒಬ್ಬನೇ ರುಚಿರುಚಿಯಾದ ಪದಾರ್ಥಗಳನ್ನು ತಿನ್ನುತ್ತಿದ್ದೆನು. ನಾನು ಭಿಕ್ಷೆಯನ್ನು ಹಾಕಲಿಲ್ಲ. ಗ್ರಾಸಾನ್ನವನ್ನೂ ಕೂಡ ಹಾಕಲೇ ಇಲ್ಲ.

೧೦೨. ವೈಶ್ವದೇವವನ್ನು ಮಾಡಲೇ ಇಲ್ಲ. ಹೊರಗಡೆ ಭೂತ ಬಲಿಯನ್ನು ಹಾಕಲೇ ಇಲ್ಲ. ಬಾಯಾರಿರುವ ಪ್ರಾಣಿಗಳಿಗೆ ನೀರನ್ನು ಕೊಟ್ಟು ಬಾಯಾರಿಕೆಯನ್ನು ನಾಶಪಡಿಸಲಿಲ್ಲ.

೧೦೩. ಭೂಮಿಯನ್ನು ಸುತ್ತುತ್ತಾ ತಾಯಿತಂದೆಗಳಿಗೆ ಶ್ರಾದ್ಧವನ್ನು ಮಾಡಲೇ ಇಲ್ಲ. ದೇವತೆಗಳನ್ನು ಪೂಜಿಸಲೇ ಇಲ್ಲವು.

ವರ್ಷಾತಪಪರಿತ್ರಾಣಂ ನ ದತ್ತಂ ಪಾದರಕ್ಷಣಂ ।
ಜಲಪಾತ್ರಂ ನ ದತ್ತಂ ಚ ತಾಂಬೂಲಂ ನೌಷಧಂ ತಥಾ || ೧೦೪ ||

ನ ಗೇಹೇ ವಸತಿರ್ದತ್ತಾ ನಾತಿಥ್ಯಂ ಕಸ್ಯ ಚಿತ್ಕೃತಂ ।
ಅಂಧವೃದ್ಧಾಧನಾನಾಥಾ ಹ್ಯನ್ನದಾನಾನ್ನ ತೋಷಿತಾಃ || ೧೦೫ ||

ಗವಾಂ ಗ್ರಾಸೋ ನ ದತ್ತೋ ವೈ ನ ರೋಗೀ ಪರಿಮೋಚಿತಃ ।
ನ ದತ್ತಾ ನ ಹುತಾ ವಿಪ್ರ ದ್ವಿತ್ರಾ ಅಪಿ ತಿಲಾ ಮಯಾ || ೧೦೬ ||

ಪೃಥಿವ್ಯಾಂ ತಿಲದಾತಾರೋ ನ ಭವಂತಿ ತು ಮದ್ವಿಧಾಃ ।
ವ್ಯತೀಪಾತೇ ನ ದತ್ತಂ ಹಿ ಕಿಂಚಿದಲ್ಪಂ ಮಹದ್ಭವೇತ್ || ೧೦೭ ||

ಸಂಕ್ರಾನ್ತಾವುಪರಾಗೇ ಚ ನ ದತ್ತಂ ಚಂದ್ರಸೂರ್ಯಯೋಃ ।
ಪರ್ವಾಣ್ಯನ್ಯಾನಿ ಸರ್ವಾಣಿ ಜಗ್ಮುಶ್ಶೂನ್ಯಾನಿ ವೈ ದ್ವಿಜ || ೧೦೮ ||

---

೧೦೪. ಮಳೆ ಬಿಸಿಲುಗಳನ್ನು ತಡೆಯುವಂತಹ ಛತ್ರಿಯನ್ನಾಗಲಿ, ಜೋಡನ್ನಾಗಲಿ ದಾನಮಾಡಲಿಲ್ಲ. ನೀರಿನಿಂದ ತುಂಬಿದ ಪಾತ್ರೆಯನ್ನು ದಾನ ಮಾಡಲಿಲ್ಲ. ತಾಂಬೂಲ ಔಷಧಗಳನ್ನು ಕೊಡಲಿಲ್ಲ.

೧೦೫. ಮನೆಯಲ್ಲಿ ಇಳಿದುಕೊಳ್ಳಲು ಜಾಗವನ್ನು ಯಾರಿಗೂ ಕೊಡಲಿಲ್ಲ. ಅತಿಥಿಸತ್ಕಾರವನ್ನು ಮಾಡಲಿಲ್ಲ. ಕುರುಡರು, ಕಡುಬಡವರು, ಅನಾಥರುಗಳಿಗೆ ಅನ್ನವನ್ನು ಹಾಕಿ ಸಂತೋಷಪಡಿಸಲೇ ಇಲ್ಲವು.

೧೦೬. ಗೋಗ್ರಾಸವನ್ನು ಕೊಡಲಿಲ್ಲ. ರೋಗಿಯ ರೋಗವನ್ನು ನಾಶ ಮಾಡಲಿಲ್ಲ. ದಾನ ಮಾಡಲಿಲ್ಲ. ಹೋಮ ಮಾಡಲಿಲ್ಲ. ಎರಡು ಮೂರು ಎಳ್ಳಿನ ಕಾಳನ್ನಾದರೂ ದಾನ ಮಾಡಲೂ ಇಲ್ಲ. ಹೋಮ ಮಾಡಲೂ ಇಲ್ಲ.

೧೦೭. ಭೂಮಿಯಲ್ಲಿ ಎಳ್ಳನ್ನು ದಾನಮಾಡಿದವರು ನನ್ನಂತೆ ಆಗುವುದೇ ಇಲ್ಲ. ವ್ಯತೀಪಾತದಲ್ಲಿ ದಾನಮಾಡಿದುದು ಸ್ವಲ್ಪವಾದರೂ ಅದು ಬಹುವಾದ ಫಲವನ್ನು ಕೊಡುತ್ತದೆ.

೧೦೮. ಸಂಕ್ರಾಂತಿಯಲ್ಲಿಯಾಗಲಿ, ಚಂದ್ರಸೂರ್ಯಗ್ರಹಣಗಳಲ್ಲಿಯಾಗಲಿ ನಾನು ದಾನ ಮಾಡಲೇ ಇಲ್ಲ. ಎಲ್ಲಾ ಪರ್ವಕಾಲಗಳೂ ಫಲವಿಲ್ಲದೆ ಕಳೆದುವು.

ತಿಥಯಃ ಕಾರ್ತಿಕೇ ಮುಖ್ಯಾ ಜಾತಾಃ ವಂಧ್ಯಾಸ್ಸದಾ ಮಮ ।
ಪಿತೃಭ್ಯೋ ನೈವ ದತ್ತಂ ಚ ಅಷ್ಟಕಾಸು ಮಘಾಸು ಚ　　॥ ೧೦೯ ॥

ದ್ವಿಜಾನಾಂ ನ ಕೃತಾ ಪ್ರೀತಿರ್ಮನ್ವಾದಿಷು ಯುಗಾದಿಷು ।
ನ ದತ್ತಸ್ತಿಲತೈಲೇನ ಪ್ರದೀಪಃ ಕಾರ್ತಿಕೇ ಮಯಾ　　॥ ೧೧೦ ॥

ನ ಸ್ನಾತೋ ಮಾಘಮಾಸೇಹಂ ರೂಪಸೌಭಾಗ್ಯಕಾಮದೇ ।
ಅಗ್ನಿಂ ಪ್ರಜ್ವಾಲ್ಯ ಕಾಷ್ಠೌಘೈಃ ಸ್ನಾತಾನಾಂ ಮಾಘಪೌಷಯೋಃ ॥೧೧೧॥

ಶೀತಾರ್ತಾನಾಂ ಚ ವಿಪ್ರಾಣಾಂ ನ ಕೃತೋ ಜಾಡ್ಯನಿಗ್ರಹಃ ।
ಮಾಧವಾದಿಷು ಮಾಸೇಷು ನ ದತ್ತಂ ಶೀತಲಂ ಜಲಂ　　॥ ೧೧೨ ॥

ಮಯಾ ನ ರೋಪಿತೋಶ್ವತ್ಥೋ ನ್ಯಗ್ರೋಧೋ ನೈವ ರೋಪಿತಃ ।
ಬಂದಿಗ್ರಹಾನ್ಮಯಾ ಮುಕ್ತಿಃ ನ ಕೃತಾ ಪ್ರಾಣಿನಾಂ ಕ್ವಚಿತ್　　॥ ೧೧೩ ॥

---

೧೦೯. ಕಾರ್ತಿಕದಲ್ಲಿ ಬರುವ ಉತ್ತಮ ತಿಥಿಗಳು ಬರಿದಾಗಿ ಕಳೆದು ಹೋದವು. ಅಷ್ಟಕಗಳಲ್ಲಿಯೂ ಪಿತೃಗಳಿಗೆ ಏನನ್ನೂ ಕೊಡಲೇ ಇಲ್ಲ. ಮಖ ನಕ್ಷತ್ರದಲ್ಲಿಯು ಕೊಡಲೇ ಇಲ್ಲ.

೧೧೦. ಮನ್ವಾದಿಗಳಲ್ಲಾಗಲೀ, ಯುಗಾದಿಗಳಲ್ಲಾಗಲೀ ಬ್ರಾಹ್ಮಣರಿಗೆ ಅನ್ನಹಾಕಿ ದಾನಮಾಡಿ ತೃಪ್ತಿಯನ್ನೇ ಪಡಿಸಲಿಲ್ಲ. ಕಾರ್ತೀಕ ಮಾಸದಲ್ಲಿ ಸ್ವಾಮಿಯನ್ನು ಉದ್ದೇಶಿಸಿ ಎಳ್ಳೆಣ್ಣೆಯ ದೀಪವನ್ನು ಹಚ್ಚಲೇ ಇಲ್ಲ.

೧೧೧. ರೂಪ, ಸೌಭಾಗ್ಯ, ಕಾಮಗಳನ್ನು ಕೊಡುವ ಮಾಘಮಾಸದಲ್ಲಿ ನಾನು ಸ್ನಾನವನ್ನೇ ಮಾಡಲಿಲ್ಲ. ಮಾಘ ಪುಷ್ಯ ಮಾಸಗಳಲ್ಲಿ ಸ್ನಾನಮಾಡಿದವರು ಚಳಿಯನ್ನು ಹೋಗಲಾಡಿಸಿಕೊಳ್ಳಲು ಸೌದೆಯನ್ನು ತಂದು ಬೆಂಕಿಯನ್ನು ಕಾಯಿಸಿಕೊಳ್ಳಲು ಅನುಕೂಲವನ್ನು ಮಾಡಿಕೊಡಲಿಲ್ಲ.

೧೧೨. ಶೀತದಿಂದ ಕೂಡಿರುವ ವಿಪ್ರರಿಗೆ ಆ ಶೀತವನ್ನು ನಾಶಮಾಡಲೇ ಇಲ್ಲ. ವೈಶಾಖಮಾಸದಲ್ಲಿ ದಾಹ ಪರಿಹಾರಕ್ಕೋಸ್ಕರ ಶೀತವಾದ ನೀರನ್ನು ಕೊಡಲಿಲ್ಲ.

೧೧೩. ಪ್ರಾಣಿಗಳು ನೆರಳಿನಲ್ಲಿ ಕುಳಿತುಕೊಳ್ಳುವ ಆಲದ ಮರವನ್ನು ಎಬ್ಬಿಸಲಿಲ್ಲ. ರಾಜ ವೃಕ್ಷವಾದ ಅರಳೀಮರವನ್ನೆಬ್ಬಿಸಲಿಲ್ಲ. ಬಂಧನಕ್ಕೆ ಸಿಕ್ಕಿರುವ ಪ್ರಾಣಿಗಳನ್ನು ಎಲ್ಲಿಯೂ ಬಿಡಿಸಲೇ ಇಲ್ಲ.

**ನ ಪ್ರಾಣಿಭಯಸಂತ್ರಸ್ತೋ ರಕ್ಷಿತಶ್ಶರಣಾಗತಃ ।**
**ನೋಪೋಷ್ಯ ಹಿ ತ್ರಿರಾತ್ರಾಣಿ ತೋಷಿತೋ ಮಧುಸೂದನಃ ॥ ೧೧೪ ॥**

**ಕೃಚ್ಛ್ರಾತಿಕೃಚ್ಛ್ರಪಾರಾಕಂ ತಥಾ ಚಾಂದ್ರಾಯಣಂ ದ್ವಿಜ ।**
**ಅಷ್ಟಾನ್ನಂ ತಪ್ತಕೃಚ್ಛ್ರಂ ಚ ತಥಾ ಸಾಂತಪನಾನಿ ಚ ॥ ೧೧೫ ॥**

**ವ್ರತಾನ್ಯೇತಾನಿ ಪುಣ್ಯಾನಿ ಜುಷ್ಟಾನೀಂದ್ರಾದಿಭಿಃ ಸುರೈಃ ।**
**ಚರಿತ್ವಾ ನ ಮಯಾ ತಾನಿ ದೇಹಸ್ಸಂಶೋಧಿತಃ ಪುರಾ ॥ ೧೧೬ ॥**

**ಇತ್ಥಂ ಪೂರ್ವಭವೋ ವಂಧ್ಯೋ ಮಮ ಜಾತೋ ದ್ವಿಜೋತ್ತಮ ।**
**ಪಶ್ಯ ವಿಪ್ರ ಮಹಾಕ್ರೂರಾಮದ್ಭುತಾಮತ್ರ ಜನ್ಮನಿ ॥ ೧೧೭ ॥**

**ಗತಿಂ ಚ ದುಃಖಭೋಗಾರ್ಥಂ ಮಮ ಪೂರ್ವಸ್ಯ ಕರ್ಮಣಃ ।**
**ಸಂತಿ ಮಾಂಸಾನಿ ಮಾರ್ಗಾಣಿ ವೃಕವ್ಯಾಘ್ರಹತಾನಿ ವೈ ॥ ೧೧೮ ॥**

**ಫಲಾನ್ಯನ್ಯಾನಿ ಶೈಲೇಸ್ಮಿನ್ ಶುಕೈಸ್ತ್ಯಕ್ತಾನಿ ಸರ್ವಶಃ ।**
**ಭಕ್ಷ್ಯಾಣ್ಯನ್ಯಾನಿ ಶೈಲೇಸ್ಮಿನ್ ಶ್ಯೇನೈಸ್ತ್ಯಕ್ತಾನಿ ಸರ್ವತಃ ॥ ೧೧೯ ॥**

---

೧೧೪. ಪ್ರಾಣಿಗಳಿಂದ ಹೆದರಿಬಂದ ಶರಣಾಗತನನ್ನು ರಕ್ಷಿಸಲಿಲ್ಲ. ಮೂರು ದಿನಗಳು ಉಪವಾಸ ಮಾಡಿ ವಿಷ್ಣುವಿಗೆ ಪ್ರೀತಿಯನ್ನುಂಟುಮಾಡಲಿಲ್ಲ.

೧೧೫–೧೧೬. ಕೃಚ್ಛ್ರ, ಅತಿಕೃಚ್ಛ್ರ, ಪಾರಾಕ, ಚಂದ್ರಾಯಣ, ಅಷ್ಟಾನ್ನ, ತಪ್ತಕೃಚ್ಛ್ರ, ಸಾಂತಪನ, ಇವೇ ಮುಂತಾದ, ಇಂದ್ರನೇ ಮುಂತಾದವರು ಆಚರಿಸಿದ ವ್ರತಗಳನ್ನು ಮಾಡಿ ದೇಹವನ್ನು ಶೋಧಿಸಿಕೊಳ್ಳಲೇ ಇಲ್ಲ.

೧೧೭–೧೧೯. ಎಲೈ ಬ್ರಾಹ್ಮಣಶ್ರೇಷ್ಠನೇ! ಈ ರೀತಿಯಾಗಿ ನನ್ನ ಪೂರ್ವ ಜನ್ಮವು ವ್ಯರ್ಥವಾಗಿ ಹೋಯಿತು. ಮಹಾ ಕ್ರೂರವಾದ ಅದ್ಭುತವಾದ ಈ ದುಃಖವನ್ನು ಅನುಭವಿಸುವ ಸ್ಥಿತಿಯನ್ನು ನೋಡು. ಈ ಕಾಡಿನಲ್ಲಿ ತೋಳ ಹುಲಿಗಳಿಂದ ತಿಂದು ಬಿಟ್ಟಿರುವ ಮಾಂಸವು ಮಾರ್ಗದಲ್ಲಿ ಬೇಕಾದಷ್ಟಿವೆ. ಈ ಬೆಟ್ಟದಲ್ಲಿ ಗಿಳಿಯೇ ಮುಂತಾದುವು ಕಿತ್ತು ಕೆಡವಿರುವ ಹಣ್ಣುಗಳು ಬೇಕಾದಂತಿವೆ. ಗಿಡಗ ಹದ್ದು ಮುಂತಾದುವು ಬಿಟ್ಟುಬಿಟ್ಟಿರುವ ಭಕ್ಷ್ಯಗಳು ಅನೇಕವಾಗಿವೆ.

ಪುಷ್ಪಾಣಿ ಚ ಸುಗಂಧೀನಿ ಫಲಾನಿ ರಸವಂತಿ ಚ |
ಮೂಲಾನಿ ತು ಸುಭಕ್ಷ್ಯಾಣಿ ಮೃದೂನಿ ಮಂಧುರಾಣಿ ಚ || ೧೨೧ ||

ನಾನಾವಿಧಾನಿ ತಿಷ್ಠಂತಿ ಮಧೂನಿ ಸುಬಹೂನಿ ಚ |
ಸ್ರೋತಸಾಂ ನಿರ್ಝರಾಣಾಂ ಚ ಸಂತಿವಾರೀಣಿ ಸರ್ವಶಃ || ೧೨೧ ||

ಸುಲಭೇಷು ಪದಾರ್ಥೇಷು ಸರ್ವತೀರ್ಥೇಷ ಪರ್ವತೇ |
ನೇಕ್ಷೇಹಮಶನಂ ಕಿಂಚಿದ್ದೈವೇನಾಪಿಹಿತಂ ಸದಾ || ೧೨೨ ||

ವಾತಾಹಾರೇಣ ಜೀವಾಮಿ ಯಥಾ ಜೀವಂತಿ ಪನ್ನಗಾಃ |
ಪುನರ್ಜೀವಾಮಿ ಭೋ ವಿಪ್ರ ದೇವಯೋನಿ ಪ್ರಭಾವತಃ || ೧೨೩ ||

ಬಲೇನ ಪ್ರಜ್ಞಯಾ ನೀತ್ಯಾ ಮಂತ್ರಪೌರುಷವಿಕ್ರಮೈಃ |
ಸಹಾಯೈಶ್ಚೈವ ಮಿತ್ರೈಶ್ಚ ನಾಲಭ್ಯಂ ಲಭತೇ ನರಃ || ೧೨೪ ||

---

೧೨೦–೧೨೨. ವಾಸನೆಯಾಗಿರುವ ಹೂವುಗಳು, ಚೆನ್ನಾಗಿರುವ ಹಣ್ಣುಗಳು ಗೆಡ್ಡೆಗೆಣಸುಗಳು ಮಧುರವಾಗಿರುವ ಗೆಣಸುಗಳು, ಬಗೆಬಗೆಯಾದ ಜೇನುಗಳೂ ಇವೆ. ನದಿಯ ನೀರು ಎಲ್ಲಾ ಕಡೆಯಲ್ಲಿಯೂ ಬೇಕಾದಂತೆ ಇರುವುದು. ಈ ಪರ್ವತದಲ್ಲಿ ಎಲ್ಲಾ ಪದಾರ್ಥಗಳೂ ನೀರೂ ಕೂಡ ಬಹು ಸುಲಭವಾಗಿರುವಾಗ ಅವು ಒಂದೂ ನನ್ನ ಕಣ್ಣಿಗೆ ಬೀಳುವುದೇ ಇಲ್ಲ. ಅವೆಲ್ಲವೂ ಯಾವಾಗಲೂ ದೇವರಿಂದ ಮುಚ್ಚಲ್ಪಟ್ಟಿವೆ.

೧೨೩. ಆದರೂ ಕೂಡ ಹಾವುಗಳು ಗಾಳಿಯನ್ನು ಕುಡಿದುಕೊಂಡು ಬದುಕಿರುವಂತೆ ಬದುಕಿರುತ್ತೇನೆ. ನನ್ನ ಈ ರಾಕ್ಷಸ ಜನ್ಮವು ದೇವಯೋನಿಯುದಾದುದರಿಂದ ಸಾಯದೇ ಬದುಕಿರುವೆನೇ ಹೊರತು ಮತ್ತೇನೂ ಇಲ್ಲ.

೧೨೪. ಲೋಕದಲ್ಲಿ ಮನುಷ್ಯನಾದವನು ಬಲದಿಂದಲೂ ಬುದ್ಧಿಯಿಂದಲೂ ನೀತಿಯಿಂದಲೂ ಮಂತ್ರದಿಂದಲೂ ಪೌರುಷದಿಂದಲೂ ಅತಿಶಕ್ತಿಯಿಂದಲೂ ಸಹಾಯವನ್ನು ಹೊಂದುವುದರಿಂದಲೂ ಮಿತ್ರರ ಸಹಾಯದಿಂದಲೂ ತನಗೆ ಸಿಕ್ಕದ ಪದಾರ್ಥವನ್ನಾದರೂ ಹೊಂದುತ್ತಾನೆ.

ಲಾಭಾಲಾಭೇ ಸುಖೇ ದುಃಖೇ ವಿವಾಹೇ ಮೃತ್ಯುಜೀವನೇ ।
ಭೋಗೇ ರೋಗೇ ವಿಯೋಗೇ ಚ ದೈವಮೇವ ಹಿ ಕಾರಣಂ ॥ ೧೨೫ ॥

ಕುರೂಪಾಃ ಕುಕುಲಾ ಮೂರ್ಖಾಃ ಕುತ್ಸಿತಾಚಾರನಿಂದಿತಾಃ ।
ಶೌರ್ಯವಿಕ್ರಮಹೀನಾಶ್ಚ ದೈವಾದ್ರಾಜ್ಯಾನಿ ಭುಂಜತೇ ॥ ೧೨೬ ॥

ಕಾಣಾಃ ಖಂಜಾಶ್ಚ ಭವ್ಯಾಶ್ಚ ನೀತಿಹೀನಾಶ್ಚ ನಿರ್ಗುಣಾಃ ।
ನಪುಂಸಕಾಶ್ಚ ದೃಶ್ಯಂತೇ ದೈವಾದ್ರಾಜ್ಯೇ ಪ್ರತಿಷ್ಠಿತಾಃ ॥ ೧೨೭ ॥

ಯೈರ್ದತ್ತಾಶ್ಚ ತಿಲಾ ಗಾವೋ ಹಿರಣ್ಯಂ ವಸನಾನಿ ಚ ।
ಗೌರೀ ಕನ್ಯಾ ಚ ಯೈರ್ದತ್ತಾ ಯೈರ್ದತ್ತಾ ಚ ವಸುಂಧರಾ ॥ ೧೨೮ ॥

ಶಯ್ಯಾಸನಾನಿ ತಾಂಬೂಲಂ ಮಂದಿರಾಣಿ ವರಾಣಿ ಚ ।
ಭಕ್ಷ್ಯಭೋಜ್ಯಾನಿ ದತ್ತಾನಿ ಚಂದನಾನ್ಯಗುರೂಣಿ ಚ ॥ ೧೨೯ ॥

---

೧೨೫. ಲಾಭ, ನಷ್ಟ, ಸುಖ, ದುಃಖ, ವಿವಾಹ, ಬದುಕಿರುವುದು, ಸಾಯುವುದು, ಭೋಗ, ರೋಗ, ಅಗಲಿಕೆ, ಇವೆಲ್ಲಕ್ಕೂ ದೈವವು ಕಾರಣ ವಾಗಿರುತ್ತದೆ.

೧೨೬. ಕೆಟ್ಟುಹೋದ ರೂಪವುಳ್ಳವರೂ, ಕೆಟ್ಟಕುಲದಲ್ಲಿ ಹುಟ್ಟಿದವರೂ, ಅಯೋಗ್ಯರೂ, ದುರಾಚಾರಿಗಳೂ, ಶೌರ್ಯ ಪರಾಕ್ರಮಗಳಿಲ್ಲದವರೂ ಕೂಡ ಆ ದೈವಯೋಗದಿಂದಲೇ ರಾಜ್ಯವನ್ನು ಕೂಡ ಆಳುತ್ತಾರೆ.

೧೨೭. ಕುರುಡರು, ಕುಂಟರು, ಅಯೋಗ್ಯರು, ನೀತಿಹೀನರು, ಗುಣ ಹೀನರು, ನಪುಂಸಕರು ಕೂಡ ದೈವಯೋಗದಿಂದಲೇ ರಾಜ್ಯವಾಳುತ್ತಿರುವುದನ್ನು ನೋಡುತ್ತೇನೆ.

೧೨೮–೧೩೦. ಎಳ್ಳು, ಗೋವು, ಹಿರಣ್ಯ, ಬಟ್ಟೆ, ಗೌರಿಯೆಂಬ ಕನ್ಯೆ, ಭೂಮಿ, ಹಾಸಿಗೆ, ಆಸನ, ತಾಂಬೂಲ, ಉತ್ತಮವಾದ ಮನೆಗಳು, ಭಕ್ಷ್ಯಗಳು, ಭೋಜ್ಯಗಳು, ಚಂದನ, ಅಗರು ಇವನ್ನು ಯಾರು ದಾನ ಮಾಡುವರೋ ಅವರು

**ಅಟವ್ಯಾಂ ಪರ್ವತಾಗ್ರೇ ವಾ ಗ್ರಾಮೇ ವಾ ನಗರೇಽಪಿ ವಾ ।**
**ಪುರಃ ಪುರಶ್ಚ ತಿಷ್ಠಂತಿ ತೇಷಾಂ ಭೋಗಾಃ ಪ್ರಯತ್ನತಃ ॥ ೧೩೦ ॥**

**ಸಂತ್ಯತ್ರ ಪರ್ವತೇಽನ್ಯೇಽಪಿ ರಾಕ್ಷಸಾ ಬಲವತ್ತರಾಃ ।**
**ರಾಕ್ಷಸೇಭ್ಯಶ್ಚ ಸರ್ವೇಭ್ಯಃ ಪಿಶಾಚಾ ಅತಿದಾರುಣಾಃ ॥ ೧೩೧ ॥**

**ಕದಾಚಿಚ್ಚ ಕಥಂಚಿಚ್ಚ ಕ್ವಾಪಿ ಕ್ವಾಪಿ ಸ್ವಕರ್ಮಣಾ ।**
**ಲಭಂತೇ ಭಕ್ಷ್ಯಪಾನಾನಿ ಪರ್ಯಟಂತೋ ವನೇ ವನೇ ॥ ೧೩೨ ॥**

**ಇತಿ ಶ್ರುತ್ವಾತ್ರ ತೇಭ್ಯಶ್ಚ ಮಾ ಭಯಂ ಭವಿತಾ ತವ ।**
**ಶುಚಿಂ ಗೋವಿಂದಭಕ್ತಂ ತ್ವಾಂ ನ ತೇ ದ್ರಷ್ಟುಮಪಿ ಕ್ಷಮಾಃ ॥ ೧೩೩ ॥**

**ವಿಷ್ಣುಭಕ್ತಿತನುತ್ರಾಣಂ ನಾರಾಯಣಪರಾಯಣಂ ।**
**ನ ಸ್ಪೃಶಂತಿ ನ ಪಶ್ಯಂತಿ ರಾಕ್ಷಸಾಃ ಪ್ರೇತಪೂತನಾಃ ॥ ೧೩೪ ॥**

---

ಗ್ರಾಮದಲ್ಲಿರಲಿ, ಪಟ್ಟಣದಲ್ಲಿರಲಿ, ಕೊನೆಗೆ ಬೆಟ್ಟದ ತುದಿಯಲ್ಲಿರಲಿ, ಇವುಗಳ ಭೋಗಗಳು ಅವರ ಎದುರಿಗೇ ನಿಂತುಕೊಂಡು ಫಲವನ್ನು ಕೊಡುತ್ತವೆ.

೧೩೧. ಈ ಪರ್ವತದಲ್ಲಿ ಬಹುವಾಗಿ ಬಲಿಷ್ಠರಾದ ರಾಕ್ಷಸರಿದ್ದಾರೆ. ಆ ಎಲ್ಲಾ ರಾಕ್ಷಸರಿಗಿಂತಲೂ ಪಿಶಾಚಗಳು ಬಹು ಬಲವಾದುವು ಕ್ರೂರವಾದುವು.

೧೩೨–೧೩೩. ಈ ರಾಕ್ಷಸಗಳೂ ಪಿಶಾಚಗಳೂ ವನದಿಂದ ವನಕ್ಕೆ ಸುತ್ತುತ್ತಾ ಹೇಗೋ ಎಲ್ಲಿಯೋ ಯಾವಾಗಲೋ ಬಹುಕಷ್ಟದಿಂದ ತಿಂಡಿ ತೀರ್ಥಗಳನ್ನು ಹೊಂದುತ್ತವೆ. ಇದನ್ನು ನೀನು ತಿಳಿದುಕೋ. ತಿಳಿದು ಅವುಗಳ ದೆಸೆಯಿಂದ ಭಯವನ್ನು ಹೊಂದಬೇಡ. ಶುಚಿಯೂ ಗೋವಿಂದಭಕ್ತನೂ ಆದ ನಿನ್ನನ್ನು ಅವು ನೋಡಲೂ ಸಾಧ್ಯವಿಲ್ಲ.

೧೩೪. ವಿಷ್ಣುಭಕ್ತಿಯೇ ಕವಚವಾಗಿ ಉಳ್ಳ ನಾರಾಯಣನಲ್ಲಿಯೇ ಆಸಕ್ತನಾಗಿರುವ ನಿನ್ನನ್ನು ರಾಕ್ಷಸರು ಪ್ರೇತಗಳೂ ಪೂತನೆಗಳೂ ಮುಟ್ಟಲಾರರು. ಕೊನೆಗೆ ನೋಡಲೂ ಆರರು.

ಭೂತವೇತಾಳಗಂಧರ್ವಾಃ ಶಾಕಿನ್ಯಶ್ಚಾರ್ಯಕಾ ಗ್ರಹಾಃ ।
ರೇವತ್ಯೋ ವೃದ್ಧರೇವತ್ಯೋ ಮುಖಮಂಡ್ಯಸ್ತಥಾ ಗ್ರಹಾಃ ॥ ೧೩೫ ॥

ಕ್ರೂರಾ ಉಪಗ್ರಹಾ ಯೇ ಚ ದುಷ್ಟವೃದ್ಧಗ್ರಹಾಶ್ಚ ಯೇ ।
ತಥಾ ಮಾತೃಗ್ರಹಾ ಭೀಮಾ ಗ್ರಹಾಶ್ಚಾನ್ಯೇ ವಿನಾಯಕಾಃ ॥ ೧೩೬ ॥

ಕೃತ್ಯಾಃ ಸರ್ಪಾಶ್ಚ ಕೂಶ್ಮಾಂಡಾ ಯೇ ಚಾನ್ಯೇ ದುಷ್ಟಜಂತವಃ ।
ನ ಪಶ್ಯಂತಿ ಪರಂ ವಿಪ್ರ ವೈಷ್ಣವಂ ಬ್ರಾಹ್ಮಣಂ ಶುಚಿಂ ॥ ೧೩೭ ॥

ಶುಚಿಂ ರಕ್ಷಂತಿ ಭೂತಾನಿ ಪಾಪಿಷ್ಠಂ ಪೀಡಯಂತಿ ತೇ ।
ರಕ್ಷಂತಿ ಚ ಶುಚಿಂ ನಿತ್ಯಂ ಗ್ರಹನಕ್ಷತ್ರದೇವತಾಃ ॥ ೧೩೮ ॥

ಗೋವಿಂದನಾಮ ಜಿಹ್ವಾಗ್ರೇ ಹೃದಿ ವೇದಸ್ತು ತೇ ಸ್ಥಿತಃ ।
ಶುಚಿಶ್ಚ ಸ್ನಾನಶೀಲಶ್ಚ ತ್ವಂ ಸರ್ವತ್ರಾಕುತೋಭಯಃ ॥ ೧೩೯ ॥

---

೧೩೫–೧೩೭. ಭೂತ, ಭೇತಾಳ, ಗಂಧರ್ವ, ಶಾಕಿನಿ, ಆರ್ಯಕಗ್ರಹ, ರೇವತಿಗಳು, ವೃದ್ಧರೇವತಿಗಳು, ಮುಖಮಂಡಿಗಳು, ಕ್ರೂರಗ್ರಹ, ಉಪಗ್ರಹ, ದುಷ್ಟಗ್ರಹ, ವೃದ್ಧಗ್ರಹ, ಮಾತೃಗ್ರಹ, ವಿನಾಯಕಗಳು, ಮಾಟಗ್ರಹಗಳು, ಸರ್ಪ ಗ್ರಹಗಳು, ಕೂಷ್ಮಾಂಡ ಗ್ರಹಗಳು, ದುಷ್ಟಜಂತುಗಳು, ಅವುಗಳೊಂದೂ ಕೂಡ ಶುಚಿಯಾದ ವೈಷ್ಣವ ಬ್ರಾಹ್ಮಣನನ್ನು ನೋಡಲಾರವು.

೧೩೮. ಭೂತಗಳು ಶುಚಿಯಾಗಿರುವವನನ್ನು ಕಾಪಾಡುತ್ತವೆ. ಪಾಪಿಯನ್ನು ತೊಂದರೆ ಪಡಿಸುತ್ತವೆ. ಗ್ರಹ, ನಕ್ಷತ್ರ, ದೇವತೆಗಳು ಶುಚಿಯಾಗಿರುವವನನ್ನು ನಿತ್ಯವೂ ಕಾಪಾಡುತ್ತವೆ.

೧೩೯. ನಿನ್ನ ನಾಲಿಗೆಯಲ್ಲಿ ಗೋವಿಂದ ನಾಮವೂ ಹೃದಯದಲ್ಲಿ ವೇದವೂ ಇದ್ದುಕೊಂಡಿರುವುದು. ನೀನು ಶುಚಿಯಾಗಿ ಸ್ನಾನಶೀಲನಾಗಿ ಇದ್ದೀಯೆ. ನಿನಗೆ ಎಲ್ಲಿಯೂ ಭಯವೆಂಬುದೇ ಇಲ್ಲ

ಏವಂ ಬ್ರಾಹ್ಮಣ ತಿಷ್ಠಾಮಿ ಭುಂಜಾನಃ ಕರ್ಮಣಃ ಫಲಂ ।
ನ ಶೋಚಾಮೀತಿ ಮತ್ವಾಹಂ ವಿಮೃಶ್ಯ ಚ ಪುನಃ ಪುನಃ ॥ ೧೪೦ ॥

ನ ದುನೋಮಿ ತಥಾ ತಾವದ್ಯಾವಜ್ಜಂಬಾಲಿನೀತಟೇ ।
ಸಾರಸೋದೀರಿತಂ ವಾಕ್ಯಂ ಶ್ರುತಂ ಪರ್ಯಟಿತಾ ಮಯಾ ॥ ೧೪೧ ॥

॥ ಬ್ರಾಹ್ಮಣ ಉವಾಚ ॥

ಸಾರಸೋದೀರಿತಂ ವಾಕ್ಯಂ ಕೀದೃಶಂ ಹಿ ಶ್ರುತಂ ತ್ವಯಾ ।
ತದಹಂ ಶ್ರೋತುಮಿಚ್ಛಾಮಿ ಪ್ರಬ್ರೂಹಿ ಪ್ರೇತ ಸತ್ವಕಂ ॥ ೧೪೨ ॥

॥ ಪ್ರೇತ ಉವಾಚ ॥

ಬ್ರವೀಮಿ ಸಾರಸಂ ವಾಕ್ಯಂ ಶೃಣು ಕಾರ್ಪಟಿಕೋತ್ತಮ ।
ಧೂಸರಾ ನಾಮ ಕಸ್ಮಿಂಶ್ಚಿತ್ ನದೀ ಗಿರಿಸಮುದ್ಭವಾ ॥ ೧೪೩ ॥

---

೧೪೦–೧೪೧. ಈ ರೀತಿಯಾಗಿ ತಿಳಿದುಕೊಂಡು ನನ್ನ ಕರ್ಮ ಫಲವನ್ನು ಅನುಭವಿಸುತ್ತ ಇದ್ದುಕೊಂಡಿರುವೆನು. ಇದನ್ನೇ ವಿಮರ್ಶೆ ಮಾಡಿ ಮಾಡಿ ತಿಳಿದುಕೊಂಡು ಕೊನೆಗೆ ಗಟ್ಟಿಮಾಡಿಕೊಂಡು ಅದರ ಯೋಚನೆಯನ್ನೇ ಮರೆತುಬಿಟ್ಟಿದ್ದೇನೆ. ಜಂಬಾಲಿನೀ ನದಿಯ ದಡದಲ್ಲಿ ನಾನು ಸುತ್ತುತ್ತಿದ್ದಾಗ ಸಾರಸ ಪಕ್ಷಿಯು ಹೇಳಿದ ಮಾತನ್ನು ಕೇಳಿದಾಗಿನಿಂದಲೂ ನನಗೆ ಬಹುವಾಗಿ ಯೋಚನೆ ಮಾಡುವುದೂ ಕಷ್ಟಕ್ಕೋಸ್ಕರ ದುಃಖಪಡುವುದೂ ಹೋದುವು.

೧೪೨. ಬ್ರಾಹ್ಮಣನು ಹೇಳಿದನು–ಎಲೈ ಪ್ರೇತವೇ ! ಸಾರಸವು ಹೇಳಿದ ಮಾತನ್ನು ನೀನು ಕೇಳಿದೆಯಷ್ಟೆ! ಅದು ಯಾವ ರೀತಿಯಾದುದು ? ಅದನ್ನು ಕೇಳಬೇಕೆಂದಿದ್ದೇನೆ. ಜಾಗ್ರತೆಯಾಗಿ ಹೇಳು.

೧೪೩. ಪ್ರೇತವು ಹೇಳಿತು-ಎಲೈ ಬ್ರಾಹ್ಮಣೋತ್ತಮನೇ ! ಸಾರಸವು ಹೇಳಿದ ಮಾತನ್ನು ಹೇಳುತ್ತೇನೆ ಕೇಳು. ಈ ಕಾಡಿನ ಪಕ್ಕದಲ್ಲಿ ಧೂಸರವೆಂಬ ಒಂದು ನದಿಯು ಹರಿಯುತ್ತಿರುವುದು ಅದು ಬೆಟ್ಟದಿಂದ ಹುಟ್ಟುತ್ತದೆ.

ಸದಾ ಜಲಶಿಲೋತ್ಕಾಲಾ ಮತ್ತದಂತಿಕುಲಾಕುಲಾ ।
ಮಹಾಕಕುಭಶೋಭಾಢ್ಯಾ ಸ್ನಿಗ್ಧಜಂಬೂಮನೋಹರಾ ॥ ೧೪೪ ॥

ತಸ್ಯಾಸ್ತೀರಮಹಂ ಪ್ರಾಪ್ತೋ ಗಾಹಮಾನೋ ಘನಂ ವನಂ ।
ಮಯಿ ತಿಷ್ಠತಿ ತತ್ರೈವ ಫಲಭೋಜನಕಾಮ್ಯಯಾ ॥ ೧೪೫ ॥

ವನಾಂತರಾತ್ಸಮುಡ್ಡೀಯ ಸಾರಸೋ ಲಕ್ಷ್ಮಣಾಯುತಃ ।
ಆಗತಃ ಪುಲಿನಂ ನದ್ಯಾಃ ಸೇವಿತಂ ಬಹುಪತ್ರಿಭಿಃ ॥ ೧೪೬ ॥

ಪೀತ್ವಾ ತತ್ರೈವ ಪಾನೀಯಂ ರಮಿತ್ವಾ ಭಾರ್ಯಯಾ ಸಹ ।
ಸುಪ್ತಃ ಪಕ್ಷಪುಟೇ ವಾಮೇ ಪ್ರವೇಶ್ಯ ಸ್ವಶಿರಃ ಸುಖಂ ॥ ೧೪೭ ॥

---

೧೪೪. ಆ ನದಿಯು ಯಾವಾಗಲೂ ಕಲ್ಲುಗಳಿಂದ ಕೂಡಿಕೊಂಡಿದೆ. ಆ ಕಲ್ಲಿಗೆ ಪ್ರವಾಹವು ಹೊಡೆದು ಮೇಲಕ್ಕೆ ಏಳುತ್ತಿರುವುದು. ಅನೇಕವಾದ ಮದ್ದಾನೆಗಳು ಅದರಲ್ಲಿ ಮುಳುಗುತ್ತಿರುತ್ತವೆ. ಬಹುವಾದ ದೊಡ್ಡದಾದ ಮತ್ತಿಯ ಮರಗಳು ಅದರ ಎರಡು ದಡಗಳಲ್ಲಿಯೂ ಬೆಳೆದು ಮನೋಹರವಾಗಿ ಕಾಣುತ್ತಿವೆ. ಬಹುವಾದ ನೇರಿಳೆಯ ಮರಗಳು ಬೆಳೆದು ಸುಂದರವಾಗಿ ಪ್ರಕಾಶಿಸುತ್ತಿವೆ.

೧೪೫. ದೊಡ್ಡದಾದ ಕಾಡಿನಲ್ಲಿ ಸುತ್ತುತ್ತ ಒಂದು ಸಾರಿ ಆ ನದಿಯ ದಡಕ್ಕೆ ಹೋದೆನು. ನಾನು ಅಲ್ಲಿ ಏನಾದರೂ ಹಣ್ಣುಗಳು ಸಿಕ್ಕುತ್ತವೆಯೋ ಎಂದು ಆಸೆಯಿಂದ ನೋಡುತ್ತ ಅಲ್ಲಿದ್ದುಕೊಂಡಿದ್ದೆನು.

೧೪೬. ಆಗ ಒಂದು ಸಾರಸಹಕ್ಕಿಯು ತನ್ನ ಹೆಂಡತಿಯೊಡನೆ ವನದ ಮಧ್ಯದಿಂದ ಹಾರಿಬಂದು ಅನೇಕವಾದ ಪಕ್ಷಿಗಳು ಕುಳಿತಿರುವ ಆ ನದಿಯ ಮರಳಿನ ಮೇಲೆ ಕುಳಿತುಕೊಂಡಿತು.

೧೪೭. ಅಲ್ಲಿ ನೀರನ್ನು ಕುಡಿದು ಹೆಂಡತಿಯೊಡನೆ ಸ್ವಲ್ಪಹೊತ್ತು ಸಂತೋಷದಿಂದಿದ್ದು ತನ್ನ ಎಡದ ರೆಕ್ಕೆಯೊಳಕ್ಕೆ ತಲೆಯನ್ನು ಸೇರಿಸಿಕೊಂಡು ಸುಖವಾಗಿ ನಿದ್ರಿಸಿತು.

ಏತಸ್ಮಿನ್ನಂತರೇ ದುಷ್ಟಃ ಪಾದಪಾದವತೀರ್ಯ ಚ ।
ರಕ್ತಾನನಃ ಸುರಕ್ತಾಕ್ಷಃ ದಂಷ್ಟ್ರೀ ದೃಢನಖೋ ಬಲೀ ॥ ೧೪೮ ॥

ಲೋಮಶೋ ದೀರ್ಘಲಾಂಗೂಲಶ್ಚಲಚ್ಚೇಷ್ಟೋ ಹಿ ವಾನರಃ ।
ಯತ್ರಾಸೌ ಸಾರಸಃ ಸುಪ್ತಃ ತತ್ರ ವೇಗೇನ ಚಾಗತಃ ॥ ೧೪೯ ॥

ಸಮಾಗತ್ಯ ಚ ಜಗ್ರಾಹ ಸಾರಸಂ ಚರಣೇ ದೃಢಂ ।
ಕರಾಭ್ಯಾಂ ಕ್ರೂರಯಾ ಬುದ್ಧ್ಯಾ ಪಶ್ಯತಾಂ ಬಹುಪಕ್ಷಿಣಾಂ ॥ ೧೫೦ ॥

ಉಡ್ಡೀಯೋಡ್ಡೀಯ ತೇ ಸರ್ವೇ ಗತಾಶ್ಚಾನ್ಯತ್ರ ಖೇಚರಾಃ ।
ಸಾರಸೀ ಭೀತಭೀತಾ ಚ ವಿರಾವಾನ್ ಕುರ್ವತೀ ಸ್ಥಿತಾ ॥ ೧೫೧ ॥

ಸಾರಸೋ ಭಗ್ನನಿದ್ರಶ್ಚ ತ್ರಾಸಾಚ್ಚಲಿತಲೋಚನಃ ।
ಅವಲೋಕಿತವಾನ್ ಶೀಘ್ರಂ ತದೋನ್ನಮ್ಯ ಶಿರೋಧರಾಂ ॥ ೧೫೨ ॥

---

೧೪೮-೧೪೯. ಇಷ್ಟರಲ್ಲಿ ಒಂದು ದುಷ್ಟವಾದ, ಕೆಂಪು ಮುಖವುಳ್ಳ, ಕೆಂಗಣ್ಣುಳ್ಳ, ಕೋರೆಹಲ್ಲುಳ್ಳ, ಗಟ್ಟಿಯಾದ ಉಗುರುಗಳುಳ್ಳ, ಬಲಿಷ್ಠವಾದ, ಮೈಯ್ಯಲ್ಲೆಲ್ಲಾ ಕೂದಲಿರುವ, ಉದ್ದವಾದ ಬಾಲವುಳ್ಳ, ಚೇಷ್ಟೆಯೇ ಸ್ವಭಾವವಾಗಿರುವ, ಒಂದು ಕಪಿಯು ಮರದಿಂದ ಇಳಿದು ಆ ಸಾರಸಪಕ್ಷಿಯು ಮಲಗಿರುವಲ್ಲಿಗೆ ಬಂದಿತು.

೧೫೦. ಬೇಗನೆ ಅಲ್ಲಿಗೆ ಬಂದು ಕೆಟ್ಟ ಬುದ್ಧಿಯಿಂದ ಕೂಡಿಕೊಂಡು ಎಲ್ಲಾ ಪಕ್ಷಿಗಳೂ ನೋಡುತ್ತಿರುವಂತೆಯೇ ಆ ಸಾರಸದ ಕಾಲುಗಳನ್ನು ಕೈಗಳಿಂದ ಹಿಡಿದುಕೊಂಡಿತು.

೧೫೧. ಆಗ ಉಳಿದ ಹಕ್ಕಿಗಳು ಹಾರಿಹಾರಿ ಓಡಿಹೋದುವು. ಆ ಸಾರಸದ ಹೆಂಡತಿಯು ಬಹುವಾಗಿ ಹೆದರುತ್ತ ಕೂಗಿಕೊಳ್ಳುತ್ತ ಅಲ್ಲಿಯೇ ದುಃಖಿಸುತ್ತಿದ್ದಿತು.

೧೫೨. ಆಗ ಸಾರಸಪಕ್ಷಿಗೆ ನಿದ್ರಾಭಂಗವಾಗಿ ಹೆದರಿಕೆಯಿಂದ ಕಣ್ಣುಗಳನ್ನು ಹೊರಳಿಸುತ್ತ ತನ್ನ ಕತ್ತನ್ನು ಮೇಲಕ್ಕೆತ್ತಿ ಬೇಗನೆ ನೋಡಿತು.

ವಿಲೋಕ್ಯ ವಾನರಂ ಪೃಷ್ಠೇ ಹಂತುಕಾಮಂ ಸುದಾರುಣಂ ।
ತದಾ ಸಂಭಾಷಯಾಮಾಸ ಗಿರಾ ಮಧುರಯಾ ಖಗಃ ॥ ೧೫೩ ॥

॥ ಸಾರಸ ಉವಾಚ ॥

ಅಪರಾಧಂ ವಿನಾ ಮಾಂ ತ್ವಂ ಕಿಂ ಶಾಖಾಮೃಗ ಬಾಧಸೇ ।
ಸಾಪರಾಧಾ ಜನಾ ಲೋಕೇ ಬಾಧ್ಯಂತೇ ಭೂಮಿಪೈರಿಹ ॥ ೧೫೪ ॥

ನ ಪೀಡಯಿತುಮರ್ಹಂತಿ ತ್ವಾದೃಶಾ ಉತ್ತಮಾ ಜನಾಃ ।
ಅಸ್ಮಾನಹಿಂಸಕಾನ್ ಸಾಧೂನ್ ಪರವೃತ್ತಿಪರಾಙ್ಮುಖಾನ್ ॥ ೧೫೫ ॥

ಪರಾಪವಾದಶೂನ್ಯಾಂಶ್ಚ ತಥಾಽಸ್ತೇನಾನಯಾಚಕಾನ್ ।
ದುರ್ವೃತ್ತಸಂಗಹೀನಾಂಶ್ಚ ದ್ವಿಜಾನ್ನಪರಸೇವಕಾನ್ ॥ ೧೫೬ ॥

---

೧೫೩. ತನ್ನನ್ನು ಕೊಲ್ಲಲು ಬಂದಿರುವ ಕ್ರೂರಬುದ್ಧಿಯುಳ್ಳ ಆ ಕಪಿಯನ್ನು ತನ್ನ ಹಿಂದುಗಡೆಯಲ್ಲಿ ನೋಡಿತು. ಆಗ ಅದನ್ನು ಕುರಿತು ಸಾರಸವು ಇಂತೆಂದು ಒಳ್ಳೆಯ ಮಾತಿನಿಂದ ಹೇಳಿತು.

೧೫೪. ಸಾರಸವು ಹೇಳಿತು–ಎಲೈ ಕಪಿಯೆ ! ನನ್ನಿಂದ ತಪ್ಪಿಲ್ಲದಿದ್ದರೂ ನನ್ನನ್ನೇಕೆ ಬಾಧಿಸುತ್ತಿದ್ದೀಯೆ ? ರಾಜನೂ ಕೂಡ ಅಪರಾಧಿಗಳನ್ನೇ ಶಿಕ್ಷಿಸುತ್ತಾನೆ.

೧೫೫-೧೫೬. ಎಲೈ ಕಪಿಯೆ ! ಹಿಂಸೆಮಾಡದ, ಸಾಧುಗಳಾದ, ಪರರ ಜೀವನವನ್ನು ಕೆಡಿಸದ, ಪರರನ್ನು ತಿರಸ್ಕರಿಸದ, ಕಳ್ಳತನಮಾಡದ, ಯಾಚಿಸದ, ದುರ್ವೃತ್ತರಲ್ಲದ, ದುಷ್ಟರ ಸಹವಾಸವನ್ನು ಮಾಡದ, ಪರಸೇವಕರಲ್ಲದ, ನಮ್ಮಂತಹವರನ್ನು ನಿಮ್ಮಂತಹ ಉತ್ತಮರಾದವರು ಹಿಂಸೆಮಾಡುವುದು ಯೋಗ್ಯವಲ್ಲ.

ಶಾಖಾಮೃಗ ವಿಮುಂಚಾಶು ಸರ್ವಥಾ ಮಾಮನಾಗಸಂ ।
ಜಾನಾಮಿ ತವ ಜನ್ಮಾಹಂ ನ ತ್ವಂ ವೇತ್ಸಿ ಚ ಮಾಮಕಂ ॥ ೧೫೭ ॥

॥ ಪ್ರೇತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಮುಮೋಚ ಸಾರಸಂ ತದಾ ।
ಚಪಲೋ ವಾನರಶ್ಶೀಘ್ರಮೀಷದ್ದೂರೇ ವ್ಯವಸ್ಥಿತಃ ॥ ೧೫೮ ॥

॥ ವಾನರ ಉವಾಚ ॥

ಬ್ರೂಹಿ ಭದ್ರ ಕಥಂ ವೇತ್ಸಿ ಮಮ ಜನ್ಮ ಪುರಾತನಂ ।
ತ್ವಂ ಪಕ್ಷೀ ಜ್ಞಾನಹೀನಶ್ಚ ತಿರ್ಯಕ್ಚಾಹಂ ವನೇಚರಃ ॥ ೧೫೯ ॥

॥ ಸಾರಸ ಉವಾಚ ॥

ಜಾನೇಹಂ ತಾವಕಂ ಜನ್ಮ ಜಾತಿಸ್ಮೃತಿರ್ಮಮಾಸ್ತ್ಯಲಂ ।
ತ್ವಂ ಹಿ ವಿಂಧ್ಯಾಧಿಪೋ ರಾಜಾ ಪ್ರಾಗ್ಭವೇ ಪರ್ವತೇಶ್ವರಃ ॥ ೧೬೦ ॥

---

೧೫೭. ಎಲೈ ವಾನರ ಶ್ರೇಷ್ಠನೇ! ತಪ್ಪಿತಸ್ಥನಲ್ಲದ ನನ್ನನ್ನು ಖಂಡಿತ ವಾಗಿಯೂ ಬಿಟ್ಟುಬಿಡು ನಿನ್ನ ಜನ್ಮವನ್ನೂ ನೀನಾರೆಂಬುದನ್ನೂ ನಾನು ಬಲ್ಲೆನು. ಆದರೆ ನಾನಾರೆಂಬುದನ್ನು ನೀನು ತಿಳಿದಿಲ್ಲ.

೧೫೮. ಪ್ರೇತವು ಹೇಳಿತು—ಆ ಸಾರಸದ ಮಾತನ್ನು ಕೇಳಿ ಈ ಕಪಿಯು ಒಡನೆಯೇ ಆ ಹಕ್ಕಿಯನ್ನು ಬಿಟ್ಟುಬಿಟ್ಟಿತು. ಬಿಟ್ಟಮೇಲೆ, ಚಪಲಬುದ್ಧಿ ಯುಳ್ಳುದಾದರೂ ಅದು ಸ್ವಲ್ಪದೂರದಲ್ಲಿ ನಿಂತುಕೊಂಡಿತು.

೧೫೯. ವಾನರವು ಹೇಳಿತು—ಎಲೈ ಭದ್ರನೆ! ನನ್ನ ಪೂರ್ವಜನ್ಮವನ್ನು ನೀನು ಹೇಗೆಬಲ್ಲೆ ? ನೀನಾದರೋ ಹಕ್ಕಿಯು. ನಿನಗೆ ಜ್ಞಾನವೇ ಇಲ್ಲ ಕೀಳು ಜಾತಿಯ ಪ್ರಾಣಿಯು. ನಾನಾದರೋ ಕಾಡಿನಲ್ಲಿ ಓಡಾಡುವವನು.

೧೬೦. ಸಾರಸವು ಹೇಳಿತು—ನಾನು ನಿನ್ನ ಜನ್ಮವನ್ನು ಬಲ್ಲೆನು. ನನಗೆ ಬೇಕಾದಷ್ಟು ಜಾತಿಯನ್ನು ಸ್ಮರಿಸಿಕೊಳ್ಳುವ ಶಕ್ತಿಯಿರುವುದು. ನೀನು ವಿಂಧ್ಯಕ್ಕೆ ಒಡೆಯನಾದ ರಾಜನು. ನಿನ್ನ ಹೆಸರು ಪರ್ವತೇಶ್ವರನು.

ಅಹಂ ಪೂಜ್ಯತಮೋ ವಿಪ್ರಃ ತವ ವಂಶೇ ಪುರೋಹಿತಃ |
ತೇನ ಪ್ರತ್ಯಭಿಜಾನಾಮಿ ತ್ವಾಂ ಸಮಗ್ರಾನರೋತ್ತಮ ॥ ೧೬೧ ॥

ಇಮಾಂ ಪಾಲಯತಾ ಭೂಮಿಂ ಪ್ರಜಾಸ್ಸರ್ವಾಃ ಪ್ರಪೀಡಿತಾಃ |
ತ್ವಯಾ ವಿವೇಕಹೀನೇನ ಭೃಶಂ ಸಂಚಯತಾ ಧನಂ ॥ ೧೬೨ ॥

ಪ್ರಜಾಪೀಡನಪಾಪೋತ್ಥವಹ್ನಿಜ್ವಾಲೈಸ್ತು ವಾನರ |
ಪ್ರಾಕ್ತ್ವಂ ದಗ್ಧಃ ಪುನಃ ಕ್ಷಿಪ್ತಃ ಕುಂಭೀಪಾಕೇಽತಿದಾರುಣೇ ॥ ೧೬೩ ॥

ಪುನಃ ಪುನಶ್ಚ ದಗ್ಧೇನ ಜಾತೇನ ಚ ಪುನಃ ಪುನಃ |
ನಾರಕೇಣ ಶರೀರೇಣ ಸಮಾಸ್ತ್ರಿಂಶಯುತಂ ತ್ವಯಾ ॥ ೧೬೪ ॥

ಕುರ್ವತಾ ದಾರುಣಾನ್ ಶಬ್ದಾನ್ ರುದತಾ ಚ ಪುನಃ ಪುನಃ ।
ಕುಂಭೀಪಾಕಾಲೇ ತೀವ್ರಾ ಹ್ಯನುಭೂತಾಶ್ಚ ಯಾತನಾಃ ॥ ೧೬೫ ॥

---

೧೬೧. ನಾನೊಬ್ಬ ಉತ್ತಮನಾದ ಬ್ರಾಹ್ಮಣನು. ನಿನ್ನ ವಂಶದಲ್ಲಿ ಪುರೋಹಿತನಾಗಿದ್ದೆನು ಆದ್ದರಿಂದ ನಿನ್ನನ್ನು ನಾನು ಚೆನ್ನಾಗಿ ಬಲ್ಲೆನು.

೧೬೨. ಆಗ ನೀನು ವಿವೇಕಹೀನನಾಗಿ ಹಣವನ್ನು ಸಂಗ್ರಹಿಸಬೇಕೆಂಬ ಆಸೆಯಿಂದ ರಾಜ್ಯಭಾರಮಾಡುತ್ತಿರುವಾಗ ಪ್ರಜೆಗಳೆಲ್ಲರನ್ನೂ ಬಹುವಾಗಿ ಪೀಡಿಸಿದೆ.

೧೬೩. ನೀನು ಸತ್ತಮೇಲೆ ಆ ಪ್ರಜೆಗಳನ್ನು ಪೀಡಿಸಿದ ಪಾಪದ ಜ್ವಾಲೆಯಿಂದ ನೀನು ಮೊದಲು ಸುಡಲ್ಪಟ್ಟೆ. ಆಮೇಲೆ ಕುಂಭೀಪಾಕದಲ್ಲಿ ಕಷ್ಟಗಳನ್ನು ಅನುಭವಿಸಿದೆ.

೧೬೪–೧೬೫. ನರಕ ಶರೀರವನ್ನು ಹೊಂದಿ ವ ತ್ತೆ ಕಷ್ಟಗಳನ್ನು ಅನುಭವಿಸಿದೆ. ಈ ರೀತಿಯಾಗಿ ಮೂವತ್ತುಸಾವಿರ ವರ್ಷಗಳು ಕಳೆದುವು. ಆ ಕುಂಭೀಪಾಕದಲ್ಲಿ ಬಹು ಗಟ್ಟಿಯಾಗಿ ಅಳುತ್ತಾ ಮತ್ತೆ ಮತ್ತೆ ಆ ಯಾತನೆಗಳನ್ನು ಅನುಭವಿಸಿದೆ.

ನಿಸ್ತೀರ್ಣನರಕೋ ಭೂಯಃ ಪಾಪಶೇಷೇಣ ಸಾಂಪ್ರತಂ ।
ಪ್ರಾಪ್ತೋಽಸಿ ವಾನರಂ ಜನ್ಮ ಯೇನ ಮಾಂ ಹಂತುಮಿಚ್ಛಸಿ　　॥ ೧೬೬ ॥

ವಿಪ್ರಸ್ಯೋಪವನಾತ್ಪೂರ್ವಂ ಪಕ್ವರಂಭಾಫಲಾನಿ ಚ
ಅನನುಜ್ಞಾಪ್ಯ ಭುಕ್ತಾನಿ ತ್ವಯಾಪವೃತ್ಯ ಪೌರುಷಾತ್　　॥ ೧೬೭ ॥

ವಿಪಾಕಃ ಕರ್ಮಣಸ್ತಸ್ಯ ಫಲತೇ ಪಶ್ಯ ದಾರುಣಃ ।
ವಾನರತ್ವಂ ವನೇ ವಾಸೋ ಹ್ಯಧುನಾ ಯೇನ ವರ್ತತೇ　　॥ ೧೬೮ ॥

ಅಶುಭಸ್ಯ ಶುಭಸ್ಯಾಪಿ ಪುರಾ ವಿಹಿತಕರ್ಮಣಃ ।
ಭೋಗಃ ಕ್ರೀಡತಿ ಲೋಕೇಷು ಯೋಽಲಂಘ್ಯಸ್ತ್ರಿದಶೈರಪಿ　　॥ ೧೬೯ ॥

ಇತ್ಥಂ ತ್ವಜ್ಜನ್ಮ ಜಾನಾಮಿ ಯಥಾವತ್ತು ಸಹೇತುಕಂ ।
ಪ್ರಾಪ್ತಸಾರಸದೇಹೋಽಪಿ ಜ್ಞಾನೇನಾಪರಿತೋಷಿತಃ　　॥ ೧೭೦ ॥

---

೧೬೬. ಆ ನರಕಗಳನ್ನು ದಾಟಿ ಉಳಿದ ಪಾಪಶೇಷದಿಂದ ಈಗ ಈ ಕ್ರೂರವಾದ ವಾನರ ಜನ್ಮವನ್ನು ಹೊಂದಿದ್ದೀಯೆ. ನನ್ನನ್ನು ಕೊಲ್ಲ ಬೇಕೆಂದಿದ್ದೀಯೆ.

೧೬೭–೧೬೮. ನೀನು ಪೂರ್ವಜನ್ಮದಲ್ಲಿ ಒಬ್ಬ ಬ್ರಾಹ್ಮಣನ ತೋಟದಿಂದ ಹಣ್ಣಾದ ಬಾಳೆಯ ಹಣ್ಣುಗಳನ್ನು ಅವನ ಒಪ್ಪಿಗೆಯಿಲ್ಲದೆ ಬಲಾತ್ಕಾರದಿಂದ ತಂದು ತಿಂದೆ. ಆ ಪಾಪದ ಫಲವು ದಾರುಣವಾಗಿ ಈಗ ಫಲಿಸುತ್ತಿದೆ. ಅದರಿಂದಲೇ ಈ ಕಪಿಯ ಜಾತಿಯಲ್ಲಿ ಹುಟ್ಟಿ ಕಾಡಿನಲ್ಲಿದ್ದೀಯೆ.

೧೬೯. ಹಿಂದೆ ನಾವು ಮಾಡಿದ ಶುಭಕರ್ಮವಾಗಲಿ ಅಶುಭಕರ್ಮವಾಗಲಿ ಅವನ್ನು ಭೋಗಿಸಲೇಬೇಕು. ಅದು ತನ್ನ ಲೀಲೆಯಿಂದ ಕ್ರೀಡಿಸಿಯೇ ಕ್ರೀಡಿಸು ತ್ತದೆ. ಅದು ದೇವತೆಗಳನ್ನೂ ಬಿಡುವುದಿಲ್ಲ.

೧೭೦. ಈ ರೀತಿಯಾಗಿ ನಿನ್ನ ಜನ್ಮವನ್ನು ಕಾರಣಸಹಿತವಾಗಿ ಬಲ್ಲೆನು. ನಾನು ಈ ಸಾರಸಪಕ್ಷಿಯ ದೇಹವನ್ನು ಹೊಂದಿದ್ದರೂ ಕೂಡ ಈ ಜ್ಞಾನದಿಂದ ನನಗೆ ಬಹು ತೃಪ್ತಿಯಾಗಿರುವುದು.

॥ ಪ್ರೇತ ಉವಾಚ ॥

ಇತಿ ಶ್ರುತ್ವಾ ಕಥಾಂ ದಿವ್ಯಾಂ ವಾನರೋಽಪ್ಯಾಹ ಸಾರಸಂ ।
ಸಮ್ಯಗ್ವೇತ್ಸಿ ಭವಾನ್ಜನ್ಮ ತ್ವಂ ಕಥಂ ಪಕ್ಷಿತಾಂ ಗತಃ ॥ ೧೭೧ ॥

॥ ಸಾರಸ ಉವಾಚ ॥

ಕಥಯಿಷ್ಯಾಮಿ ತತ್ಕರ್ಮ ಯೇನಾಹಂ ದುರ್ಗತಿಂ ಗತಃ ।
ಪಕ್ಷಿಯೋನಿಂ ಗತೋ ಯೇನ ತತ್ಸರ್ವಂ ಶ್ರೋತುಮರ್ಹಸಿ ॥ ೧೭೨ ॥

ಧಾನ್ಯಖಾರಿಶತಂ ಸಾಗ್ರಮುತ್ಸೃಷ್ಟಂ ಹಿ ತ್ವಯಾ ಪುರಾ ।
ಬಹುಭ್ಯೋ ಬ್ರಾಹ್ಮಣೇಭ್ಯಶ್ಚ ನರ್ಮದಾಯಾಂ ರವಿಗ್ರಹೇ ॥ ೧೭೩ ॥

ಪೌರೋಹಿತ್ಯಮದಾಲ್ಲೋಭಾದ್ವಂಚಯಿತ್ವಾ ತು ತಾನ್ ದ್ವಿಜಾನ್ ।
ಕಿಂಚಿದ್ದತ್ವಾ ತು ತೇಭ್ಯಶ್ಚ ಗೃಹೀತಮಖಿಲಂ ಮಯಾ ॥ ೧೭೪ ॥

ವಿಪ್ರಸಾಧಾರಣದ್ರವ್ಯಗ್ರಹಣೋತ್ಪನ್ನಪಾತಕಾತ್ ।
ಪತಿತಃ ಕಾಲಸೂತ್ರೇಽಹಂ ನರಕೇ ರಕ್ತಕರ್ದಮೇ ॥ ೧೭೫ ॥

---

೧೭೧. ಪ್ರೇತವು ಹೇಳಿತು–ಈ ದಿವ್ಯವಾದ ಕಥೆಯನ್ನು ಆ ವಾನರವು ಕೇಳಿ, ಎಲೈ ಸಾರಸನೇ! ನೀನು ನನ್ನ ಪೂರ್ವಜನ್ಮವನ್ನು ಚೆನ್ನಾಗಿ ತಿಳಿದುಕೊಂಡಿದ್ದೀಯೆ.ಆದರೆ ನೀನು ಈ ಪಕ್ಷಿಜನ್ಮವನ್ನು ಹೊಂದಲು ಕಾರಣವೇನು ?

೧೭೨. ಸಾರಸವು ಹೇಳಿತು–ನನಗೆ ಈ ಪಕ್ಷಿಯ ಜನ್ಮದ ದುರ್ಗತಿಯು ಬರಲು ಕಾರಣವೇನು? ಈ ಕೆಟ್ಟ ಜನ್ಮವೇತಕ್ಕೆ ಬಂದಿತು? ಈ ಪಕ್ಷಿಯ ಜನ್ಮವೇ ಬರಲು ಕಾರಣವೇನು? ಅದೆಲ್ಲವನ್ನೂ ಹೇಳುತ್ತೇನೆ ಕೇಳು.

೧೭೩-೧೭೪. ನೀನು ಹಿಂದೆ ಸೂರ್ಯಗ್ರಹಣ ಬಂದಾಗ ನರ್ಮದಾನದಿಯ ತೀರದಲ್ಲಿ ಬಹುಜನ ಬ್ರಾಹ್ಮಣರಿಗೋಸ್ಕರವಾಗಿ ನೂರುಖಾರಿ ಧಾನ್ಯವನ್ನು ದಾನ ಮಾಡಿದೆ. ಅದರಲ್ಲಿ ನಾನು ಪುರೋಹಿತನ ದರ್ಪದಿಂದ ಎಲ್ಲರಿಗೂ ಸ್ವಲ್ಪಸ್ವಲ್ಪವನ್ನು ಕೊಟ್ಟು ಆಸೆಯಿಂದ ನಾನು ಹೆಚ್ಚಾಗಿ ಇಟ್ಟುಕೊಂಡೆನು.

೧೭೫–೧೭೬. ಎಲ್ಲಾ ಬ್ರಾಹ್ಮಣರಿಗೂ ಸೇರತಕ್ಕ ದ್ರವ್ಯವನ್ನು ತಿಂದ ಪಾಪದಿಂದ ರಕ್ತದ ಕೆಸರುಳ್ಳ, ಕ್ರಿಮಿಗಳು ಓಡಾಡುತ್ತಿರುವ, ದುರ್ಗಂಧವುಳ್ಳ,

ಚಲತ್ಕ್ರಿಮಿಸುಸಂಪೂರ್ಣೇ ದುರ್ಗಂಧೇ ಪೂಯಫೇನಿಲೇ |
ಅನಾಭೇಸ್ತತ್ರ ಮಗ್ನೋಽಸ್ಮಿ ಲಿಹನ್ ಪೂಯಮಧೋಮುಖಃ || ೧೭೬ ||

ತಥೋಪರಿ ಮಹಾಗೃಧ್ರೈರ್ಭಕ್ಷ್ಯಮಾಣಶ್ಚ ವಾಯಸೈಃ |
ಕ್ರಿಮಿಭಿಸ್ತುದ್ಯಮಾನಶ್ಚ ಭಗ್ನದೇಹೋ ನಿರಂತರಂ || ೧೭೭ ||

ತಸ್ಮಿನ್ ಶೋಣಿತಪಂಕೇಽಹಂ ನಿರುಚ್ಛ್ವಾಸೋಽಭವಂ ತದಾ |
ಮುಹೂರ್ತೋಽಪಿ ಮಹಾಕಲ್ಪಸಮೋ ಜಾತೋ ಮಮಾತ್ರ ವೈ || ೧೭೮ ||

ಯಾತನಾಶ್ಚಾನುಭೂತಾಶ್ಚ ಸಮಾಸ್ತ್ರಿಂಶಯುತಂ ಮಯಾ |
ತದ್ವಕ್ತುಂ ಚ ನ ಶಕ್ನೋಮಿ ದುಃಖಂ ವಾನರ ನಾರಕಂ || ೧೭೯ ||

ಪೌರೋಹಿತ್ಯಂ ಮಹಾಘೋರಂ ಪಾಪದಂ ಚ ಸ್ವಭಾವತಃ |
ದೇವೋಪಜೀವನಂ ಯತ್ರ ಬ್ರಾಹ್ಮಣಸ್ಯೋಪಜೀವನಂ || ೧೮೦ ||

---

ಕೀವಿನ ನೊರೆಯುಳ್ಳ, ಕಾಲಸೂತ್ರ ನರಕದಲ್ಲಿ ಹೊಕ್ಕಳಿನವರೆಗೂ ತಲೆಕೆಳಗಾಗಿ ಹೂತುಕೊಂಡು ಅವನ್ನೇ ತಿನ್ನುತ್ತಲೂ ನೆಕ್ಕುತ್ತಲೂ ಇದ್ದೆನು.

೧೭೭. ಮೇಲುಗಡೆಯಿಂದ ದೊಡ್ಡದೊಡ್ಡ ಹದ್ದುಗಳೂ ಕಾಗೆಗಳೂ ಕುಕ್ಕಿ ತಿನ್ನುತ್ತಿದ್ದುವು. ಕೆಳಗಡೆಯಲ್ಲಿ ಕ್ರಿಮಿಕೀಟಗಳು ತಿನ್ನುತ್ತಿದ್ದುವು. ಈ ರೀತಿಯಾಗಿ ನನ್ನ ದೇಹವು ಕೆಡುತ್ತಿರಲು ಯಾತನೆಯನ್ನು ಅನುಭವಿಸುತ್ತಿದ್ದೆನು.

೧೭೮. ಆ ರಕ್ತದ ಕೆಸರಿನಲ್ಲಿ ಉಸುರನ್ನು ಕಟ್ಟಿಕೊಂಡು ಒಂದು ಕ್ಷಣಕಾಲವನ್ನು ಒಂದು ಕಲ್ಪಕ್ಕೆ ಸಮವಾಗಿ ಕಳೆಯುತ್ತಿದ್ದೆನು.

೧೭೯. ನಾನು ಕೂಡ ಆ ಯಾತನೆಯನ್ನು ಮೂವತ್ತು ಸಾವಿರ ವರ್ಷಗಳವರೆಗೂ ಅನುಭವಿಸಿದೆನು. ಎಲೈ ವಾನರನೆ? ಆ ದುಃಖದ ವಿಷಯವನ್ನು ಹೇಳಲು ಶಕ್ತಿಸಾಲದು.

೧೮೦. ಪೌರೋಹಿತ್ಯವು ಬಹು ಕ್ರೂರವಾದುದು. ಸ್ವಭಾವವಾಗಿಯೇ ಪಾಪವನ್ನುಂಟುಮಾಡುತ್ತದೆ. ಅದು ದೇವತೆಗಳಿಗೂ ಆಹಾರವನ್ನು ಕೊಡಿಸುತ್ತದೆ. ಬ್ರಾಹ್ಮಣನಿಗೂ ಜೀವಿಕೆಯಾಗಿರುತ್ತದೆ. ಆದರೂ ಘೋರವಾದುದು.

ರಾಜ್ಞಃ ಪ್ರತಿಗ್ರಹೋ ಘೋರಃ ತೇನ ದಗ್ಧಾ ದ್ವಿಜಾತಯಃ |
ತೇಷಾಮಪಿ ಹರೇರ್ದ್ರವ್ಯಂ ಪುರೋಧಾಸ್ತೇನ ನಾರಕೀ || ೧೮೧ ||

ರಾಜಾ ಯತ್ಕುರುತೇ ಪಾಪಂ ಪುರೋ ದೇಹೇನ ಧೀಯತೇ |
ತಸ್ಯ ತೇನ ಪುರೋಧಾಶ್ಚ ಗೀತಯತೇ ತತ್ವದರ್ಶಿಭಿಃ || ೧೮೨ ||

ದೈವಾತ್ಕಥಮಪಿ ಪ್ರಾಪ್ತ ಉತ್ತರೋ ನರಕಾಂಬುಧೇಃ |
ಮಯಾದೌ ದೈವಯೋಗೇನ ಶಕುನಿತ್ವಮುಪಸ್ಥಿತಂ || ೧೮೩ ||

ತದಪಿ ಶ್ರೂಯತಾಂ ವಕ್ಷ್ಯೇ ನಿಶ್ಶೇಷೇಣ ಸಹೇತುಕಂ |
ಅಪಹೃತ್ಯ ಪುರಾ ಕಾಂಸ್ಯಭಾಜನಂ ಭಗಿನೀಗೃಹಾತ್ || ೧೮೪ ||

ಆಕ್ಷಿಕಾಯ ಮಯಾ ದತ್ತಂ ತೇನ ಮೇ ಸಾರಸೀ ಗತಿಃ |
ಇಯಂ ಚ ಬ್ರಾಹ್ಮಣೀ ಪೂರ್ವಂ ಕಾಂಸ್ಯಚೌರೀ ಸುದಾರುಣಾ || ೧೮೫ ||

---

೧೮೧. ರಾಜನಿಂದ ದಾನತೆಗೆದುಕೊಳ್ಳುವುದು ಮಹಾಪಾಪಕರವು. ಅದರಿಂದ ಬ್ರಾಹ್ಮಣನು ಹಾಳಾಗಿ ಹೋಗುತ್ತಾನೆ. ಆ ರಾಜನಿಂದ ದಾನತೆಗೆದು ಕೊಳ್ಳುವುದಕ್ಕಿಂತಲೂ ಹರಿಯ (ದೇವರ) ದ್ರವ್ಯವು ಬಹುಕೆಟ್ಟದು. ಅದರಿಂದ ಪುರೋಹಿತನು ನರಕಭಾಗಿಯಾಗುತ್ತಾನೆ.

೧೮೨. ರಾಜನು ಮಾಡಿದ ಪಾಪವು ಪುರೋಹಿತನ ರೂಪವಾದ ಮುಂದಿನ ಶರೀರದಿಂದ ಧರಿಸಲ್ಪಡುತ್ತದೆ. ಆದ್ದರಿಂದ ಮುಂದೆ ಇರತಕ್ಕವನು ಪುರೋಹಿತನು ಎಂದು ತತ್ವವನ್ನು ಬಲ್ಲವರು ಪುರೋಹಿತ ಶಬ್ದದ ಅರ್ಥವನ್ನು ಹೇಳುತ್ತಾರೆ.

೧೮೩. ಅನಂತರ ಆ ನರಕ ಸಮುದ್ರದಿಂದ ಅದೃಷ್ಟದಶದಿಂದ ಹೊರಗೆ ಬಂದೆನು. ದೈವಯೋಗದಿಂದ ಮೊದಲೇನೇ ಈ ಪಕ್ಷಿಜನ್ಮವು ಬಂದಿತು.

೧೮೪–೧೮೬. ಈ ಪಕ್ಷಿಜನ್ಮವು ಬರಲು ಕಾರಣವೇನೆಂಬುದನ್ನು ಹೇಳುತ್ತೇನೆ. ಪೂರ್ವದಲ್ಲಿ ನನ್ನ ಸೋದರಿಯ ಮನೆಯಿಂದ ಒಂದು ಕಂಚಿನ ಪಾತ್ರೆಯನ್ನು ಕದ್ದು ತಂದು ಜೂಜುಗಾರನಿಗೆ ಕೊಟ್ಟೆನು. ಆದ್ದರಿಂದ ನಾನು ಈ ಸಾರಸ ಪಕ್ಷಿಯಾಗಿ ಹುಟ್ಟಿದೆನು. ನನ್ನ ಹೆಂಡತಿಯೂ ಪೂರ್ವದಲ್ಲಿ ಬ್ರಾಹ್ಮಣಿಯಾಗಿದ್ದಳು. ಕಂಚನ್ನು ಕದ್ದಳು. ಆ ಪಾಪದಿಂದ ಸಾರಸ

ತೇನೇಯಂ ಸಾರಸೀ ಜಾತಾ ಮದ್ಭಾರ್ಯಾ ಧರ್ಮಚಾರಿಣೀ ।
ಇತ್ಥಂ ವಾನರ ತೇ ಸರ್ವಂ ಕಥಿತಂ ಕರ್ಮಣಃ ಫಲಂ ॥ ೧೮೬ ॥

ವೃತ್ತಂ ಚ ವರ್ತಮಾನಂ ಚ ಭವಿಷ್ಯಂ ಶೃಣು ಸಾಂಪ್ರತಂ ।
ಅಹಂ ಹಂಸೋ ಭವಿಷ್ಯಾಮಿ ತ್ವಂ ಚ ಹಂಸೋ ಭವಿಷ್ಯಸಿ ॥ ೧೮೭ ॥

ಹಂಸೀಯಮಪಿ ಮದ್ಭಾರ್ಯಾ ಸಾರಸೀ ಚ ಭವಿಷ್ಯತಿ ।
ದೇಶೇ ಚ ಕಾಮರೂಪೇ ವೈ ಸ್ಥಾಸ್ಯಾಮೋತ್ರ ಯಥಾಸುಖಂ ॥ ೧೮೮ ॥

ಗೋಯೋನಿಂ ಭಾವಿಕಲ್ಯಾಣೀಂ ಯಾಸ್ಯಾಮಸ್ತದನಂತರಂ ।
ತತಶ್ಚ ಮಾನುಷಂ ಜನ್ಮ ಪ್ರಾಪ್ಸ್ಯಾಮೋ ದುರ್ಲಭಂ ಪುನಃ ॥ ೧೮೯ ॥

ಶ್ರೇಯಸ್ತದ್ವಿಪರೀತಂ ಚ ಪ್ರಾಣಿಭಿರ್ಯತ್ರ ಸಾಧ್ಯತೇ ।
ಏವಂ ಸರ್ವಾನ್ ಶಿವೋ ಜಂತೂನ್ ಮೋಹಯಿತ್ವಾ ಸ್ವಮಾಯಯಾ ॥೧೯೦॥

---

ಪಕ್ಷಿಯಾಗಿ ನನ್ನ ಹೆಂಡತಿಯಾಗಿದ್ದಾಳೆ. ಇದೇ ನನ್ನ ಕಥೆಯು. ನಿನಗೆ ಎಲ್ಲಾ ಕಥೆಯನ್ನೂ ಹೇಳಿದ್ದೇನೆ. ಇದು ನನ್ನ ಕರ್ಮದ ಫಲವು.

೧೮೭–೧೮೮. ಇದುವರೆಗೂ ಹಿಂದಿನ ಜನ್ಮಗಳನ್ನು ಹೇಳಿದೆನು ಇನ್ನು ಮುಂದಿನ ವಿಷಯಗಳನ್ನು ಹೇಳುತ್ತೇನೆ. ಕೇಳು ನಾನು ಹಂಸವಾಗಿ ಹುಟ್ಟುತ್ತೇನೆ. ನೀನು ಹಂಸವಾಗಿ ಹುಟ್ಟುತ್ತೀಯೆ. ಈ ನನ್ನ ಹೆಂಡತಿಯಾದ ಸಾರಸಿಯೂ ಹಂಸೆಯಾಗಿ ಹುಟ್ಟುತ್ತಾಳೆ. ಹೀಗೆ ಹುಟ್ಟಿ ನಾವೆಲ್ಲರೂ ಕಾಮ ರೂಪ ದೇಶದಲ್ಲಿ ಸುಖವಾಗಿರುತ್ತೇವೆ.

೧೮೯. ಅನಂತರ ಗೋವಾಗಿ ಹುಟ್ಟುತ್ತೇವೆ. ಅನಂತರ ಲೋಕದಲ್ಲಿ ಹೊಂದಲಸಾಧ್ಯವಾದ ಮನುಷ್ಯ ದೇಹವನ್ನು ಹೊಂದುತ್ತೇವೆ.

೧೯೦-೧೯೧. ಯಾವನು ಮನಷ್ಯಜನ್ಮವನ್ನು ಹೊಂದಿ ಶ್ರೇಯಸ್ಸನ್ನಾಗಲಿ ಅಥವಾ ಅದಕ್ಕೆ ವಿರುದ್ಧವಾದುದನ್ನಾಗಿ ಯಾವ ಮನುಷ್ಯಜನ್ಮದಲ್ಲಿ ಸಾಧಿಸಿ ಕೊಳ್ಳಬಹುದೋ ಅಂತಹ ಮನುಷ್ಯ ಜನ್ಮವನ್ನು ಹೋಂದುತ್ತೇವೆ. ಈ ರೀತಿಯಾಗಿ ಪರಮಾತ್ಮನು ಎಲ್ಲಜಂತುಗಳನ್ನೂ ತನ್ನ ಮಾಯೆಯಿಂದ

ಸುಖೈರ್ಭುನಕ್ತಿ ದುಃಖೈಶ್ಚ ನಾಸ್ಮಾನಪಿ ಚ ಕೇವಲಂ ।
ಅಯಂ ಲೋಕೇ ಪ್ರವೃತ್ತಶ್ಚ ಮಾರ್ಗೋ ವಿಧಿವಿನಿರ್ಮಿತಃ ॥ ೧೯೧ ॥

ಧರ್ಮಾಧರ್ಮಮಯೋತ್ಯರ್ಥಂ ಸುಖದುಃಖಫಲಾತ್ಮಕಃ ।
ಸೇವಿತಃ ಪ್ರಾಣಿಭಿಸ್ಸರ್ವೈಃ ಸರ್ವದಾ ವೈ ಪುನಃ ಪುನಃ ॥ ೧೯೨ ॥

ದೇವಾಸುರನರವ್ಯಾಘ್ರಕ್ರಿಮಿಕೀಟಕಲೇಬರೈಃ ।
ನಾತಿಕ್ರಾಂತೋ ಹಿ ಕೇನಾಪಿ ಪಂಥಾಯಂ ದುಃಖಕಂಟಕಃ ॥ ೧೯೩ ॥

ವಿರಕ್ತಾನ್ ಯೋಗಿನೋ ಧೀರಾನ್ ವಿನಾ ವೇದಾಂತಪಾರಗಾನ್ ।
ಅಣೋರ್ವಾಪಿ ಗುರೋರ್ವಾಪಿ ಪುಣ್ಯಾಪುಣ್ಯಸ್ಯ ಕರ್ಮಣಃ ॥ ೧೯೪ ॥

ದದಾತೀಹ ಫಲಂ ಜ್ಞಾತ್ವಾ ದೇಶಕಾಲಂ ಮಹೇಶ್ವರಃ ।
ಇತ್ಥಂ ವಿಧಿವಿಧಾನಜ್ಞಾ ಮಾಯಾಂ ಜ್ಞಾತ್ವೇಶ್ವರಸ್ಯ ಚ ॥ ೧೯೫ ॥

---

ಮೋಹಿಸುವಂತೆ ಮಾಡಿ ಸುಖದುಃಖಗಳನ್ನು ಅನುಭವಿಸುವಂತೆ ಮಾಡುತ್ತಾನೆ. ಆ ಸ್ವಾಮಿಯು ತನ್ನ ಮಾಯೆಯಿಂದ ನಮ್ಮಗಳಿಗೆ ಮಾತ್ರ ಹಾಗೆ ಮಾಡುವುದಿಲ್ಲ. ಈ ಮಾರ್ಗವೇ ಲೋಕದಲ್ಲಿ ದೇವರು ನಿರ್ಮಾಣಮಾಡಿ ಮಾಡಿಸುತ್ತಿರುವುದೂ ಕೂಡ ಆಗಿದೆ.

೧೯೨. ಧರ್ಮ ಅಧರ್ಮಗಳಿಂದ ಕೂಡಿದ ಸುಖದುಃಖಗಳ ಫಲವೇ ಬಹುವಾಗಿ ಉಳ್ಳ ಈ ದಾರಿಯನ್ನು ಪ್ರಾಣಿಗಳು ಬಾರಿ ಬಾರಿಗೂ ಸೇವಿಸುತ್ತವೆ.

೧೯೩. ಈ ದುಃಖವೆಂಬ ಮುಳ್ಳಿನಿಂದ ಕೂಡಿದ ದಾರಿಯು ದೇವತೆಗಳು, ಅಸುರರು, ನರರು ವ್ಯಾಘ್ರಗಳು, ಕ್ರಿಮಿಗಳು ಕೀಟಗಳು ಯಾವುದೇ ದೇಹಿಯಾಗಲಿ ಅವು ಒಂದರಿಂದಲೂ ಮೀರಲಾಗದಿರುವುದು.

೧೯೪-೧೯೬. ವಿರಕ್ತರು, ಯೋಗಿಗಳು, ಇಂದ್ರಿಯನಿಗ್ರಹಿಗಳು, ವೇದಾಂತಪಾರಗರು ಇವರನ್ನು ಬಿಟ್ಟು ಅಣುವಿಗಾಗಲಿ ಮಹತ್ತಿಗಾಗಲಿ ಪುಣ್ಯಾಪಾಪಗಳ ಫಲವು ತಪ್ಪಿದುದಲ್ಲ. ಆ ಪ್ರಾಣಿಗಳ ಕಾಲ ದೇಶಗಳನ್ನು ನೋಡಿಕೊಂಡು ಅವುಗಳ ಫಲವನ್ನು ಈಶ್ವರನು ಕೊಡುತ್ತಾನೆ. ಈ ರೀತಿಯಾಗಿ ದೈವದ

ನ ಶೋಚಂತಿ ನ ತಪ್ಯಂತೇ ನ ವ್ಯಥಂತೇ ಮಹಾಧಿಯಃ ।
ನಾನ್ಯಥಾ ಶಕ್ಯತೇ ಕರ್ತುಂ ವಿಪಾಕಃ ಪೂರ್ವಕರ್ಮಣಾಂ ॥ ೧೯೬ ॥

ಉಪಾಯೈಃ ಪ್ರಜ್ಞಯಾ ವಾಪಿ ಶಾಖಾಮೃಗ ಸುರೈರಪಿ ।
ಪುರಾ ತ್ವಂ ಭೂಪತಿರ್ಜಾತಃ ಪಶ್ಚಾ ಜ್ಜಾತೋಽಸಿ ನಾರಕೀ ॥ ೧೯೭ ॥

ಅಧುನಾ ವಾನರೋ ಭೂಯೋ ಜನ್ಮ ಪ್ರಾಪ್ಸ್ಯಸಿ ತಾದೃಶಂ ।
ಇತಿ ಮತ್ವಾ ವಿಶೋಕಸ್ತ್ವಂ ಶಾಖಾಮೃಗ ಯಥಾಸುಖಂ ॥ ೧೯೮ ॥

ಪ್ರತೀಕ್ಷಾಂ ಕುರು ಕಾಲಸ್ಯ ರಮಮಾಣೋತ್ರ ಕಾನನೇ ।
ಅಹಮಪ್ಯೇವಮೀಶಾನಮಾಯಾಬದ್ಧೋ ವನೇ ವನೇ ॥
ಕ್ಷಪಯಿಷ್ಯಾಮಿ ವೈ ಜನ್ಮ ಧೈರ್ಯಮಾಸ್ಥಾಯ ಸಾಹಸಂ ॥ ೧೯೯ ॥

---

ರೀತಿಯನ್ನು ಬಲ್ಲವರು ಈಶ್ವರನ ಮಾಯೆಯನ್ನು ತಿಳಿದು ದುಃಖಿಸಬಾರದು. ತಪಿಸಬಾರದು. ವ್ಯಥೆಪಡಬಾರದು. ಪೂರ್ವಜನ್ಮದಲ್ಲಿ ಮಾಡಿದ ಕರ್ಮಗಳನ್ನು ಬದಲಾಯಿಸಲು ಯಾರಿಂದಲೂ ಆಗುವುದೇ ಇಲ್ಲ.

೧೯೭-೧೯೯. ಆ ಕರ್ಮಗಳ ವಿಪಾಕವನ್ನು ಯಾರಾದರೂ ಯಾವ ರೀತಿಯಾದ ಉಪಾಯಗಳಿಂದಲೂ ಬೇರ್ಪಡಿಸಾಗುವುದೇ ಇಲ್ಲ. ಅದು ಉಪಾಯಕ್ಕೂ ಬುದ್ಧಿಗೂ ಮೀರಿದುದು. ನೀನು ಮೊದಲು ರಾಜನಾಗಿದ್ದೆ. ಆಮೇಲೆ ನರಕವನ್ನು ಅನುಭವಿಸಿದೆ. ಈಗ ವಾನರನಾಗಿದ್ದೀಯೆ. ಮತ್ತೆ ವಾನರನೇ ಆಗುತ್ತೀಯೆ. ಇದನ್ನು ತಿಳಿದು ನೀನು ದುಃಖಪಡದೆ ಎಲೈ ವಾನರನೇ! ಸುಖವಾಗಿ ಕಾಡಿನಲ್ಲಿ ಕಾಲಕಳೆಯುತ್ತಾ ಕಾಲವನ್ನು ನಿರೀಕ್ಷಿಸುತ್ತಿರು. ಈಶ್ವರನ ಮಾಯೆಗೆ ಕಟ್ಟುಬಿದ್ದು ನಾನು ಕೂಡ ಒಂದೊಂದು ವನದಲ್ಲಿಯೂ ಇದ್ದುಕೊಂಡು ಸಾಹಸದಿಂದ ಧೈರ್ಯವನ್ನು ತಂದುಕೊಂಡು ಕಾಲಕಳೆಯುತ್ತೇನೆ.

|| ವಾನರ ಉವಾಚ ||

ಮಯಾ ತ್ವಂ ಪೂಜಿತಃ ಪೂರ್ವಂ ನೌಮಿ ತ್ವಾಮಧುನಾಪ್ಯಹಂ |
ಜಾತಿಸ್ಮರೋಽಸಿ ಜಾನಾಮಿ ಸರ್ವಂ ಮೇ ಪೌರ್ವದೇಹಿಕಂ || ೨೦೦ ||

ತಿಷ್ಠ ಸಾರಸ ಸಾರಸ್ಯಾ ಶಿವಮಸ್ತು ಸದಾ ತವ |
ತ್ವದ್ವಾಕ್ಯಾದ್ಗತಮೋಹೋಽಹಂ ವಿಚರಿಷ್ಯಾಮಿ ಸರ್ವದಾ || ೨೦೧ ||

|| ಪ್ರೇತ ಉವಾಚ ||

ಇತ್ಥಂ ರಮ್ಯಂ ವಿಚಿತ್ರಂ ಚ ಪವಿತ್ರಂ ಪರಮಂ ದ್ವಿಜ |
ಪಕ್ಷಿವಾನರಸಂವಾದೇ ಶ್ರುತಂ ಯಾವನ್ನದೀತಟೇ || ೨೦೨ ||

ತಾವನ್ಮಮಾಪಿ ಬೋಧೋಽಭೂತ್ ತೇನ ಶೋಕಃ ಕ್ಷಯಂ ಗತಃ |
ಇದಾನೀಂ ಜಾಹ್ನವೀತೋಯಮಾಹಾತ್ಮ್ಯಂ ಪರಮಾದ್ಭುತಂ || ೨೦೩ ||

---

೨೦೦. ವಾನರವು ಹೇಳಿತು-ಪೂರ್ವದಲ್ಲಿ ನೀನು ನನ್ನಿಂದ ಗೌರವಿಸಲ್ಪಟ್ಟಿದ್ದೀಯೆ. ಈಗಲೂ ನಿನ್ನನ್ನು ನಾನು ನಮಸ್ಕರಿಸುತ್ತೇನೆ ನೀನು ಪೂರ್ವಜನ್ಮದ ಜಾತಿಗಳನ್ನು ಸ್ಮರಿಸಿಕೊಳ್ಳುತ್ತಿದ್ದೀಯೆ. ನನ್ನ ಪೂರ್ವದೇಹದ ವಿಷಯಗಳನ್ನು ಸ್ಮರಿಸುತ್ತಿದ್ದೀಯೆ. ನನಗೆ ಗೊತ್ತಾಯಿತು. ನನಗೂ ಅವು ಜ್ಞಾಪಕಕ್ಕೆ ಬರುತ್ತಿವೆ.

೨೦೧. ಎಲೈ ಸಾರಸನೇ! ನೀನು ಹೆಣ್ಣುಸಾರಸ ಪಕ್ಷಿಯೊಡನೆ ಸುಖವಾಗಿರು. ನಿನಗೆ ಮಂಗಳವಾಗಲಿ. ನಿನ್ನ ಮಾತಿನಿಂದ ನನ್ನ ಅಜ್ಞಾನವು ನಾಶವಾಯಿತು. ಅದರಂತೆಯೇ ನಾನು ಕಾಲವನ್ನು ಕಳೆಯುತ್ತೇನೆ.

೨೦೨. ಪ್ರೇತವು ಹೇಳಿತು-ರಮ್ಯವೂ ವಿಚಿತ್ರವೂ ಉತ್ತಮವೂ ಆದ ಈ ಪಕ್ಷಿವಾನರರ ಸಂವಾದವು ನದಿಯ ದಡದಲ್ಲಿ ನಡೆದುದನ್ನು ಕೇಳಿದೆನು.

೨೦೩-೨೦೪. ಅದನ್ನು ಕೇಳಿದೊಡನೆಯೇ ನನಗೂ ಜ್ಞಾನೋದಯವಾಯಿತು. ಅದರಿಂದ ನನ್ನ ದುಃಖವೂ ಕಡಿಮೆಯಾಯಿತು. ನಿನ್ನ ಬಳಿ ಇರುವುದನ್ನು ಗಂಗಾನದಿಯ ತೀರ್ಥದ ಮಹಿಮೆಯನ್ನು ಕೇಳಿ ನೋಡಿ ಅದರಿಂದ

ದ್ವಿಷ್ಟ್ವಾತ್ರ ಬ್ರಾಹ್ಮಣಶ್ರೇಷ್ಠಂ ತ್ವಾಂ ಯಾಚೇ ಜಾಹ್ನವೀಜಲಂ ।
ಪ್ರೇತತ್ವಾತ್ತರ್ತುಕಾಮೋಽಹಂ ತೀವ್ರತೃಷ್ಣಾಪ್ರಪೀಡಿತಃ ॥ ೨೦೪ ॥

ಅಸ್ಮಿನ್ನೇವ ಗಿರೌ ದೃಷ್ಟಂ ಮಯಾಶ್ಚರ್ಯಂ ಮಹಾದ್ಭುತಂ ।
ಗಂಗಾಶೋಯಸ್ಯ ತೇನಾಹಂ ವಾಂಛಾಮಿ ಸುಜಲಂ ದ್ವಿಜ ॥ ೨೦೫ ॥

ಪರಿಶ್ರಾಂತೋಽಭವತ್ಕಶ್ಚಿದ್ಬ್ರಾಹ್ಮಣೋ ಗ್ರಾಮಯಾಜಕಃ ।
ಅಯಾಜ್ಯಯಾಜನಾದ್ವಿಂಧ್ಯೇ ಸಂಭೂತೋ ಬ್ರಹ್ಮರಾಕ್ಷಸಃ ॥ ೨೦೬ ॥

ಅಸ್ಮತ್ಸಂಗಸ್ಯ ಲೋಭೇನ ಸ್ಥಿತೋಽಸೌ ಹಾಯನಾಷ್ಟಕಂ ।
ತಸ್ಯಾಸ್ಥೀನಿ ಚ ಪುತ್ರೇಣ ಸಂಚಿತಾನಿ ದ್ವಿಜೋತ್ತಮ ॥ ೨೦೭ ॥

ಕ್ಷಿಪ್ತಾನ್ಯಾನೀಯ ಗಂಗಾಯಾಂ ತೀರ್ಥೇ ಕನಕಮೇಖಲೇ ।
ತತ್ಕ್ಷಣಾದೇವ ಮುಕ್ತೋಽಸೌ ರಾಕ್ಷಸತ್ವಾತ್ಸುದಾರುಣಾತ್ ॥ ೨೦೮ ॥

---

ನಿನ್ನನ್ನು ಕೇಳುತ್ತಿದ್ದೇನೆ. ಅದನ್ನು ಕುಡಿದರೆ ಹಸಿವು ಬಾಯಾರಿಕೆಗಳಿಂದ ತೊಂದರೆ ಕೊಡುತ್ತಿರುವ ಈ ಪ್ರೇತಜನ್ಮವು ಹೋಗುತ್ತದೆ.

೨೦೫. ಈ ಬೆಟ್ಟದಲ್ಲಿಯೇ ಗಂಗೆಯ ನೀರಿನ ಮಹಿಮೆಯನ್ನು ನಾನು ನೋಡಿದೆನು. ಆದ್ದರಿಂದ ಆ ನೀರನ್ನು ಕೇಳುತ್ತಿದ್ದೇನೆ.

೨೦೬ ಒಬ್ಬ ಬ್ರಾಹ್ಮಣನು ಊರಿನವರಿಗೆಲ್ಲಾ ಪೌರೋಹಿತ್ಯವನ್ನು ಮಾಡಿಸುದ್ದಿದ್ದನು. ಇದರಿಂದಲೇ ಅವನು ಬಹುವಾಗಿ ಬಳಲಿದ್ದನು. ಅವನು ಈ ವಿಂಧ್ಯದಲ್ಲಿ ಸತ್ತುಹೋದನು ಈತನು ಅಯೋಗ್ಯರಿಗೆಲ್ಲರಿಗೂ ಯಾಗಾದಿಗಳನ್ನು ಮಾಡಿಸುತ್ತಿದ್ದುದರಿಂದ ವಿಂಧ್ಯದಲ್ಲಿ ಬ್ರಹ್ಮರಾಕ್ಷಸನಾಗಿ ಹುಟ್ಟಿದನು.

೨೦೭-೨೦೮. ಅವನು ಪಿಶಾಚಿಯಾಗಿ ನಮ್ಮಜೊತೆಯಲ್ಲಿಯೇ ಇದ್ದುಕೊಂಡಿದ್ದನು. ಅದೇ ರೀತಿಯಲ್ಲಿ ಎಂಟುವರ್ಷಗಳವರೆಗೆ ಇದ್ದನು. ಅನಂತರ ಒಂದುಸಾರಿ ಅವನ ಮಗನು ತಂದೆಯ ಮೂಳೆಗಳನ್ನು ಆಯ್ದುಕೊಂಡು ಹೋಗಿ ಗಂಗೆಯಲ್ಲಿ ಕನಕಮೇಖಲದಲ್ಲಿ ಹಾಕಿದನು. ಒಡನೆಯೇ ಅವನಿಗೆ ಆ ರಾಕ್ಷಸ ಜನ್ಮದಿಂದ ಮುಕ್ತಿಯು ಬಂದಿತು.

ಇತಿ ಗಂಗಾಜಲಸ್ಯಾಲಂ ಮಹಿಮಾ ಚ ಮಹಾದ್ಭುತಃ ।
ಸಾಕ್ಷಾದ್ದೃಷ್ಟೋ ಮಯಾ ತೇನ ಗಾಂಗೇಯಂ ಪ್ರಾರ್ಥಯೇಜಲಂ॥೨೦೯॥

ಪುರಸ್ತಾದ್ಯಃ ಕೃತಸ್ತೀರ್ಥೇ ಮಯಾ ಭೂರಿಪರಿಗ್ರಹಃ ।
ನ ಕೃತಸ್ಸುಪ್ರತೀಕಾರಃ ತಸ್ಯ ಜಾಪ್ಯಾದಿಲಕ್ಷಣಃ ॥ ೨೧೦ ॥

ತೇನ ಮೇ ಪ್ರೇತರೂಪಸ್ಯ ದುರ್ಲಭಂ ದಕಭೋಜನಂ ।
ಸಹಸ್ರತ್ರಯಮಬ್ದಾನಾಮತೀತಂ ವಿಂಧ್ಯಪರ್ವತೇ ॥ ೨೧೧ ॥

ಇತಿ ಮೇ ಕಥಿತಂ ಸರ್ವಂ ಹಿತ್ವಾ ಲಜ್ಜಾಂ ಗರೀಯಸೀಂ ।
ಇದಾನೀಂ ಧಾರ್ಮಿಕಶ್ರೇಷ್ಠ ಜಲದಾನೇನ ಸತ್ವರಂ ॥ ೨೧೨ ॥

ಸಂತರ್ಪಯ ಮಮ ಪ್ರಾಣಾನ್ ಕಂಠಮಾತ್ರಾವಲಂಬಿತಾನ್ ।
ದುರ್ಲಭಂ ಪ್ರೇತಭಾವೇಽಪಿ ಜೀವಿತಂ ಪ್ರಾಣಿನಾಮಪಿ ॥ ೨೧೩ ॥

---

೨೦೯. ಈ ರೀತಿಯಾಗಿ ಗಂಗೆಯ ನೀರಿನ ಅದ್ಭುತವಾದ ಮಹಿಮೆಯನ್ನು ನಾನೇ ಪ್ರತ್ಯಕ್ಷವಾಗಿ ನೋಡಿದೆನು. ಆದ್ದರಿಂದ ಗಂಗೆಯ ನೀರನ್ನು ಪ್ರಾರ್ಥಿಸುತ್ತೇನೆ.

೨೧೦. ನಾನು ಪೂರ್ವದಲ್ಲಿ ತೀರ್ಥದಲ್ಲಿ ಅನೇಕವಾಗಿ ದಾನಗಳನ್ನು ತೆಗೆದುಕೊಂಡೆನು. ಆದರೆ ಅದಕ್ಕೆ ಪ್ರತೀಕಾರರೂಪವಾದ ಜಪಾದಿಗಳನ್ನು ಮಾಡಲೇ ಇಲ್ಲ.

೨೧೧. ಆದ್ದರಿಂದ ಪ್ರೇತರೂಪನಾಗಿರುವ ನನಗೆ ಅನ್ನ ನೀರು ಸಿಕ್ಕುವುದು ಕಷ್ಟವಾಗಿದೆ. ಇದೇ ರೀತಿಯಲ್ಲಿ ಈ ವಿಂಧ್ಯಪರ್ವತದಲ್ಲಿದ್ದುಕೊಂಡೇ ಮೂರು ಸಾವಿರ ವರ್ಷಗಳನ್ನು ಕಳೆದೆನು.

೨೧೨-೨೧೩. ನಾಚಿಕೆಯನ್ನು ಬಿಟ್ಟು ನನ್ನ ಪ್ರೇತರೂಪವಾದ ಎಲ್ಲಕಥೆಯನ್ನೂ ಹೇಳಿದೆನು. ಎಲೈ ಧಾರ್ಮಿಕನೆ ? ಈಗ ನೀರನ್ನು ದಾನಮಾಡಿ ಕುತ್ತಿಗೆಗೆ ಬಂದು ಸೇರಿಕೊಂಡಿರುವ ನನ್ನ ಪ್ರಾಣಗಳನ್ನು ತೃಪ್ತಿಪಡಿಸು. ಈ ಪ್ರೇತದ ಸ್ಥಿತಿಯಲ್ಲಿಯೂ ಕೂಡ ನಮಗೆ ಪ್ರಾಣಗಳು ಉಳಿಯುವುದು ಕಷ್ಟವಾಗಿದೆ. ಬದುಕುವುದು ಕಷ್ಟವಾಗಿದೆ.

ಶರೀರಂ ರಕ್ಷಣೀಯಂ ತು ಸರ್ವದಾ ಸರ್ವಥಾ ನರೈಃ ।
ನ ಹೀಚ್ಛಂತಿ ತನುತ್ಯಾಗಮಪಿ ಕುಷ್ಠಾದಿರೋಗಿಣಃ ॥ ೨೧೪ ॥

॥ ದೇವದ್ಯುತಿರುವಾಚ ॥

ಇತೀದಂ ವಚನಂ ಶ್ರುತ್ವಾ ವಿಸ್ಮಯಂ ಪರಮಾಗತಃ ।
ಪಥಿಕಶ್ಚಿಂತಯಾಮಾಸ ಕೃಪಾಂ ಪ್ರೇತೇ ಸಮುದ್ವಹನ್ ॥ ೨೧೫ ॥

॥ ಬ್ರಾಹ್ಮಣ ಉವಾಚ ॥

ಪಾಪಪುಣ್ಯಫಲಂ ಲೋಕೇ ಪ್ರತ್ಯಕ್ಷಂ ಖಲು ದೃಶ್ಯತೇ ।
ದೇವದಾನವಮಾನುಷ್ಯಂ ತಿರ್ಯಕ್ತ್ವಂ ಕೃಮಿಕೀಟತಾ ॥ ೨೧೬ ॥

ನಾನಾಯೋನಿಷು ಜನ್ಮಾನಿ ನಾನಾವ್ಯಾಧಿಪ್ರಪೀಡನಂ ।
ಮರಣಂ ಬಾಲವೃದ್ಧಾನಾಮಂಧತ್ವಂ ಮೂಕತಾ ತಥಾ ॥ ೨೧೭ ॥

---

೨೧೪. ಪ್ರಾಣಿಗಳಾದವರು ಶರೀರವನ್ನು ಯಾವಾಗಲೂ ಎಲ್ಲಾ ರೀತಿಯಿಂದಲೂ ಕಾಪಾಡಿಕೊಳ್ಳಬೇಕು. ಕುಷ್ಠಾದಿ ರೋಗವುಳ್ಳವರೂ ಕೂಡ ಪ್ರಾಣವನ್ನು ಬಿಡುವುದಕ್ಕೆ ಅಪೇಕ್ಷಿಸುವುದಿಲ್ಲ.

೨೧೫. ದೇವದ್ಯುತಿಯು ಹೇಳಿದನು-ಆ ಪ್ರಯಾಣಿಕನು ಈ ಪ್ರೇತದ ಮಾತನ್ನು ಕೇಳಿ ಬಹುವಾಗಿ ಆಶ್ಚರ್ಯಪಟ್ಟು ಆ ಪ್ರೇತದ ವಿಷಯದಲ್ಲಿ ದಯೆಯನ್ನು ಹೊಂದಿ ಇಂತೆಂದು ಯೋಚಿಸಿದನು.

೨೧೬-೨೧೮. ಬ್ರಾಹ್ಮಣನು ಹೇಳಿದನು–ಪಾಪಪುಣ್ಯಗಳ ಫಲವು ಲೋಕದಲ್ಲಿ ಪ್ರತ್ಯಕ್ಷವಾಗಿಯೇ ಕಾಣುತ್ತದೆ. ದೇವತೆಗಳು, ದಾನವರು, ಮನುಷ್ಯರು, ಕೀಳುಜಾತಿಯ ಕ್ರಿಮಿಕೀಟಗಳು ಈ ಬಗೆ ಬಗೆಯ ಜನ್ಮದಲ್ಲಿ ಹುಟ್ಟುವಿಕೆ, ಬಗೆ ಬಗೆಯ ರೋಗಗಳಿಂದ ತೊಂದರೆಪಡುವುದು, ಮಕ್ಕಳುತನದಲ್ಲಿ ಸಾಯುವುದು, ಕಿವುಡು, ಕುರುಡು, ಮೂಗು, ಐಶ್ವರ್ಯ, ದಾರಿದ್ರ್ಯ, ಪಾಂಡಿತ್ಯ,

ಐಶ್ವರ್ಯಂ ಚ ದರಿದ್ರತ್ವಂ ಪಾಂಡಿತ್ಯಂ ಮೂರ್ಖತಾ ತಥಾ ।
ಏತಾಶ್ಚ ರಚನಾ ಲೋಕೇ ಭವಂತಿ ಕಥಮನ್ಯಥಾ ॥ ೨೧೮ ॥

ತೇ ಧನ್ಯಾಃ ಕರ್ಮಭೂಮೌ ಯೇ ನ್ಯಾಯಮಾರ್ಗಾರ್ಜಿತಂ ಧನಂ ।
ಸತ್ಪಾತ್ರೇಭ್ಯಃ ಪ್ರಯಚ್ಛಂತಿ ಕುರ್ವಂತಿ ಚಾತ್ಮನೋ ಹಿತಂ ॥ ೨೧೯ ॥

ಭೂಮಿರತ್ನಹಿರಣ್ಯಾನಿ ಗಾವೋ ಧಾನ್ಯಂ ಗೃಹಂ ಗಜಾಃ ।
ರಥಾಶ್ವವಸನಗ್ರಾಮಾಃ ಸಿದ್ಧಮನ್ನಂ ಜಲಂ ಫಲಂ ॥ ೨೨೦ ॥

ಕನ್ಯಾ ದಿವ್ಯೌಷಧಂ ಚಾನ್ನಂ ಛತ್ರೋಪಾನದ್ವರಾಸನಂ ।
ಶಯ್ಯಾತಾಂಬೂಲಮಾಲ್ಯಾನಿ ತಾಲವೃಂತಂ ವಿರಾಜಿತಂ ॥ ೨೨೧ ॥

ಸರ್ವಮೇತತ್ಪ್ರದಾತವ್ಯಂ ಲೋಕದ್ವಯಜಿಗೀಷುಭಿಃ ।
ದತ್ತಂ ಹಿ ಪ್ರಾಪ್ಯತೇ ಸ್ವರ್ಗೇ ದತ್ತಮೇವ ಹಿ ಭುಜ್ಯತೇ ॥ ೨೨೨ ॥

---

ಮೂರ್ಖತನ, ಇವೆಲ್ಲವೂ ಕೂಡ ಪಾಪಪುಣ್ಯಗಳ ರಚನೆಗಳಲ್ಲವೆ! ಆ ಪಾಪಪುಣ್ಯಗಳಿಲ್ಲದಿದ್ದರೆ ಬೇರೆ ಬೇರೆ ರೀತಿಯಿಂದ ಇವು ಹೇಗಾಗುತ್ತಿದ್ದುವು ?

೨೧೯. ನ್ಯಾಯದ ರೀತಿಯಲ್ಲಿ ಹಣವನ್ನು ಸಂಪಾದಿಸಿ ಯೋಗ್ಯರಾದವರಿಗೆ ಅದನ್ನು ದಾನಮಾಡಿ ಯಾರು ತಮ್ಮ ಹಿತವನ್ನು ಸಂಪಾದಿಸಿಕೊಳ್ಳುತ್ತಾರೆಯೋ ಅವರೇ ಲೋಕದಲ್ಲಿ ಧನ್ಯರು.

೨೨೦–೨೨೨. ಭೂಮಿ, ರತ್ನ, ಚಿನ್ನ, ಗೋವು, ಧಾನ್ಯ, ಮನೆ, ಆನೆ, ರಥ, ಕುದುರೆ, ಒಂಟೆ, ಗ್ರಾಮ, ಸಿದ್ಧವಾದ ಅನ್ನ, ನೀರು, ಹಣ್ಣು, ಕನ್ಯೆ, ಔಷಧಿ, ಅನ್ನ, ಛತ್ರಿ, ಜೋಡು, ಆಸನ, ಹಾಸಿಗೆ, ತಾಂಬೂಲ, ಹೂವು ಬೀಸಣಿಗೆ, ಇವೆಲ್ಲವನ್ನೂ ಇಹಪರಗಳಲ್ಲಿ ಸುಖವಾಗಿರಬೇಕೆಂದೆನ್ನುವವನು ಕೊಡಬೇಕು. ನಾವು ದಾನಮಾಡಿರುವುದೇ ಸ್ವರ್ಗದಲ್ಲಿಯೂ ಸಿಕ್ಕುತ್ತದೆ. ನಾವು ಕೊಟ್ಟದ್ದನ್ನೇ ಅನುಭವಿಸುತ್ತೇವೆ

ಛತ್ರಚಾಮರಯಾನಾನಿ ವರಾಶ್ಚ ವರವಾರಣಾಃ ।
ಹರ್ಮ್ಯಾಣಿ ವರಶಯ್ಯಾಶ್ಚ ಗೋಮಹಿಷ್ಯೋ ವರಸ್ತ್ರಿಯಃ　　॥ ೨೨೩ ॥

ರತ್ನಭೂಷಣಮುಕ್ತಾಶ್ಚ ದಾಸಾ ದಾಸ್ಯೋ ಮಹಾಕುಲಂ ।
ಆಯುರಾರೋಗ್ಯಸೌಭಾಗ್ಯಂ ಕಲಾವಿದ್ಯಾಸು ನೈಪುಣಂ　　॥ ೨೨೪ ॥

ದಾನಸ್ಯೈವ ಫಲಂ ಸರ್ವಂ ಪ್ರಾಪ್ಯತೇ ಭುವಿ ಮಾನವೈಃ ।
ತಸ್ಮಾದ್ದೇಯಂ ಪ್ರಯತ್ನೇನ ನಾದತ್ತಮುಪತಿಷ್ಠತೇ　　॥ ೨೨೫ ॥

॥ ದೇವದ್ಯುತಿರುವಾಚ ॥

ಧರ್ಮಿಷ್ಠೇನ ತು ಪಾಂಥೇನ ಗೀತೇಯಂ ಸಮುಗಾಯತ ।
ಇತಿ ಶ್ರುತ್ವಾ ವಚಃ ಪ್ರೇತಃ ಪ್ರೋವಾಚ ಹ್ಯಾರ್ತಮಾನಸಃ　　॥ ೨೨೬ ॥

॥ ಪ್ರೇತ ಉವಾಚ ॥

ಮನ್ಯೇ ಸರ್ವಜ್ಞಕಲ್ಪೋಸಿ ಪಾಂಥ ತ್ವಂ ನಾತ್ರ ಸಂಶಯಃ ।
ದೇಹಿ ಮೇ ಜೀವನಂ ವಾರಿ ಚಾತಕಾಯ ಘನೋ ಯಥಾ ॥
ಏತಸ್ಮಿನ್ ಪ್ರಾಣದಾನೇ ಚ ಮಾವಿಲಂಬಂ ಕುರು ಪ್ರಭೋ　　॥ ೨೨೭ ॥

---

೨೨೩-೨೨೫. ಛತ್ರಿ, ಚಾಮರ, ರಥಾದಿಗಳು, ಕುದುರೆ, ಆನೆ, ಮಹಡಿಯ ಮನೆ, ಉತ್ತಮವಾದ ಹಾಸಿಗೆ, ಗೋವು, ಎಮ್ಮೆ, ಉತ್ತಮವಾದ ಹೆಂಗಸರು, ರತ್ನ ಒಡವೆಗಳು, ಮುತ್ತು, ದಾಸರು, ದಾಸಿಯರು, ಉತ್ತಮವಾದ ಕುಲ, ಆಯುಸ್ಸು, ಆರೋಗ್ಯ, ಸೌಭಾಗ್ಯ, ಕಲೆ, ವಿದ್ಯೆಯಲ್ಲಿ ನೈಪುಣ್ಯ, ಇವೆಲ್ಲವೂ ದಾನದ ಫಲಗಳೇನೆ. ಇವನ್ನೇ ಮನುಷ್ಯರು ಹೊಂದುವುದು. ಆದ್ದರಿಂದ ಪ್ರಯತ್ನಪಟ್ಟು ದಾನಮಾಡಬೇಕು. ದಾನಮಾಡದಿರುವುದು ನಮಗೆ ಸಿಕ್ಕುವುದೇ ಇಲ್ಲ.

೨೨೬. ದೇವದ್ಯುತಿಯು ಹೇಳಿದನು-ಧರ್ಮಿಷ್ಠನಾದ ಆ ಪ್ರಯಾಣಿಕನು ಈ ಉತ್ತಮವಾದ ಮಾತನ್ನು ಹೇಳಲಾಗಿ ಇದನ್ನು ಕೇಳಿ ಆ ಪ್ರೇತವು ದುಃಖಗೊಂಡು ಇಂತೆಂದಿತು.

೨೨೭. ಪ್ರೇತವು ಹೇಳಿತು-ಎಲೈ ಪಾಂಥನೆ! ನೀನು ಸರ್ವಜ್ಞನಾಗಿದ್ದೀಯೆ. ಗೊತ್ತಾಯಿತು. ಇದರಲ್ಲಿ ಸಂಶಯವಿಲ್ಲ. ಚಾತಕಕ್ಕೆ ಮೇಘವು ಜೀವನವಾದ ನೀರನ್ನು ಕೊಡುವಂತೆ ನನಗೂ ಈ ಜೀವನ ಪ್ರದವಾದ ನೀರನ್ನು ಕೊಡು. ಈ ಪ್ರಾಣದಾನದಲ್ಲಿ ನೀನು ಸಾವಕಾಶವನ್ನು ಮಾಡಬೇಡ.

॥ ದೇವದ್ಯುತಿರುವಾಚ ॥

ತತಃ ಪ್ರತ್ಯಾಹ ಪಾಂಥಸ್ತು ವಚನಂ ನ್ಯಾಯಗರ್ಭಿತಂ ॥ ೨೨೮ ॥

॥ ಬ್ರಾಹ್ಮಣ ಉವಾಚ ॥

ಭೃಗುಕಚ್ಛೇ ಶೃಣು ಪ್ರೇತ ಪಿತರೌ ಮಮ ತಿಷ್ಠತಃ ।
ತದರ್ಥಂ ತೀರ್ಥರಾಜಸ್ಯ ಮಯಾ ವಾರಿ ಸಮಾಹೃತಂ ॥ ೨೨೯ ॥

ತತ್ಸಿತಾಸಿತಪಾನೀಯಂ ಮಧ್ಯೇ ಸಂಪ್ರಾರ್ಥಿತಂ ತ್ವಯಾ ।
ನ ಜಾನೇ ಧರ್ಮಸಂದೇಹಂ ಕಿಮತ್ರ ಮಮ ಯುಜ್ಯತೇ ॥ ೨೩೦ ॥

ಬಲಾಬಲಂ ವಿಚಾರ್ಯಾಥ ಕರಿಷ್ಯೇ ಪ್ರಬಲಂ ವಿಧಿಂ ।
ವೇದೇಭ್ಯೋ ಧರ್ಮಶಾಸ್ತ್ರೇಭ್ಯೋ ನಾಹಂ ಮನ್ಯೇ ನ ಕೇವಲಂ॥ ೨೩೧ ॥

---

೨೨೮. ದೇವದ್ಯುತಿಯು ಹೇಳಿದನು-ಅನಂತರ ಆ ಪಾಂಥನು ನ್ಯಾಯದಿಂದ ಕೂಡಿರುವ ಮಾತನ್ನು ಇಂತೆಂದು ಹೇಳಿದನು.

೨೨೯. ಬ್ರಾಹ್ಮಣನು ಹೇಳಿದನು–ಎಲೈ ಪ್ರೇತನೆ! ಭೃಗುಕಚ್ಛದಲ್ಲಿ ನನ್ನ ತಾಯಿತಂದೆಗಳಿರುವರು. ಅವರಿಗೋಸ್ಕರ ಈ ತೀರ್ಥರಾಜನ ತೀರ್ಥವನ್ನು ತೆಗೆದುಕೊಂಡು ಹೋಗುತ್ತಿದ್ದೇನೆ.

೨೩೦. ಆ ಗಂಗಾಯಮುನೆಯ ಸಂಗಮವಾದ ನೀರನ್ನು ಈ ಮಧ್ಯದಾರಿಯಲ್ಲಿ ನೀನು ಕೇಳುತ್ತಿದ್ದೀಯೆ. ಈ ವಿಷಯದಲ್ಲಿ ಏನುಮಾಡಬೇಕೆಂಬ ಧರ್ಮ ಸಂದೇಹವುಂಟಾಗಿದೆ. ಈಗ ಏನುಮಾಡಬೇಕೆಂಬುದು ಗೊತ್ತಾಗಲಿಲ್ಲ.

೨೩೧. ಈ ವಿಷಯದಲ್ಲಿ ಬಲಾಬಲಗಳನ್ನು ನೋಡಿ ಬಲವಾದ ಕೆಲಸವನ್ನು (ಶಾಸ್ತ್ರದಂತೆ) ಮಾಡುತ್ತೇನೆ. ವೇದಗಳಿಂದಲೂ ಶಾಸ್ತ್ರಗಳಿಂದಲೂ ವಿಚಾರಮಾಡಿ ಯೋಚಿಸುತ್ತೇನೆ. ಸಾಮಾನ್ಯ ದೃಷ್ಟಿಯಿಂದ ನಾನು ಹೇಳಲಾರೆ.

ಅಶ್ವಮೇಧಾದಿಯಜ್ಞೇಭ್ಯಃ ಸರ್ವೇಭ್ಯೋ ಹ್ಯಧಿಕಂ ಮತಂ ।
ಋಷಿಭಿರ್ದೇವತಾಭಿಶ್ಚ ಪ್ರಾಣಿನಾಂ ಪ್ರಾಣರಕ್ಷಣಂ　　॥ ೨೩೨ ॥

ಇದಂ ದತ್ವಾ ವರಂ ವಾರಿ ಕೃತ್ವಾ ಪ್ರೇತಸ್ಯ ರಕ್ಷಣಂ ।
ಪಿತ್ರರ್ಥೇ ಪುನರಾದಾಯ ಗಮಿಷ್ಯೇ ಪಾವನಂ ಜಲಂ　　॥ ೨೩೩ ॥

ಏಷ ಮೇ ಪ್ರಬಲೋ ಭಾತಿ ಶುದ್ಧೋ ಧರ್ಮಪ್ರದೋ ವಿಧಿಃ ।
ಪರೋಪಕರಣಾದನ್ಯತ್ ಸರ್ವಮಲ್ಪಂ ಸ್ಮೃತಂ ಬುಧೈಃ　　॥ ೨೩೪ ॥

ಪರೋಪಕಾರಿಭಿರ್ದತ್ತಾ ಅಪಿ ಪ್ರಾಣಾರ್ಥಿನಾಂ ಪುರಾ ।
ಅದ್ಭಿಃ ಪ್ರೇತೋಪಕಾರಸ್ಯ ಕಿಂ ನ ಲಬ್ಧಂ ಮಯಾ ಪುನಃ　　॥ ೨೩೫ ॥

ದಧೀಚಿನಾ ಪುರಾ ಗೀತಃ ಶ್ಲೋಕೋಽಯಂ ಶ್ರೂಯತೇ ಬುಧೈಃ ।
ಸರ್ವಧರ್ಮಮಯಸ್ಸಾರಃ ಸರ್ವಧರ್ಮಜ್ಞಸಮ್ಮತಃ　　॥ ೨೩೬ ॥

---

೨೩೨. ಅಶ್ವಮೇಧಾದಿಯಜ್ಞಗಳಿಗಿಂತಲೂ ಋಷಿಗಳಿಗಿಂತಲೂ ದೇವತೆಗಳಿಗಿಂತಲೂ ಒಟ್ಟಿನಲ್ಲಿ ಎಲ್ಲಕ್ಕಿಂತಲೂ ಪ್ರಾಣಿಗಳ ಪ್ರಾಣರಕ್ಷಣೆಯನ್ನು ಮಾಡುವುದು ಉತ್ತಮವು.

೨೩೩. ಈ ನೀರನ್ನು ಪ್ರೇತಕ್ಕೆ ಕೊಟ್ಟು ಅದರ ಪ್ರಾಣವನ್ನು ಉಳಿಸಿ ಅನಂತರ ಪಿತೃಗಳಿಗೋಸ್ಕರ ಮತ್ತೆ ಗಂಗೆಯ ನೀರನ್ನು ತೆಗೆದುಕೊಂಡು ಹೋಗುತ್ತೇನೆ.

೨೩೪. ಈ ಧರ್ಮವೇ ಶುದ್ಧವಾದುದು. ಧರ್ಮವಾದುದು. ಎಂದು ನನಗೆ ತೋರುತ್ತಿದೆ. ಪರೋಪಕಾರಕ್ಕಿಂತಲೂ ಎಲ್ಲವೂ ಕೂಡ ಸ್ವಲ್ಪವಾದುವು, ಕೀಳಾದುವು, ಎಂದು ತಿಳಿದವರು ಹೇಳುತ್ತಾರೆ.

೨೩೫. ಪೂರ್ವದಲ್ಲಿ ಪ್ರಾಣವನ್ನೇ ಯಾಚಕರಿಗೋಸ್ಕರ ಕೊಟ್ಟಿರುವರು. ಈ ಪ್ರೇತಕ್ಕೆ ಉಪಕಾರವನ್ನು ನಾನು ಈ ನೀರಿನಿಂದ ಮಾಡಲಾರೆನೇ ?

೨೩೬-೨೩೭. ದಧೀಚಿಯು ಹೇಳಿರುವ ಶ್ಲೋಕವನ್ನೂ ಬಲ್ಲವರು ಹೇಳಿರುವುದನ್ನೂ ಕೇಳಿದ್ದೇನೆ. ಅವು ಸರ್ವಧರ್ಮಗಳ ರೂಪವು.

ಪರೋಽಪಕಾರಃ ಕರ್ತವ್ಯಃ ಪ್ರಾಣೈರಪಿ ಧನೈರಪಿ ।
ಪರೋಽಪಕಾರಜಂ ಪುಣ್ಯಂ ನ ಸ್ಯಾತ್ ಕ್ರತುಶತೈರಪಿ ॥ ೨೩೭ ॥

॥ ದೇವದ್ಯುತಿರುವಾಚ ॥

ಇತ್ಯುಕ್ತ್ವಾ ಪ್ರದದೌ ತೋಽಯಂ ಗಂಗಾಯಮುನಸಂಭವಂ ।
ಪ್ರೇತಾಯ ಪ್ರಾಣರಕ್ಷಾರ್ಥಂ ಸ ಧರ್ಮಿಷ್ಠೋಽ ವರೋ ದ್ವಿಜಃ ॥ ೨೩೮ ॥

ಪ್ರೇತೋಽಪಿ ತಜ್ಜಲಂ ಪೀತ್ವಾ ಅಭಿಷಿಚ್ಯ ಶಿರಸ್ತಥಾ ।
ವಿಜಹೌ ಪ್ರೇತದೇಹಂ ತಂ ದಿವ್ಯದೇಹೋಽಭವತ್ ಕ್ಷಣಾತ್ ॥
ತದಾಶ್ಚರ್ಯಂ ಮಹದ್ದೃಷ್ಟ್ವಾ ನಿಜಗಾದ ಸ ಕೇರಳಃ ॥ ೨೩೯ ॥

॥ ಪ್ರೇತ ಉವಾಚ ॥

ಅಹೋ ವಿಮುಕ್ತಃ ಪ್ರೇತತ್ವಾದ್ವೇಣೀಪಾನೀಯಬಿಂದುಭಿಃ ।
ಬ್ರಹ್ಮಾಪಿ ನೈವ ಶಕ್ನೋತಿ ಮನ್ಯೇ ವಕ್ತುಮಪಾಂ ಗುಣಾನ್ ॥ ೨೪೦ ॥

---

"ಪರೋಽಪಕಾರವನ್ನು ಪ್ರಾಣಗಳಿಂದಲೂ ಧನಗಳಿಂದಲೂ ಮಾಡಬೇಕು. ಪರೋಽಪಕಾರದಿಂದ ಬರುವ ಪುಣ್ಯವು ನೂರುಯಾಗಗಳಿಂದಲೂ ಬರುವುದಿಲ್ಲ" ಎಂದು ಹೇಳುತ್ತದೆ.

೨೩೮. ದೇವದ್ಯುತಿಯು ಹೇಳಿದನು- ಹೀಗೆಂದು ಹೇಳಿ ಆ ಪ್ರಯಾಣಿಕನು ಗಂಗೆ ಯಮುನೆಗಳ ನೀರನ್ನು ಆ ಪ್ರೇತದ ಪ್ರಾಣರಕ್ಷಣೆಗೋಸ್ಕರ ಕೊಟ್ಟನು.

೨೩೯. ಆ ಪ್ರೇತವು ಆ ನೀರನ್ನು ಕುಡಿದು ತಲೆಯಲ್ಲಿ ಪ್ರೋಕ್ಷಿಸಿಕೊಂಡಿತು. ಒಡನೆಯೇ ಆ ಪ್ರೇತದ ದೇಹವನ್ನು ಬಿಟ್ಟು ಬಿಟ್ಟಿತು. ದಿವ್ಯದೇಹವನ್ನು ಹೊಂದಿತು. ಆ ಆಶ್ಚರ್ಯವನ್ನು ನೋಡಿ ಆ ಕೇರಳನು ಇಂತೆಂದನು.

೨೪೦. ಪ್ರೇತವು ಹೇಳಿತು- ಈ ವೇಣಿಯ ನೀರಿನ ಬಿಂದುಗಳ ಪಾನದಿಂದ ಪ್ರೇತತ್ವವು ಹೋಯಿತು. ಆಶ್ಚರ್ಯವು. ಆದ್ದರಿಂದ ಈ ತೀರ್ಥದ ಮಹಿಮೆಯನ್ನು ಬ್ರಹ್ಮನೂ ಹೇಳಲಾರನು.

ಗಂಗಾತೋಯಂ ಮಹಾದೇವೋ ಧತ್ತೇ ಕೇ ಕಥಮನ್ಯಥಾ ।
ಅಚಿಂತ್ಯಶಕ್ತಿಗಂಗಾಂಭಸ್ತಿಲಮಾತ್ರಂ ತು ಯಃ ಪಿಬೇತ್ ॥ ೨೪೧ ॥

ದೇವೋ ಭವೇತ್ಸ ಸಿದ್ಧೋ ವಾ ಗರ್ಭೇ ನೈವ ಚ ಸಂವಿಶೇತ್ ।
ನ ಕಾಲೋ ನ ಕಲಿಃ ಪಂಕೋ ದಂಭೋಳಿರ್ನೈವ ನಾರಕಾಃ ॥ ೨೪೨ ॥

ತಂ ಪರಾಭವಿತುಂ ಶಕ್ತಾ ಗಂಗಾಸ್ನಾತೋ ಹಿ ಯಃ ಸಕೃತ್ ।
ನ ತಪೋಭಿರ್ನ ದಾನೈಶ್ಚ ನೈವ ಹೋಮಜಪಾಧ್ವರೈಃ ॥ ೨೪೩ ॥

ಸಾಮ್ರಾಜ್ಯಂ ಜನ್ಮಿನಾಂ ಯತ್ ಸ್ಯಾತ್ ಮಂದಾಕಿನ್ಯುದ್ಧತಾಂಭಸಾ ।
ಯದಂಭಃಕಣಸಂಸ್ಪರ್ಶಾತ್ಪ್ರೇತತ್ವಂ ಹ್ಯಗಮತ್ ಕ್ಷಣಾತ್ ॥ ೨೪೪ ॥

---

೨೪೧. ಆ ಗಂಗೆಯು ಅಷ್ಟು ಪವಿತ್ರವಾಗಿಲ್ಲದ ಪಕ್ಷದಲ್ಲಿ ಮಹಾದೇವನು ಅದನ್ನೇತಕ್ಕೆ ತಲೆಯಲ್ಲಿ ಧರಿಸುತ್ತಿದ್ದನು ? ಒಂದು ಎಳ್ಳಷ್ಟು ಗಂಗೆಯ ನೀರನ್ನು ಕುಡಿದರೂ ಅದು ಅದ್ಭುತವಾದ ಶಕ್ತಿಯನ್ನುಂಟುಮಾಡುತ್ತದೆ.

೨೪೨-೨೪೪. ಹಾಗೆ ಆ ನೀರನ್ನು ಕುಡಿದವನು ದೇವನಾಗಿಯೋ ಸಿದ್ಧನಾಗಿಯೋ ಗಂಧರ್ವನಾಗಿಯೋ ಆಗುತ್ತಾನೆ. ಮತ್ತೆ ಹುಟ್ಟುವುದಿಲ್ಲ. ಯಾವನು ಗಂಗೆಯಲ್ಲಿ ಒಂದುಬಾರಿ ಸ್ನಾನವನ್ನು ಮಾಡುವನೋ ಅವನನ್ನು ಯಮನಾಗಲಿ, ಕಲಿಯಾಗಲಿ, ಪಾಪವಾಗಲಿ, ವಜ್ರಾಯುಧವಾಗಲಿ, ನರಕಗಳಲ್ಲಿ ಯಾವುದಾದರೂ ಆಗಲಿ ಒಂದೂ ಕೂಡ ತಿರಸ್ಕರಿಸಲಾಗುವುದಿಲ್ಲ. ಮಂದಾಕಿನಿಯಲ್ಲಿ ಸ್ನಾನ ಮಾಡಿದವರಿಗೆ ಯಾವ ಸಾಮ್ರಾಜ್ಯವು ಸಿಕ್ಕುತ್ತದೆಯೋ ಆ ಸಾಮ್ರಾಜ್ಯವನ್ನು ದಾನದಿಂದಾಗಲಿ ತಪಸ್ಸಿನಿಂದಾಗಲಿ ಹೋಮದಿಂದಾಗಲಿ ಜಪದಿಂದಾಗಲಿ ಯಾಗದಿಂದಾಗಲಿ ಹೊಂದಲಾರರು. ಅಂತಹ ಗಂಗೆಯ ಒಂದುಕಣ ನೀರನ್ನು ಮುಟ್ಟಿದೊಡನೆಯೇ ಆ ಪ್ರೇತಕ್ಕೆ ಪ್ರೇತಭಾವವು ಕ್ಷಣಕಾಲದಲ್ಲಿಯೇ ಹೊರಟು ಹೋಯಿತು.

ತದಂಭಃಪೂತದೇಹಾನಾಂ ಕೈವಲ್ಯೇ ಕೋತ್ರ ಸಂಶಯಃ |
ಕಾಯೇನ ಮನಸಾ ಯೇ ಚ ಪಾಪಕೌಸುಂಭರಂಜಿತಾಃ || ೨೪೫ ||

ನಾಶಂ ಯಾತಿ ನ ತೇಷಾಂ ಹಿ ಪಾಪಂ ಗಂಗೋದಕಂ ವಿನಾ ।
ಸಿದ್ಧಾ ಹಿ ಸಿದ್ಧಯಸ್ತಸ್ಯ ಸ್ವರ್ಗಸ್ತಸ್ಯ ಗೃಹಾಜಿರೇ || ೨೪೬ ||

ಕರಸ್ಥಂ ತಸ್ಯ ಕೈವಲ್ಯಂ ಯೋ ಗಂಗಾಂ ಸೇವತೇ ಸದಾ ।
ಯದಂಭಃಸ್ಪರ್ಶನಾತ್ ಪಾನಾತ್ ಮುಚ್ಯಂತೇ ಪ್ರೇತರಾಕ್ಷಸಾಃ || ೨೪೭ ||

ನರೋವಗಾಹ್ಯ ತಾಂ ಗಂಗಾಂ ಯಾತಿ ತದ್ವೈಷ್ಣವಂ ಪದಂ |
ದಾಯಾದೋ ಯದಿ ಗಂಗಾಯಾಂ ಕುರುತೇ ಪಿತೃತರ್ಪಣಂ || ೨೪೮ ||

ನರಕಸ್ಥಾ ದಿವಂ ಯಾನ್ತಿ ನಾಕಸ್ಥಾ ಬ್ರಹ್ಮಣೋಂತಿಕಂ |
ನ ಗಂಗಾಸದೃಶೀ ಸಿದ್ಧಿರ್ನ ಗಂಗಾಸದೃಶೀ ಗತಿಃ || ೨೪೯ ||

---

೨೪೫-೨೪೬. ಆ ಗಂಗೆಯ ನೀರಿನಿಂದ ಪವಿತ್ರವಾದ ದೇಹವುಳ್ಳವರಿಗೆ ಕೈವಲ್ಯವು ಸಿಕ್ಕುವುದರಲ್ಲಿ ಸಂದೇಹವೇನಿರುವುದು ! ಮನಸ್ಸು ದೇಹ ಮಾತುಗಳಲ್ಲಿ ಯಾರು ಪಾಪವೆಂಬ ಬಣ್ಣದಿಂದ ಬಣ್ಣಹೊಂದಿರುವರೋ ಅವರ ಆ ಪಾಪವೆಂಬ ಬಣ್ಣವು ಈ ಗಂಗೋದಕವೆಂಬ ನೀರೊಂದರಿಂದ ಹೊರತಾಗಿ ಮತ್ತಾವುದರಿಂದಲೂ ಹೋಗುವುದೇ ಇಲ್ಲ. ಅವನ ಸಿದ್ಧಿಗಳೆಲ್ಲವೂ ಸಿದ್ಧಿಸುತ್ತವೆ. ಅವನಿಗೆ ಸ್ವರ್ಗವು ಮನೆಯ ಅಂಗಳದಲ್ಲಿಯೇ ಇರುವುದು.

೨೪೭. ಯಾವನು ಗಂಗೆಯನ್ನು ಸೇವಿಸುತ್ತಿರುವನೋ ಅವನಿಗೆ ಕೈವಲ್ಯವು ಕೈಯ್ಯಲ್ಲಿದ್ದಂತೆಯೇ. ಆ ಗಂಗೆಯ ನೀರನ್ನು ಮುಟ್ಟುವುದರಿಂದಲೇ ಪ್ರೇತಗಳೂ ರಾಕ್ಷಸರೂ ಮುಕ್ತಿಯನ್ನು ಹೊಂದುತ್ತಾರೆ.

೨೪೮-೨೪೯. ಗಂಗೆಯಲ್ಲಿ ಪ್ರಾಣಿಯು ಸ್ನಾನಮಾಡಿದರೆ ಒಡನೆಯೇ ವೈಷ್ಣವ ಪದವನ್ನು ಹೊಂದುತ್ತಾನೆ. ದಾಯಾದಿಗಳು ಪಿತೃಗಳಿಗೆ ಗಂಗೆಯಲ್ಲಿ ತರ್ಪಣವನ್ನು ಮಾಡಿದರೆ ಅವರ ಪಿತೃಗಳು ನರಕದಲ್ಲಿದ್ದರೆ ಸ್ವರ್ಗಕ್ಕೂ ಸ್ವರ್ಗದಲ್ಲಿದ್ದರೆ ಬ್ರಹ್ಮನ ಬಳಿಗೂ ಹೋಗುತ್ತಾರೆ. ಗಂಗೆಗೆ ಸಮವಾದ ಸಿದ್ಧಿ ಪದಾರ್ಥವಿಲ್ಲ. ಗಂಗೆಗೆ ಸಮವಾದ ಗತಿಕೊಡತಕ್ಕದ್ದಿಲ್ಲ. ಗಂಗೆಗೆ ಸಮವಾದ ಮುಕ್ತಿಕೊಡತಕ್ಕದ್ದಿಲ್ಲ. ಗಂಗೆಯು ಎಲ್ಲಾ ಇಷ್ಟಗಳನ್ನೂ ಸಾಧಿಸಿಕೊಡುತ್ತದೆ.

ನ ಗಂಗಾಸದೃಶೀ ಮುಕ್ತಿಃ ಗಂಗಾ ಸರ್ವಾರ್ಥಸಾಧಿನೀ |
ಸಪುಣ್ಯೋ ಭವ ಪಾಂಥ ತ್ವಂ ಮಾ ಧರ್ಮವಿಮುಖೋ ಭವ ||
ತ್ವಯಾಹಂ ತಾರಿತಃ ಸದ್ಯೋ ಗಂಗಾಂಬುಕಣದಾನತಃ || ೨೫೦ ||

|| ದೇವದ್ಯುತಿರುವಾಚ ||

ಇತ್ಯುಕ್ತ್ವಾ ಪ್ರಸ್ಥಿತೋ ನಾಕಂ ಪಿಶಾಚಸ್ತು ಸ ಕೇರಳಃ |
ಆಶೀರ್ಭಿರಭಿನಂದ್ಯಾಥ ಪಾಂಥಂ ಧರ್ಮಧರಂ ವರಂ || ೨೫೧ ||

ಪ್ರೇತಂ ವಿಮೋಕ್ಷ್ಯ ಪಾಂಥೋಽಪಿ ಪುನರಾದಾಯ ತಜ್ಜಲಂ |
ಗತಸ್ತೇನೈವ ಮಾರ್ಗೇಣ ಸ್ಮರನ್ ತೀರ್ಥೋದಕೌತುಕಂ || ೨೫೨ ||

|| ಲೋಮಶ ಉವಾಚ ||

ಇತ್ಥಂ ಪ್ರಯಾಗಮಾಹಾತ್ಮ್ಯಂ ಶ್ರುತ್ವಾ ನತ್ವಾ ಚ ತಂ ಮುನಿಂ |
ಪ್ರಯಾಗಂ ಸಹಸಾ ಮಾಘೇ ಪಿಶಾಚಸ್ಸತ್ವರಂ ಗತಃ || ೨೫೩ ||

---

೨೫೦. ಎಲೈ ಪಥಿಕನೆ! ನೀನು ಪುಣ್ಯವುಳ್ಳವನಾಗು. ಧರ್ಮಕಾರ್ಯ ಮಾಡುವುದರಲ್ಲಿ ಹಿಂಜರಿಯಬೇಡ. ನೀನು ನನಗೆ ಗಂಗೆಯ ನೀರನ್ನು ದಾನಮಾಡಿದುದರಿಂದ ಒಡನೆಯೇ ಈ ಪ್ರೇತಭಾವದಿಂದ ಪಾರಾದೆನು.

೨೫೧. ದೇವದ್ಯುತಿಯು ಹೇಳಿದನು-ಆ ಕೇರಳ ಪ್ರೇತವು ಈತನನ್ನು ಅನೇಕವಾದ ಆಶೀರ್ವಾದಗಳಿಂದ ಸಂತೋಷಪಡಿಸಿ ಸ್ವರ್ಗಕ್ಕೆ ಹೊರಟು ಹೋಯಿತು.

೨೫೨. ಆ ಪ್ರಯಾಣಿಕನೂ ಕೂಡ ಆ ಪ್ರೇತನಿಗೆ ಪ್ರೇತಭಾವವನ್ನು ನಿವರ್ತನೆಮಾಡಿ ಮತ್ತೆ ಆ ಹರಿದ್ವಾರದ ಗಂಗೆಯನ್ನು ತೆಗೆದುಕೊಂಡು ತೀರ್ಥದ ವೈಭವವನ್ನು ಸ್ಮರಿಸುತ್ತ ಅದೇದಾರಿಯಲ್ಲಿ ಹೋದನು.

೨೫೩. ಲೋಮಶನು ಹೇಳಿದನು-ಆಗ ಆ ಪಿಶಾಚವು ಹೀಗೆ ಹೇಳಿದ ಪ್ರಯಾಗದ ಮಹಿಮೆಯನ್ನು ಕೇಳಿ ಆ ಮುನಿಗೆ ನಮಸ್ಕರಿಸಿ ಮಾಘಮಾಸಬರಲು ಪ್ರಯಾಗಕ್ಕೆ ಶೀಘ್ರವಾಗಿ ಹೋಯಿತು.

ಸ್ನಾತಃ ಸಿತಾಸಿತೇ ಸೋಽಪಿ ಮಾಘೇ ಮಾಸಿ ದ್ವಿಜೋತ್ತಮ ।
ಪಿಶಾಚಃ ಕ್ಷೀಣಪಾಪಸ್ತು ಪೈಶಾಚೀಂ ವಿಜಹೌ ತನುಂ ॥ ೨೫೪ ॥

ದಿವ್ಯದೇಹಸ್ತತೋ ಭೂತ್ವಾ ದ್ರಾವಿಡೋ ಭೂಪತಿಸ್ತದಾ ।
ಸ್ತುವನ್ನಾರಾಯಣಂ ದೇವಂ ಭಕ್ತ್ಯಾ ದ್ವೇಷವಿವರ್ಜಿತಃ ॥ ೨೫೫ ॥

ಗಂಧರ್ವೈಸ್ಸ್ತೂಯಮಾನಸ್ತು ನಾಕನಾರೀಸುಪೂಜಿತಃ ।
ಉತ್ತಮೇನ ವಿಮಾನೇನ ಪುರಂದರಪುರೀಂ ಯಯೌ ॥ ೨೫೬ ॥

ಇತಿ ತೇ ಕಥಿತಂ ಸರ್ವಂ ಪುರಾವೃತ್ತಂ ಸಕೌತುಕಂ ।
ಇತಿಹಾಸೋ ದ್ವಿಜಶ್ರೇಷ್ಠ ಸದ್ಯಃ ಪಾತಕನಾಶನಃ ॥ ೨೫೭ ॥

ಅಧುನಾ ತು ಮಯಾ ಸಾರ್ಧಮಿಮಾಃ ಕನ್ಯಾಸ್ಸುತಾಶ್ಚ ತೇ ।
ತ್ವಂ ಚಾಹಂ ಚ ಪ್ರಯಾಗೇ ವೈ ಸರ್ವೇ ಸದ್ಗತಿಮಿಚ್ಛವಃ ॥ ೨೫೮ ॥

---

೨೫೪. ಆ ಮಾಘಮಾಸದಲ್ಲಿ ಪ್ರಯಾಗದ ಗಂಗೆ ಯಮುನೆಗಳ ಸಂಗಮದಲ್ಲಿ ಸ್ನಾನಮಾಡಲು ಅದರ ಪಾಪವೆಲ್ಲವೂ ಹೋದುವು. ಒಡನೆಯೇ ಆ ಪಿಶಾಚ ಭಾವದ ದೇಹವನ್ನು ಬಿಟ್ಟುಬಿಟ್ಟಿತು.

೨೫೫-೨೫೬. ಆ ದ್ರಾವಿಡದೇಶದ ರಾಜನು ದಿವ್ಯದೇಹವನ್ನು ಹೊಂದಿ ದ್ವೇಷವನ್ನು ಬಿಟ್ಟು ನಾರಾಯಣನನ್ನು ಸ್ತುತಿಸುತ್ತಿದ್ದನು. ಗಂಧರ್ವರು ಅವನನ್ನು ಹೊಗಳುತ್ತಲಿದ್ದರು. ಅಪ್ಸರಸ್ತ್ರೀಯರು ಅವನನ್ನು ಸೇವಿಸುತ್ತಿದ್ದರು. ಹೀಗಿರಲು ಉತ್ತಮವಾದ ವಿಮಾನವು ಬರಲು ಅದರಲ್ಲಿ ಕುಳಿತು ಸ್ವರ್ಗಕ್ಕೆ ಹೋದನು.

೨೫೭. ಈ ರೀತಿಯಾಗಿ ಪೂರ್ವದ ಕಥೆಯು ಆಶ್ಚರ್ಯವಾಗಿದೆ. ಅದನ್ನು ನಿನಗೆ ಹೇಳಿದ್ದೇನೆ. ಈ ಇತಿಹಾಸವು ಕೂಡ ಒಡನೆಯೇ ಪಾಪವನ್ನು ನಾಶಮಾಡುತ್ತದೆ.

೨೫೮-೨೫೯. ಈ ಕನ್ಯೆಯರೂ, ನಿನ್ನ ಮಗನೂ, ನೀನೂ, ನಾನೂ, ಸದ್ಗತಿಯನ್ನು ಅಪೇಕ್ಷಿಸುತ್ತೇವೆ. ಈ ಸದ್ಗತಿಯನ್ನು ಅಪೇಕ್ಷಿಸುವ ನಾವೆಲ್ಲರೂ ಪ್ರಯಾಗಕ್ಕೆ ಹೋಗೋಣ. ಅಲ್ಲಿ ಮಾಘಸ್ನಾನವನ್ನು ಮಾಡೋಣ. ಅದು

ಪ್ರಯಾಗಂ ಯಾಸ್ತು ತೇ ಸರ್ವೇ ಯದಿ ಸದ್ಗತಿಮೀಪ್ಸವಃ ।
ಮಾಘಸ್ನಾನಂ ಪ್ರಕುರ್ಮೋತ್ರ ದೇವಾನಾಮಪಿ ದುರ್ಲಭಂ ॥
ತತ್ರ ಮೋಕ್ಷ್ಯಂತಿ ಪೈಶಾಚ್ಯಂ ಮಿಥಃ ಶಾಪಸಮುದ್ಭವಂ ॥ ೨೫೯ ॥

॥ ವಸಿಷ್ಠ ಉವಾಚ ॥

ಏವಂ ಲೋಮಶವಕ್ತ್ರಾಬ್ಜಕಥಾಮಧುಸುಧಾರಸಂ ।
ಪೀತ್ವಾ ಪ್ರಮುದಿತಾಸ್ಸರ್ವೇ ನಿಸ್ತೀರ್ಣಾ ದುರಿತಾರ್ಣವಾತ್ ॥ ೨೬೦ ॥

ಪ್ರಸ್ಥಿತಾಸ್ತೇನ ಸಾರ್ಧಂ ತೇ ಕಾಷ್ಠಾಂ ಸಪದಿ ದಕ್ಷಿಣಾಂ ।
ಶೃಣು ದಿಲೀಪ ಭೂಪಾಲ ಸ್ನಾತ್ವಾಚ್ಛೋದಸರೋವರೇ ॥ ೨೬೧ ॥

ಸತ್ವರಂ ದೇವಮಾರ್ಗೇಣ ಸಾನಂದಗತಯಸ್ತು ತೇ ।
ಸಮಾಗತ್ಯ ಸ್ಥಿತಾ ವ್ಯೋಮ್ನಿ ಸಂತುಷ್ಟಹೃದಯಾಸ್ತದಾ ।
ಅಥೋ ವೈ ಲೋಮಶಸ್ತತ್ರ ಹರ್ಷಯನ್ ಸರ್ವಮಾನಸಂ ॥ ೨೬೨ ॥

---

ದೇವತೆಗಳಿಗೂ ಹೊಂದಲಸಾಧ್ಯವಾದುದು. ಅಲ್ಲಿ ಇವರ ಅನ್ಯೋನ್ಯ ಶಾಪದ ಈ ಪಿಶಾಚತನವು ಹೋಗುತ್ತದೆ.

೨೬೦. ವಸಿಷ್ಠನು ಹೇಳಿದನು.—ಈ ರೀತಿಯಾಗಿ ಲೋಮಶನ ಬಾಯಿಂದ ಹೊರಟ ಈ ಕಥೆಯೆಂಬ ಅಮೃತರಸವನ್ನು ಕುಡಿದು ಎಲ್ಲರೂ ಕೂಡ ಆ ಪಾಪ ವೆಂಬ ಸಮುದ್ರವನ್ನು ದಾಟಿದರು.

೨೬೧. ಅವರೆಲ್ಲರೂ ಆ ಲೋಮಶನ ಜೊತೆಯಲ್ಲಿ ದಕ್ಷಿಣ ದಿಕ್ಕನ್ನು ಕುರಿತು ಹೊರಟರು. ಹೊರಡುವಾಗ ಅಚ್ಛೋದಸರೋವರದಲ್ಲಿ ಸ್ನಾನಮಾಡಿ ದೇವಮಾರ್ಗವಾದ ಆಕಾಶದಿಂದ ಜಾಗ್ರತೆಯಾಗಿ ಹೊರಟರು.

೧೬೨. ಅವರೆಲ್ಲರೂ ಆಕಾಶಮಾರ್ಗದಲ್ಲಿ ಬಂದು ನಿಂತುಕೊಂಡು ಸಂತೋಷಗೊಂಡರು. ಆಗ ಲೋಮಶನು ಅವರನ್ನು ಸಂತೋಷಪಡಿಸುತ್ತಾ ಇಂತೆಂದನು.

|| ಲೋಮಶ ಉವಾಚ ||

ಪಶ್ಯಂತು ಶ್ರದ್ಧಯಾ ಸರ್ವೇ ತೀರ್ಥರಾಜಮಿಮಂ ಭುವಿ |
ಇಯಂ ಸಾ ಮಖವೇದಿರ್ವೈ ಯಜಮಾನಸ್ಯ ವೇಧಸಃ || ೨೬೩ ||

ಇಮಾನಿ ತ್ರೀಣಿ ಕುಂಡಾನಿ ದೀಪ್ತಾನ್ಯಜಸ್ರವಹ್ನಿನಾ |
ಏಷ ತೃಪ್ತಿಂ ಗತೋ ವಹ್ನಿಃ ಯಃ ಕೇನಾಪಿ ನ ತೃಪ್ಯತೇ || ೨೬೪ ||

ಸ್ತಂಬೇರಮಕರಸ್ಥೂಲಾಖಂಡಯಾ ಚ ಸುಧಾರಯಾ |
ಆವಿರ್ಭೂತಃ ಸ್ವಯಂ ಯತ್ರ ಶೂಲಟಂಕೋ ಮಹೇಶ್ವರಃ || ೨೬೫ ||

ಅಕ್ಷಯೋಽಯಂ ಸುರೈಸ್ಸೇವ್ಯಃ ಆಪಾತಾಳಜಟೋ ವಟಃ |
ಮೃಕಂಡುಸೂನುನಾ ಕಲ್ಪೇ ಪ್ರವಿಶ್ಯ ಯನ್ಮುಖೇ ಸ್ಥಿತಂ || ೨೬೬ ||

---

೨೬೩. ಲೋಮಶನು ಹೇಳಿದನು–ಎಲ್ಲರೂ ಶ್ರದ್ಧೆಯಿಂದ ಭೂಮಿಯಲ್ಲಿರುವ ಈ ತೀರ್ಥರಾಜನನ್ನು ನೋಡಿರಿ. ಯಾಗಮಾಡುತ್ತಿದ್ದ ಬ್ರಹ್ಮನಿಗೆ ಇದೇ ಯಜ್ಞದ ವೇದಿಕೆಯು.

೨೬೪. ಇವೇ ಬ್ರಹ್ಮನ ಯಾಗದ ಮೂರು ಕುಂಡಗಳು. ಇವುಗಳಲ್ಲಿ ಯಾವಾಗಲೂ ಅಗ್ನಿಯು ಉರಿಯುತ್ತಲೇ ಇರುವುದು. ಯಾವನಿಂದಲೂ ತೃಪ್ತನಾಗದ ವಹ್ನಿಯು ಈ ಬ್ರಹ್ಮನಿಂದ ತೃಪ್ತನಾಗಿ ಪ್ರಕಾಶಿಸುತ್ತಿದ್ದಾನೆ.

೨೬೫ ಆನೆಯ ಸೊಂಡಲಿನಂತೆ ದಪ್ಪವಾಗಿರುವ ಮಧ್ಯದಲ್ಲಿ ವ್ಯತ್ಯಾಸವಾಗದ ಒಳ್ಳೆಯ ಧಾರೆಯಾದ ಈ ಅಕ್ಷಯುವಟವಿರುವುದು. ಇದರಲ್ಲಿ ಶೂಲವನ್ನು ಕೈಯ್ಯಲ್ಲಿ ಹಿಡಿದುಕೊಂಡು ಈಶ್ವರನು ಪ್ರತ್ಯಕ್ಷವಾಗಿ ಮೂಡಿರುವನು.

೨೬೬. ಈ ಅಕ್ಷಯವಟವು ಸುರರಿಂದಲೂ ಸೇವಿಸಲ್ಪಡುತ್ತಿರುವುದು. ಇದರ ಬಿಳಲುಗಳು ಪಾತಾಳದವರೆಗೂ ಹೋಗಿವೆ. ಮಾರ್ಕಂಡೇಯನು ಕಲ್ಪಾಂತದಲ್ಲಿ ಇದರಲ್ಲಿಯೇ ವಾಸಿಸುತ್ತಿದ್ದನು.

ಲೋಕೇ ಜಲಾಕುಲೇ ಸೋಽಯಂ ಯೋಗನಿದ್ರಾಕುಲೋ ಹರಿಃ ।
ಸೇಯಂ ಭಗವತೀ ಶಂಭೋಃ ವಲ್ಲಭಾ ಲಲಿತಾ ಭೃಶಂ ॥ ೨೬೭ ॥

ಸಿದ್ಧ್ಯರ್ಥಂ ಸೇವ್ಯತೇ ಸಿದ್ಧೈಃ ಮುಕ್ತಿಭುಕ್ತಿಫಲಪ್ರದಾ ।
ಅಪಿ ವಾಂಛತಿ ಯೋಗಂ ತು ಮುಕ್ತಿಮಾರ್ಗಮನುತ್ತಮಂ ॥ ೨೬೮ ॥

ಸ್ವರ್ಗಹೇತುಶ್ಚ ಯಾ ದೇವೀ ಸೇಯಂ ಭಾಗೀರಥೀ ನದೀ ।
ಯಸ್ಯಾ ಜಲಲಿಹೋ ಲೋಕೇ ವಿಕರ್ತನಸಲೋಕತಾಂ ॥ ೨೬೯ ॥

ಲಭಂತೇ ಪ್ರಾಣಿನಸ್ಸರ್ವೇ ಸಾ ನದೀ ಯಮುನಾ ತ್ವಿಯಂ ।
ಅನಯೋಃ ಪುಣ್ಯನದ್ಯೋಶ್ಚ ಸೇವ್ಯೋ ಽಯಂ ಸಂಗಮೋ ಮುನೇ ॥೨೭೦॥

ಯತ್ರ ಸ್ನಾತ್ವಾ ನ ದಹ್ಯಂತೇ ಉತ್ಪತ್ತಿಮರಣಾಗ್ನಿನಾ ।
ಅವಿಮುಕ್ತೇ ವಿಮುಚ್ಯಂತೇ ನರಕಾತ್ ಜ್ಞಾನಜನ್ಮನಃ ॥ ೨೭೧ ॥

---

೨೬೭. ಲೋಕವೆಲ್ಲವೂ ನೀರಿನಿಂದ ಆವರಿಸಲ್ಪಟ್ಟಾಗ ಯೋಗನಿದ್ರೆಯಲ್ಲಿ ಆಸಕ್ತನಾದ ಹರಿಯು ಎಲ್ಲಿ ಮಲಗುವನೋ ಅಂತಹ ವಟವೃಕ್ಷವು ಇದು. ಶಂಭುವಿಗೆ ಪ್ರೀತಿಪಾತ್ರವಾದುದು. ಮನೋಹರವಾದುದು.

೨೬೮. ಸಿದ್ಧರು ಇದನ್ನು ಸೇವಿಸುತ್ತಿರುವರು. ಇದು ಮುಕ್ತಿಯನ್ನೂ ಭುಕ್ತಿಯನ್ನೂ ಕೊಡುತ್ತದೆ. ಮುಕ್ತಿಮಾರ್ಗಕ್ಕೆ ಉತ್ತಮವಾದ ಯೋಗವನ್ನು ಅಪೇಕ್ಷಿಸುವವರು ಇದನ್ನು ಸೇವಿಸುತ್ತಿರುತ್ತಾರೆ.

೨೬೯-೨೭೦. ಸ್ವರ್ಗವನ್ನು ಕೊಡುವುದಕ್ಕೆ ಕಾರಣವಾದ ಈ ಭಾಗಿರಥೀ ನದಿಯು ಇತ್ತಕಡೆ ಹರಿಯುತ್ತಿರುವುದು. ಇತ್ತಕಡೆ ಇರುವುದು ಯಮುನಾ ನದಿಯು. ಇದರ ನೀರನ್ನು ಕುಡಿದರೆ ಸೂರ್ಯಲೋಕವನ್ನು ಹೊಂದುತ್ತಾರೆ. ಇವೆರಡರ ಸಂಗಮವೂ ಇಲ್ಲಿರುವುದು. ಇದು ಮಹಾಪುಣ್ಯವು. ಇದನ್ನು ಪ್ರಯತ್ನಪಟ್ಟು ಸೇವಿಸು.

೨೭೧. ಈ ಸಂಗಮದಲ್ಲಿ ಸ್ನಾನ ಮಾಡಿದರೆ ಜನ್ಮ ಮರಣಗಳು ಪ್ರಾಣಿಗಿರುವುದಿಲ್ಲ. ಕಾಶಿಯಲ್ಲಾದರೋ ಈ ಗಂಗೆಯಲ್ಲಿ ಸ್ನಾನಮಾಡಿ ಜ್ಞಾನವನ್ನು ಹೊಂದಿ ಸ್ವರ್ಗಾದಿಗಳನ್ನು ಹೊಂದಬೇಕು.

ವಿನಾ ಜ್ಞಾನಂ ಪ್ರಯಾಗೇಸ್ಮಿನ್ ಮುಚ್ಯಂತೇ ಸರ್ವಜನ್ತವಃ ।
ಈಜೇತ್ರೈವ ಮಹಾಯಜ್ಞಂ ಸೃಷ್ಟಿಕಾಮಃ ಪ್ರಜಾಪತಿಃ ॥ ೨೭೨ ॥

ಅವಾಪ ಸೃಷ್ಟಿಸಾಮರ್ಥ್ಯಂ ತತಃ ಸೃಷ್ಟಿಂ ಚಕಾರ ಸಃ ।
ಅತ್ರ ನಾರಾಯಣಃ ಸಸ್ನೌ ಪತ್ನೀಕಾಮಃ ಸಿತಾಸಿತೇ ॥ ೨೭೩ ॥

ತದೈವ ಲಬ್ಧವಾನ್ ಲಕ್ಷ್ಮೀಂ ಭಾರ್ಯಾಮಮೃತಮಂಥನೇ ।
ಉಷಿತ್ವಾತ್ರೈವ ಷಣ್ಮಾಸಾನ್ ಸ್ನಾತ್ವಾ ವೇಣ್ಯಾಂ ಯಥೇಚ್ಛಯಾ ॥೨೭೪॥

ತ್ರಿಪುರಂ ಘಾತಯಾಮಾಸ ಹ್ಯೇಕಬಾಣೇನ ಶೂಲಧೃಕ್ ।
ವಾಸವಸ್ಯ ತು ಶಾಪೇನ ಸ್ವರ್ಗಾದ್ಭ್ರಷ್ಟಾ ಪುರೋರ್ವಶೀ ॥ ೨೭೫ ॥

---

೨೭೨. ಈ ಪ್ರಯಾಗದಲ್ಲಾದರೋ ಜ್ಞಾನವಿಲ್ಲದಿದ್ದರೂ ಸ್ನಾನಮಾತ್ರದಿಂದಲೇ ಮುಕ್ತಿಯು ಬರುವುದು. ಸೃಷ್ಟಿಸಬೇಕೆಂಬ ಅಪೇಕ್ಷೆಯುಳ್ಳ ಬ್ರಹ್ಮನು ಇಲ್ಲಿಯೇ ಪೂರ್ವದಲ್ಲಿ ಯಜ್ಞವನ್ನು ಮಾಡಿದನು.

೨೭೩. ಆ ಬ್ರಹ್ಮನು ಅದರಿಂದ ಸೃಷ್ಟಿಮಾಡುವ ಶಕ್ತಿಯನ್ನು ಹೊಂದಿ ಅನಂತರ ಸೃಷ್ಟಿಯನ್ನು ಮಾಡಿದನು. ಈ ಗಂಗಾ ಯಮುನೆಗಳ ಸಂಗಮದಲ್ಲಿ ವಿಷ್ಣುವು ಒಳ್ಳೆಯ ಹೆಂಡತಿಯನ್ನು ಹೊಂದಬೇಕೆಂದು ಸ್ನಾನಮಾಡಿದನು. ಒಡನೆಯೇ ಅಮೃತಮಥನ ಕಾಲದಲ್ಲಿ ಒಳ್ಳೆಯ ಹೆಂಡತಿಯಾದ ಲಕ್ಷ್ಮಿಯನ್ನು ಹೊಂದಿದನು.

೨೭೪. ಪರಮೇಶ್ವರನು ಇಲ್ಲಿಯೇ ಆರು ತಿಂಗಳಕಾಲ ಸ್ನಾನಮಾಡಿಕೊಂಡಿದ್ದು ಒಂದೇ ಬಾಣದಿಂದ ತ್ರಿಪುರಗಳನ್ನು ನಾಶಮಾಡುವ ಸಾಮರ್ಥ್ಯವನ್ನು ಹೊಂದಿ ಅವನ್ನು ನಾಶಮಾಡಿದನು.

೨೭೫. ಇಂದ್ರನ ಶಾಪದಿಂದ ಊರ್ವಶಿಯು ಸ್ವರ್ಗದಿಂದ ಭ್ರಷ್ಟಳಾಗಲು ಇಲ್ಲಿಗೆ ಬಂದು ಇಲ್ಲಿಯೇ ಸ್ನಾನಮಾಡಿಕೊಂಡಿದ್ದು ಶಾಶ್ವತವಾದ ಸ್ವರ್ಗವನ್ನು ಹೊಂದಿದಳು.

ಸ್ವರ್ಗಕಾಮಾತ್ರ ಸಾ ಸಸ್ನಾ ಲೇಭೇ ಸ್ವರ್ಗಂ ಚಿರಂತನಂ ।
ಪುತ್ರಂ ವಂಶಧರಂ ಲೇಭೇ ಯಯಾತಿಂ ನಹುಷೋ ಮುನೇ ॥ ೨೭೬ ॥

ಪುತ್ರಕಾಮಃ ಪ್ರಯಾಗೇಸ್ಮಿನ್ ಸ್ನಾತ್ವಾ ಪುಣ್ಯೇ ಸಿತಾಸಿತೇ ।
ಧನಕಾಮಃ ಪುರಾ ಶಕ್ರಃ ಸ್ನಾತ್ವಾತ್ರೈವ ದ್ವಿಜೋತ್ತಮ ॥ ೨೭೭ ॥

ಧನದಸ್ಯ ನಿಧೀನ್ಸರ್ವಾನ್ ಸ ಜಹಾರ ಸ್ವಮಾಯಯಾ ।
ನಾರಾಯಣೋ ನರಶ್ಚೈವ ವರ್ಷಾಣಾಮಯುತಂ ಪುರಾ ॥ ೨೭೮ ॥

ನಿರಾಹಾರಃ ಪ್ರಯಾಗೇಸ್ಮಿನ್ ಕೃತವಾನ್ ಧರ್ಮಸುವ್ರತಂ ।
ಜೈಗೀಷವ್ಯೋತ್ರ ಸನ್ಯಾಸೀ ಸರ್ವಕರ್ಮರತೋ ದ್ವಿಜಃ ॥ ೨೭೯ ॥

ಅಣಿಮಾದಿಗುಣಾನ್ ಲೇಭೇ ಯೋಗಸಿದ್ಧಿಂ ಚ ದುರ್ಲಭಾಂ ।
ಕಶ್ಯಪೋತ್ರ ತಪಸ್ತೇಪೇ ಶಿವಾರಾಧನತತ್ಪರಃ ॥ ೨೮೦ ॥

ಅಸ್ಮಿನ್ ತೀರ್ಥೇ ಭರದ್ವಾಜ ಋಷೀಣಾಂ ಸಪ್ತಮೋಭವತ್ ।
ಅಸ್ಮಿನ್ ಕ್ಷೇತ್ರೇ ಪುರಾ ವಿಪ್ರ ಕ್ಷೇತ್ರಜ್ಞಾನಪರೋಕ್ಷತಾಂ ॥ ೨೮೧ ॥

---

೨೭೬-೨೭೭. ಈ ಪುಣ್ಯಪ್ರದವಾದ ಗಂಗಾ ಯಮುನೆಗಳ ಸಂಗಮದಲ್ಲಿ ಯಯಾತಿಯು ಪುತ್ರಕಾಮನಾಗಿ ಸ್ನಾನಮಾ[illegible] ಧರನಾದ ನಹುಷನನ್ನು ಹೊಂದಿದನು. ಹಿಂದೆ ಧನವು ಬೇಕೆಂಬ ಅಪೇಕ್ಷೆಯಿಂದ ಇಂದ್ರನು ಇಲ್ಲಿ ಸ್ನಾನ ಮಾಡಲು ಕುಬೇರನ ನಿಧಿಯೆಲ್ಲವನ್ನೂ ಮಾಯೆಯಿಂದಲೇ ಅಪಹರಿಸಿದನು.

೨೭೮-೨೭೯. ನರನಾರಾಯಣರು ಪೂರ್ವದಲ್ಲಿ ಹತ್ತುಸಾವಿರ ವರ್ಷಗಳ ವರೆಗೂ ಆಹಾರವಿಲ್ಲದೆ ಇಲ್ಲಿ ಸ್ನಾನಮಾಡುತ್ತ ತಪಸ್ಸನ್ನು ಮಾಡಿದರು. ಜೈಗೀಷ ವ್ಯಸನೆಂಬ ಸನ್ಯಾಸಿಯು ಇಲ್ಲಿ ಸ್ನಾನಮಾಡಿ ಅಣಿಮಾದಿ ಸಿದ್ಧಿಯನ್ನು ಹೊಂದಿದನು.

೨೮೦-೨೮೧ ಕಶ್ಯಪಋಷಿಯೂ ಕೂಡ ಶಿವನನ್ನು ಆರಾಧಿಸುತ್ತ ಇಲ್ಲಿ ತಪಸ್ಸನ್ನು ಮಾಡಿದನು. ಈ ತೀರ್ಥದಲ್ಲಿಯೇ ತಪಸ್ಸು ಮಾಡಿ ಭರದ್ವಾಜನು ಸಪ್ತಋಷಿಗಳಲ್ಲಿ ಏಳನೆಯ ಮುಖ್ಯ ಋಷಿಯಾದನು. ಈ ತೀರ್ಥದಲ್ಲಿಯೇ ಸ್ನಾನಮಾಡುತ್ತಲಿದ್ದುಕೊಂಡು ಸನಕಾದಿಗಳು ಪರೋಕ್ಷ ಜ್ಞಾನವನ್ನೂ ಯೋಗ ಸಿದ್ಧಿಯನ್ನೂ ಹೊಂದಿದರು.

ಯೋಗಸ್ಯ ಫಲಭೂಮಿಂ ತು ಲೇಭಿರೇ ಸನಕಾದಯಃ ।
ಅಸ್ಮಿನ್ ಮಾಘೇ ತು ಯೇ ಸ್ನಾತಾ ಗಂಗಾಯಮುನಸಂಗಮೇ ॥ ೨೮೨ ॥

ನಾನಾರೂಪೈಶ್ಚ ತೈರ್ವ್ಯಾಪ್ತಾ ದ್ಯೌರಿಯಂ ಸಕಲಾಮಲಾ ।
ವಿಂದಂತಿ ಕಾಮಿನಃ ಕಾಮಾನ್ ಮುಕ್ತಿಂ ಯಾನ್ತಿ ಮುಮುಕ್ಷವಃ ॥ ೨೮೩ ॥

ಸಿದ್ಧಿಂ ತು ಸಾಧಕಾ ಯಾನ್ತಿ ಪ್ರಯಾಗೇಸ್ಮಿನ್ ದ್ವಿಜೋತ್ತಮ ।
ಋಚೀಕೇನ ಪುರಾ ಶಪ್ತೋ ಗಂಧರ್ವೋ ವಾಯಸೋಭವತ್ ॥ ೨೮೪ ॥

ಶಾಪಂ ಮುಮೋಚ ಸೋತ್ರೈವ ಸ್ನಾತಃ ಸದ್ಯಃ ಸಿತಾಸಿತೇ ।
ಸಾಂಪ್ರತಂ ಮುಕ್ತಿಕಾಮಾಸ್ತು ಕನ್ಯಾಃ ಪಂಚ ಸುತಶ್ಚ ತೇ ॥ ೨೮೫ ॥

ಮದ್ವಾಕ್ಯಾದತ್ರ ಮಜ್ಜನ್ತು ಋಷಿಸೇವ್ಯೇ ಸಿತಾಸಿತೇ ।
ಪ್ರಾಕ್ಕಾಲೀನಾಘವಿಧ್ವಂಸಿವೇಣೀಜಲಲವೇನ ತು ।
ಲಭಂತಾಮುಜ್ಜ್ವಲಾಂ ಲಕ್ಷ್ಮೀಂ ಪ್ರಾಪ್ತಶಾಪಮಲಾಪಹಾಂ ॥ ೨೮೬ ॥

---

೨೮೨ ಈ ತೀರ್ಥದಲ್ಲಿ ಮಾಘಮಾಸದಲ್ಲಿ ಗಂಗೆಯಮುನೆಗಳ ಸಂಗಮದಲ್ಲಿ ಸ್ನಾನಮಾಡಿದವರು ಬಗೆಬಗೆಯಾದ ರೂಪಗಳನ್ನು ಹೊಂದಿ ಆಕಾಶದಲ್ಲಿ ಪ್ರಕಾಶಿಸುತ್ತಿದ್ದಾರೆ.

೨೮೩. ಈ ಪ್ರಯಾಗದಲ್ಲಿ ಸ್ನಾನಮಾಡಿದರೆ ಕಾಮವುಳ್ಳವರು ಕಾಮವನ್ನೂ ಮೋಕ್ಷಕಾಮಿಗಳು ಮೋಕ್ಷವನ್ನೂ ಸಾಧಕರು ಸಿದ್ಧಿಯನ್ನೂ ಹೊಂದುತ್ತಾರೆ.

೨೮೪-೨೮೬. ಋಚೀಕನು ಗಂಧರ್ವನಿಗೆ ಶಾಪಕೊಡಲು ಅವನು ಕಾಗೆಯಾದನು. ಈ ಗಂಗಾ ಯಮುನ ಸಂಗಮದಲ್ಲಿ ಸ್ನಾನಮಾಡಿ ಆ ಶಾಪವನ್ನು ಕಳೆದುಕೊಂಡನು. ಈ ಮುಕ್ತಿಯನ್ನು ಅಪೇಕ್ಷಿಸುತ್ತಿರುವ ಆ ಐದು ಜನ ಕನ್ಯೆಯರೂ ನಿನ್ನ ಮಗನೂ ಋಷಿಸೇವ್ಯವಾದ ಈ ಸಂಗಮದಲ್ಲಿ ನನ್ನ ಮಾತಿನಂತೆ ಸ್ನಾನಮಾಡಲಿ. ಈ ವೇಣೀಜಲವು ಹಿಂದಿನ ಪಾಪದ ಕಲ್ಮಷವನ್ನು ನಾಶಮಾಡುತ್ತದೆ. ಅನಂತರ ತಮ್ಮ ತಮ್ಮ ಶಾಪಗಳನ್ನು ನಾಶಮಾಡಿಕೊಂಡು ಒಳ್ಳೆಯ ಕಾಂತಿಯನ್ನೂ ಸಿದ್ಧಿಯನ್ನೂ ಹೊಂದಲಿ

|| ವಸಿಷ್ಠ ಉವಾಚ ||

ಇತ್ಯಾರ್ಷಂ ಹಿ ವಚಸ್ಸತ್ಯಮತೀಂದ್ರಿಯಮಲಾಪಹಂ |
ಶ್ರುತ್ವಾ ಸೋತ್ಕಂಠಚಿತ್ತಾಸ್ತೇ ತಸ್ಥುಃ ಸ್ನಾನಾಯ ಸೋದ್ಯಮಾಃ|| ೨೮೭ ||

ಪ್ರಯಾಗಂ ಪ್ರಾಪ್ಯ ದುಷ್ಪ್ರಾಪ್ಯಂ ಸಸ್ನುರ್ನಿತ್ಯಂ ಸಿತಾಸಿತೇ |
ಭಕ್ತ್ಯಾ ಪರಮಯಾ ರಾಜನ್ ಮಾಕರಸ್ಥೇ ದಿವಾಕರೇ || ೨೮೮ ||

ಮಾಘೀಂ ಪಂಚದಶೀಂ ಸ್ನಾತ್ವಾ ತಾಃ ಕನ್ಯಾಃ ಸ ವಟುಸ್ತದಾ |
ಲೋಮಶಸ್ಯ ಪುರಸ್ಸರ್ವೇ ಪೈಶಾಚ್ಯಂ ವಿಜಹುಃ ಕ್ಷಣಾತ್ || ೨೮೯ ||

ವಿಮುಕ್ತಾಃ ಶಾಪದುಃಖೇನ ತನುಂ ಸ್ವಾಂ ಸ್ವಾಂ ಚ ಲೇಭಿರೇ |
ಆತ್ಮಲಾಭಾತ್ತದಾ ಸರ್ವೇ ಮಿಥೋ ರಾಗಂ ಚ ಲೇಭಿರೇ || ೨೯೦ ||

ದೃಷ್ಟ್ವಾ ವೇದನಿಧಿಃ ಪುತ್ರಂ ತಾಃ ಕನ್ಯಾ ದಿವ್ಯರೂಪಿಣೀಃ |
ತುಷ್ಟಾವ ಲೋಮಶಂ ಪ್ರೀತ್ಯಾ ಪ್ರಸನ್ನೇನಾಂತರಾತ್ಮನಾ || ೨೯೧ ||

---

೨೮೭. ವಸಿಷ್ಠನು ಹೇಳಿದನು-ಸತ್ಯವಾದ ಪಾಪನಾಶಕವಾದ ಋಷಿಯ ಈ ಮಾತನ್ನು ಕೇಳಿ ಎಲ್ಲರೂ ಆಶೆಗೊಂಡವರಾಗಿ ಸ್ನಾನಕ್ಕೆ ಸಿದ್ಧವಾಗಿ ನಿಂತುಕೊಂಡರು.

೨೮೮. ಸೂರ್ಯನು ಮಕರ ರಾಶಿಯಲ್ಲಿರುವಾಗ ಅವರು ಪ್ರಯಾಗದಲ್ಲಿ ಆ ಗಂಗಾಯಮುನೆಗಳ ನೀರಿನಲ್ಲಿ ಭಕ್ತಿಯಿಂದ ಸ್ನಾನಮಾಡಿದರು.

೨೮೯. ಆ ಕನ್ಯೆಯರೂ ಆ ಋಷಿಯ ಪುತ್ರನೂ ಮಾಘಮಾಸದಲ್ಲಿ ಹದಿನೈದುದಿನಗಳವರೆಗೆ ಸ್ನಾನಮಾಡಿದರು. ಅಷ್ಟರಲ್ಲಿಯೇ ಆ ಲೋಮಶನ ಎದುರಿಗೆ ತಮ್ಮ ತಮ್ಮ ಪಿಶಾಚಿತನವನ್ನು ಬಿಟ್ಟುಬಿಟ್ಟರು.

೨೯೦. ಈ ಶಾಪದುಃಖವನ್ನು ಕಳೆದುಕೊಂಡು ತಮ್ಮ ತಮ್ಮ ಉತ್ತಮ ಶರೀರವನ್ನು ಹೊಂದಿದರು. ಅನಂತರ ಅನ್ಯೋನ್ಯ ಅನುರಾಗವನ್ನು ಹೊಂದಿದರು.

೨೯೧. ಆ ವೇದನಿಧಿಯು ಆ ರೀತಿಯಾದ ಮಗನನ್ನೂ ಆ ಕನ್ಯೆಯರನ್ನೂ ನೋಡಿ ಬಹು ಸಂತೋಷಗೊಂಡ ಮನಸ್ಸುಳ್ಳವನಾಗಿ ಆ ಲೋಮಶನನ್ನು ಹೊಗಳಿದನು.

॥ ವೇದನಿಧಿರುವಾಚ ॥

ತ್ವದನುಗ್ರಹಪೋತೇನ ತೀರ್ಣಃ ಶಾಪಮಹಾರ್ಣವಃ ।
ಇದಾನೀಮುಚಿತಂ ಬ್ರೂಹಿ ಬಾಲಾನಾಮೃಷಿಸತ್ತಮ ॥ ೨೯೨ ॥

॥ ಲೋಮಶ ಉವಾಚ ॥

ಕುಮಾರೋಽಧೀತವೇದೋಽಯಂ ಸಮಾಪ್ತನಿಯಮೋ ಯುವಾ ।
ಆಸಾಂ ತು ಕಾಮರಾಗಾಣಾಂ ಗೃಹ್ಣಾತು ಕರಪಂಕಜಂ ॥ ೨೯೩ ॥

॥ ವಸಿಷ್ಠ ಉವಾಚ ॥

ತತೋ ಲೋಮಶವಾಕ್ಯೇನ ಸ್ವಪಿತುರ್ವಚಸಾ ತದಾ ।
ವಿವಾಹವಿಧಿನಾ ಚಾಶು ಬ್ರಹ್ಮಚಾರೀ ಸುಧಾರ್ಮಿಕಃ ॥ ೨೯೪ ॥

ಶುಭೈರ್ದ್ರವ್ಯೈಶ್ಚ ಮಂತ್ರೈಶ್ಚ ಋಷಿಭಿಃ ಕೃತಮಂಗಲಃ ।
ಪಂಚಾನಾಮಪಿ ಕನ್ಯಾನಾಂ ಪಾಣಿಂ ಜಗ್ರಾಹ ಧರ್ಮತಃ ॥ ೨೯೫ ॥

ಆನಂದಿನ್ಯಸ್ತು ತಾಸ್ಸರ್ವಾಃ ಕನ್ಯಾಃ ಪ್ರಾಪ್ತಮನೋರಥಾಃ ।
ಬಭೂವುಃ ಸ ಕುಮಾರಶ್ಚ ತಾವೃಷೀ ಚ ಬಭೂವತುಃ ॥ ೨೯೬ ॥

---

೨೯೨. ವೇದನಿಧಿಯು ಹೇಳಿದನು-ಎಲೈ ಲೋಮಶನೇ ! ಇವರು ನಿನ್ನ ಅನುಗ್ರಹವೆಂಬ ದೋಣಿಯಿಂದ ಪಾಪವೆಂಬ ಸಮುದ್ರವನ್ನು ದಾಟಿದರು. ಈಗ ಆ ಹುಡುಗರು ಮಾಡಬೇಕಾದ ಸರಿಯಾದ ಕೆಲಸವನ್ನು ಹೇಳು.

೨೯೩. ಲೋಮಶನು ಹೇಳಿದನು-ಈ ನಿನ್ನ ಮಗನು ವೇದವೆಲ್ಲವನ್ನೂ ಅಧ್ಯಯನ ಮಾಡಿರುವನು ನಿಯಮವೆಲ್ಲವೂ ಪೂರೈಸಿರುವುದು. ಈ ಹುಡುಗಿಯರು ಕಾಮರಾಗವನ್ನು ಹೊಂದಿರುವುದರಿಂದ ಅದೇ ಇಚ್ಛೆಯಿಂದಲೇ ಪಾಣಿಗ್ರಹಣವನ್ನು ಮಾಡಲಿ.

೨೯೪-೨೯೫. ವಸಿಷ್ಠನು ಹೇಳಿದನು-ಆಗ ಲೋಮಶನ ಮಾತಿನಂತೆಯೂ ತನ್ನ ತಂದೆಯ ಮಾತಿನಂತೆಯೂ ಆ ಧಾರ್ಮಿಕನಾದ ಬ್ರಹ್ಮಚಾರಿಯು ವಿವಾಹ ವಿಧಿಯನ್ನು ಹೊಂದಿದನು. ಶುಭವಾದ ದ್ರವ್ಯಗಳಿಂದಲೂ ಮಂತ್ರಗಳಿಂದಲೂ ಋಷಿಗಳು ಮಂಗಳ ಕರ್ಮವನ್ನು ಅವನಿಗೆ ಮಾಡಿದರು. ಅನಂತರ ಆ ಐವರು ಕನ್ಯೆಯರನ್ನೂ ಮದುವೆಯಾದನು.

೨೯೬. ಆ ಕನ್ಯೆಯ ಇಷ್ಟಾರ್ಥವೂ ನೆರವೇರಿತು. ಆ ಹುಡುಗನೂ ಇಬ್ಬರು ಈ ಋಷಿಗಳೂ ಆ ಕನ್ಯೆಯರೂ ಸಂತೋಷಪಟ್ಟುಕೊಂಡರು.

ದತ್ವಾನುಜ್ಞಾಂ ಮುನಿಸ್ಸೋಽಥ ಲೋಮಶಸ್ತೈರ್ನಮಸ್ಕೃತಃ ।
ಜಗಾಮ ಸ್ವಾಶ್ರಮಂ ಮೇರುಂ ಪರ್ವತಂ ಸುರಸೇವಿತಂ ॥ ೨೯೭ ॥

ವೇದನಿಧಿಸ್ತತೋ ರಾಜನ್ ಸ್ನುಷಾಃ ಪಂಚ ಸುತಂ ತಥಾ ।
ಪುರಸ್ಕೃತ್ಯ ಮುದಾಯುಕ್ತೋ ಧನದಸ್ಯ ಪುರೀಂ ಯಯೌ ॥ ೨೯೮ ॥

ಇತಿ ನೃಪವರ ಮಾಘಸ್ನಾನಸಂಜಾತಪುಣ್ಯಾ
ಮುನಿವರ ವಚಸಾ ಪ್ರಾಕ್ ತೀರ್ಥರಾಜೇ ಪ್ರಯಾಗೇ ।
ಸಕಲಕಲುಷಮುಕ್ತಾಃ ಪಂಚ ಗಂಧರ್ವಕನ್ಯಾ
ಅಲಮಭಿಮತಕಾಮಂ ಪ್ರಾಪ್ಯ ಹರ್ಷಂ ಚ ಜಗ್ಮುಃ ॥ ೨೯೯ ॥

ಪರಮಿಮಮಿತಿಹಾಸಂ ಪಾವನಂ ತೀರ್ಥಭೂತಂ
ವೃಜಿನವಿಲಯಹೇತುಂ ಯಶ್ಶೃಣೋತೀಹ ನಿತ್ಯಂ ।
ಸ ಭವತಿ ಖಲು ಪೂರ್ಣಃ ಸರ್ವಕಾಮೈರಭೀಷ್ಟೈಃ
ಜಯತಿ ಸ ಸುರಲೋಕಂ ದುರ್ಲಭಂ ಧರ್ಮಯುಕ್ತಂ ॥೩೦೦॥

---

೨೯೭–೨೯೮. ಲೋಮಶನು ಅವರಿಗೆ ಅನುಜ್ಞೆಯನ್ನು ಕೊಟ್ಟು ಅವರಿಂದ ನಮಸ್ಕೃತನಾಗಿ ಮೇರುವಿನಲ್ಲಿರುವ ತನ್ನ ಆಶ್ರಮಕ್ಕೆ ಹೊರಟು ಹೋದನು. ವೇದನಿಧಿಯು ಆ ಐವರು ಸೊಸೆಯರನ್ನೂ ಮಗನನ್ನೂ ಕರೆದು ಕೊಂಡು ಸಂತೋಷದಿಂದ ಧನದ ಪಟ್ಟಣವಾದ ಅಲಕೆಗೆ ಹೋದನು.

೨೯೯. ಎಲೈ ದೊರೆಯೆ ! ಇಂತು ಅವರೆಲ್ಲರೂ ಆ ಲೋಮಶಮುನಿಯ ಮಾತಿನಂತೆ ತೀರ್ಥರಾಜನಾದ ಪ್ರಯಾಗದಲ್ಲಿ ಮಾಘಸ್ನಾನವನ್ನು ಮಾಡಿದರು. ಆ ಗಂಧರ್ವಕನ್ಯೆಯರೂ ಆ ವಟುವೂ ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಇಷ್ಟವಾದುವುವನ್ನು ಹೊಂದಿ ಬಹುವಾದ ಹರ್ಷವನ್ನು ಹೊಂದಿದರು.

೩೦೦. ಈ ಇತಿಹಾಸವು ಶ್ರೇಷ್ಠವಾದುದು. ಪಾವನವಾದುದು. ತೀರ್ಥ ದಂತಿರುವುದು. ಪಾಪಗಳನ್ನು ನಾಶಮಾಡುವುದು. ಇಂತಹ ಇದನ್ನು ಯಾವನು ಕೇಳುತ್ತಾನೆಯೋ ಅವನು ಎಲ್ಲಾ ಇಷ್ಟಾರ್ಥಗಳನ್ನೂ ಹೊಂದುತ್ತಾನೆ. ಧರ್ಮದಿಂದ ದೇವಲೋಕವನ್ನು ಜಯಿಸಿ ಅದನ್ನು ಹೊಂದುತ್ತಾನೆ.

ಇತಿಹಾಸಮಿಮಂ ಶ್ರುತ್ವಾ ಪೂಜಯೇದ್ಯಸ್ತು ಪಾಠಕಂ ।
ಗೋಭಿರ್ಹಿರಣ್ಯವಸ್ತ್ರೈಶ್ಚ ಬ್ರಹ್ಮತುಲ್ಯೋ ಭವೇದ್ಧಿ ಸಃ ॥ ೩೦೧ ॥

ವಾಚಕೇ ಪೂಜಿತೇ ಯಸ್ಮಾದ್ವಿಷ್ಣುರ್ಭವತಿ ಪೂಜಿತಃ ।
ತಸ್ಮಾತ್ಸ್ರಪೂಜಿತೇ ನಿತ್ಯಂ ಯದಿಚ್ಛೇತ್ಸಫಲಂ ಭವೇತ್ ॥ ೩೦೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಮಾಘಮಾಹಾತ್ಮ್ಯೇ
ವಸಿಷ್ಠ ದಿಲೀಪ ಸಂವಾದೇ ಪಿಶಾಚಮೋಕ್ಷಣ ಕಥನಂ ನಾಮ
ಪಂಚಾಶದಧಿಕದ್ವಿಶತಮೋಽಧ್ಯಾಯಸ್ಸಮಾಪ್ತಃ

---

೩೦೧. ಈ ಇತಿಹಾಸವನ್ನು ಕೇಳಿ ಯಾವನು ಪುರಾಣ ಹೇಳಿದವನನ್ನು ಪೂಜಿಸುತ್ತಾನೆಯೋ ಅವನು ಇಹದಲ್ಲಿ ಗೋವುಗಳಿಂದಲೂ ಧರ್ಮದಿಂದಲೂ ಬಟ್ಟೆಬರೆಗಳಿಂದಲೂ ಪೂರ್ಣನಾಗಿದ್ದುಕೊಂಡು ಕೊನೆಗೆ ಬ್ರಹ್ಮನ ಸಾರೂಪ್ಯ ವನ್ನು ಹೊಂದುತ್ತಾನೆ.

೩೦೨. ಪುರಾಣವನ್ನು ಹೇಳಿದವನನ್ನು ಪೂಜಿಸಿದರೆ ವಿಷ್ಣುವನ್ನೇ ಪೂಜಿ ಸಿದಂತಾಗುತ್ತದೆ. ಆದ್ದರಿಂದ ಆ ಪಾಠಕನನ್ನು ಪೂಜಿಸಿದರೆ ತಾನು ಅಪೇಕ್ಷಿಸಿ ದುದೆಲ್ಲವೂ ಸಿಕ್ಕುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ
ಸಂವಾದದ ಮಾಘ ಮಹಿಮೆಯಲ್ಲಿ ಪಿಶಾಚಮೋಕ್ಷಣ ಕಥನವೆಂಬ
ಇನ್ನೂರೈವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಪಂಚಾಶದಧಿಕದ್ವಿಶತತಮೋಽಧ್ಯಾಯಃ ॥



॥ ಶೌನಕ ಉವಾಚ ॥

**ಸೂತ ಸೂತ ಮಹಾಭಾಗ ಧನ್ಯೋಽಸಿ ತ್ವಂ ಭವಾಂಬುಧೌ ।**
**ಯನ್ನೋಽತ್ಯರ್ಥಂ ನಿಮಗ್ನಾನಾಂ ಪಾಯಯಸ್ಯಮೃತೋತ್ಕರಂ ॥ ೧ ॥**

**ಸಾಧೋಽತ್ರ ಭವನಿಸ್ತಾರಂ ವಾಂಛತಾಂ ನಃ ಸಮಾದಿಶ ।**
**ಮಂತ್ರರತ್ನಂ ಭಾವಶುದ್ಧಂ ಯನ್ಮಯಂ ಸಚರಾಚರಂ ॥ ೨ ॥**

॥ ಸೂತ ಉವಾಚ ॥

**ಶೃಣು ಶೌನಕ ವಕ್ಷ್ಯಾಮಿ ಮಂತ್ರರತ್ನಂ ಮಹಾದ್ಭುತಂ ।**
**ಯದ್ದಿಲೀಪಾಯ ಗದಿತಂ ವಸಿಷ್ಠೇನ ಮಹಾತ್ಮನಾ ॥ ೩ ॥**

---

## ಇನ್ನೂರ ಐವತ್ತೊಂದನೆಯ ಅಧ್ಯಾಯವು



೧. ಶೌನಕನು ಹೇಳಿದನು–ಎಲೈ ಸೂತನೆ ! ಮಹಾಮಹಿಮನೆ ! ನೀನೇ ಧನ್ಯನು. ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವ ನಮ್ಮಗಳಿಗೆ ಉತ್ಕೃಷ್ಟವಾದ ಅಮೃತವನ್ನು ಕುಡಿಸುತ್ತಿರುವೆಯಲ್ಲ !

೨. ಎಲೈ ಸಾಧುವೆ ! ಸಂಸಾರದಿಂದ ಪಾರಾಗುವಿಕೆಯನ್ನು ಅಪೇಕ್ಷಿಸುವ ನಮ್ಮಗಳಿಗೆ ಚರಾಚರಾತ್ಮಕವಾದ ಭಾವಶುದ್ಧವಾದ ಮಂತ್ರರತ್ನವನ್ನು ಅಪ್ಪಣೆಕೊಡು.

೩. ಸೂತನು ಹೇಳಿದನು–ಎಲೈ ಶೌನಕನೆ ! ಮಹಾತ್ಮನಾದ ವಸಿಷ್ಠನು ದಿಲೀಪನಿಗೆ ಹೇಳಿದ ಅದ್ಭುತವಾದ ಮಂತ್ರರತ್ನವನ್ನು ಹೇಳುತ್ತೇನೆ. ಕೇಳು.

ಏಕದಾ ತು ದಿಲೀಪೇನ ಪೃಷ್ಟಮೇತದ್ಗುರುಂ ಪ್ರತಿ ।
ವಸಿಷ್ಠಂ ದ್ವಿಜಶಾರ್ದೂಲಂ ಪ್ರಣಿಪತ್ಯ ಯಥಾ ತ್ವಯಾ ॥ ೪ ॥

॥ ದಿಲೀಪ ಉವಾಚ ॥

ಭಗವರ್ನ್ ಭಗವತಾ ಪ್ರೋಕ್ತಾಃ ಸರ್ವಧರ್ಮಾ ವಿಶೇಷತಃ ।
ವರ್ಣಾಶ್ರಮಯುತಾ ಧರ್ಮಾ ನಿತ್ಯನೈಮಿತ್ತಿಕಾಶ್ಚ ಯೇ ॥ ೫ ॥

ರಾಜಧರ್ಮಾಶ್ಚ ಯಜ್ಞಾಶ್ಚ ತೀರ್ಥದಾನವ್ರತಾದಿಕಂ ।
ಶ್ರುತಂ ಮಯಾ ಮುನಿಶ್ರೇಷ್ಠ ಅಕ್ಷಯಾಃ ಸ್ವರ್ಗಭೋಗದಾಃ ॥ ೬ ॥

ಅಧುನಾ ಶ್ರೋತುಮಿಚ್ಛಾಮಿ ಮೋಕ್ಷಮಾರ್ಗಂ ಸನಾತನಂ ।
ದಿಷ್ಟ್ಯಾಹಂ ಯೇನ ಗಚ್ಛಾಮಿ ತದ್ಬ್ರಹ್ಮರ್ನ್ ವಕ್ತುಮರ್ಹಸಿ ॥ ೭ ॥

ಕೋ ಮಂತ್ರಸ್ಸರ್ವಮಂತ್ರಾಣಾಂ ಭವರೋಗೈಕಭೇಷಜಂ ।
ಸರ್ವೇಷಾಮೇವ ದೇವಾನಾಂ ಕೋಹಿ ಮೋಕ್ಷಪ್ರದೋ ಪರಃ ॥ ೮ ॥

---

೪. ಒಂದುಸಾರಿ ದಿಲೀಪನು ಬ್ರಾಹ್ಮಣಶ್ರೇಷ್ಠನೂ ತನ್ನ ಗುರುವೂ ಆದ ವಸಿಷ್ಠನಿಗೆ ನಮಸ್ಕಾರಮಾಡಿ ನೀನು ಕೇಳಿದಂತೆಯೇ ಕೇಳಿದನು.

೫. ದೀಲೀಪನು ಹೇಳಿದನು-ಎಲೈ ಪೂಜ್ಯನೆ! ನೀನು ನನಗೆ ವರ್ಣಾಶ್ರಮಗಳಿಂದ ಕೂಡಿದ ನಿತ್ಯವೂ ನೈಮಿತ್ತಿಕವೂ ಆದ ಎಲ್ಲಾ ಧರ್ಮಗಳನ್ನೂ ಹೇಳಿದ್ದೀಯೆ.

೬. ರಾಜಧರ್ಮಗಳು, ಯಜ್ಞವಿಷಯಗಳು, ತೀರ್ಥಗಳ ವಿಷಯ ಮತ್ತು ಅಕ್ಷಯವಾದ ಭೋಗಗಳನ್ನು ಕೊಡುವ ಧರ್ಮಗಳು ಇವುಗಳನ್ನು ಹೇಳಿದ್ದೀಯೆ.

೭. ಸನಾತನವಾದ ಮೋಕ್ಷವನ್ನು ಯಾವುದರಿಂದ ನಾನು ಹೊಂದುತ್ತೇನೆಯೋ ಅಂತಹ ಉತ್ತಮವಾದ ಮಂತ್ರವನ್ನು ಹೇಳಿಕೊಡು.

೮-೯. ಎಲ್ಲಾ ಮಂತ್ರಗಳಲ್ಲಿಯೂ ಸಂಸಾರವೆಂಬ ರೋಗಕ್ಕೆ ಔಷಧವಾದ ಉತ್ತಮ ಮಂತ್ರವಾವುದು? ಎಲ್ಲಾ ದೇವತೆಗಳಿಗೂ ಮೋಕ್ಷವನ್ನು ಕೊಡುವ

ತತ್ ಸಮಾಖ್ಯಾಹಿ ತತ್ತ್ವೇನ ಮಯಿ ವಾತ್ಸಲ್ಯಗೌರವಾತ್ ॥ ೯ ॥

॥ ವಸಿಷ್ಠ ಉವಾಚ ॥

ಸಾಧು ಪೃಷ್ಟಂ ತ್ವಯಾ ರಾಜನ್ ಸರ್ವಲೋಕಹಿತೈಷಿಣಾ ।
ವಕ್ಷ್ಯಾಮಿ ಪರಮಂ ಗುಹ್ಯಮೇಕಂ ಸಂಸಾರತಾರಕಂ ॥ ೧೦ ॥

ಪುರಾ ಮಹರ್ಷಯಸ್ಸರ್ವೇ ಯಜ್ಞದಾನಪರಾಃ ಶುಭಾಃ ।
ಪಪ್ರಚ್ಛುರ್ಬ್ರಹ್ಮಣಃ ಪುತ್ರಂ ನಾರದಂ ಮುನಿಸತ್ತಮಂ ॥ ೧೧ ॥

॥ ಋಷಯ ಊಚುಃ ॥

ಭಗವನ್ ಕೇನ ಮಂತ್ರೇಣ ಗಚ್ಛಾಮಃ ಪರಮಂ ಪದಂ ।
ತನ್ನೋ ಬ್ರೂಹಿ ಮಹಾಭಾಗ ಪ್ರಸಾದಂ ಕರ್ತುಮರ್ಹಸಿ ॥ ೧೨ ॥

---

ಉತ್ತಮ ಮಂತ್ರವಾವುದು? ನನ್ನಲ್ಲಿರುವ ಪ್ರೀತಿಯಿಂದ ಆ ಮಂತ್ರವನ್ನು ಸರಿಯಾಗಿ ಹೇಳು.

೧೦. ವಸಿಷ್ಠನು ಹೇಳಿದನು–ಎಲೈ ರಾಜನೇ ! ಸರ್ವಲೋಕಕ್ಕೂ ಹಿತೈಷಿಯಾದ ನೀನು ಕೇಳಿದುದು ಚೆನ್ನಾಗಿದೆ. ಸಂಸಾರವನ್ನು ನಾಶಮಾಡುವ ಗುಟ್ಟಾದ ಒಂದು ಮಂತ್ರವನ್ನು ಹೇಳುತ್ತೇನೆ. ಕೇಳು.

೧೧. ಯಜ್ಞದಾನಗಳಲ್ಲಿ ಆಸಕ್ತರಾದ ಮಹರ್ಷಿಗಳೆಲ್ಲರೂ ಪೂರ್ವದಲ್ಲಿ ಮುನಿಶ್ರೇಷ್ಠನಾದ ಬ್ರಹ್ಮನ ಪುತ್ರನಾದ ನಾರದನನ್ನು ಕುರಿತು ಇಂತೆಂದು ಕೇಳಿದರು.

೧೨. ಋಷಿಗಳು ಹೇಳಿದರು–ಎಲೈ ಭಗವಂತನೇ ! ಯಾವ ಮಂತ್ರದಿಂದ ಪರಮಪದವನ್ನು ಹೊಂದುತ್ತೇವೆ? ಅದನ್ನು ಹೇಳು. ನಮಗೆ ಅನುಗ್ರಹವನ್ನು ಮಾಡಲು ಯೋಗ್ಯನಾಗಿದ್ದೀಯೆ.

॥ ನಾರದ ಉವಾಚ ॥

ಪಿತಾಮಹಂ ಪುರಾ ಸರ್ವೇ ಯೋಗಿನಃ ಸನಕಾದಯಃ ।
ಪಪ್ರಚ್ಛುರೇಕಮೇಕಾನ್ತೇ ಮೋಕ್ಷಮಾರ್ಗಂ ಸುದುರ್ಲಭಂ ॥ ೧೩ ॥

॥ ಬ್ರಹ್ಮೋವಾಚ ॥

ಶೃಣುಧ್ವಂ ಯೋಗಿನಃ ಸರ್ವೇ ಮೋಕ್ಷಮಾರ್ಗಮನುತ್ತಮಂ ।
ದಿಷ್ಟ್ವಾಹಂ ಯೇನ ವಕ್ಷ್ಯಾಮಿ ರಹಸ್ಯಮಿದಮದ್ಭುತಂ ॥ ೧೪ ॥

ನ ಜಾನಂತಿ ಸುರಾಸ್ಸರ್ವೇ ಋಷಯಶ್ಚ ತಪೋಧನಾಃ ।
ಸರ್ಗಾದೌ ಪ್ರೋಕ್ತವಾನ್ ದೇವೋ ಮಮ ನಾರಾಯಣೋವ್ಯಯಃ ॥೧೫॥

ಈಶ್ವರ್ಯಾ ಸಹ ದೇವ್ಯಾ ಚ ಸಮ್ಯಕ್ಸಂಪೂಜಿತೋ ಮಯಾ ।
ತತಃ ಪ್ರಸನ್ನೋ ಭಗವಾನ್ ಮಮ ನಾರಾಯಣೋವ್ಯಯಃ ॥ ೧೬ ॥

---

೧೩. ನಾರದನು ಹೇಳಿದನು–ಸನಕಾದಿ ಯೋಗಿಗಳು ಪೂರ್ವದಲ್ಲಿ ಪಿತಾಮಹನಾದ ಬ್ರಹ್ಮನನ್ನು ಕುರಿತು ಏಕಾಂತದಲ್ಲಿ ಸುಲಭವಾದ ಮೋಕ್ಷ ಮಾರ್ಗವನ್ನು ಕೇಳಿದರು.

೧೪. ಬ್ರಹ್ಮನು ಹೇಳಿದನು–ಎಲೈ ಯೋಗಿಗಳಿರಾ ! ನೀವೆಲ್ಲರೂ ಕೇಳಿರಿ ! ಉತ್ತಮವಾದ ಮೋಕ್ಷಮಾರ್ಗವನ್ನು ಹೇಳುತ್ತೇನೆ ! ನಾನು ಹೇಳತಕ್ಕ ಇದು ಅದ್ಭುತವೂ ರಹಸ್ಯವೂ ಆದುದು.

೧೫. ನಾನು ಹೇಳುವುದನ್ನು ದೇವತೆಗಳಾಗಲೀ ಋಷಿಗಳಾಗಲೀ ಒಬ್ಬರೂ ತಿಳಿಯರು. ಸೃಷ್ಟಿಗೆ ಮೊದಲಿನಲ್ಲಿ ಆ ನಾರಾಯಣನು ನನಗೆ ಹೇಳಿದನು.

೧೬. ಆ ನಾರಾಯಣನ ಜೊತೆಯಲ್ಲಿ ಈಶ್ವರೀ ದೇವಿಯನ್ನೂ ಕೂಡ ನಾನು ಚೆನ್ನಾಗಿ ಪೂಜಿಸಿದೆನು. ಆಗ ಆ ಸ್ವಾಮಿಯು ನನಗೆ ಪ್ರಸನ್ನನಾದನು.

ಪ್ರಾಜಾಪತ್ಯಂ ದದೌ ಮಹ್ಯಂ ಶ್ರುತಿಜಂ ಸರ್ವವಾಙ್ಮಯಂ ।
ಪ್ರಕಾಶಕಾನಿ ಮಂತ್ರಾಣಿ ಸಾಧ್ಯಾತ್ಮಪ್ರಾಪಕಾಣಿ ಚ ॥ ೧೭ ॥

ತತಸ್ತಮಬ್ರವಂ ದೇವಂ ಪುರಾಣಪುರುಷೋತ್ತಮಂ ।
ಭಗವನ್ ಕೇನ ಮಂತ್ರೇಣ ಸಂಸಾರೋತ್ತಾರಣಂ ನೃಣಾಂ ॥ ೧೮ ॥

ತನ್ಮಮಾಚಕ್ಷ್ವ ತತ್ತ್ವೇನ ಸರ್ವಲೋಕಹಿತಾಯ ವೈ ।
ಕೋ ಮಂತ್ರಸ್ಸರ್ವಮಂತ್ರಾಣಾಂ ಪುರಶ್ಚರಣವರ್ಜಿತಃ ।
ಸಕೃದುಚ್ಚಾರಣಾನ್ನೃಣಾಂ ದದಾತಿ ಪರಮಂ ಪದಂ ॥ ೧೯ ॥

॥ ಶ್ರೀ ಭಗವಾನುವಾಚ ॥

ಸಾಧು ಪೃಷ್ಟಂ ಮಹಾಭಾಗ ಸರ್ವಲೋಕಹಿತೈಷಿಣಾ ।
ತಸ್ಮಾದ್ವಕ್ಷ್ಯಾಮಿ ತೇ ಗುಹ್ಯಂ ಯೇನ ಮಾಮಾಪ್ನುಯುರ್ನರಾಃ ॥ ೨೦ ॥

---

೧೭. ಆಗ ಆ ನಾರಾಯಣನು ಶ್ರುತಿಯಲ್ಲಿ ಹೇಳಿರುವ ವಾಙ್ಮಯ ರೂಪವಾದ ಪ್ರಾಜಾಪತ್ಯಸ್ಥಾನವನ್ನು ಕೊಟ್ಟನು. ಪ್ರಕಾಶಮಾನವಾದ ಸಾಧ್ಯರೂಪವಾದ ಆತ್ಮವನ್ನೂ ಕೊಡತಕ್ಕವುಗಳಾದ ಮಂತ್ರಗಳನ್ನೂ ಕೊಟ್ಟನು.

೧೮. ಆಗ ಆ ಸ್ವಾಮಿಯನ್ನು ಕುರಿತು ಸ್ವಾಮಿಯೇ! ಪುರಾಣಪುರುಷೋತ್ತಮನೇ ! ಯಾವ ಮಂತ್ರದಿಂದ ಸಂಸಾರದಿಂದ ಮುಕ್ತಿಯನ್ನು ಹೊಂದಬಹುದು ? ಅದನ್ನು ಎಲ್ಲಾ ಜನರ ಹಿತದೃಷ್ಟಿಯಿಂದ ನನಗೆ ಹೇಳು.

೧೯. ಎಲ್ಲಾ ಮಂತ್ರಗಳಲ್ಲಿಯೂ ಉತ್ತಮವಾದುದು ಯಾವುದು? ಪುನಶ್ಚರಣ ಮಾಡದುದಾಗಿರಬೇಕು. ಒಂದೇ ಬಾರಿ ಉಚ್ಚರಿಸಿದುದರಿಂದಲೇ ಪರಮ ಪದವನ್ನು ಕೊಡತಕ್ಕದ್ದಾಗಿರಬೇಕು ಅಂತಹದು ಯಾವುದು ? ಹೇಳು. ಎಂದು ಕೇಳಿದೆನು.

೨೦. ಶ್ರೀ ಭಗವಂತನು ಹೇಳಿದನು–ಸರ್ವಲೋಕ ಹಿತೈಷಿಯಾದ ನೀನು ಕೇಳಿದುದು ಚೆನ್ನಾಗಿದೆ. ಯಾವ ಮಂತ್ರೋಚ್ಚಾರಣದಿಂದ ಮನುಷ್ಯರು ನನ್ನನ್ನು ಹೊಂದುವರೋ ಅಂತಹ ಗುಹ್ಯವಾದ ಮಂತ್ರವನ್ನು ಹೇಳುತ್ತೇನೆ, ಕೇಳು.

ಸರ್ವೇಷಾಮೇವ ಮಂತ್ರಾಣಾಂ ಮತ್ರರತ್ನಂ ಶುಭಾವಹಂ ।
ಸಕೃತ್ ಸ್ಮರಣಮಾತ್ರೇಣ ದದಾತಿ ಪರಮಂ ಪದಂ ॥ ೨೧ ॥

ಮಂತ್ರರತ್ನಮಿದಂ ನಾಮ ಪ್ರಪಾತಿ ಶರಣಾಗತಂ ।
ಲಕ್ಷ್ಮೀನಾರಾಯಣಶ್ಚೇತಿ ಮಂತ್ರಸ್ಸರ್ವಫಲಪ್ರದಃ ॥ ೨೨ ॥

ನಾಮಾನಿ ಮಂತ್ರರತ್ನಸ್ಯ ಪರ್ಯಾಯೇಣ ನಿಬೋಧತ ।
ತಸ್ಯೋಚ್ಚಾರಣಮಾತ್ರೇಣ ಪರಿತುಷ್ಟೋಽಸ್ಮಿ ನಿತ್ಯಶಃ ॥ ೨೩ ॥

ಕುಲಜೋ ವಾ ತಪಸ್ವೀ ವಾ ವೇದವೇದಾಂಗಪಾರಗಃ ।
ಯಜ್ಞದಾನಪರೋ ವಾಪಿ ಸರ್ವತೀರ್ಥೋಪಸೇವಕಃ ॥ ೨೪ ॥

ವ್ರತೀ ವಾ ಸತ್ಯವಾದೀ ವಾ ಯತಿರ್ವಾ ಜ್ಞಾನವಾನಪಿ ।
ಮಂತ್ರಾಧಿಕಾರೀ ನ ಭವೇತ್ ಪ್ರಯತ್ನೇನ ಚ ವರ್ಜಯೇತ್ ॥ ೨೫ ॥

---

೨೧. ಎಲ್ಲಾ ಮಂತ್ರಗಳಿಗೂ ಶ್ರೇಷ್ಠವಾದ ಮಂತ್ರರತ್ನವನ್ನು ಹೇಳುತ್ತೇನೆ. ಆ ಮಂತ್ರರತ್ನವು ಶುಭವನ್ನುಂಟುಮಾಡುತ್ತದೆ. ಒಂದು ಬಾರಿ ಸ್ಮರಿಸಿದರೇನೆ ಮುಕ್ತಿಯನ್ನು ಕೊಡುತ್ತದೆ.

೨೨. ಈ ಮಂತ್ರರತ್ನವು ಶರಣಾಗತರನ್ನು ಕಾಪಾಡುತ್ತದೆ. "ಲಕ್ಷ್ಮೀ ನಾರಾಯಣ" ವೆಂಬ ಮಂತ್ರವು ಸರ್ವಫಲವನ್ನು ಕೊಡುತ್ತದೆ.

೨೩. ಮಂತ್ರರತ್ನದ ಹೆಸರುಗಳನ್ನು ಕ್ರಮವಾಗಿ ಕೇಳು. ಅದನ್ನು ಉಚ್ಚಾರಮಾಡುವುದರಿಂದಲೇ ನಾನು ಯಾವಾಗಲೂ ಸಂತೋಷಗೊಳ್ಳುತ್ತೇನೆ.

೨೪–೨೫. ಉತ್ತಮ ಕುಲದಲ್ಲಿ ಹುಟ್ಟಿದವನು, ತಪಸ್ವಿಯು, ವೇದವೇದಾಂತಗಳಲ್ಲಿ ನಿಷ್ಣಾತನು, ಯಜ್ಞಮಾಡಿದವನು, ದಾನಿಯು, ಎಲ್ಲಾ ತೀರ್ಥಗಳನ್ನೂ ಸೇವಿಸಿದವನು, ವ್ರತವುಳ್ಳವನು, ಸತ್ಯವನ್ನೇ ಆಡುವವನು, ಯತಿಯು, ಜ್ಞಾನಿಯು ಇವರು ನನ್ನಲ್ಲಿ ಭಕ್ತಿಯನ್ನಿಡದಪಕ್ಷದಲ್ಲಿ ಈ ಮಂತ್ರದಲ್ಲಿ ಅಧಿಕಾರಿಗಳಾಗುವುದಿಲ್ಲ. ಅಂತಹವರನ್ನು ಬಿಟ್ಟುಬಿಡಬೇಕು.

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಸ್ತ್ರೀಯಶ್ಶೂದ್ರಾಸ್ತಥೇತರೇ |
ತಸ್ಯಾಧಿಕಾರಿಣಃ ಸರ್ವೇ ಮಮ ಭಕ್ತಾ ಭವಂತಿ ಚೇತ್ || ೨೬ ||

ಶರಣ್ಯಂ ಶರಣಾನಾಂ ಚ ತಥೈವಾನನ್ಯಸೇವಿನಾಂ |
ಅನನ್ಯಸಾಧನಾನಾಂ ಚ ವಕ್ತವ್ಯಂ ಮಂತ್ರಮುತ್ತಮಂ || ೨೭ ||

ಆರ್ತಾನಾಮಾಶು ಫಲದಂ ಸಕೃದೇವ ಕೃತೋ ಹ್ಯಸೌ |
ದೀಪ್ತಾನಾಮಪಿ ಜನ್ತೂನಾಂ ದೇಹಾನ್ತರನಿವಾರಣಂ || ೨೮ ||

ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ವಾಪಿ ಪ್ರಜಾಪತೇ |
ಸಕೃನ್ಮಾಂ ಶರಣಂ ಯಾತಿ ಸ ತತ್ಫಲಮವಾಪ್ನುಯಾತ್ || ೨೯ ||

ನಾದೀಕ್ಷಿತಾಯ ವಕ್ತವ್ಯಂ ನಾಭಕ್ತಾಯ ನ ಮಾನಿನೇ |
ನಾಸ್ತಿಕಾಯ ಕೃತಘ್ನಾಯ ನ ಶ್ರದ್ಧಾವಿಮುಖಾಯ ಚ || ೩೦ ||

---

೨೬. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಹೆಂಗಸರು ಮತ್ತೆ ಯಾರೇ ಆಗಿರಲಿ ಅವರು ನನ್ನ ಭಕ್ತರಾಗಿದ್ದರೆ ಅವರಿಗೆಲ್ಲಾ ಇದರಲ್ಲಿ ಅಧಿಕಾರವುಂಟು.

೨೭. ಈ ಮಂತ್ರವು ಶರಣು ಹೊಂದಿದವರನ್ನು ಕಾಪಾಡುತ್ತದೆ. ಇತರರನ್ನು ಸೇವಿಸದೆಯೂ ಮತ್ತಾವ ಸಾಧನಗಳೂ ಇಲ್ಲದೆಯೂ ಇರುವವನು ಈ ಮಂತ್ರವನ್ನು ಹೇಳಬೇಕು.

೨೮. ಕಷ್ಟಪಡುತ್ತಿರುವವರಿಗೆ ಬೇಗನೆ ಫಲವನ್ನು ಕೊಡುತ್ತದೆ. ಒಂದೇ ಸಾರಿ ಜಪಮಾಡಿದರೆ ಸಾಕು. ಕಷ್ಟಪಡುತ್ತಿರುವ ಜನ್ತುಗಳಿಗೆ ಮುಕ್ತಿಯನ್ನು ಕೊಡುತ್ತದೆ.

೨೯. ಕಷ್ಟಪಡುವವನು, ಹಣವನ್ನು ಅಪೇಕ್ಷಿಸುವವನು, ಜ್ಞಾನಬೇಕಾದವನು ಯಾವನೇ ಆಗಲಿ ಭಕ್ತಿಯಿಂದ ಒಂದೇ ಬಾರಿ ನನ್ನನ್ನು ಶರಣು ಹೊಂದಿದರೂ ಅವುಗಳ ಫಲವನ್ನು ಅವನು ಹೊಂದುತ್ತಾನೆ.

೩೦–೩೧. ದೀಕ್ಷೆಯನ್ನು ಹೊಂದದವನಿಗೆ ಹೇಳಿಕೊಡಬಾರದು. ಭಕ್ತನಲ್ಲದವನಿಗೂ ಹೇಳಿಕೊಡಬಾರದು. ಹೆಮ್ಮೆಪಡುವವನಿಗೂ ಹೇಳಿಕೊಡಬಾರದು.

ನ ಪಾಶುಶ್ರೂಷವೇ ವಾಚ್ಯಂ ನಾಸಂವತ್ಸರವಾಸಿನೇ ।
ಕಾಮಕ್ರೋಧವಿಮುಕ್ತಸ್ತು ದಂಭಲೋಭವಿವರ್ಜಿತಃ ॥ ೩೦ ॥

ಮಾಂ ಚ ಯೋವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।
ವಕ್ತವ್ಯಂ ತಸ್ಯ ವಿಧಿವತ್ ಮಂತ್ರರತ್ನಮನುತ್ತಮಂ ॥ ೩೨ ॥

ದೇಶಕಾಲಾದಿನಿಯಮಮರಿಮಿತ್ರಾದಿಶೋಧನಂ ।
ನ್ಯಾಸಮುದ್ರಾದಿಕಂ ತಸ್ಯ ಪುನಶ್ಚರಣಸಂಯುತಂ ॥ ೩೩ ॥

ಮಚ್ಚಕ್ರಾಂಕಿತದೇಹತ್ವಂ ಮದೀಯಾರಾಧನಂ ತಥಾ ।
ಮಯಿ ಸನ್ಯಸ್ತಕರ್ಮತ್ವಂ ಮದನನ್ಯಶರಣ್ಯತಾ ॥ ೩೪ ॥

ಮಯಿ ಸರ್ವಫಲನ್ಯಾಸೋ ಮಹಾವಿಶ್ವಾಸಪೂರ್ವಕಂ ।
ಅನನ್ಯಸಾಧನೋ ಯತ್ನಸ್ತ್ವಕಿಂಚನತ್ವಮಾತ್ಮನಃ ॥ ೩೫ ॥

---

ನಾಸ್ತಿಕ, ಕೃತಘ್ನರುಗಳಿಗೆ ಹೇಳಿಕೊಡಬಾರದು. ಶ್ರದ್ಧೆಯಿಲ್ಲದವರಿಗೆ ಹೇಳಿಕೊಡಬಾರದು. ಶುಶ್ರೂಷೆಯನ್ನು ಮಾಡದವನಿಗೆ ಹೇಳಿಕೊಡಬಾರದು. ಒಂದು ವರ್ಷವಾದರೂ ತನ್ನನ್ನು ಅನುಸರಿಸದವನಿಗೆ ಹೇಳಿಕೊಡಬಾರದು. ಕಾಮಕ್ರೋಧಗಳನ್ನು ಬಿಟ್ಟು ದಂಭ ಲೋಭಗಳಿಲ್ಲದೆ ಯಾವನು ನನ್ನನ್ನು ಕಪಟವಿಲ್ಲದೆ ಸೇವಿಸುವನೋ ಅವನಿಗೆ ಈ ಮಂತ್ರವನ್ನು ವಿಧಿಪೂರ್ವಕವಾಗಿ ಹೇಳಿ ಕೊಡಬೇಕು

೩೩–೩೭. ಆ ಮಂತ್ರವನ್ನುಪದೇಶಮಾಡುವುದಕ್ಕೆ ದೇಶಕಾಲನಿಯಮಗಳನ್ನು ನೋಡಬೇಕು. ಅರಿ ಮಿತ್ರ ಶೋಧನೆಗಳನ್ನು ಮಾಡಬೇಕು. ಪುನಶ್ಚರಣ ಮಾಡುವಾಗ ನ್ಯಾಸ ಮುದ್ರೆಯನ್ನು ಮಾಡಿಕೊಳ್ಳುವಂತೆ ಹೇಳಬೇಕು. ವಿಷ್ಣುವಿನ ಚಕ್ರಧಾರಣೆಯನ್ನು ಮಾಡಿಸಿಕೊಳ್ಳುಬೇಕು. ವಿಷ್ಣುವನ್ನು ಆರಾಧಿಸುವಂತೆ ಹೇಳಬೇಕು. ವಿಷ್ಣುವಿನಲ್ಲಿಯೇ ತಾನು ಮಾಡುವ ಕರ್ಮಗಳನ್ನು ಸಮರ್ಪಿಸಬೇಕು. ವಿಷ್ಣುವನ್ನು ಹೊರತಾಗಿ ಬೇರೆ ದೇವರನ್ನು ಶರಣು ಹೊಂದಕೂಡದು. ಫಲವನ್ನೆಲ್ಲಾ ವಿಷ್ಣುವಿಗೆ ಅರ್ಪಿಸಬೇಕು. ವಿಷ್ಣುವಿನಲ್ಲಿಯೇ ವಿಶ್ವಾಸವಿಟ್ಟಿರಬೇಕು. ಆ ಸ್ವಾಮಿಗೋಸ್ಕರ ಬಹುವಾಗಿ ಪ್ರಯತ್ನಪಡಬೇಕು.

ಅವೈಷ್ಣವಾನಾಂ ಸಂಭಾಷಾವಂದನಾದಿವಿವರ್ಜನಂ ।
ಅನನ್ಯದೇವತಾನಾಂ ಚ ಸ್ಮರಣಂ ಪೂಜನಂ ತಥಾ ॥ ೩೬ ॥

ಏವಮಾದ್ಯಾ ಹಿ ನಿಯಮಾಃ ಪ್ರಪನ್ನಸ್ಯ ಪ್ರಕೀರ್ತಿತಾಃ ।
ಇತ್ಯಾದಿಗುಣಯುಕ್ತಾಯ ವಕ್ತವ್ಯೋ ಮಂತ್ರ ಉತ್ತಮಃ ॥ ೩೭ ॥

ತಸ್ಯ ನಾರಾಯಣಶ್ಚಾಹಮೃಷಿರ್ವಿಷ್ಣುಸ್ಸನಾತನಃ ।
ದೇವತಾ ವಾ ಶ್ರಿಯಾ ಸಾರ್ಧಮಹಂ ವಾತ್ಸಲ್ಯಸಾಗರಃ ॥ ೩೮ ॥

ಸರ್ವಲೋಕೇಶ್ವರಃ ಶ್ರೀಮಾನ್ ಸುಶೀಲಸ್ಸುಭಗಸ್ತಥಾ ।
ಸರ್ವಜ್ಞಃ ಸರ್ವಶಕ್ತಶ್ಚ ಸದಾಪೂರ್ಣಮನೋರಥಃ ॥ ೩೯ ॥

ಸರ್ವಗಃ ಸರ್ವಬಂಧುಶ್ಚ ಕೃಪಾಪೀಯೂಷಸಾಗರಃ ।
ಶ್ರೀಮನ್ನಾರಾಯಣಶ್ಚಾಹಂ ದೇವತಾತ್ರ ಉದಾಹೃತಾ ॥ ೪೦ ॥

---

ತಾನು ಕಡಿಮೆಯವನೆಂದು ತಿಳಿದಿರಬೇಕು. ವೈಷ್ಣವರಲ್ಲದವರೊಡನೆ ಮಾತ ನಾಡಬಾರದು. ಅವರಿಗೆ ನಮಸ್ಕರಿಸಬಾರದು. ಅವರನ್ನು ಯಾವವಿಧದಲ್ಲಿಯೂ ಗೌರವಿಸಬಾರದು. ಇತರ ದೇವತೆಗಳನ್ನು ಅನುಸರಿಸದೆ ವಿಷ್ಣುವನ್ನೇ ಪೂಜಿಸು ವವನನ್ನು ಸ್ಮರಿಸಬೇಕು ಪೂಜಿಸಬೇಕು. ಮಂತ್ರವನ್ನು ಉಪದೇಶಿಸಿ ಕೊಳ್ಳುವವನು ಈ ರೀತಿಯಾದ ನಿಯಮಗಳಿಗೆ ಒಳಪಟ್ಟಿರಬೇಕು. ಹೀಗೆ ಮಾಡುವುದಕ್ಕೆ "ಪ್ರಪತ್ತಿ" ಯೆಂದು ಹೆಸರು. ಹೀಗೆ ಮಾಡಿದರೆ ಅವನು "ಪ್ರಪನ್ನ" ನೆಂದು ಹೆಸರನ್ನು ಹೊಂದುತ್ತಾನೆ. ಅಂತಹವನು ಈ ನಿಯಮ ಗಳನ್ನು ಆಚರಿಸಬೇಕು. ಈ ರೀತಿಯಾಗಿ ಮಾಡುವ ಗುಣಗಳುಳ್ಳವನಿಗೇನೇ ಆ ಮಂತ್ರವನ್ನು ಉಪದೇಶಿಸಬೇಕು.

೩೮. ಆ ಮಂತ್ರಕ್ಕೆ "ನಾರಾಯಣ ಮಹಾಮಂತ್ರ" ಎಂದು ಹೆಸರು. ವಿಷ್ಣುವು ಋಷಿಯು, ವಾತ್ಸಲ್ಯ ಸಾಗರನಾದ, ಶ್ರೀಯೊಡನೆ ಕೂಡಿದ ವಿಷ್ಣುವೇ ದೇವತೆಯು.

೩೯–೪೦. ಸರ್ವಲೋಕೇಶ್ವರನೂ, ಶ್ರೀಮಂತನೂ, ಸುಶೀಲನೂ, ಸುಭ ಗನೂ, ಸರ್ವಜ್ಞನೂ, ಸರ್ವಶಕ್ತನೂ, ಪೂರ್ಣಮನೋರಥನೂ, ಸರ್ವಗನೂ,

ಛಂದಸ್ತು ದೇವೀ ಗಾಯತ್ರೀ ಪಂಚವಿಂಶಚ್ಚರಾತ್ಮಿಕಾ ।
ದ್ವಿದ್ವಿಷಟ್‌ಸಪ್ತತ್ರಿಪಂಚಷಡಂಗಾನಿ ನಿಯೋಜಯೇತ್ ॥ ೪೧ ॥

ದೇವ್ಯಾ ಮದನುಯಾಯಿನ್ಯಾ ಮಾಂ ಧ್ಯಾಯೇದ್ವಿಶ್ವರೂಪಿಣಂ ।
ಶಂಖಚಕ್ರಗದಾಪದ್ಮಪಾಣಿನಂ ದಿವ್ಯರೂಪಿಣಂ ॥ ೪೨ ॥

ವಾಮಾಂಕಸ್ಥಶ್ರಿಯಾ ಸಾರ್ಧಂ ಪೂಜಯೇತ್ಪ್ರಯತಶ್ಶುಚಿಃ ।
ಅನೇನ ಮಂತ್ರರತ್ನೇನ ಗಂಧಪುಷ್ಪನಿವೇದನೈಃ ॥
ಸಕೃತ್ಸಂಪೂಜ್ಯಮಾನೋಽಪಿ ಸಂತುಷ್ಟೋಽಸ್ಮಿ ಪ್ರಜಾಪತೇ ॥ ೪೩ ॥

---

ಸರ್ವಬಂಧುವೂ, ಕೃಪಾಸಾಗರನೂ ಆದ ಶ್ರೀಮನ್ನಾರಾಯಣನು ದೇವತೆಯೆಂದು ಹೇಳಲ್ಪಟ್ಟಿದ್ದಾನೆ.

೪೧. ಗಾಯಿತ್ರೀಛಂದಸ್ಸು, ಅದು ಇಪ್ಪತ್ತೈದು ಅಕ್ಷರಗಳುಳ್ಳದ್ದು. ಅಂಗುಷ್ಠ, ತರ್ಜನಿ, ಮಧ್ಯಮ, ಅನಾಮಿಕೆ, ಕನಿಷ್ಠ, ಕರತಲ-ಇವುಗಳು ಆರು ಅಂಗಗಳು. ಈ ಇಪ್ಪತ್ತೈದು ಅಕ್ಷರಗಳಲ್ಲಿ ಒಂದನೆಯಬಾರಿ ಎರಡು ಅಕ್ಷರಗಳೂ ಎರಡನೆಬಾರಿ ಎರಡು ಅಕ್ಷರಗಳೂ ಮೂರನೆಯಬಾರಿ ಆರು ಅಕ್ಷರಗಳೂ ನಾಲ್ಕನೆ ಯಬಾರಿ ಏಳು ಅಕ್ಷರಗಳೂ ಐದನೆಯಬಾರಿ ಮೂರು ಅಕ್ಷರಗಳೂ ಆರನೆಯಬಾರಿ ಐದು ಅಕ್ಷರಗಳು ಹೀಗೆ ಹೇಳಿ ನ್ಯಾಸಮಾಡಬೇಕು. ಈ ರೀತಿಯಾಗಿ ಮೂಲ ಮಂತ್ರದ ಇಪ್ಪತ್ತೈದು ಅಕ್ಷರಗಳಿಗೆ ವಿನಿಯೋಗವು. ಅಂತೆಯೇ ಹೃದಯಾದಿ ಷಡಂಗ ನ್ಯಾಸವನ್ನೂ ಮಾಡಿಕೊಳ್ಳಬೇಕು. ಆದಿಯಲ್ಲಿ "ಓಂ" ಕಾರವಿರ ಬೇಕು. ಕೊನೆಯಲ್ಲಿ "ನಮಃ" ಕಾರವಿರಬೇಕು.

೪೨. ನನ್ನನೇ ಅನುಸರಿಸುವ ಲಕ್ಷ್ಮೀದೇವಿಯಿಂದ ಕೂಡಿರುವ ವಿಶ್ವರೂಪಿಯಾದ, ಶಂಖ, ಚಕ್ರ, ಗದಾ, ಪದ್ಮಪಾಣಿಯಾದ ನನ್ನನ್ನು ಧ್ಯಾನ ಮಾಡಬೇಕು.

೪೩. ಎಡಗಡೆಯಲ್ಲಿ ಕುಳಿತಿರುವ ಲಕ್ಷ್ಮಿಯಿಂದ ಶೋಭಿಸುವ ಸ್ವಾಮಿ ಯನ್ನು ಶುಚಿಯಾಗಿ ಈ ಮಂತ್ರವನ್ನು ಹೇಳುತ್ತಾ ಗಂಧಪುಷ್ಪಾಕ್ಷತೆಗಳಿಂದ ಪೂಜಿಸಬೇಕು. ಹೀಗೆ ಒಂದುಬಾರಿ ಪೂಜಿಸಿದರೂ ನಾನು ಸಂತೋಷ ಗೊಳ್ಳುತ್ತೇನೆ.

॥ ಬ್ರಹ್ಮೋವಾಚ ॥
ಸಮ್ಯಗುಕ್ತಂ ತ್ವಯಾ ನಾಥ ರಹಸ್ಯಮಿದಮುತ್ತಮಂ ।
ಮಂತ್ರರತ್ನಪ್ರಭಾವಶ್ಚ ಸರ್ವಸಿದ್ಧಪ್ರದೋ ನೃಣಾಂ ॥ ೪೪ ॥

ಪಿತಾ ತ್ವಂ ಸರ್ವಲೋಕಾನಾಂ ಮಾತಾ ತ್ವಂ ಗುರುರೇವ ಚ ।
ತ್ವಂ ಚ ಸ್ವಾಮೀ ಸಖಾ ಭ್ರಾತಾ ಗತಿಸ್ತ್ವಂ ಶರಣಂ ಸುಹೃತ್ ॥ ೪೫ ॥

ಅಹಂ ತು ತವ ದೇವೇಶ ದಾಸಃ ಶಿಷ್ಯಃ ತಥಾ ಸುಹೃತ್ ।
ತಸ್ಮಾನ್ಮಾಮ ದಯಾಸಿನ್ಧೋ ಪ್ರಾಪಯಾಭೇದಮುತ್ತಮಂ ॥ ೪೬ ॥

ಅಧುನಾ ಮಂತ್ರರತ್ನಸ್ಯ ದೀಕ್ಷಾಂ ಸಮ್ಯಗ್ವಿಧಾನತಃ ।
ಬ್ರೂಹಿ ಸರ್ವಜ್ಞ ತತ್ವೇನ ಲೋಕಾನಾಂ ಹಿತಕಾಮ್ಯಯಾ ॥ ೪೭ ॥

॥ ಶ್ರೀ ಭಗವಾನುವಾಚ ॥
ಶೃಣು ವತ್ಸ ಪ್ರವಕ್ಷ್ಯಾಮಿ ಮಂತ್ರದೀಕ್ಷಾವಿಧಿಂ ಪರಂ ।
ಆಚಾರ್ಯಂ ಸಂಶ್ರಯೇತ್ಪೂರ್ವಂ ಮದಾಶ್ರಯಣಸಿದ್ಧಯೇ ॥ ೪೮ ॥

---

೪೪. ಬ್ರಹ್ಮನು ಹೇಳಿದನು–ಎಲೈ ಸ್ವಾಮಿಯೆ! ನೀನು ಹೇಳಿದುದು ಚೆನ್ನಾಗಿದೆ. ಇದು ರಹಸ್ಯವು. ಉತ್ತಮವಾದುದು. ಈ ಮಂತ್ರರತ್ನದ ಪ್ರಭಾವವೇನೆಂದರೆ ಎಲ್ಲರಿಗೂ ಎಲ್ಲಾ ಸಿದ್ಧಿಗಳನ್ನೂ ಕೊಡುತ್ತದೆ.

೪೫. ಎಲೈ ದೇವೇಶನೇ! ಎಲ್ಲರಿಗೂ ನೀನೇ ತಂದೆಯು. ಎಲ್ಲರಿಗೂ ನೀನೇ ತಾಯಿಯು, ನೀನೇ ಗುರುವು. ನೀನೇ ಸ್ವಾಮಿಯು, ನೀನೇ ಸ್ನೇಹಿತನು. ನೀನೇ ಗತಿಯು. ನೀನೇ ರಕ್ಷಕನು. ನೀನೇ ಶರಣನು. ನೀನೇ ಮಿತ್ರನು.

೪೬. ಎಲೈ ದೇವೇಶನೆ! ನಾನು ನಿನಗೆ ದಾಸನು. ಶಿಷ್ಯನು, ಸ್ನೇಹಿತನು. ಎಲೈ ದಯಾಸಿಂಧುವೇ! ನಿನ್ನೊಡನೆ ಅಭೇದವನ್ನು ಹೊಂದಿಸಿಕೊ.

೪೭. ಈಗ ಮಂತ್ರರತ್ನದ ದೀಕ್ಷೆಯನ್ನು ವಿಧಿಪೂರ್ವಕವಾಗಿ ಹೇಳು. ಲೋಕದ ಹಿತದ ದೃಷ್ಟಿಯಿಂದ ಹೇಳು. ಸರ್ವಜ್ಞನಪ್ಪೆ!

೪೮. ಶ್ರೀ ಭಗವಂತನು ಹೇಳಿದನು–ಎಲೈ ವತ್ಸನೆ! ಕೇಳು. ಮಂತ್ರದೀಕ್ಷಾವಿಧಿಯನ್ನು ಹೇಳುತ್ತೇನೆ. ನನ್ನ ಮಂತ್ರವು ಸಿದ್ಧಿಯಾಗಬೇಕಾದರೆ ಮೊದಲು ಆಚಾರ್ಯರನ್ನು ಆಶ್ರಯಿಸಬೇಕು.

ಆಚಾರ್ಯೋ ವೇದಸಂಪನ್ನೋ ವಿಷ್ಣುಭಕ್ತೋ ವಿಮತ್ಸರಃ ।
ಮಂತ್ರಜ್ಞೋ ಮಂತ್ರಭಕ್ತಶ್ಚ ಸದಾ ಮಂತ್ರಾಶ್ರಯಃ ಶುಚಿಃ ॥ ೪೯ ॥

ಸತ್ಸಂಪ್ರದಾಯಸಂಯುಕ್ತೋ ಬ್ರಹ್ಮವಿದ್ಯಾವಿಶಾರದಃ ।
ಅನನ್ಯಸಾಧನಶ್ಚೈವ ತಥಾನನ್ಯಪ್ರಯೋಜಕಃ ॥ ೫೦ ॥

ಬ್ರಾಹ್ಮಣೋ ವೀತರಾಗಶ್ಚ ಕ್ರೋಧಲೋಭವಿವರ್ಜಿತಃ ।
ಸದ್ವೃತ್ತೌ ಶಾಸಿತಾಚೈವ ಮುಮುಕ್ಷುಃ ಪರಮಾರ್ಥವಿತ್ ॥ ೫೧ ॥

ಏವಮಾದಿಗುಣೋಪೇತ ಆಚಾರ್ಯಸ್ಸ ಉದಾಹೃತಃ ।
ಆಚಾರಾನ್ ಶಾಸಯೇದ್ಯಸ್ತು ಸ ಆಚಾರ್ಯ ಇತೀರಿತಃ ॥ ೫೨ ॥

ಯಸ್ತ್ವಾಚಾರ್ಯಪರಾಧೀನಸ್ತದ್ವಾಕ್ಯಾ ಶಾಸನೇ ಹೃದಿ ।
ಶಾಸನೇ ಸ್ಥಿರವೃತ್ತಿಶ್ಚ ಶಿಷ್ಯಸ್ಸದ್ಭಿರುದಾಹೃತಃ ॥ ೫೩ ॥

---

೪೯–೫೧. ಆಚಾರ್ಯನು ವೇದಸಂಪನ್ನನಾಗಿರಬೇಕು. ವಿಷ್ಣುಭಕ್ತನಾಗಿರಬೇಕು. ಮಾತ್ಸರ್ಯವಿರಕೂಡದು. ಮಂತ್ರವನ್ನು ಬಲ್ಲವನಾಗಿ ಮಂತ್ರಭಕ್ತನಾಗಿರಬೇಕು ಯಾವಾಗಲೂ ಶುಚಿಯಾಗಿ ಮಂತ್ರವನ್ನೇ ಆಶ್ರಯಿಸಿಕೊಂಡಿರಬೇಕು. ಒಳ್ಳೆಯ ಸಂಪ್ರದಾಯನಾಗಿರಬೇಕು. ಬ್ರಹ್ಮವಿದ್ಯೆಯನ್ನು ತಿಳಿದಿರಬೇಕು. ಬೇರೆ ಮಂತ್ರವನ್ನು ಸಾಧಿಸಬಾರದು. ಬೇರೆ ಪ್ರಯೋಜನವೇ ಇರಬಾರದು. ಬ್ರಾಹ್ಮಣನಾಗಿರಬೇಕು. ಆಸೆಯಿರಬಾರದು. ಕ್ರೋಧಲೋಭಗಳಿರಬಾರದು. ಒಳ್ಳೆಯ ಆಚಾರದಲ್ಲಿ ಇವರನ್ನು ನಿಯಮಿಸಬೇಕು. ಮೋಕ್ಷವನ್ನಪೇಕ್ಷಿಸುವವನಾಗಿರಬೇಕು. ವಿಷಯವನ್ನು ಚೆನ್ನಾಗಿ ತಿಳಿದಿರಬೇಕು.

೫೨. ಈರೀತಿಯಾದ ಗುಣಗಳುಳ್ಳವನು ಆಚಾರ್ಯನೆಂದೆನಿಸಿಕೊಳ್ಳುತ್ತಾನೆ. ಆಚಾರಗಳನ್ನು ಯಾವನು ಹೇಳಿಕೊಡುತ್ತಾನೆಯೋ ಅವನೇ ಆಚಾರ್ಯನೆಂದೆನಿಸಿಕೊಳ್ಳುತ್ತಾನೆ.

೫೩. ಯಾವನು ಆಚಾರ್ಯನಿಗೆ ಅಧೀನನಾಗಿ ಅವನ ಅಪ್ಪಣೆಯನ್ನೇ ಹೃದಯದಲ್ಲಿ ಧರಿಸಿ ಅವನ ಅಪ್ಪಣೆಯಲ್ಲಿ ಸ್ಥಿರಬುದ್ಧಿಯನ್ನಿಟ್ಟುಕೊಂಡಿದ್ದಾನೆಯೋ ಅವನನ್ನೇ ಶಿಷ್ಯನೆಂದೆನ್ನುತ್ತಾರೆ.

ಏವಂ ಲಕ್ಷಣಸಂಯುಕ್ತಂ ಶಿಷ್ಯಂ ಸರ್ವಗುಣಾನ್ವಿತಂ ।
ಅಧ್ಯಾಪಯೇದ್ವಿಧಾನೇನ ಮಂತ್ರರತ್ನಮನುತ್ತಮಂ ॥ ೫೪ ॥

ದ್ವಾದಶ್ಯಾಂ ಶ್ರಾವಣೇ ವಾಪಿ ಕಸ್ಮಿಂಶ್ಚಿದ್ವೈಷ್ಣವೋದಿತೇ ।
ಸದಾಚಾರ್ಯೋಪಪತ್ತೌ ಚ ತತ್ರ ದೀಕ್ಷಾಂ ಸಮಾಚರೇತ್ ॥ ೫೫ ॥

ಸುದರ್ಶನಂ ಪಾಂಚಜನ್ಯಂ ಸುವರ್ಣೇನ ಪ್ರಾಕಾರಯೇತ್ ।
ರೌಪ್ಯೇಣ ವಾಪಿ ತಾಮ್ರೇಣ ಕಾಂಸ್ಯೇನಾಪಿ ಪ್ರಕಾರಯೇತ್ ॥ ೫೬ ॥

ಸ್ನಾಪ್ಯ ಪಂಚಾಮೃತೈಶ್ಶುದ್ಧೈರರ್ಚಯೇತ್ಪ್ರತೋ ಮಮ ।
ಅರ್ಚಯೇದ್ಗಂಧಪುಷ್ಪಾದ್ಯೈಸ್ತನ್ಮಂತ್ರೇಣ ವಿಧಾನತಃ ॥ ೫೭ ॥

ತದ್ವತ್ಸಂಸ್ಥಾಪಯೇದಗ್ನಿಂ ಸ್ವಗೃಹ್ಯೋಕ್ತ ವಿಧಾನತಃ ।
ಆಚಾರ್ಯೋ ಜುಹುಯಾದಾಜ್ಯಂ ಮಂತ್ರೇಣಾಥ ದ್ವಿಜೋತ್ತಮಃ ॥ ೫೮ ॥

---

೫೪. ಈ ರೀತಿಯಾದ ಲಕ್ಷಣಗಳೊಡನೆ ಕೂಡಿರುವ ಎಲ್ಲಾ ಗುಣಗಳೂ ಪೂರ್ತಿಯಾಗಿರುವ ಶಿಷ್ಯನಿಗೆ ವಿಧಿಯಂತೆ ಈ ಮಂತ್ರವನ್ನು ಹೇಳಿಕೊಡಬೇಕು.

೫೫. ಶ್ರಾವಣ ದ್ವಾದಶಿಯ ದಿವಸವಾಗಲಿ, ಅಥವಾ ವೈಷ್ಣವ ದಿನಗಳಲ್ಲಿ ಯಾವುದರಲ್ಲಿಯಾಗಲಿ, ಆಚಾರ್ಯನಿಗೆ ಅನುಕೂಲವಾಗಿರುವಾಗ ಯಾವಾಗ ಬೇಕಾದರೂ ಆಗಲಿ ವಿಷ್ಣುದೀಕ್ಷೆಯನ್ನು ಮಾಡಿಸಿಕೊಳ್ಳಬಹುದು.

೫೬. ಶಂಖಚಕ್ರಗಳನ್ನು ಚಿನ್ನದಿಂದಾಗಲಿ, ಬೆಳ್ಳಿಯಿಂದಾಗಲಿ, ತಾಮ್ರ ದಿಂದಾಗಲಿ ಕಂಚಿನಿಂದಾಗಲೀ ಮಾಡಿಸಬೇಕು.

೫೭. ಆ ಶಂಖಚಕ್ರಗಳಿಗೆ ಮಂತ್ರಗಳನ್ನು ಹೇಳಿ ಪಂಚಾಮೃತಗಳಿಂದ ಬೇರೆಬೇರೆಯಾಗಿ ಅಭಿಷೇಕಮಾಡಬೇಕು. ಅನಂತರ ಶುದ್ಧೋದಕದಿಂದ ಸ್ನಾನ ಮಾಡಿಸಬೇಕು. ಅನಂತರ ಗಂಧಹೂಗಳಿಂದ ಅದರದರ ಮಂತ್ರಗಳಿಂದ ವಿಧಿವತ್ತಾಗಿ ಪೂಜಿಸಬೇಕು.

೫೮. ತನ್ನ ಗೃಹ್ಯಸೂತ್ರದಲ್ಲಿ ಹೇಳಿರುವ ಪ್ರಕಾರದಲ್ಲಿ ಅಗ್ನಿಯನ್ನು ಪ್ರತಿಷ್ಠೆ ಮಾಡಿಕೊಳ್ಳಬೇಕು. ಅನಂತರ ಆಚಾರ್ಯನು ಮಂತ್ರವನ್ನು ಹೇಳಿಕೊಂಡು ತುಪ್ಪದಿಂದ ಹೋಮವನ್ನು ಮಾಡಬೇಕು.

ಅಷ್ಟೋತ್ತರಸಹಸ್ರಂ ವಾ ಶತಮಷ್ಟೋತರಂ ತು ವಾ ।
ಜುಹುಯಾನ್ಮಂತ್ರರತ್ನೇನ ತಥಾನ್ಯೈರ್ವೈಭವೈಃ ಶುಭೈಃ ॥ ೫೯ ॥

ಮಂತ್ರೈಃ ಪುರುಷಸೂಕ್ತಾದ್ಯೈರ್ಜುಹುಯಾದ್ಘೃತಪಾಯಸಂ ।
ತಸ್ಮಿನ್ನಗ್ನೌ ಕ್ಷಿಪೇಚ್ಚಕ್ರಂ ಶಂಖಂ ಚ ದ್ವಿಜಸತ್ತಮಃ ॥ ೬೦ ॥

ಷಡಕ್ಷರೇಣ ಜುಹುಯಾದಾಜ್ಯಂ ವಿಂಶತಿಸಂಖ್ಯಯಾ ।
ಪ್ರತಪ್ತಂ ಚಕ್ರಮಾದಾಯ ಮಂತ್ರೇಣೈವಾಂಕಯೇದ್ಗುರುಃ ॥ ೬೧ ॥

ಶಂಖೇನೈವಾಂಕನಂ ಕುರ್ಯಾತ್ ಬಾಹ್ವೋರ್ದಕ್ಷಿಣಸವ್ಯಯೋಃ ।
ಹೋಮಶೇಷಂ ಸಮಾಪ್ಯಾಥ ಪುನಃ ಪೂಜಾಂ ಸಮಾಚರೇತ್ ॥ ೬೨ ॥

---

೫೯. ಆ ತುಪ್ಪದಿಂದ ಒಂದುಸಾವಿರದನೂರೆಂಟುಬಾರಿಯಾಗಲಿ, ಅಥವಾ ಒಂದುನೂರೆಂಟುಬಾರಿಯಾಗಲಿ ಈ ಮಂತ್ರವನ್ನು ಹೇಳಿಕೊಂಡು ಹೋಮ ಮಾಡಬೇಕು.

೬೦. ಪುರುಷಸೂಕ್ತವೇ ಮುಂತಾದ ಮಂತ್ರಗಳಿಂದ ತುಪ್ಪ ಪಾಯಸ ಗಳನ್ನು ಆ ಅಗ್ನಿಯಲ್ಲಿ ಹೋಮಮಾಡಿ ಅನಂತರ ಆ ಶಂಖಚಕ್ರಗಳನ್ನು ಆ ಅಗ್ನಿಯಲ್ಲಿಯೇ ಹಾಕಬೇಕು

೬೧. ಷಡಕ್ಷರಿಮಂತ್ರದಿಂದ ಇಪ್ಪತ್ತುಬಾರಿ ತುಪ್ಪದಿಂದ ಹೋಮವನ್ನು ಮಾಡಬೇಕು. ಅಷ್ಟುವೇಳೆಗೆ ಬೆಂಕಿಯಲ್ಲಿ ಕಾದಿರುವ ಈ ಚಕ್ರವನ್ನು ತೆಗೆದು ಕೊಂಡು ಮಂತ್ರವನ್ನು ಹೇಳಿಕೊಂಡು ಗುರುವು ಗುರುತುಗಳನ್ನು ಮಾಡಬೇಕು.

೬೨. ಬಲತೋಳು ಎಡತೋಳುಗಳಮೇಲೆ ಶಂಖದಿಂದ ಗುರುತು ಮಾಡಿಸಿ ಕೊಳ್ಳಬೇಕು. (ಸುಡಿಸಿಕೊಳ್ಳಬೇಕು) ಅನಂತರ ಹೋಮವನ್ನು ಮುಗಿಸಿ ಪುನಃ ಪೂಜೆಯನ್ನು ಅಗ್ನಿಗೆ ಮಾಡಬೇಕು. (ಶಂಖದಿಂದ ಬಲದೋಳಿನಮೇಲೆಯೂ ಚಕ್ರದಿಂದ ಎಡದೋಳಿನ ಮೇಲೆಯು ಅಂಕನಮಾಡಿಸಿಕೊಳ್ಳಬೇಕೆಂದು ತಿಳಿಯುವುದು.)

ತತಃ ಕಲಶಮಾದಾಯ ಪವಿತ್ರೋದಕಪೂರಿತಂ ।
ಮಂತ್ರೇಣೈವಾಭಿಮಂತ್ರ್ಯಾಥ ತಸ್ಯ ಮೂರ್ಧ್ನ್ಯಭಿಷೇಚಯೇತ್ ॥ ೬೩ ॥

ಸಿತವಸ್ತ್ರಧರಂ ಸಮ್ಯಗಾಚಾಂತಂ ವಿನಯಾನ್ವಿತಂ ।
ಊರ್ಧ್ವಪುಂಡ್ರಧರಂ ಶಿಷ್ಯಂ ಮಂತ್ರಮಧ್ಯಾಪಯೇದ್ಗುರುಃ ॥ ೬೪ ॥

ಮಂತ್ರಾರ್ಥಶ್ಚ ಪ್ರವಕ್ತವ್ಯೋ ವೃತ್ತಿಶ್ಚೈವ ವಿಶೇಷತಃ ।
ಲಬ್ಧಮಂತ್ರಸ್ತದಾಚಾರ್ಯಂ ಪೂಜಯೇದ್ಭೂಷಣಾದಿಭಿಃ ॥ ೬೫ ॥

ಅನೇನ ವಿಧಿನಾ ಮಂತ್ರಂ ಯೋಧೀತೇ ವೈಷ್ಣವಾದ್ಗುರೋಃ ।
ತತಃ ಸ ವೈಷ್ಣವಂ ಯಾತಿ ನಾನ್ಯಥಾ ಸುರಸತ್ತಮ ॥ ೬೬ ॥

---

೬೩. ಅನಂತರ ಆ ಕಲಶದ ಪವಿತ್ರವಾದ ನೀರನ್ನು ತೆಗೆದುಕೊಂಡು ಆತನ ಮೇಲೆ ಮಾರ್ಜನಮಂತ್ರಗಳಿಂದ ಅಭಿಷೇಕವನ್ನು ಮಾಡಬೇಕು. (ಮಾರ್ಜನಮಾಡಬೇಕು)

೬೪. ಅನಂತರ ಶಿಷ್ಯನು ಬೇರೆಯ ಮಡಿಯನ್ನುಟ್ಟುಕೊಳ್ಳಬೇಕು. ಆಚಮನ ಮಾಡಬೇಕು. ಊರ್ಧ್ವಪುಂಡ್ರನಾಮವನ್ನು ಹಾಕಿಕೊಳ್ಳಬೇಕು. ಇಷ್ಟನ್ನೂ ಮಾಡಿದಮೇಲೆ ಇಂತಹವನಿಗೆ ಗುರುವು ಮಂತ್ರವನ್ನು ಹೇಳಿಕೊಡಬೇಕು.

೬೫. ಆ ಮಂತ್ರಾರ್ಥವನ್ನೂ ಹೇಳಿಕೊಡಬೇಕು. ಅವನು ಮಾಡಬೇಕಾದ ಕೆಲಸಗಳನ್ನು (ನಿಯಮಗಳನ್ನು) ಬಿಡದೆ ಹೇಳಬೇಕು ಶಿಷ್ಯನು ಗುರುವು ಮಂತ್ರವನ್ನುಪದೇಶಿಸಿದ ಮೇಲೆ ಅವನಿಗೆ ಪೂಜೆಮಾಡಿ ದಕ್ಷಿಣೆ ಒಡವೆ ಬಟ್ಟೆಗಳಿಂದ ಗೌರವಿಸಬೇಕು.

೬೬. ಈ ರೀತಿಯಾದ ನಿಯಮಗಳಿಂದ ಯಾವನು ವಿಷ್ಣುಭಕ್ತನಾದ ಗುರುವಿನಿಂದ ಮಂತ್ರವನ್ನು ಉಪದೇಶಮಾಡಿಸಿಕೊಳ್ಳುತ್ತಾನೆಯೋ ಅವನು ಅನಂತರ ವೈಷ್ಣವನಾಗುತ್ತಾನೆ. ಇಲ್ಲದಿದ್ದರೆ ಆಗುವುದಿಲ್ಲ.

|| ನಾರದ ಉವಾಚ ||

ಏವಮುಕ್ತ್ವಾ ವಿಧಾತಾರಂ ದೇವದೇವೋ ಹರಿಃ ಪಿತಾ |
ಸ್ವಚಕ್ರೇಣಾಂಕಯಿತ್ವಾ ತು ತಸ್ಮೈ ಮಂತ್ರಂ ದದೌ ಸ್ವಯಂ || ೬೭ ||

ಸರ್ವಲೋಕೇಶ್ವರೋ ದೇವೋ ಬ್ರಹ್ಮಾ ಮಮ ಪಿತಾ ಪ್ರಭುಃ |
ಮಮಾಪಿ ವಿಧಿವನ್ಮಂತ್ರಂ ಪ್ರದದೌ ಮುನಿಸತ್ತಮಾಃ || ೬೮ ||

ತಸ್ಮಾದ್ಯೂಯಂ ಮುನಿಶ್ರೇಷ್ಠಾ ಧಾರಯಿತ್ವಾ ಸುದರ್ಶನಂ |
ನಾರಾಯಣಪದದ್ವಂದ್ವಂ ಗಚ್ಛಧ್ವಂ ಶರಣಂ ದ್ವಿಜಾಃ || ೬೯ ||

|| ವಸಿಷ್ಠ ಉವಾಚ ||

ಇತ್ಯುಕ್ತಾ ಮುನಯಸ್ಸರ್ವೇ ನಾರದೇನ ಸುರರ್ಷಿಣಾ |
ದ್ವಯಾಧಿಕಾರಿಣಸ್ಸರ್ವೇ ಯಾತಾ ವಿಷ್ಣೋಃ ಪರಂ ಪದಂ || ೭೦ ||

ತಸ್ಮಾತ್ತ್ವಮಪಿ ರಾಜರ್ಷೇ ವಿಷ್ಣುಸಾಯುಜ್ಯಮಿಚ್ಛಸಿ |
ದೀಕ್ಷಾಮಾರ್ಗವಿಧಾನೇನ ಧಾರಯಿತ್ವಾ ಸುದರ್ಶನಂ || ೭೧ ||

---

೬೭. ನಾರದನು ಹೇಳಿದನು-ತಂದೆಯಾದ ಹರಿಯು ಬ್ರಹ್ಮನಿಗೆ ಹೀಗೆಂದು ಹೇಳಿ ತನ್ನ ಚಕ್ರದಿಂದ ಗುರುತನ್ನು ಮಾಡಿ ಮಂತ್ರವನ್ನುಪದೇಶಿಸಿದನು.

೬೮. ಸರ್ವಲೋಕಕ್ಕೂ ಒಡೆಯನೂ ನನ್ನ ತಂದೆಯೂ ಆದ ಬ್ರಹ್ಮನು ಆ ಮಂತ್ರವನ್ನು ನನಗೂ ನಿಯಮವನ್ನು ಅನುಸರಿಸಿಕೊಟ್ಟನು.

೬೯. ಎಲೈ ಮುನಿಗಳಿರಾ! ನೀವುಗಳೂ ಕೂಡಾ ಆ ಚಕ್ರವನ್ನು ಧಾರಣೆ ಮಾಡಿಸಿಕೊಂಡು ಆ ನಾರಾಯಣನ ಪಾದಪದ್ಮಗಳನ್ನು ಶರಣುಹೊಂದಿರಿ.

೭೦. ವಸಿಷ್ಠನು ಹೇಳಿನು–ನಾರದಮಹರ್ಷಿಯು ಅವರೆಲ್ಲರಿಗೂ ಹೀಗೆಂದು ಹೇಳಲು ಅವರು ಚಕ್ರಾಂಕನ ಮಂತ್ರೋಪದೇಶಗಳೆರಡಕ್ಕೂ ಅಧಿಕಾರಿಗಳಾಗಿ ವಿಷ್ಣುಪದವಾದ ವೈಕುಂಠವನ್ನು ಹೊಂದಿದರು.

೭೧. ಎಲೈ ದೊರೆಯೆ ? ನೀನು ಸಾಯುಜ್ಯವನ್ನು ಅಪೇಕ್ಷಿಸುತ್ತೀಯೆ. ದೀಕ್ಷಾಮಾರ್ಗದಿಂದ ಶಂಖಚಕ್ರಧಾರಣವನ್ನು ಹೊಂದಿ ವಿಷ್ಣುಪದವನ್ನು ಶರಣು ಹೊಂದು.

ನಾರಾಯಣಪದದ್ವಂದ್ವಂ ತದೇಕಂ ಶರಣಂ ವ್ರಜ ।
ಸರ್ವಲೋಕೇಶ್ವರಃ ಸಾಕ್ಷಾತ್ ಬ್ರಹ್ಮಾ ತ್ರಿಭುವನೇಶ್ವರಃ ॥ ೭೨ ॥

ಮಮಾಪಿ ನಾರದಸ್ಯಾಪಿ ಪ್ರೋಕ್ತವಾನ್ ಮಂತ್ರಮುತ್ತಮಂ ।
ಶೌನಕಾದಿಮಹರ್ಷೀಣಾಂ ನೈಮಿಷಾರಣ್ಯವಾಸಿನಾಂ ॥ ೭೩ ॥

ನಾರದಃ ಪ್ರದದೌ ಮಂತ್ರಂ ಪ್ರಪಾತಿ ಶರಣಾಗತಂ ।
ಏತದ್ಗುಹ್ಯತಮಂ ರಾಜನ್ ನ ಜಾನಂತಿ ಮಹರ್ಷಯಃ ॥ ೭೪ ॥

ದೇವತಾಶ್ಚ ನ ಜಾನಂತಿ ಸಿದ್ಧಾಸ್ಸಾಧ್ಯಾಶ್ಚ ದಾನವಾಃ ।
ಮಯಾ ಚ ಪ್ರಾಪಿತೋ ಮಂತ್ರಃ ಶಕ್ತಿಪುತ್ರಃ ಪರಾಶರಃ ॥ ೭೫ ॥

ಇದಂ ರಹಸ್ಯಂ ಪರಮಂ ಲಕ್ಷ್ಮೀನಾರಾಯಣದ್ವಯಂ ।
ರಾಜನ್ ತವಾಪಿ ವಕ್ಷ್ಯಾಮಿ ಪ್ರಪಾತಿ ಶರಣಾಗತಂ ॥ ೭೬ ॥

---

೭೨. ಮೂರು ಲೋಕಕ್ಕೂ ಒಡೆಯನಾದ ಬ್ರಹ್ಮನೇ ಪ್ರತ್ಯಕ್ಷವಾಗಿ ನನಗೂ ನಾರದನಿಗೂ ಈ ಉತ್ತಮವಾದ ಮಂತ್ರವನ್ನುಪದೇಶಿಸದನು.

೭೩-೭೪. ನೈಮಿಷಾರಣ್ಯವಾಸಿಗಳಾದ ಶೌನಕಾದಿ ಋಷಿಗಳಿಗೆ ನಾರದನು ಈ ಪ್ರಪಾತಿ ಶರಣಾಗತ ಮಂತ್ರವನ್ನುಪದೇಶಿಸಿದನು. ಎಲೈ ರಾಜನೆ! ಈ ರಹಸ್ಯವಾದ ಮಂತ್ರವನ್ನು ಮಹರ್ಷಿಗಳೂ ಕೂಡಾ ತಿಳಿಯರು.

೭೫. ದೇವತೆಗಳಾಗಲಿ, ಸಿದ್ಧರಾಗಲಿ, ಸಾಧ್ಯರಾಗಲಿ ದಾನವರಾಗಲೀ, ಈ ಮಂತ್ರವನ್ನು ತಿಳಿಯರು. ನಾನೂ ಕೂಡಾ ನನ್ನ ಮೊಮ್ಮಗನೂ ಶಕ್ತಿಯ ಮಗನೂ ಆದ ಪರಾಶರನಿಗೆ ಹೇಳಿದ್ದೇನೆ.

೭೬. ಎಲೈ ರಾಜನೆ! ಈ ಪರಮರಹಸ್ಯವಾದ ಲಕ್ಷ್ಮೀನಾರಾಯಣ ಮಂತ್ರವನ್ನು ನಿನಗೂ ಹೇಳಿಕೊಡುತ್ತೇನೆ. ಇದು ಶರಣಾಗತರನ್ನು ಕಾಪಾಡುತ್ತದೆ.

ದ್ವಯಾತ್ಪರತರೋ ಮಂತ್ರೋ ನಾಸ್ತಿ ಸತ್ಯಂ ಬ್ರವೀಮಿ ತೇ ।
ದ್ವಯಾತ್ಪರತರಂ ಧರ್ಮಂ ನಾಸ್ತಿ ಲೋಕೇಷು ಕಿಂಚನ ॥ ೭೭ ॥

ಸತ್ಯಂ ಸತ್ಯಂ ಪುನಃ ಸತ್ಯಂ ಬ್ರಹ್ಮಣಾ ಕಥಿತಂ ಪುರಾ ।
ನಾರಾಯಣಾತ್ಪರೋ ದೇವೋ ನಾಸ್ತಿ ಮುಕ್ತಿಪ್ರದೋ ನೃಣಾಂ ॥ ೭೮ ॥

ತತ್ಸೇವ್ಯೈವ ಭವೇನ್ಮೋಕ್ಷಃ ಸರ್ವಧರ್ಮನಿಕೃಂತನಃ ॥ ೭೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಮಾಘಮಾಹಾತ್ಮ್ಯೇ ವಸಿಷ್ಠ ದಿಲೀಪ ಸಂವಾದೇ ವಿದ್ಯೋಪದೇಶೋ ನಾಮ ಏಕಪಂಚಾಶದಧಿಕದ್ವಿಶತತಮೋಧ್ಯಾಯಸ್ಸಮಾಪ್ತಃ

---

೭೭. ಈ ಲಕ್ಷ್ಮೀನಾರಾಯಣದ್ವಯಮಂತ್ರಕ್ಕಿಂತಲೂ ಬೇರೆಯಾದ ಮಂತ್ರವೇ ಇಲ್ಲವು. ಈ ದ್ವಯಕ್ಕಿಂತ ಉತ್ತಮವಾದ ಧರ್ಮವೇ ಇಲ್ಲವು. ಇದು ಸತ್ಯವಾದ ಮಾತು. ಖಂಡಿತವೆಂದು ತಿಳಿ.

೭೮–೭೯. ಇದು ಸತ್ಯವು. ಸತ್ಯವು. ಸತ್ಯವು. ಮೂರು ಬಾರಿಗೂ ಸತ್ಯವೆಂದು ಬ್ರಹ್ಮನೇ ಪೂರ್ವದಲ್ಲಿ ಹೇಳಿದ್ದಾನೆ. ನಾರಾಯಣನಿಗಂತಲೂ ಉತ್ತಮವಾದ ದೇವರಿಲ್ಲ. ಅವನಿಗಿಂತಲೂ ಮುಕ್ತಿಯನ್ನು ಕೊಡತಕ್ಕವರು ಮತ್ತೊಬ್ಬರಿಲ್ಲ. ಅವನ ಸೇವೆಯೇ ಪರಮವಾದ ಮೋಕ್ಷವು. ಅವನ ಸೇವೆಯನ್ನು ಮಾಡಿದರೆ ಎಲ್ಲರ ಸೇವೆಯನ್ನೂ ಮಾಡಿದಂತಾಗುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ವಿದ್ಯೋಪದೇಶ ಎಂಬ ಇನ್ನೂರ ಐವತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ದ್ವಿಪಂಚಾಶದಧಿಕದ್ವಿಶತತಮೋಽಧ್ಯಾಯಃ ||



॥ ದಿಲೀಪ ಉವಾಚ ॥

**ಭಗವನ್ ಸರ್ವಮಾಚಕ್ಷ್ವ ಹರಿಭಕ್ತಿಸುಧಾಮಯಂ ।**
**ಶೃಣ್ವತೋ ನೈವ ತೃಪ್ತಿರ್ಮೇ ವಿಷ್ಣುಭಕ್ತಿಸುಧಾವಹಂ || ೧ ||**

**ತಾಪತ್ರಯಮಹಾಜ್ವಾಲಾವಹ್ನಿಭಿಃ ಸತತಂ ನೃಣಾಂ ।**
**ಸಂತಪ್ತಾನಾಂ ಮುನಿಶ್ರೇಷ್ಠ ವಿಷ್ಣುಭಕ್ತಿಸುಧಾರ್ಣವಂ || ೨ ||**

**ವಿನಾ ಕಿಮನ್ಯಚ್ಛರಣಂ ಭವಾರಣ್ಯೇ ಭಯಾನಕೇ ।**
**ಆಚಕ್ಷ್ವ ವಿಸ್ತರೇಣಾದ್ಯ ಭಕ್ತಿಭೇದಾನ್ ಮಹಾಮುನೇ || ೩ ||**

---

## ಇನ್ನೂರ ಐವತ್ತೆರಡನೆಯ ಅಧ್ಯಾಯವು



೧. ದಿಲೀಪನು ಹೇಳಿದನು-ಎಲೈ ಭಗವಂತನೆ! ಹರಿಭಕ್ತಿ ಸುಧಾಮಯವಾದ ಕಥೆಗಳೆಲ್ಲವನ್ನೂ ಹೇಳು. ವಿಷ್ಣುವಿನ ಭಕ್ತಿ ಸುಧೆಯನ್ನು ಕೇಳುತ್ತಿದ್ದರೆ ನನಗೆ ತೃಪ್ತಿಯೇ ಸಿಗುವುದಿಲ್ಲ.

೨-೪. ಆದಿಭೌತಿಕ, ಆಧ್ಯಾತ್ಮಿಕ, ಆದಿದೈವಿಕಗಳೆಂಬ ತಾಪತ್ರಯಗಳೆಂಬ ಮಹಾಜ್ವಾಲೆಯುಳ್ಳ ಬೆಂಕಿಯಿಂದ ಯಾವಾಗಲೂ ಸುಡಲ್ಪಡುತ್ತಿರುವ ಮನುಷ್ಯರಿಗೆ ಈ ವಿಷ್ಣುಭಕ್ತಿಯೆಂಬ ಕ್ಷೀರಸಮುದ್ರವನ್ನು ಬಿಟ್ಟರೆ ಈ ಭಯಾನಕವಾದ ಸಂಸಾರದಲ್ಲಿ ಬೇರೆಯಾವುದು ರಕ್ಷಿಸುತ್ತದೆ? ಯಾವುದೂ ರಕ್ಷಿಸುವುದಿಲ್ಲ. ಎಲೈ ಮುನಿಯೆ! ಭಕ್ತಿಯ ಭೇದಗಳನ್ನು ಈಗ ವಿಸ್ತಾರವಾಗಿ ಹೇಳು. ಮುನಿಗಳು

ಉಪಾಸ್ಯಮಾನಾನ್ ಸತತಂ ಮುನಿಭಿಃ ಪರಮಾತ್ಮನಃ ॥ ೪ ॥

॥ ವಸಿಷ್ಠ ಉವಾಚ ॥

ಸಾಧು ಪೃಚ್ಛಸಿ ರಾಜೇಂದ್ರ ಸಂಸಾರೋತ್ತಾರಣಂ ನೃಣಾಂ ।
ವೈಕುಂಠಸ್ಯ ಪರೇಶಸ್ಯ ಭಕ್ತಿಂ ನಿತ್ಯಸುಖಾವಹಾಂ ॥ ೫ ॥

ಇಮಮೇವ ಮಹಾಪ್ರಶ್ನಂ ಕೈಲಾಸಶಿಖರೇ ಪುರಾ ।
ಪಪ್ರಚ್ಛ ಗಿರಿಜಾ ದೇವೀ ಶಂಕರಂ ಲೋಕಪೂಜಿತಂ ॥ ೬ ॥

॥ ಪಾರ್ವತ್ಯುವಾಚ ॥

ದೇವದೇವ ಮಹಾದೇವ ತ್ರಿಪುರಘ್ನ ಸುರೇಶ್ವರ ।
ವಿಷ್ಣುಭಕ್ತಿಂ ಸಮಾಚಕ್ಷ್ವ ಮುಕ್ತಿದಾಂ ಸರ್ವದೇಹಿನಾಂ ॥ ೭ ॥

ಉಪಾಸ್ಯಭೇದಾನ್ ಮಂತ್ರಾಂಶ್ಚ ತತ್ಪೂಜಾವಿಧಯಸ್ತಥಾ ।
ತಸ್ಯ ವಿಷ್ಣೋಃ ಸ್ವರೂಪಂ ಚ ತದ್ವಿಭೂತೇಃ ಗುಣಾದಯಃ ॥ ೮ ॥

---

ಆ ಪರಮಾತ್ಮನನ್ನು ಯಾವಯಾವ ರೀತಿಯಾದ ಭಕ್ತಿಯಿಂದ ಸೇವಿಸುತ್ತಾರೆ ? ಅವೆಲ್ಲವನ್ನೂ ಹೇಳು.

೫. ವಸಿಷ್ಠನು ಹೇಳಿದನು-ಎಲೈ ದೊರೆಯೆ! ನೀನು ಕೇಳಿದುದು ಬಹು ಚೆನ್ನಾಗಿದೆ. ಇದು ಮನುಷ್ಯನಿಗೆ ಸಂಸಾರವನ್ನು ದಾಟಿಸತಕ್ಕದ್ದು. ವೈಕುಂಠ ಪತಿಯಾದ ಪರೇಶನಾದ ಆ ವಿಷ್ಣುವಿನಲ್ಲಿ ಭಕ್ತಿಯು ಯಾವಾಗಲೂ ಸುಖವನ್ನು ಉಂಟುಮಾಡುತ್ತದೆ.

೬. ಈ ಪ್ರಶ್ನೆಯನ್ನು ಹಿಂದೆ ಕೈಲಾಸ ಶಿಖರದಲ್ಲಿ ಮಹಾದೇವನನ್ನು ಪಾರ್ವತಿಯು ಕೇಳಿದಳು.

೭. ಪಾರ್ವತಿಯು ಕೇಳಿದಳು-ಎಲೈ ದೇವದೇವನೂ, ತ್ರಿಪುರಘ್ನನೂ ಆದ ಮಹಾದೇವನೆ! ಎಲ್ಲಾ ಪ್ರಾಣಿಗಳಿಗೂ ಮುಕ್ತಿಯನ್ನು ಕೊಡುವ ವಿಷ್ಣುಭಕ್ತಿಯನ್ನು ನನಗೆ ಹೇಳು.

೮. ಅದರ ಉಪಾಸನೆಯ ಭೇದವನ್ನೂ ಮಂತ್ರಗಳನ್ನೂ ಅವನ ಪೂಜಾವಿಧಿಗಳನ್ನೂ ಆ ವಿಷ್ಣುವಿನ ಸ್ವರೂಪವನ್ನೂ ಆ ಸ್ವಾಮಿಯ ವಿಭೂತಿಯ (ಮಹಿಮೆಯ) ಗುಣಗಳನ್ನೂ ತಿಳಿಸು.

ತಸ್ಯ ಲೋಕಸ್ವರೂಪಂ ಚ ಯತ್ಪ್ರಾಪ್ಯ ನ ನಿವರ್ತತೇ ।
ಸರ್ಗಸ್ಥಿತಿಲಯಂ ಯೇನ ಕರೋತಿ ಭಗವಾನ್ ಹರಿಃ ॥ ೯ ॥

ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಹರೇಃ ।
ಯೇನ ಕೇನ ಚ ಕೃತ್ಯೇನ ಸಾಧನೇನ ಪರಂ ಪದಂ ॥ ೧೦ ॥

ಪ್ರಾಪ್ನುವಂತಿ ನರಾಃ ಪಾಪಾ ವಿಷಯಾಸಕ್ತಚೇತಸಃ ।
ವಿಸ್ತರೇಣ ಮಯಿ ಪ್ರೀತ್ಯಾ ಬ್ರೂಹಿ ಸರ್ವಮಶೇಷತಃ ॥ ೧೧ ॥

॥ ವಸಿಷ್ಠ ಉವಾಚ ॥

ಇತಿ ಪೃಷ್ಟೋ ಮಹಾದೇವ್ಯಾ ಹರಸ್ತ್ರಿಪುರಘಾತಕಃ ।
ಉವಾಚ ಪರಮಪ್ರೀತ್ಯಾ ನಮಸ್ಕೃತ್ಯ ಜನಾರ್ದನಂ ॥ ೧೨ ॥

---

೯-೧೧. ಆ ವಿಷ್ಣುವಿನ ಲೋಕದ ಸ್ವರೂಪವನ್ನು ಹೇಳು. ಆ ಸ್ಥಳವನ್ನು ಹೊಂದಿದರೆ ಪ್ರಾಣಿಗಳು ಹಿಂತಿರುಗುವುದಿಲ್ಲವಲ್ಲ ! ಅದು ಎಂತಹುದು ? ಯಾವ ಹರಿಯು ಸೃಷ್ಟಿಸ್ಥಿತಿಲಯಗಳನ್ನು ಮಾಡುವನೋ ಅಂತಹವನ ಮಹಿಮೆಯನ್ನು ನನಗೆ ತಿಳಿಸು. ಯಾವ ವೈಕುಂಠವನ್ನು ಹೊಂದಿ ಪ್ರಾಣಿಗಳು ಹಿಂದಿರುಗುವುದಿಲ್ಲವೋ ಆ ಹರಿಗೆ ಯಾವುದು ಉತ್ತಮವಾದ ಸ್ಥಾನವೋ ಅಂತಹ ಉತ್ತಮವಾದ ಸ್ಥಾನದ ಸ್ವರೂಪವನ್ನು ತಿಳಿಸು. ವಿಷಯ ಸುಖದಲ್ಲಿ ಮನಸ್ಸುಳ್ಳ ಪಾಪಿಗಳಾದ ಮನುಷ್ಯರು ಯಾವ ಯಾವ ಕೆಲಸವನ್ನು ಮಾಡಿದರೆ ಪರಮಪದವನ್ನು ಹೊಂದುತ್ತಾರೆ ? ಎಂಬುದನ್ನೂ ಸ್ವಲ್ಪವೂ ಬಿಡದೆ ನನ್ನಲ್ಲಿಟ್ಟಿರುವ ಪ್ರೀತಿಯಿಂದ ಹೇಳು.

೧೨. ವಸಿಷ್ಠನು ಹೇಳಿದನು– ತ್ರಿಪುರಾಂತಕನಾದ ಹರನನ್ನು ಕುರಿತು ಪಾರ್ವತಿಯು ಹೀಗೆ ಪ್ರಶ್ನಿಸಲು ಹರನು ಜನಾರ್ದನನಿಗೆ ನಮಸ್ಕರಿಸಿ ಪ್ರೀತಿಯಿಂದ ಇಂತೆಂದು ಹೇಳತೊಡಗಿದನು.

॥ ಶ್ರೀರುದ್ರ ಉವಾಚ ॥

ಸಾಧು ಸಾಧು ಮಹಾದೇವಿ ಸರ್ವಲೋಕಹಿತೈಷಿಣಿ ।
ಸಾಧು ಪೃಚ್ಛಸಿ ಮಾಂ ದೇವಿ ಶ್ರೀಶಮಾಹಾತ್ಮ್ಯಮುತ್ತಮಂ ॥ ೧೩ ॥

ಧನ್ಯಾಸಿ ಕೃತಪುಣ್ಯಾಸಿ ವಿಷ್ಣುಭಕ್ತಾಸಿ ಪಾರ್ವತಿ ।
ಪರಿತುಷ್ಟೋಽಸ್ಮಿ ಭದ್ರಂ ತೇ ಶೀಲರೂಪಗುಣೈಸ್ಸದಾ ॥ ೧೪ ॥

ಅಹಂ ವಕ್ಷ್ಯಾಮಿ ಗಿರಿಜೇ ಭರ್ಗವದ್ಭಕ್ತಿಮುತ್ತಮಂ ।
ತನ್ಮಂತ್ರಾಣಾಂ ವಿಧಾನಂ ಚ ಸ್ವರೂಪಂ ತಸ್ಯ ಶಾಂರ್ಗಿಣಃ ॥ ೧೫ ॥

ತತ್ತ್ವಂ ನಾರಾಯಣೋ ವಿಷ್ಣುಃ ವಾಸುದೇವಃ ಸನಾತನಃ ।
ಪರಮಾತ್ಮಾ ಪರಂ ಬ್ರಹ್ಮ ಪರಂ ಜ್ಯೋತಿಃ ಪರಾತ್ಪರಃ ॥ ೧೬ ॥

ಅಚ್ಯುತಃ ಪುರುಷಃ ಕೃಷ್ಣಃ ಶಾಶ್ವತಃ ಶಿವ ಈಶ್ವರಃ ।
ನಿತ್ಯಃ ಸರ್ವಗತಃ ಸ್ಥಾಣುಃ ರುದ್ರಃ ಸಾಕ್ಷೀ ಪ್ರಜಾಪತಿಃ ॥ ೧೭ ॥

---

೧೩. ರುದ್ರನು ಹೇಳಿದನು–ಎಲ್ಲರಿಗೂ ಹಿತೈಷಿಣಿಯಾದ ಎಲೈ ದೇವಿಯೆ! ಚೆನ್ನಾಗಿ ಕೇಳಿದೆ. ಚೆನ್ನಾಗಿ ಕೇಳಿದೆ. ಶ್ರೀಶನ ಉತ್ತಮವಾದ ಮಹಿಮೆಯನ್ನು ನೀನು ಕೇಳಿದುದು ಬಹು ಚೆನ್ನಾಗಿದೆ.

೧೪. ನೀನೇ ಧನ್ಯಳು. ಪುಣ್ಯವಂತಳು. ಎಲೈ ಪಾರ್ವತಿಯೆ! ನೀನು ವಿಷ್ಣುಭಕ್ತಳಾಗಿದ್ದೀಯೆ. ನಿನ್ನ ಶೀಲಗುಣ ರೂಪಗಳಿಂದ ಬಹು ಸಂತೋಷವಾಯಿತು. ನಿನಗೆ ಒಳ್ಳೆಯದಾಗಲಿ.

೧೫. ಎಲೈ ಗಿರಿಜೆಯೆ! ಆ ವಿಷ್ಣುವಿನಲ್ಲಿ ಉತ್ತಮವಾದ ಭಕ್ತಿಯನ್ನೂ ಅವನ ಮಂತ್ರಗಳ ವಿಧಾನವನ್ನೂ, ಅವನ ಸ್ವರೂಪವನ್ನೂ ಹೇಳುತ್ತೇವೆ.

೧೬–೧೮. ಆ ನಾರಾಯಣನೇ ತತ್ತ್ವಸ್ವರೂಪನು. ವ್ಯಾಪಕನು. ವಸುದೇವನ ಮಗನು. ಸನಾತನನು. ಪರಮಾತ್ಮನು. ಪರಬ್ರಹ್ಮನು. ಪರಜ್ಯೋತಿಯು. ಪರಕ್ಕಿಂತಲೂ ಪರಮನು. ನಾಶರಹಿತನು ಪುರುಷನು. ಕೃಷ್ಣನು. ಶಾಶ್ವತನು. ನಿತ್ಯನು. ಎಲ್ಲಾ ಕಡೆಯಲ್ಲಿಯೂ ಇರುವವನು. ಸ್ಥಾಣುವು. ರುದ್ರನು.

ಯಜ್ಞೋ ಯಜ್ಞಪತಿಃ ಸಾಕ್ಷಾತ್ ಬ್ರಹ್ಮಣಃ ಪತಿರೇವ ಚ ।
ಹಿರಣ್ಯಗರ್ಭಃ ಸವಿತಾ ಲೋಕಕೃಲ್ಲೋಕಭೃದ್ವಿಭುಃ ॥ ೧೮ ॥

ಅಕಾರವಾಚ್ಯೋ ಭಗವಾನ್ ಶ್ರೀಮಾನ್ ಲೀಲಾಪತಿಃ ಪ್ರಭುಃ ।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೧೯ ॥

ಸಹಸ್ರಮೂರ್ಧಾ ವಿಶ್ವಾತ್ಮಾ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಂ ॥ ೨೦ ॥

ಅನಂತಃ ಶ್ರೀಪತೀ ರಾಮೋ ಗುಣಭೃನ್ನಿರ್ಗುಣೋ ಮಹಾನ್ ।
ಸರ್ವಲೋಕೇಶ್ವರಃ ಶ್ರೀಮಾನ್ ಸರ್ವಜ್ಞಃ ಸರ್ವತೋ ಮುಖಃ ॥ ೨೧ ॥

ತಸ್ಯ ಲೋಕಪ್ರಧಾನಸ್ಯ ಜಗನ್ನಾಥಸ್ಯ ಪಾರ್ವತಿ ।
ಮಾಹಾತ್ಮ್ಯಂ ವಾಸುದೇವಸ್ಯ ಯಚ್ಛಕ್ಯಂ ತದ್ಬ್ರವೀಮಿ ತೇ ॥ ೨೨ ॥

---

ಸರ್ವಸಾಕ್ಷಿಯು. ಪ್ರಜೆಗಳಿಗೆ ಒಡೆಯನು. ಯಜ್ಞಸ್ವರೂಪನು. ಬ್ರಹ್ಮನಿಗೆ ಒಡೆಯನು. ಹಿರಣ್ಯಗರ್ಭನು, ಸವಿತೃವು, ಲೋಕಸ್ರಷ್ಟನು, ಲೋಕವನ್ನು ಧರಿಸಿರುವವನು ವ್ಯಾಪಕನು.

೧೯-೨೦. ಅಕಾರದಿಂದ ಹೇಳಲ್ಪಡುವವನು. ಭಗವಂತನು. ಶ್ರೀಮಂತನು. ಲೀಲೆಗೆಲ್ಲಾ ಒಡೆಯನು. ಅನ್ನವನ್ನು ತಿನ್ನದೆ ಬದುಕುವ ಅಮೃತವನ್ನು ತಿನ್ನುವವರಿಗೆಲ್ಲಾ ಈಶನು. ಸಾವಿರ ತಲೆಗಳಿವೆ. ವಿಶ್ವವೇ ಆತ್ಮವಾಗಿ ಉಳ್ಳವನು. ಸಾವಿರ ಕಣ್ಣುಗಳುಳ್ಳವನು. ಸಾವಿರ ಕಾಲುಗಳುಳ್ಳವನು. ಅವನು ಭೂಮಿಯನ್ನು ಎಲ್ಲಾ ಕಡೆಯಲ್ಲಿಯೂ ಆವರಿಸಿಕೊಂಡಿರುವವನು. ಆದರೂ ಹತ್ತು ಅಂಗುಲವನ್ನು ಸ್ವಲ್ಪ ಮೀರಿ ಉದ್ದವಿರುವವನು.

೨೧. ಅಂತರವಿಲ್ಲದವನು. ಶ್ರೀಗೆ ಪತಿಯು. ಮನೋಹರನು. ಒಳ್ಳೆಯ ಗುಣಗಳುಳ್ಳವನು. ಗುಣರಹಿತನು. ದೊಡ್ಡವನು. ಎಲ್ಲಾ ಲೋಕಗಳಿಗೂ ಈಶ್ವರನು. ಶ್ರೀಮಂತನು. ಸರ್ವನು. ಎಲ್ಲಾ ಕಡೆಗೂ ಮುಖವುಳ್ಳವನು.

೨೨. ಅವನು ಎಲ್ಲಾ ಲೋಕಗಳಿಗೂ ಪ್ರಧಾನನು. ಜಗತ್ತಿಗೆ ಒಡೆಯನು. ಅಂತಹ ವಾಸುದೇವನ ಮಹಿಮೆಯನ್ನು ನನ್ನ ಕೈಲಾದಷ್ಟು ಹೇಳುತ್ತೇನೆ.

ಅಶಕ್ಯಂ ತಸ್ಯ ಮಯಾ ವಕ್ತುಂ ಬ್ರಹ್ಮಣಾ ಸರ್ವದೈವತೈಃ ।
ಸರ್ವೋಪನಿಷದಾಮರ್ಥಂ ವೇದಾನ್ತೇ ಪರಿನಿಶ್ಚಿತಂ ॥ ೨೩ ॥

ತಸ್ಯೋಪಾಸನಭೇದಾಂಶ್ಚ ಶೃಣು ವಚ್ಮಿ ಪೃಥಕ್ ಪೃಥಕ್ ।
ಆದ್ಯಂ ತು ವೈಷ್ಣವಂ ಪ್ರೋಕ್ತಂ ಶಂಖಚಕ್ರಾಂಕನಂ ಹರೇಃ ॥ ೨೪ ॥

ಧಾರಣಂ ಚೋರ್ಧ್ವಪುಂಡ್ರಾಣಾಂ ತನ್ಮಂತ್ರಾಣಾಂ ಪರಿಗ್ರಹಃ ।
ಅರ್ಚನಂ ಚ ಜಪಧ್ಯಾನಂ ತನ್ನಾಮಸ್ಮರಣಂ ತಥಾ ॥ ೨೫ ॥

ಕೀರ್ತನಂ ಶರಣಂ ಚೈವ ವಂದನಂ ಪಾದಸೇವನಂ ।
ತತ್ಪಾದೋದಕಸೇವಾ ಚ ತನ್ನಿವೇದಿತಭೋಜನಂ ॥ ೨೬ ॥

ತದೀಯಾನಾಂ ಚ ಸೇವಾ ಚ ದ್ವಾದಶೀವ್ರತನಿಷ್ಠಿತಂ ।
ತುಲಸೀರೋಪಣಂ ವಿಷ್ಣೋರ್ದೇವದೇವಸ್ಯ ಶಾಂರ್ಗಿಣಃ ॥ ೨೭ ॥

---

೨೩. ನನ್ನಿಂದಾಗಲಿ ಬ್ರಹ್ಮನಿಂದಾಗಲಿ ಎಲ್ಲಾ ದೇವತೆಗಳಿಂದಾಗಲಿ ಆ ಮಹಿಮೆಯನ್ನು ಹೇಳಲಾಗುವುದೇ ಇಲ್ಲ. ಅವನ ಮಹಿಮೆಯೇ ಎಲ್ಲಾ ಉಪನಿಷತ್ತುಗಳ ಅರ್ಥವು. ಅವನ ಮಹಿಮೆಯು ವೇದಾಂತದಲ್ಲಿ ಸ್ವಲ್ಪ ಮಟ್ಟಿಗೆ ನಿಶ್ಚಿತವಾಗಿದೆ.

೨೪. ಅವನ ಉಪಾಸನಾ ಭೇದಗಳನ್ನು ಬೇರೆಬೇರೆಯಾಗಿ ಹೇಳುತ್ತೇನೆ. ಕೇಳು. ಮೊದಲನೆ ರೀತಿಯು ವೈಷ್ಣವ ವಿಷಯವಾದುದು. ಅದರಲ್ಲಿ ಶಂಖ ಚಕ್ರಗಳ ಅಂಕಿತವನ್ನು ಮಾಸಿಕೊಳ್ಳಬೇಕು. ಅದೇ ಮೊದಲನೆಯದು.

೨೫–೨೯. (೧) ಶಂಖಚಕ್ರಗಳ ಧಾರಣವು. (೨) ಊರ್ಧ್ವ ಪುಂಡ್ರಗಳ ಧಾರಣ. (೩) ವಿಷ್ಣು ಮಂತ್ರ ಪರಿಗ್ರಹ. (೪) ವಿಷ್ಣುವಿನ ಅರ್ಚನೆ. (೫) ವಿಷ್ಣುವಿನ ಮಂತ್ರಗಳ ಜಪ. (೬) ವಿಷ್ಣುವಿನ ಧ್ಯಾನ. (೭) ಅವನ ನಾಮಗಳ ಸ್ಮರಣ. (೮) ಆ ವಿಷ್ಣುವಿನ ನಾಮಗಳ ಕೀರ್ತನೆ. (೯) ಆ ನಾಮಗಳ ಶ್ರವಣ. (೧೦) ಪಾದಗಳ ವಂದನೆ. (೧೧) ವಿಷ್ಣುವಿನ ಪಾದಸೇವನ. (೧೨) ಆ ವಿಷ್ಣುವಿನ ಪಾದ ತೀರ್ಥವನ್ನು ಸೇವಿಸುವುದು. (೧೩) ಅವನಿಗೆ ನಿವೇದನ ಮಾಡಿರುವುದನ್ನು ತಿನ್ನುವುದು. (೧೪) ವಿಷ್ಣು ಭಕ್ತರ ಸೇವೆ. (೧೫) ದ್ವಾದಶೀ ವ್ರತದಲ್ಲಿ ಆಸಕ್ತಿ. (೧೬) ತುಲಸಿಯನ್ನು ವಿಷ್ಣುವಿಗೋಸ್ಕರ ಬೆಳೆಸುವುದು. ಈ ಹದಿನಾರು ಬಗೆಯೂ

ಭಕ್ತಿಃ ಷೋಡಶಧಾ ಪ್ರೋಕ್ತಾ ಭವಬಂಧವಿಮುಕ್ತಯೇ ।
ಸರ್ವೇಷಾಮೇವ ದೇವಾನಾಂ ಮಮಾಪಿ ಪುರುಷೋತ್ತಮಃ ॥ ೨೮ ॥

ಪೂಜನೀಯೋ ಹರಿರ್ನಿತ್ಯಂ ಬ್ರಾಹ್ಮಣಾನಾಂ ವಿಶೇಷತಃ ।
ತಸ್ಮಾತ್ತು ಬ್ರಾಹ್ಮಣೋ ನಿತ್ಯಂ ವಿಧಿವತ್ಪೂಜಯೇದ್ಧರಿಂ ॥ ೨೯ ॥

ತಚ್ಚಿಹ್ನೈರಂಕಿತಃ ಶ್ರೀಶಪದಂ ಪ್ರಾಪ್ನೋತ್ಯಸಂಶಯಂ ।
ಶಂಖಚಕ್ರಾಂಕನಂ ಕುರ್ಯಾತ್ ಬ್ರಾಹ್ಮಣೋ ಬಾಹುಮೂಲಯೋಃ ॥೩೦॥

ಹುತಾಗ್ನಿನೈವ ಸಂತಪ್ಯ ಸರ್ವಪಾಪಾಪನುತ್ತಯೇ ।
ಚಕ್ರಂ ವಾ ಶಂಖಚಕ್ರೇ ವಾ ತಥಾ ಪಂಚಾಯುಧಾನಿ ವಾ ॥ ೩೧ ॥

ಧಾರಯಿತ್ವೈವ ವಿಧಿವತ್ ಬ್ರಹ್ಮಕರ್ಮಸಮಾಚರೇತ್ ।
ಅಗ್ನಿತಪ್ತಂ ಪವಿತ್ರಂ ಚ ಧೃತ್ವಾ ವೈ ಬಾಹುಮೂಲಯೋಃ ॥ ೩೨ ॥

---

ಕೂಡ ಆ ಸ್ವಾಮಿಯಲ್ಲಿ ಭಕ್ತಿಮಾಡುವಿಕೆಯು. ಈ ಭಕ್ತಿಯು ಸಂಸಾರದ ಬಂಧ ವಿಮೋಚನೆಗೆ ಕಾರಣವಾಗುತ್ತದೆ. ಆ ಪುರುಷೋತ್ತಮನು ಎಲ್ಲಾ ದೇವತೆಗಳಿಗೂ ನನಗೂ ಕೂಡಾ ನಿತ್ಯದಲ್ಲಿಯೂ ಪೂಜೆಗೆ ಯೋಗ್ಯನು. ಬ್ರಾಹ್ಮಣರು ಅವನನ್ನು ವಿಶೇಷವಾಗಿ ಪೂಜಿಸಬೇಕು. ಆದ್ದರಿಂದ ಬ್ರಾಹ್ಮಣರಾದವರು ಹರಿಯನ್ನು ನಿಯಮದಿಂದ ಪೂಜಿಸಬೇಕು.

೩೦-೩೨. ಆ ವಿಷ್ಣುವಿನ ಚಿಹ್ನೆಗಳಿಂದ ಗುರುತು ಮಾಡಿಸಿಕೊಂಡರೆ ಆ ವಿಷ್ಣುವಿನ ಸ್ಥಾನವಾದ ವೈಕುಂಠವನ್ನು ಹೊಂದುವುದರಲ್ಲಿ ಸಂದೇಹವೇ ಇಲ್ಲ. ಬ್ರಾಹ್ಮಣನಾದವನು ಹೋಮಮಾಡಿದ ಬೆಂಕಿಯಲ್ಲಿ ಕಾಯಿಸಿ ತೋಳುಗಳ ಬುಡದಲ್ಲಿ ಶಂಖಚಕ್ರಗಳ ಗುರುತನ್ನು ಮಾಡಿಸಿಕೊಳ್ಳಬೇಕು. ಅದರಿಂದ ಎಲ್ಲಾ ಪಾಪಗಳೂ ಹೋಗುತ್ತವೆ. ಚಕ್ರಗಳನ್ನಾಗಲಿ ಅಥವಾ ಶಂಖಚಕ್ರಗಳೆರಡನ್ನಾಗಲಿ ಇಲ್ಲವೇ ವಿಷ್ಣುವಿನ ಪಂಚ(ಐದು)ಆಯುಧಗಳನ್ನಾಗಲೀ ಧರಿಸಿಕೊಂಡು ಕ್ರಮವಾಗಿ ಬ್ರಹ್ಮಕರ್ಮವನ್ನು ಆರಂಭಿಸಬೇಕು. ಅಗ್ನಿಯಿಂದ ಕಾದುವುಗಳಲ್ಲಿ ತೋಳಿನ ಬುಡದಲ್ಲಿ ಅಂಕನ ಮಾಡಿಸಿಕೊಂಡರೆ ಅದು ಬಹು ಪವಿತ್ರವಾದುದು.

ತ್ಯಕ್ತ್ವಾ ಯಮಪುರಂ ಘೋರಂ ಯಾತಿ ವಿಷ್ಣೋಃ ಪರಂ ಪದಂ ।
ಚಕ್ರಚಿಹ್ನವಿಹೀನಸ್ತು ಯಃ ಪೂಜಯತಿ ಕೇಶವಂ ॥ ೩೩ ॥

ವೈಫಲ್ಯಂ ತಸ್ಯ ತದ್ಯಾತಿ ಪೂಜಾಮಂತ್ರಜಪಾದಿಕಂ ।
ಅಗ್ನಿತಪ್ತೇನ ಚಕ್ರೇಣ ಬ್ರಾಹ್ಮಣೋ ಬಾಹುಮೂಲಯೋಃ ॥ ೩೪ ॥

ಅಂಕಯಿತ್ವಾ ಜಪೇನ್ ಮಂತ್ರಂ ಸಂಸಾರಾನ್ಮೋಕ್ಷಮಶ್ನುತೇ ।
ಸುದರ್ಶನಂ ಧಾರಯಿತ್ವಾ ವಹ್ನಿತಪ್ತಂ ದ್ವಿಜೋತ್ತಮಃ ॥ ೩೫ ॥

ತಾಪನೀಯವಿಧಾನೇನ ಪಂಚಕರ್ಮಸು ಯೋಜಯೇತ್ ।
ವಿಷ್ಣುಚಕ್ರವಿಹೀನಂ ತು ಯಃ ಶ್ರಾದ್ಧೇ ಭೋಜಯಿಷ್ಯತಿ ॥ ೩೬ ॥

ವ್ಯರ್ಥಂ ಭವತಿ ತತ್ಸರ್ವಂ ನಿರಾಶಾಃ ಪಿತರೋ ಗತಾಃ ।
ವಿಷ್ಣುಚಕ್ರಾಂಕಿತಂ ವಿಪ್ರಂ ಪೂಜಯೇಚ್ಛ್ರಾದ್ಧಕರ್ಮಣಿ ॥ ೩೭ ॥

---

೩೩-೩೭. ಹಾಗೆ ಅಂಕನವನ್ನು ಮಾಡಿಸಿಕೊಂಡಿದ್ದರೆ ಘೋರವಾದ ಯಮಪುರಿಗೆ ಹೋಗುವುದಿಲ್ಲ. ವಿಷ್ಣುಪದವಾದ ವೈಕುಂಠವನ್ನು ಹೊಂದುತ್ತಾರೆ. ಶಂಖಚಕ್ರಗಳನ್ನು ಧಾರಣೆಮಾಡಿಸಿಕೊಳ್ಳದೆ ಕೇಶವನನ್ನು ಪೂಜಿಸಿದರೆ ಅವನ ಪೂಜೆ ಮಂತ್ರ ಜಪಗಳೆಲ್ಲವೂ ವ್ಯರ್ಥವಾಗುತ್ತವೆ. ಬ್ರಾಹ್ಮಣನಾದವನು ಅಗ್ನಿಯಿಂದ ಕಾದಿರುವ ಚಕ್ರದಿಂದ ತೋಳಿನ ಬುಡದಲ್ಲಿ ಗುರುತುಮಾಡಿಸಿ ಕೊಂಡು ಮಂತ್ರವನ್ನು ಜಪಿಸಿದರೆ ಸಂಸಾರದಿಂದ ಮುಕ್ತನಾಗಿ ಮೋಕ್ಷವನ್ನು ಹೊಂದುತ್ತಾನೆ. ಬ್ರಾಹ್ಮಣನಾದವನು ಬೆಂಕಿಯಲ್ಲಿ ಚಕ್ರವನ್ನು ಶಾಸ್ತ್ರರೀತಿ ಯಿಂದ ಕಾಯಿಸಿ ಧಾರಣೆಮಾಡಿಕೊಂಡ ಅನಂತರ ಪಂಚಕರ್ಮಗಳಲ್ಲಿ ಯೋಗ್ಯತೆ ಯನ್ನು ಹೊಂದುತ್ತಾನೆ. ವಿಷ್ಣುವಿನ ಚಕ್ರವನ್ನು ಧಾರಣೆಮಾಡಿಸಿಕೊಳ್ಳದಿರುವ ವನನ್ನು ಶ್ರಾದ್ಧದಲ್ಲಿ ಭೋಜನ ಮಾಡಿಸಿದರೆ ಅದೆಲ್ಲವೂ ವ್ಯರ್ಥವಾಗುತ್ತದೆ. ಪಿತೃಗಳು ಆಸೆಯನ್ನು ಬಿಟ್ಟು ಹೊರಟುಹೋಗುತ್ತಾರೆ. ವಿಷ್ಣುಚಕ್ರದಿಂದ ಅಂಕನಮಾಡಿಸಿಕೊಂಡಿರುವ ಮನುಷ್ಯನನ್ನು ಶ್ರಾದ್ಧದಲ್ಲಿ ಊಟಕ್ಕೆ ಹೇಳಬೇಕು. ಆ ಧಾರಣೆಯನ್ನು ಮಾಡಿಸಿಕೊಳ್ಳದಿರುವವನನ್ನು ಬಿಟ್ಟೇ ಬಿಡಬೇಕು.

ವಿಷ್ಣುಚಕ್ರವಿಹೀನಂ ತು ಪ್ರಯತ್ನೇನ ವಿವರ್ಜಯೇತ್ |
ದೇಯಾದ್ಗೋಭೂಹಿರಣ್ಯಾದಿ ಚಕ್ರಾಂಕಿತಭುಜಾಯ ವೈ　　　|| ೩೮ ||

ಯದ್ದತ್ತಂ ಚಕ್ರಹೀನಾಯ ತತ್ಸರ್ವಮಸುರಾಯ ವೈ |
ಅಗ್ನಿತಪ್ತೇನ ಚಕ್ರೇಣ ಬಾಹುಮೂಲೇ ತು ಲಾಂಛಿತಾಃ　　　|| ೩೯ ||

ತೇ ಸರ್ವೇ ಪಾಪನಿರ್ಮುಕ್ತಾ ಯಾನ್ತಿ ವಿಷ್ಣೋಃ ಪರಂ ಪದಂ |
ಹುತಾಗ್ನಿತಪ್ತಚಕ್ರೇಣ ಶರೀರಂ ಯಸ್ಯ ಚಿಹ್ನಿತಂ　　　|| ೪೦ ||

ತಸ್ಯ ತೀರ್ಥಾನಿ ಯಜ್ಞಾಶ್ಚ ವಸಂತಿ ನಾತ್ರ ಸಂಶಯಃ |
ಅಧೃತ್ವಾ ವಿಧಿನಾ ಚಕ್ರಂ ಬ್ರಾಹ್ಮಣಃ ಪ್ರಾಕೃತೋ ಭವೇತ್　　　|| ೪೧ ||

ನ ತಸ್ಯ ಕಿಂಚಿದಶ್ನೀಯಾದಪಿ ಕ್ರತುಸಹಸ್ರಿಣಃ |
ಸರ್ವವೇದವಿದೋ ವಾಪಿ ಸರ್ವಶಾಸ್ತ್ರವಿಶಾರದಃ　　　|| ೪೨ ||

---

ಶಂಖಚಕ್ರಗಳನ್ನು ಧಾರಣೆಮಾಡಿಸಿಕೊಂಡಿರುವವನಿಗೆ ಭೂಮಿ ಹಿರಣ್ಯ ಗೋವು ಮುಂತಾದುವನ್ನು ದಾನಮಾಡಬೇಕು.

೩೯-೪೧. ಶಂಖಚಕ್ರಧಾರಣೆಗಳನ್ನು ಮಾಡಿಸಿಕೊಳ್ಳದಿರುವವನಿಗೆ ದಾನ ಮಾಡಿದುವೆಲ್ಲವೂ ಅಸುರರಿಗೆ ಸೇರುತ್ತವೆ. ಅಗ್ನಿಯಿಂದ ಕಾದಿರುವ ಚಕ್ರದಿಂದ ತೋಳಿನಲ್ಲಿ ಗುರುತುಮಾಡಿಸಿಕೊಂಡಿರುವವರು ಪಾಪಗಳನ್ನು ಕಳೆದುಕೊಂಡು ವಿಷ್ಣುಪದವನ್ನು ಹೊಂದುತ್ತಾರೆ. ಕಾದಿರುವ ಚಕ್ರದಿಂದ ಬಾಹುವಿನಲ್ಲಿ ಅಂಕನ ಮಾಡಿಸಿಕೊಂಡರೆ ಅವನಿಗೆ ಎಲ್ಲಾ ತೀರ್ಥಗಳೂ, ಯಜ್ಞಗಳೂ ಫಲವನ್ನು ಕೊಡುತ್ತವೆ. ಸಂಶಯವಿಲ್ಲ. ವಿಧಿಯಲ್ಲಿ ಹೇಳಿರುವಂತೆ ಬ್ರಾಹ್ಮಣನಾದವನು ಚಕ್ರಧಾರಣೆಯನ್ನು ಮಾಡಿಸಿಕೊಳ್ಳದಿದ್ದರೆ ಕೆಲಸಕ್ಕೆ ಬಾರದವನಾಗುತ್ತಾನೆ.

೪೨. ಹಾಗೆ ಶಂಖಚಕ್ರಧಾರಣೆಗಳನ್ನು ಮಾಡಿಸಿಕೊಳ್ಳದಿದ್ದವನು ಸಾವಿರ ಯಾಗಗಳನ್ನು ಮಾಡಿರಲಿ, ಎಲ್ಲಾವೇದಗಳನ್ನೂ ತಿಳಿದಿರಲಿ, ಎಲ್ಲಾ ಶಾಸ್ತ್ರಗಳನ್ನೂ ತಿಳಿದಿರಲಿ, ಅವನಿಂದ ಏನನ್ನೂ ತೆಗೆದುಕೊಳ್ಳಬಾರದು. ಅವನ ಕೈಯ್ಯಿಂದ ಏನನ್ನೂ ತಿನ್ನಬಾರದು.

ಅಧೃತ್ವಾ ವಿಧಿನಾ ಚಕ್ರಂ ಬ್ರಾಹ್ಮಣಃ ಪತಿತೋ ಭವೇತ್ ।
ಊರ್ಧ್ವಪುಂಡ್ರವಿಹೀನಸ್ತು ಶಂಖಚಕ್ರವಿವರ್ಜಿತಃ ॥ ೪೩ ॥

ತಂ ಗರ್ದಭೇ ಸಮಾರೋಪ್ಯ ಬಹಿಃ ಕುರ್ಯಾತ್ ಸ್ವಪತ್ತನಾತ್ ।
ಪ್ರಕೃತಿಸ್ಪರ್ಶರಹಿತೋ ವಾಸುದೇವೋ ಜನಾರ್ದನಃ ॥ ೪೪ ॥

ತಥೈವ ಬ್ರಾಹ್ಮಣೋ ದೇವಿ ವಿಷ್ಣುಚಕ್ರೇಣ ಚಿಹ್ನಿತಃ ।
ತಸ್ಮಾತ್ಪ್ರಕೃತಿಸಂಸರ್ಗಪಾಪೌಘದಹನಂ ಹರೇಃ ॥ ೪೫ ॥

ಪ್ರತಪ್ತಂ ಬಿಭೃಯಾಚ್ಚಕ್ರಂ ಶಂಖಂ ಚ ಭುಜಮೂಲಯೋಃ ।
ಸ್ತ್ರೀಶೂದ್ರಾಣಾಂ ಸದಾ ಧಾರ್ಯಂ ಚಂದನೇನ ಸುಗಂಧಿನಾ ॥ ೪೬ ॥

ಬಾಹುಮೂಲೇ ಲಿಖೇಚ್ಚಕ್ರಂ ತಪ್ತಂ ಚ ಬ್ರಾಹ್ಮಣಸ್ಯ ವೈ ।
ತಪ್ತೇನೈವಾಂಕನಂ ಕುರ್ಯಾದ್ಬ್ರಾಹ್ಮಣಸ್ಯ ವಿಧಾನತಃ ॥ ೪೭ ॥

---

೪೩-೪೭. ಬ್ರಾಹ್ಮಣನು ಕ್ರಮವಾಗಿ ಶಂಖಚಕ್ರಗಳ ಧಾರಣೆಯನ್ನು ಮಾಡಿಸಿಕೊಳ್ಳದಿದ್ದರೆ ಪತಿತನಾಗುತ್ತಾನೆ. ಊರ್ಧ್ವಪುಂಡ್ರಗಳನ್ನು ಹಾಕಿಕೊಳ್ಳದೆ ಶಂಖಚಕ್ರಗಳನ್ನು ಧರಿಸದಿದ್ದರೆ ಅವನನ್ನು ಕತ್ತೆಯಮೇಲೆ ಕೂರಿಸಿ ಊರಿಂದ ಹೊರಕ್ಕೆ ತೊಲಗಿಸಬೇಕು. ಪ್ರಕೃತಿಯ ಸ್ಪರ್ಶದಿಂದ ಸಂಪರ್ಕವನ್ನು ಹೊಂದದಿರುವವನು ಜನಾರ್ದನನಾದ ಸ್ವಾಮಿಯು. ವಿಷ್ಣುಚಕ್ರದಿಂದ ಗುರುತು ಮಾಡಿಸಿಕೊಂಡಿರುವ ಬ್ರಾಹ್ಮಣನು ಆ ವಿಷ್ಣುವಿನಂತೆಯೇ ಇರುವನು. ಆದ್ದರಿಂದ ಪ್ರಕೃತಿಸಂಸರ್ಗದ ಪಾಪವನ್ನು ನಾಶಮಾಡುವ ಹರಿಯ ಶಂಖಚಕ್ರಗಳನ್ನು ಕಾಯಿಸಿ ಗುರುತುಗಳನ್ನು ಭುಜದ ಬುಡದಲ್ಲಿ ಮಾಡಿಸಿಕೊಳ್ಳಬೇಕು. ಸ್ತ್ರೀಯರು ಶೂದ್ರರು ಯಾವಾಗಲೂ ವಾಸನೆಯುಳ್ಳ ಚಂದನದಿಂದ ತೋಳುಗಳಲ್ಲಿ ಶಂಖಚಕ್ರಗಳನ್ನು ಬರೆಸಿಕೊಳ್ಳಲೇಬೇಕು. ಬ್ರಾಹ್ಮಣನು ಕಾದಿರುವುದರಲ್ಲಿ ಸುಡಿಸಿಕೊಳ್ಳಬೇಕು. ಬ್ರಾಹ್ಮಣನಾದವನು ಶಾಸ್ತ್ರದ ರೀತಿಯಲ್ಲಿ ಕಾದಿರುವ ಶಂಖಚಕ್ರಗಳನ್ನೇ ಅಂಕನಮಾಡಿಸಿಕೊಳ್ಳಬೇಕು.

ಶ್ರೌತಸ್ಮಾರ್ತಾದಿಸಿದ್ಧ್ಯರ್ಥಂ ಮಂತ್ರಸಿದ್ಧ್ಯೈ ತಥೈವ ಚ ।
ಹರೇಃ ಪೂಜಾಧಿಕಾರಾರ್ಥಂ ಚಕ್ರಂ ಧಾರ್ಯಂ ವಿಧಾನತಃ ॥ ೪೮ ॥

ವೈಷ್ಣವತ್ವಸ್ಯ ಸಿದ್ಧ್ಯರ್ಥಂ ಜ್ಞಾನಸಿದ್ಧ್ಯೈ ವಿಶೇಷತಃ ।
ಪ್ರತಪ್ತಶಂಖಚಕ್ರಾಭ್ಯಾಂ ಹುತ್ವಾ ಹೋಮಂ ವಿಧಾನತಃ ॥ ೪೯ ॥

ಅನ್ಯೈರ್ನ ದಾಹಯೇದ್ಗಾತ್ರಂ ಬ್ರಾಹ್ಮಣೋ ಹರಿಲಕ್ಷಣಾತ್ ।
ಶಂಖಚಕ್ರಗದಾಖಡ್ಗಶಾಂರ್ಗಾದನ್ಯೈರ್ಹರೇರಪಿ ॥ ೫೦ ॥

ನ ಲಕ್ಷಣೈರ್ದಹೇದಂಗಂ ನಾನ್ಯದಗ್ಧೋಽರ್ಹತಿ ಕ್ರಿಯಾಂ ।
ಅಚಕ್ರಧಾರಿಣಂ ವಿಪ್ರಂ ದೂರತಃ ಪರಿವರ್ಜಯೇತ್ ॥ ೫೧ ॥

ಶ್ವಪಾಕಮಿವ ನೇಕ್ಷೇತ ಲೋಕೇ ವಿಪ್ರಮವೈಷ್ಣವಂ ।
ವೈಷ್ಣವೋ ವರ್ಣಬಾಹ್ಯೋಽಪಿ ಪುನಾತಿ ಭುವನತ್ರಯಂ ॥ ೫೨ ॥

---

೪೮. ಶ್ರೌತಸ್ಮಾರ್ತಕರ್ಮಗಳ ಕರ್ಮಸಿದ್ಧಿಗೋಸ್ಕರವೂ ಮಂತ್ರಸಿದ್ಧಿಗೋಸ್ಕರವೂ ಹರಿಯ ಪೂಜೆಯಲ್ಲಿ ಅಧಿಕಾರ ಸಿಕ್ಕುವುದಕ್ಕೂ ಚಕ್ರವನ್ನು ಕ್ರಮವಾಗಿ ಧರಿಸಿಕೊಳ್ಳಬೇಕು.

೪೯–೫೧. ವೈಷ್ಣವತನವು ಸಿದ್ಧಿಸುವುದಕ್ಕೂ ಜ್ಞಾನಸಿದ್ಧಗೋಸ್ಕರಲೂ ಹೋಮಾದಿಗಳನ್ನು ಅಗ್ನಿಯಲ್ಲಿ ಮಾಡಿ ಅದರಲ್ಲಿ ಶಂಖಚಕ್ರಗಳನ್ನು ಕಾಯಿಸಿ ಬಾಹುಮೂಲದಲ್ಲಿ ಅಂಕನಮಾಡಿಸಿಕೊಳ್ಳಬೇಕು. ಬ್ರಾಹ್ಮಣನಾದವನು ಹರಿಲಕ್ಷಣದಿಂದ ಹೊರತಾದ ಯಾವ ಗುರುತಿನಿಂದಲೂ ತನ್ನ ದೇಹವನ್ನು ಸುಡಿಸಿಕೊಳ್ಳಬಾರದು. ಶಂಖಚಕ್ರ ಗದೆ ಖಡ್ಗ ಶ್ಯಾಂರ್ಗ ಇವುಗಳ ಹೊರತಾಗಿ ಹರಿಯು ಇಟ್ಟುಕೊಂಡಿರುವ ಮತ್ತಾವ ಗುರುತಿನಿಂದಲೂ ಕೂಡಾ ದೇಹವನ್ನು ಸುಡಿಸಬಾರದು. ಮಿಕ್ಕವುಗಳಿಂದ ಸುಡಿಸಿಕೊಂಡರೆ ಯಾವ ಕೆಲಸಕ್ಕೂ ಯೋಗ್ಯನಾಗುವುದಿಲ್ಲ. ಚಕ್ರಧಾರಣೆ ಮಾಡಿಕೊಳ್ಳದ ವಿಪ್ರನನ್ನು ದೂರದಲ್ಲಿ ಬಿಡಬೇಕು.

೫೨. ವೈಷ್ಣವನಲ್ಲದ ಅಂಕನ ಮಾಡಿಸಿಕೊಳ್ಳದ ಬ್ರಾಹ್ಮಣನನ್ನು ಕೀಳು ಜಾತಿಯವನು ಮಾಡಿದ ಅಡಿಗೆಯಂತೆ ನೋಡಲೇಬಾರದು. ವೈಷ್ಣವನಾದವನು ಕೀಳುಜಾತಿಯವನಾದರೂ ಕೂಡ ಮೂರು ಲೋಕವನ್ನೂ ಪವಿತ್ರವನ್ನಾಗಿ ಮಾಡುತ್ತಾನೆ.

ತಸ್ಮಾತ್ತು ವಿಧಿನಾ ಚಕ್ರಂ ಧಾರ್ಯಂ ವಿಪ್ರೈಃ ಶುಭಾನನೇ ।
ಬ್ರಾಹ್ಮಣಾ ಮಂತ್ರಸಿದ್ಧ್ಯೈ ಚ ಜ್ಞಾನಸಿದ್ಧ್ಯೈ ಚ ಮುಕ್ತಯೇ ॥ ೫೩ ॥

ಅಪ್ರಾಕೃತಾ ಮಹಾತ್ಮಾನೋ ವಿಷ್ಣುಚಕ್ರೇಣ ಲಾಂಛಿತಾಃ ।
ವಿಷ್ಣುಚಕ್ರವಿಹೀನಾಸ್ತು ಬ್ರಾಹ್ಮಣಾಃ ಪ್ರಾಕೃತಾಃ ಸ್ಮೃತಾಃ ॥ ೫೪ ॥

ಸರ್ವಾಶ್ರಮೇಷು ವಸತಾಂ ಬ್ರಾಹ್ಮಣಾನಾಂ ವಿಶೇಷತಃ ।
ವಿಧಿನಾ ವೈಷ್ಣವಂ ಚಕ್ರಂ ಧಾರ್ಯಂ ಹಿ ಶ್ರುತಿನೋದನಾತ್ ॥ ೫೫ ॥

ದಕ್ಷಿಣೇ ತು ಭುಜೇ ವಿಪ್ರೋ ಬಿಭೃಯಾಚ್ಚ ಸುದರ್ಶನಂ ।
ವಾಮೇ ತು ಶಂಖಂ ಬಿಭೃಯಾದಿತಿ ಬ್ರಹ್ಮವಿದೋ ವಿದುಃ ॥ ೫೬ ॥

ಏವಂ ಮಹೋಪನಿಷದಿ ಪ್ರೋಕ್ತಂ ಚಕ್ರಾದಿಧಾರಣಂ ।
ತಥೈವ ಸಾಮ್ನಿ ಯಜುಷಿ ಋಷಿಪ್ರೋಕ್ತಂ ವರಾನನೇ ॥ ೫೭ ॥

---

೫೩. ಬ್ರಾಹ್ಮಣರಾದವರು ಮಂತ್ರಸಿದ್ಧಿಗೋಸ್ಕರಲೂ ಜ್ಞಾನಸಿದ್ಧಿಗೋಸ್ಕರಲೂ ಮುಕ್ತಿಗೋಸ್ಕರವೂ ಕೂಡಾ ಶಾಸ್ತ್ರರೀತಿಯಿಂದ ಚಕ್ರಧಾರಣೆಯನ್ನು ಮಾಡಿಸಿಕೊಳ್ಳಬೇಕು.

೫೪. ವಿಷ್ಣುಚಕ್ರವನ್ನು ಧರಿಸಿರುವವರು ಅಪ್ರಾಕೃತರಾದ ಮಹಿಮರು. ವಿಷ್ಣುಚಕ್ರವನ್ನು ಧರಿಸದವರು ಪ್ರಾಕೃತರಾದ ಬ್ರಾಹ್ಮಣರೆಂದು ತಿಳಿ.

೫೫. ಎಲ್ಲಾ ಆಶ್ರಮದಲ್ಲಿ ಇರುವವರೂ ಅದರಲ್ಲಿಯೂ ಬ್ರಾಹ್ಮಣರಾದವರು ವಿಧಿಯಂತೆ ವಿಷ್ಣುಚಕ್ರವನ್ನು ಧರಿಸಬೇಕೆಂದು ಶ್ರುತಿಯೇ ಹೇಳಿದೆ.

೫೬. ಬ್ರಾಹ್ಮಣನಾದವನು ಬಲಭುಜದಲ್ಲಿ ಚಕ್ರವನ್ನು ಧರಿಸಬೇಕು. ಎಡಭುಜದಲ್ಲಿ ಶಂಖವನ್ನು ಧರಿಸಬೇಕು. ಎಂದು ಬ್ರಹ್ಮವಾದಿಗಳು ಹೇಳುತ್ತಾರೆ.

೫೭-೫೮. ಉತ್ತಮವಾದ ಉಪನಿಷತ್ತುಗಳಲ್ಲಿಯೂ ಚಕ್ರಾದಿಧಾರಣವನ್ನು ಹೇಳಿದ್ದಾರೆ. ಅಂತೆಯೇ ಸಾಮವೇದ ಯಜುರ್ವೇದಗಳಲ್ಲಿಯೂ ಚಕ್ರಾದಿ

ಅತಪ್ತತನೂರ್ನ ತದಾಮೋ ಅಶ್ನುತೇ
ಶೃತಾಸ ಇದ್ವಹನ್ತ ಸ್ತ್ರತ್ಸಮಾಶತೇತಿ ।
ಆಪಸ್ತಂಬಶಾಖಾಯಾಂ—ಚರಣಂ ಪವಿತ್ರಂ
ವಿತತಂ ಪುರಾಣಂ ವಾಙ್ಮಯಂ ಶುಭಂ ॥ ೫೮ ॥

ತೇನ ಚಕ್ರೇಣ ಸಂತಪ್ತಾಃ ತರೇಯುಃ ಪಾತಕಾಂಬುಧಿಂ ।
ಪವಿತ್ರಂ ವಿಷ್ಣುಚಕ್ರಂ ತಜ್ಜಗದ್ವ್ಯಾಪ್ಯಂ ಹರೇಸ್ಸದಾ ॥ ೫೯ ॥

ತೇನ ತಪ್ತಾ ತನುರ್ಯೇಷಾಂ ತೇ ಯಾನ್ತಿ ಪರಮಂ ಪದಂ ।
ಪವಿತ್ರಂ ಚರಣಂ ನೇಮಿಃ ಹರೇಶ್ಚಕ್ರಂ ಸುದರ್ಶನಂ ॥ ೬೦ ॥

ಸಹಸ್ರಾರಂ ಪ್ರಾಕೃತಘ್ನಂ ಲೋಕದ್ವಾರಂ ಮಹೌಜಸಂ ।
ನಾಮಾನಿ ವಿಷ್ಣುಚಕ್ರಸ್ಯ ಪರ್ಯಾಯೇಣ ನಿಬೋಧ ಮೇ ॥ ೬೧ ॥

---

ಧಾರಣವನ್ನು ಹೇಳಿದ್ದಾರೆ. ಶಂಖಚಕ್ರಗಳಿಂದ ಸುಡಿಸಿಕೊಳ್ಳದಿರುವ ದೇಹವುಳ್ಳವನು ಆ ಸ್ವಾಮಿಯ ಲೋಕವನ್ನು ಹೊಂದುವುದಿಲ್ಲ. ಈ ಶಂಖಚಕ್ರಗಳಿಂದ ಸುಡಿಸಿಕೊಂಡವನು ಆ ಸ್ವಾಮಿಯ ಲೋಕವನ್ನು ಹೊಂದಿ ಅವನೊಡನೆ ಅನೇಕ ಕಾಲವಿರುತ್ತಾನೆ. ಆಪಸ್ತಂಬರು ತಮ್ಮ ಸೂತ್ರದಲ್ಲಿ ಇಂತೆಂದು ಹೇಳಿರುವರು:—ಆ ಶಂಖಚಕ್ರಗಳಿಂದ ಅಂಕನಮಾಡಿಸಿಕೊಂಡವರ ಚರಣ ಪವಿತ್ರವಾದುದು. ಬಹುಕಾಲದ್ದು. ಅವರ ವಾಕ್ಯವು ಶುಭವಾದುದು. (ಚಕ್ರವು ಪವಿತ್ರವಾದುದು. ದೊಡ್ಡದು. ಬಹುಕಾಲದ್ದು. ವೇದದಲ್ಲಿ ಸಾರಲ್ಪಟ್ಟದು. ಶುಭವಾದದ್ದು.)

೫೯. ಆ ವಿಷ್ಣುಚಕ್ರದಿಂದ ಸುಡಿಸಿಕೊಂಡಿರುವವರು ಪಾಪವೆಂಬ ಸಮುದ್ರವನ್ನು ದಾಟುತ್ತಾರೆ. ಆ ವಿಷ್ಣುಚಕ್ರವು ಪವಿತ್ರವಾದುದು. ಜಗತ್ತನ್ನೇ ವ್ಯಾಪಿಸಿರುವುದು.

೬೦–೬೧. ಆ ವಿಷ್ಣುಚಕ್ರದಿಂದ ಸುಡಿಸಿಕೊಂಡ ದೇಹವುಳ್ಳವರು ಪರಮಪದವನ್ನು ಹೊಂದುತ್ತಾರೆ. ಹರಿಯ ಚರಣವು ಪವಿತ್ರವಾದುದು. ಚಕ್ರವು ನೋಡುವುದಕ್ಕೂ ಚೆನ್ನಾಗಿರುತ್ತದೆ. ಸಾವಿರಹಾರೆ ಕಾಲುಗಳಿರುತ್ತವೆ. ಪ್ರಾಕೃತತನವನ್ನು ನಾಶಮಾಡುತ್ತದೆ. ಪರಲೋಕಕ್ಕೆ ಬಾಗಿಲಿನಂತಿರುವುದು. ಮಹಾತೇಜಸ್ಸುಳ್ಳದು. ವಿಷ್ಣುಚಕ್ರದ ನಾಮಗಳನ್ನು ಹೇಳುತ್ತೇನೆ ಕೇಳು.

ಶುದ್ಧೇನ ವಹ್ನಿತಪ್ತೇನ ಬ್ರಹ್ಮ ತೇನ ಪುನೀಹಿ ನಃ ।
ಯತ್ತೇ ಪವಿತ್ರಮರ್ಚಿವದಗ್ನೇ ತೇನ ಪುನೀಹಿ ನಃ ॥ ೬೨ ॥

ಯೇನ ದೇವಾಃ ಪವಿತ್ರೇಣ ಆತ್ಮಾನಂ ಪುನತೇ ಸದಾ ।
ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಸ್ತು ಮಾಂ ॥ ೬೩ ॥

ಪ್ರಜಾಪತ್ಯಂ ಪವಿತ್ರಂ ತಚ್ಛತೋದ್ಯಾಮಂ ಹಿರಣ್ಮಯಂ ।
ವಯಂ ಬ್ರಹ್ಮವಿದಸ್ತೇನ ಪೂತಂ ಬ್ರಹ್ಮ ಪುನೀಮಹೇ ॥ ೬೪ ॥

ಸನೇಮಿಚಕ್ರಂ ಸತತಂ ಚಾಕ್ಷರಸ್ಯ ಮಹಾತ್ಮನಃ ।
ತಸ್ಮಿನ್ ಚಕ್ರವೃತೇ ದೇಹೇ ಮಹೋಽಸ್ನತಿಪದಂ ಯಯೌ ॥ ೬೫ ॥

---

೬೨. ಎಲೈ ಬ್ರಹ್ಮನೆ! ಶುದ್ಧವಾದ, ಬೆಂಕಿಯಿಂದ ಕಾದಿರುವ ಆ ಚಕ್ರದಿಂದ ನನ್ನನ್ನು ಪವಿತ್ರನನ್ನಾಗಿ ಮಾಡು. ನಿನ್ನ ಪಕತ್ರವಾದ ಕಾಂತಿಯಿಂದ ಕೂಡಿದ ತೇಜಸ್ಸಿನಿಂದ ಎಲೈ ಅಗ್ನಿಯೆ! ನಮ್ಮನ್ನು ಪವಿತ್ರನನ್ನಾಗಿ ಮಾಡು.

೬೩. ದೇವತೆಗಳು ಯಾವುದರಿಂದ ತಮ್ಮನ್ನು ಯಾವಾಗಲೂ ಪವಿತ್ರವಾದುದನ್ನಾಗಿ ಮಾಡಿಕೊಳ್ಳುವರೋ ಅಂತಹ ಸಹಸ್ರಧಾರೆಗಳುಳ್ಳ ಚಕ್ರದಿಂದ ನನ್ನನ್ನು ಪವಿತ್ರವನ್ನಾಗಿ ಮಾಡಲಿ.

೬೪. ಪವಿತ್ರವಾದ ಆ ಪ್ರಾಜಾಪತ್ಯ ದೇವರ ಸಂಬಂಧವಾದ ಆ ಚಕ್ರವು ನೂರು ಮಾರುಗಳ ಎತ್ತರವಾಗಿರುವುದು. ಸುವರ್ಣದಿಂದ ನಿರ್ಮಿತವಾದುದು. ನಾವು ಬ್ರಹ್ಮನನ್ನು ತಿಳಿದವರಾಗಿದ್ದೇವೆ. ಆ ಬ್ರಹ್ಮವು ಬಹು ಪವಿತ್ರವಾದುದು. ಈ ಕಾರಣದಿಂದ ನಾವು ಪವಿತ್ರರಾಗುತ್ತೇವೆ.

೬೫. ನಾಶರಹಿತನಾದ ಆ ಮಹಾತ್ಮನಾದ ವಿಷ್ಣುವಿನ ಚಕ್ರವು ಗುಂಬ, ಹಾರೆ, ಕಾಲು ಇವುಗಳಿಂದ ಕೂಡಿದೆ. ಆ ಚಕ್ರದಿಂದ ದೇಹದಲ್ಲಿ ಸುಡಿಸಿಕೊಂಡರೆ ಮೋಕ್ಷವನ್ನು ಹೊಂದುತ್ತಾರೆ.

ಏವಂ ಯಜುಶ್ಶ್ರುತಯಸ್ಸರ್ವಾಃ ಕಥಯನ್ತಿ ವರಾನನೇ ।
ತಥೈವ ಸೇತಿಹಾಸೇಷು ಪುರಾಣೇಷ್ವಪಿ ವಕ್ಷ್ಯತಿ　　|| ೬೬ ||

ತಸ್ಮಾದ್ವೈ ವಿಧಿವದ್ಧಾರ್ಯಾಃ ಶಂಖಚಕ್ರಾದಿಹೇತಯಃ ।
ಬ್ರಾಹ್ಮಣಾನಾಂ ವಿಶೇಷೇಣ ವೈಷ್ಣವಾನಾಂ ವಿಶೇಷತಃ　　|| ೬೭ ||

ಧೃತೋರ್ಧ್ವಪುಂಡ್ರೋ ಹೃದಿ ಚಕ್ರಧಾರೀ
ವಿಷ್ಣುಂ ಪರಂ ಧ್ಯಾಯತಿ ಯೋ ಮಹಾತ್ಮಾ ।
ವರೇಣ ಮಂತ್ರೇಣ ಸದಾ ಹೃದಿಸ್ಥಂ
ಪರಾತ್ಪರಂ ಯಾತಿ ವಿಶುದ್ಧಚೇತಾಃ　　|| ೬೮ ||

ಯೇ ಕಂಠಲಗ್ನತುಲಸೀನಳಿನಾಕ್ಷಮಾಲಾ
ಯೇ ಬಾಹುಮೂಲಪರಿಚಿಹ್ನಿತಶಂಖಚಕ್ರಾಃ ।
ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಃ
ತೇ ವೈಷ್ಣವಾ ಭುವನಮಾಶು ಪವಿತ್ರಯಂತಿ　　|| ೬೯ ||

---

೬೬. ಎಲೈ ವರಾನನೆಯೆ! ಹೀಗೆ ಶ್ರುತಿಗಳು ಹೇಳುತ್ತವೆ. ಇದು ಇತಿಹಾಸಗಳಲ್ಲಿಯೂ ಪುರಾಣಗಳಲ್ಲಿಯೂ ಹೀಗೆಯೇ ಹೊಗಳಲ್ಪಡುತ್ತದೆ.

೬೭ ಆದ್ದರಿಂದ ಶಂಖಚಕ್ರಾದಿ ಆಯುಧಗಳನ್ನು ಕಾಯಿಸಿಕೊಂಡು ಧರಿಸಿಕೊಳ್ಳಬೇಕು. ಬ್ರಾಹ್ಮಣರಾದವರು ಬಿಡದೇ ಧರಿಸಿಬೇಕು ವೈಷ್ಣವರಂತೂ ಉದಾಸೀನಮಾಡದೇ ಧರಿಸಬೇಕು.

೬೮. ಊರ್ಧ್ವಪುಂಡ್ರವನ್ನು ಹಚ್ಚಿಕೊಂಡು ಚಕ್ರವನ್ನು ಭುಜದಲ್ಲಿ ಧರಿಸಿಕೊಂಡು ಹೃದಯದಲ್ಲಿ ಯಾವನು ವಿಷ್ಣುವನ್ನು ಧ್ಯಾನಿಸುವನೋ ಮತ್ತು ಉತ್ತಮವಾದ ಮಂತ್ರದಿಂದ ಪುನಶ್ಚರಣೆ ಮಾಡುತ್ತಿರುವನೋ ಅವನು ಶುದ್ಧಭಾವವುಳ್ಳವನಾಗಿ ವೈಕುಂಠವನ್ನು ಹೊಂದುತ್ತಾನೆ

೬೯. ಯಾರು ಕುತ್ತಿಗೆಯಲ್ಲಿ ತುಲಸೀಮಣಿಯನ್ನೂ, ಅಕ್ಷರಮಾಲೆಯನ್ನೂ ಹಾಕಿಕೊಂಡು ಭುಜದಲ್ಲಿ ಶಂಖಚಕ್ರಗಳನ್ನೂ ಹಾಕಿಸಿಕೊಂಡಿರುವರೋ ಯಾರು ಹಣೆಯಲ್ಲಿಯೂ ಊರ್ಧ್ವಪುಂಡ್ರಗಳನ್ನು ಇಟ್ಟುಕೊಂಡಿರುವರೋ ಅವರೇ ವೈಷ್ಣವರು. ಅವರೇ ಮೂರುಲೋಕಗಳನ್ನೂ ಪವಿತ್ರವನ್ನಾಗಿ ಮಾಡುತ್ತಾರೆ.

ದಿವಸ್ಪತೇಃ ಸುವಿತತಂ ಪವಿತ್ರಂ ಯತ್ರ ದಕ್ಷಿಣೇ ।
ನ ತಪ್ಯತೇ ಭುಜೇ ಸಮ್ಯಕ್ತಸ್ಯ ಶೋಚಂತಿ ಹಿ ಕ್ರಿಯಾಃ ॥ ೭೦ ॥

ಯೇ ವಹಂತಿ ಭುಜೇ ಚಕ್ರಂ ಶಂಖಂ ಚ ವಿಧಿನಾ ದ್ವಿಜಾಃ ।
ಪರಾನಪಿ ವಿಲೋಮಸ್ಥಾ ತೇ ರಕ್ಷಂತಿ ಜನಾಃ ಸದಾ ॥ ೭೧ ॥

ಹೋಮಾಗ್ನಿಸಂತಪ್ತ ಪವಿತ್ರಲಾಂಛಿತೋ
ಮೂಲೇ ಚ ಬಾಹ್ವೋಃ ಪರಮಾತ್ಮನೋ ಹರೇಃ ।
ಸ ತಾರಯಿತ್ವಾ ಭವಸಾಗರಂ ಮಹತ್
ಪರಂ ಪದಂ ಯಾತಿ ಪರೇಶಲೋಕಂ ॥ ೭೨ ॥

ಅಂಕಯೇತ್ತಪ್ತಚಕ್ರಾದ್ಯೈರಾತ್ಮನೋ ಬಾಹುಮೂಲಯೋಃ ।
ಕಳತ್ರಾಪತ್ಯಭೃತ್ಯೇಷು ಪಶ್ವಾದಿಶು ಚ ಅಂಕಯೇತ್ ॥ ೭೩ ॥

---

೭೦. ವೈಕುಂಠಕ್ಕೆ ಒಡೆಯನಾದ ಆ ಸ್ವಾಮಿಯಾದ ವಿಷ್ಣುವಿನ ಪವಿತ್ರವಾದ ಶಂಖಚಕ್ರಗಳು ಯಾವನ ಬಲಭುಜದಲ್ಲಿ ತಪ್ತಾಂಕನವಾಗಿರುವುದಿಲ್ಲವೋ ಅವನು ಮಾಡಿದ ಕ್ರಿಯಗಳೆಲ್ಲವೂ ನಮಗೆ ಸಾರ್ಥಕ್ಯ ಬರಲಿಲ್ಲವಲ್ಲ ಎಂದು ದುಃಖಿಸುತ್ತವೆ.

೭೧. ಯಾವ ದ್ವಿಜರಾದವರು ಶಾಸ್ತ್ರದಲ್ಲಿ ಹೇಳಿರುವ ರೀತಿಯಾಗಿ ಶಂಖಚಕ್ರಗಳನ್ನು ಧಾರಣೆಮಾಡಿಕೊಂಡಿರುತ್ತಾರೆಯೋ ಅಂತಹವರು ಕೀಳುಜಾತಿಯವರನ್ನೂ ಜಾತಿಗೆಟ್ಟವರನ್ನೂ ಯಾವಾಗಲೂ ಪುನೀತರನ್ನಾಗಿ ಮಾಡುತ್ತಾರೆ.

೭೨. ಪರಮಾತ್ಮನಾದ ಹರಿಯ ಪವಿತ್ರವಾದ ಶಂಖಚಕ್ರಗಳನ್ನು ಹೋಮದ ಅಗ್ನಿಯಲ್ಲಿ ಕಾಯಿಸಿ ತೋಳುಗಳ ಬುಡದಲ್ಲಿ ಸುಡಿಸಿ ಗುರುತುಮಾಡಿಸಿಕೊಂಡರೆ ಅಂತಹವನು ತಾನೂ ಈ ಸಂಸಾರದ ಸಮುದ್ರದಿಂದ ಪಾರಾಗಿ ಇತರರನ್ನೂ ಪಾರುಮಾಡಿ ಆ ಪರಮಾತ್ಮನ ಲೋಕವಾದ ಪರಮಪದವಾದ ವೈಕುಂಠವನ್ನು ಹೊಂದುತ್ತಾನೆ.

೭೩. ಯಜಮಾನನಾದವನು ತನ್ನ ತೋಳುಗಳಮೇಲೆ ಶಂಖಚಕ್ರಗಳನ್ನೇ ಕಾಯಿಸಿ ಅದರಿಂದ ಸುಡಿಸಿ ಧಾರಣೆಮಾಡಿಸಿಕೊಳ್ಳುವುದಲ್ಲದೆ ತನ್ನ ಹೆಂಡತಿ ಮಕ್ಕಳು ಆಳುಗಳು ಪಶು ಮುಂತಾದುವು ಎಲ್ಲಕ್ಕೂ ಸುಡಿಸಿ ಧಾರಣೆ ಮಾಡಿಸಬೇಕು.

ದ್ವಿವಿಧಂ ವೈಷ್ಣವಂ ಪ್ರೋಕ್ತಂ ಬಾಹ್ಯಮಾಭ್ಯಂತರಂ ತಥಾ |
ಶಂಖಚಕ್ರಾದಿಭಿರ್ಬಾಹ್ಯಮಾನ್ತರಂ ವೀತರಾಗತಾ || ೭೪ ||

ಬಾಹ್ಯಾಭ್ಯಂತರಸಾಮ್ಯಂ ಯತ್ತದ್ವೈಷ್ಣವಮುದಾಹೃತಂ |
ತಸ್ಮಾಚ್ಚಕ್ರಾದಿಚಿಹ್ನಂ ತು ಪ್ರಥಮಂ ವೈಷ್ಣವಂ ಸ್ಮೃತಂ || ೭೫ ||

ಅನ್ತರಂ ಮಾನರೋಷಾದಿವಿಮುಕ್ತಂ ಸ್ವಾತ್ಮದರ್ಶನಂ |
ಸರ್ವಭೂತದಯಾಶಾಂತಿರಿಂದ್ರಿಯಾರ್ಥೇತ್ವಲೋಲತಾ || ೭೬ ||

ಪುತ್ರದಾರಾದ್ಯಸಂಗತ್ವಂ ಯೋಗಾಭ್ಯಾಸರತಿಸ್ತಥಾ |
ಅನನ್ಯಭಕ್ತಿಯೋಗೇನ ಪರೇಶಸ್ಯಾಭಿಷೇವಣಂ || ೭೭ ||

---

೭೪. ವಿಷ್ಣುಭಕ್ತಿಯೆಂಬುದು ಒಳಗಿನದು ಹೊರಗಿನದು ಎಂಬುದಾಗಿ ಎರಡು ಬಗೆಯಾಗಿರುವುದು. ಶಂಖಚಕ್ರಗಳಿಂದ ಮುದ್ರಾಧಾರಣೆ ಮಾಡಿಸಿಕೊಳ್ಳುವುದಕ್ಕೆ ಬಾಹ್ಯ (ಹೊರಗಿನದು) ಎಂದೂ ವೈರಾಗ್ಯವನ್ನು ಹೊಂದುವಿಕೆಯು ಅಂತರ (ಒಳಗಿನದು) ಎಂದೂ ಎನ್ನಿಸಿಕೊಳ್ಳುತ್ತದೆ.

೭೫. ವಿಷ್ಣುಭಕ್ತಿಯಲ್ಲಿ ಆಂತರಿಕವಾದ ವೈರಾಗ್ಯವು ಎಷ್ಟು ಮುಖ್ಯವಾದುದೋ ಬಾಹ್ಯವಾದುದೂ ಅಷ್ಟೇ ಮುಖ್ಯವಾದುದು. ಆದ್ದರಿಂದಲೇ ಶಂಖಚಕ್ರದ ಚಿಹ್ನೆಗಳ ಧಾರಣೆಯು ಹೊರಗೆ ಚೆನ್ನಾಗಿ ತಿಳಿಯಬರುವುದರಿಂದ ಅವೆರಡರೊಳಗೆ ಇದೇ ಮೊದಲನೆಯದೆಂದು ತಿಳಿಯಲ್ಪಟ್ಟಿದೆ.

೭೬-೭೭. ಅಹಂಕಾರ, ರೋಷ ಮುಂತಾದುವುಗಳನ್ನು ಬಿಡತಕ್ಕದ್ದು, ಆತ್ಮನನ್ನು ಧ್ಯಾನಿಸಿ ತಿಳಿದು ನೋಡತಕ್ಕದ್ದು, ಎಲ್ಲಾ ಪ್ರಾಣಿಗಳಲ್ಲಿಯೂ ದಯೆಯಿಡತಕ್ಕದ್ದು, ಶಾಂತಿಯನ್ನು ಹೊಂದತಕ್ಕದ್ದು, ಇಂದ್ರಿಯಗಳ ಸೆಳೆತದಂತೆ ಹೋಗದೆ ಅವುಗಳಲ್ಲಿ ಆಸಕ್ತಿಯನ್ನು ಬಿಡತಕ್ಕದ್ದು, ಹೆಂಡರು ಮಕ್ಕಳಲ್ಲಿ ಅಂಟದಂತಿರುವುದು, ಯೋಗಾಭ್ಯಾಸದಲ್ಲಿ ಆಸಕ್ತನಾಗಿರುವುದು, ಮತ್ತೊಂದು ದೇವರಲ್ಲಿ ಭಕ್ತಿಯನ್ನು ಇಡದೆ ಆ ಪರಮಾತ್ಮನನ್ನೇ ಭಕ್ತಿಯಿಂದ ಸೇವಿಸುವುದು, ಎಂಬುದಾಗಿ ಆಂತರಿಕವು ಎಂಟು ಬಗೆಯಾಗಿರುವುದು.

ತಸ್ಮಾಚ್ಚಕ್ರಾದಿ ಹೇತೀನಾಮಂಕನಂ ವೈಷ್ಣವಂ ಸ್ಮೃತಂ ।
ಚಕ್ರಾದಿ ಚಿಹ್ನಹೀನತ್ವಾತ್ ವೈಷ್ಣವತ್ವಂ ನ ಲಭ್ಯತೇ ॥ ೭೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಮಾಘಮಾಹಾತ್ಮ್ಯೇ
ವಸಿಷ್ಠ ದಿಲೀಪ ಸಂವಾದೇ ಸುದರ್ಶನ ಮಾಹಾತ್ಮ್ಯಂ ನಾಮ
ದ್ವಿಪಂಚಾಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೮ ಬಾಹ್ಯವಾದ ಶಂಖಚಕ್ರಗಳ ಅಂಕನವು ಮುಖ್ಯವಾದುದು. ಇದೇ ವಿಷ್ಣುಭಕ್ತಿಯೆಂದು ಹೇಳಲ್ಪಟ್ಟಿದೆ. ಶಂಖಚಕ್ರಗಳ ಚಿಹ್ನೆಯಿಲ್ಲದಿದ್ದರೆ ಅವನು ವೈಷ್ಣವನೆಂದು ಎನ್ನಿಸಿಕೊಳ್ಳುವುದೇ ಇಲ್ಲ. ಅಂಕನವನ್ನು ಮಾಡಿಸಿಕೊಳ್ಳದಿದ್ದರೆ ಅಧಿಕಾರವು ಉಂಟಾಗುವುದೂ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ
ಸಂವಾದದ ಮಾಘ ಮಹಿಮೆಯಲ್ಲಿ ಸುದರ್ಶನ ಮಹಿಮೆ ಎಂಬ
ಇನ್ನೂರ ಐವತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ತ್ರಿಪಂಚಾಶದಧಿಕದ್ವಿಶತತಮೋಽಧ್ಯಾಯಃ ||



**|| ಶ್ರೀ ಶಂಕರ ಉವಾಚ ||**

**ಊರ್ಧ್ವಪುಂಡ್ರಸ್ಯ ಮಾಹಾತ್ಮ್ಯಂ ವಕ್ಷ್ಯಾಮಿ ಶುಭದರ್ಶನೇ ।**
**ಧಾರಣಾದೇವ ಮುಚ್ಯೇತ ಭವಬಂಧಾದ್ವಿಜೋತ್ತಮಃ || ೧ ||**

**ಊರ್ಧ್ವಪುಂಡ್ರಸ್ಯ ಮಧ್ಯೇ ತು ವಿಶಾಲೇ ಸುಮನೋಹರೇ ।**
**ಲಕ್ಷ್ಮ್ಯಾ ಸಾರ್ಧಂ ಸಮಾಸೀನೋ ದೇವದೇವೋ ಜನಾರ್ದನಃ || ೨ ||**

**ತಸ್ಮಾದ್ಯಸ್ಯ ಶರಿರೇ ತು ಊರ್ಧ್ವಪುಂಡ್ರೋ ಧೃತೋ ಭವೇತ್ ।**
**ತಸ್ಯ ದೇಹಂ ಭಗವತೋ ವಿಮಲಂ ಮಂದಿರಂ ಶುಭಂ || ೩ ||**

---

### ಇನ್ನೂರ ಐವತ್ತಮೂರನೆಯ ಅಧ್ಯಾಯವು



೧. ಶ್ರೀ ಶಂಕರನು ಹೇಳಿದನು-ಎಲೈ ಶುಭದರ್ಶನೆಯೆ! ಊರ್ಧ್ವ ಪುಂಡ್ರದ ಮಹಿಮೆಯನ್ನು ಹೇಳುತ್ತೇನೆ, ಕೇಳು. ಬ್ರಾಹ್ಮಣನಾದವನು ಆ ಊರ್ಧ್ವಪುಂಡ್ರದ ಧಾರಣದಿಂದಲೇ ಸಂಸಾರ ಬಂಧನದಿಂದ ಮುಕ್ತ ನಾಗುತ್ತಾನೆ.

೨. ಊರ್ಧ್ವಪುಂಡ್ರಗಳ ಮಧ್ಯದಲ್ಲಿರುವ ವಿಶಾಲವಾದ ಜಾಗದಲ್ಲಿ ದೇವ ದೇವನಾದ ಜನಾರ್ದನನು ಲಕ್ಷ್ಮಿಯೊಡನೆ ಕುಳಿತುಕೊಂಡಿರುವನು.

೩. ಆದ್ದರಿಂದ ಯಾವನು ಈ ಊರ್ಧ್ವಪುಂಡ್ರವನ್ನು ಧರಿಸಿರುವನೋ ಅವನ ದೇಹವು ದೇವರಿಗೆ ನಿರ್ಮಲವೂ ಶುಭವೂ ಆದ ಮನೆಯು.

**ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।**
**ಧಾರಯೇದೂರ್ಧ್ವಪುಂಡ್ರಂ ಯೋ ಮೃದಾ ಶುಭ್ರೇಣ ವೈಷ್ಣವಃ ॥ ೪ ॥**

**ಊರ್ಧ್ವಪುಂಡ್ರಧರೋ ವಿಪ್ರಃ ಸರ್ವಲೋಕೇಷು ಪೂಜಿತಃ ।**
**ವಿಮಾನವರಮಾರುಹ್ಯ ಯಾತಿ ವಿಷ್ಣೋಃ ಪರಂ ಪದಂ ॥ ೫ ॥**

**ಧಾರಯೇದೂರ್ಧ್ವಪುಂಡ್ರಂ ತು ತ್ರಿಸಂಧ್ಯಾಸು ದ್ವಿಜೋತ್ತಮಃ ।**
**ಸರ್ವಪಾಪವಿಶುದ್ಧ್ಯರ್ಥಮಿಷ್ಟಾಪೂರ್ತಫಲಾಪ್ತಯೇ ॥ ೬ ॥**

**ಊರ್ಧ್ವಪುಂಡ್ರಧರಂ ವಿಪ್ರಂ ದೃಷ್ಟ್ವಾ ಪಾಪೈಃ ಪ್ರಮುಚ್ಯತೇ ।**
**ನಮಸ್ಕೃತ್ಯಾಥ ವಾ ಭಕ್ತ್ಯಾ ಸರ್ವದಾನಫಲಂ ಲಭೇತ್ ॥ ೭ ॥**

**ಊರ್ಧ್ವಪುಂಡ್ರಧರಂ ವಿಪ್ರಂ ಯಃ ಶ್ರಾದ್ಧೇ ಭೋಜಯಿಷ್ಯತಿ ।**
**ಆಕಲ್ಪಕೋಟಿ ಪಿತರಃ ತಸ್ಯ ಹೃಷ್ಟಾ ನ ಸಂಶಯಃ ॥ ೮ ॥**

---

೪. ಯಾವ ವೈಷ್ಣವನು ಶುದ್ಧವಾದ ಮಣ್ಣಿನಿಂದ ಊರ್ಧ್ವಪುಂಡ್ರವನ್ನು ಧರಿಸುತ್ತಾನೆಯೋ ಅವನು ಸರ್ವತೀರ್ಥದಲ್ಲಿಯೂ ಸ್ನಾನಮಾಡಿದವನು. ಎಲ್ಲಾ ಯಜ್ಞಗಳನ್ನೂ ಮಾಡಿದವನು.

೫. ಊರ್ಧ್ವಪುಂಡ್ರವನ್ನು ಧರಿಸಿರುವ ಬ್ರಾಹ್ಮಣನು ಎಲ್ಲಾ ಜನಗಳಿಂದಲೂ ಪೂಜಿಸಲ್ಪಡುತ್ತಾನೆ. ಒಳ್ಳೆಯ ವಿಮಾನವನ್ನು ಹತ್ತಿ ವಿಷ್ಣುಪದವನ್ನು ಹೊಂದುವನು.

೬. ಯಾವನು ಮೂರು ಹೊತ್ತಿನಲ್ಲಿಯೂ ಊರ್ಧ್ವಪುಂಡ್ರಗಳನ್ನಿಟ್ಟುಕೊಳ್ಳುವನೋ ಅವನು ಎಲ್ಲಾ ಪಾಪಗಳನ್ನೂ ನಾಶಮಾಡಿಕೊಳ್ಳುತ್ತಾನೆ. ಅವನ ಇಷ್ಟಾರ್ಥಗಳು ಸಿದ್ಧಿಸುತ್ತವೆ.

೭. ಊರ್ಧ್ವಪುಂಡ್ರವನ್ನು ಧರಿಸಿರುವ ಮನುಷ್ಯನನ್ನು ನೋಡಿದರೆ ಪಾಪವೆಲ್ಲವೂ ಹೋಗುತ್ತವೆ. ಅವನಿಗೆ ಭಕ್ತಿಯಿಂದ ನಮಸ್ಕರಿಸಿದರೆ ಎಲ್ಲಾ ದಾನವನ್ನೂ ಕೊಟ್ಟ ಫಲವು ಬರುತ್ತದೆ.

೮. ಊರ್ಧ್ವಪುಂಡ್ರವನ್ನು ಧರಿಸಿರುವ ಬ್ರಾಹ್ಮಣನನ್ನು ಯಾವನು ಶ್ರಾದ್ಧದಲ್ಲಿ ಭೋಜನಮಾಡಿಸುವನೋ ಅವನ ಪಿತೃಗಳು ಕಲ್ಪಕೋಟಿಯವರೆಗೆ ಸಂತೋಷಗೊಳ್ಳುತ್ತಾರೆ. ಸಂಶಯವಿಲ್ಲ.

ಊರ್ಧ್ವಪುಂಡ್ರಧರೋ ಯಸ್ತು ಕುರ್ಯಾಚ್ಛ್ರಾದ್ಧಂ ಶುಭಾನನೇ ।
ಕಲ್ಪಕೋಟಿಸಹಸ್ರಾಣಿ ಗಯಾಶ್ರಾದ್ಧಫಲಂ ಲಭೇತ್ ॥ ೯ ॥

ಯಜ್ಞದಾನತಪಶ್ಚರ್ಯಾಜಪಹೋಮಾದಿಕಂ ಚ ಯತ್ ।
ಊರ್ಧ್ವಪುಂಡ್ರಧರಃ ಕುರ್ಯಾತ್ತಸ್ಯ ಪುಣ್ಯಮನಂತಕಂ ॥ ೧೦ ॥

ಊರ್ಧ್ವಪುಂಡ್ರವಿಹೀನಸ್ತು ಕಿಂಚಿತ್ಕರ್ಮ ಕರೋತಿ ಯಃ ।
ಇಷ್ಟಾಪೂರ್ತಾದಿಕಂ ಸರ್ವಂ ನಿಷ್ಫಲಂ ಸ್ಯಾನ್ನ ಸಂಶಯಃ ॥ ೧೧ ॥

ಯಚ್ಛರೀರಂ ಮನುಷ್ಯಾಣಾಮೂರ್ಧ್ವಪುಂಡ್ರವಿವರ್ಜಿತಂ ।
ದ್ರಷ್ಟವ್ಯಂ ನೈವ ತತ್ಕಿಂಚಿತ್ ಶ್ಮಶಾನಸದೃಶಂ ಭವೇತ್ ॥ ೧೨ ॥

ಊರ್ಧ್ವಪುಂಡ್ರವಿಹೀನಸ್ತು ಸಂಧ್ಯಾಕರ್ಮಾದಿಕಂ ಚರೇತ್ ।
ತತ್ಸರ್ವಂ ರಾಕ್ಷಸೈರ್ನೀತಂ ನರಕಂ ಚಾಧಿಗಚ್ಛತಿ ॥ ೧೩ ॥

---

೯. ಊರ್ಧ್ವಪುಂಡ್ರವನ್ನು ಧರಿಸಿಕೊಂಡು ಶ್ರಾದ್ಧವನ್ನು ಮಾಡಿದರೆ ಅದು ಸಾವಿರ ಕೋಟಿಕಲ್ಪಗಳವರೆಗೆ ಗಯಾಶ್ರಾದ್ಧದ ಫಲವನ್ನು ಕೊಡುತ್ತದೆ.

೧೦. ಊರ್ಧ್ವಪುಂಡ್ರವನ್ನು ಧರಿಸಿ ಯಜ್ಞ ದಾನ ತಪಸ್ಸು ಜಪ ಹೋಮ ಮುಂತಾದ ಯಾವುದನ್ನು ಮಾಡಿದರೂ ಅದರ ಫಲವು ಅನಂತ ವಾಗುತ್ತದೆ.

೧೧. ಊರ್ಧ್ವಪುಂಡ್ರವನ್ನು ಧರಿಸದೆ ಯಾವನು ಕರ್ಮಗಳನ್ನು ಮಾಡುವನೋ ಅವನ ಇಷ್ಟಗಳೆಲ್ಲವೂ ಫಲಹೀನವಾಗುತ್ತವೆ. ಸಂಶಯವಿಲ್ಲವು.

೧೨. ಊರ್ಧ್ವಪುಂಡ್ರದಿಂದ ವರ್ಜಿತನಾದ ಮನುಷ್ಯನ ದೇಹವನ್ನು ನೋಡಬಾರದು. ಅದು ಸ್ಮಶಾನಕ್ಕೆ ಸಮವು.

೧೩. ಊರ್ಧ್ವಪುಂಡ್ರವಿಲ್ಲದೆ ಯಾವನು ಸಂಧ್ಯಾವಂದನೆ ಮುಂತಾದುವನ್ನು ಮಾಡುವನೋ ಅವೆಲ್ಲವೂ ರಾಕ್ಷಸರಿಗೆ ಹೋಗುತ್ತವೆ. ಅಲ್ಲದೆ ಅವನು ನರಕಭಾಗಿಯಾಗುತ್ತಾನೆ.

ಊರ್ಧ್ವಪುಂಡ್ರಧರೋ ವಿಪ್ರೋ ಮೃದಾ ಶುಭ್ರೇಣ ವೈದಿಕಃ ।
ನ ತಿರ್ಯಗ್ಧಾರಯೇದ್ವಿದ್ವಾನಾಪದ್ಯಪಿ ಕದಾಚನ ॥ ೧೪ ॥

ವಿಪ್ರಾಣಾಮೂರ್ಧ್ವಪುಂಡ್ರಂ ಸ್ಯಾತ್ತಿಲಕಂ ತು ಮಹೀಭೃತಃ ।
ಪಟ್ಟಾಕಾರಂ ತು ವೈಶ್ಯಾನಾಂ ಶೂದ್ರಾಣಾಂ ತು ತ್ರಿಪುಂಡ್ರಕಂ ॥ ೧೫ ॥

ಊರ್ಧ್ವಪುಂಡ್ರಂ ಮೃದಾ ಕಾರ್ಯಂ ಕಸ್ತೂರ್ಯಾ ತಿಲಕಸ್ತಥಾ ।
ಪಟ್ಟಾಕಾರಂ ತು ಗಂಧೇನ ಭಸ್ಮನೈವ ತ್ರಿಪುಂಡ್ರಕಂ ॥ ೧೬ ॥

ಊರ್ಧ್ವಪುಂಡ್ರಂ ತು ಸರ್ವೇಷಾಂ ನ ನಿಷಿದ್ಧಂ ಕಥಂಚನ ।
ಧಾರಯೇತ್ ಕ್ಷತ್ರಿಯಾದ್ಯೋಽಪಿ ವಿಷ್ಣುಭಕ್ತೋ ಭವೇದ್ಯದಿ ॥ ೧೭ ॥

ವಿಪ್ರಾಣಾಂ ನೈವ ಧಾರ್ಯಂ ಸ್ಯಾತ್ತಿರ್ಯಕ್ಪುಂಡ್ರಾದಿಧಾರಿಣಾಂ ।
ನಾರಾಯಣಾತ್ಪರಬ್ರಹ್ಮಾದನ್ಯೇಷಾಮರ್ಚನಂ ನ ತು ॥ ೧೮ ॥

---

೧೪. ಶುಭ್ರವಾದ ಮಣ್ಣಿನಿಂದ ವೈದಿಕನಾದವನು ಊರ್ಧ್ವಪುಂಡ್ರವನ್ನು ಧರಿಸಬೇಕು. ಅದನ್ನು ಅಡ್ಡಲಾಗಿ ಧರಿಸಬಾರದು. ಆಪತ್ತಿನಲ್ಲಿಯೂ ಕೂಡಾ ಅಡ್ಡಲಾಗಿಡಬಾರದು.

೧೫. ಬ್ರಾಹ್ಮಣರು ಹಣೆಯಮೇಲಿನವರೆಗೂ ಪುಂಡ್ರವನ್ನು ಧರಿಸಬೇಕು. ಕ್ಷತ್ರಿಯರು ತಿಲಕವನ್ನಿಡಬೇಕು. ವೈಶ್ಯರು ಪಟ್ಟಿಯಾಗಿ ಮೇಲಿನವರೆಗೂ ಇಡಬೇಕು. ಶೂದ್ರರು ಮೇಲಿನವರೆಗೂ ಹಾಕದಂತೆ ಸ್ವಲ್ಪವೇ ಹಾಕಬೇಕು.

೧೬. ಊರ್ಧ್ವಪುಂಡ್ರವನ್ನು ಮಣ್ಣಿನಿಂದ ಇಟ್ಟುಕೊಳ್ಳಬೇಕು. ತಿಲಕವನ್ನು ಕಸ್ತೂರಿಯಿಂದ ಇಟ್ಟುಕೊಳ್ಳಬೇಕು. ಪಟ್ಟಾಕಾರವನ್ನು ಗಂಧದಿಂದ ಇಟ್ಟುಕೊಳ್ಳಬೇಕು. ಶೂದ್ರರು ತ್ರಿಪುಂಡ್ರಕವನ್ನು ಬೂದಿಯಿಂದ ಇಡಬೇಕು.

೧೭. ಊರ್ಧ್ವಪುಂಡ್ರವನ್ನು ಇಟ್ಟುಕೊಳ್ಳುವುದು ಯಾವಾಗಲೂ ಯಾರಿಗೂ ನಿಷೇಧವಾಗಿಲ್ಲ. ವಿಷ್ಣುಭಕ್ತರಾದ ಕ್ಷತ್ರಿಯರೂ ಕೂಡಾ ಅದನ್ನು ಧರಿಸಬಹುದು.

೧೮. ಬ್ರಾಹ್ಮಣರು ಅಡ್ಡಲಾಗಿ ಪುಂಡ್ರವನ್ನು ಧರಿಸಲೇಬಾರದು ಮತ್ತು ಪರಬ್ರಹ್ಮನಾದ ನಾರಾಯಣನನ್ನು ಹೊರತಾಗಿ ಮತ್ತೊಬ್ಬರನ್ನು ಪೂಜಿಸಲೇ ಕೂಡದು.

ಬ್ರಾಹ್ಮಣಃ ಕುಲಜೋ ವಿದ್ವಾನ್ ಭಸ್ಮಧಾರೀ ಭವೇದ್ಯದಿ |
ವರ್ಜಯೇತ್ತಾದೃಶಂ ದೇವಿ ಮದ್ಯೋಚ್ಛಿಷ್ಟಂ ಘಟಂ ಯಥಾ ॥ ೧೯ ॥

ತ್ರಿಪುಂಡ್ರಂ ಶೂದ್ರಕಲ್ಪಾನಾಂ ಶೂದ್ರಾಣಾಂ ಚ ವಿಧಿಂ ತಥಾ |
ತ್ರಿಪುಂಡ್ರಧಾರಣಾದ್ವಿಪ್ರಃ ಪತಿತಸ್ಸ್ಯಾನ್ನ ಸಂಶಯಃ ॥ ೨೦ ॥

ಏಕಾಂತಿನೋ ಮಹಾಭಾಗಾಃ ಸರ್ವಭೂತಹಿತೇ ರತಾಃ |
ಸಾಂತರಾಳಂ ಪ್ರಕುರ್ವಂತಿ ಪುಂಡ್ರಂ ಹರಿಪದಾಕೃತಿಂ ॥ ೨೧ ॥

ಹರೇಃ ಪದಾಕೃತಿ ಧಾರ್ಯಮೂರ್ಧ್ವ ಪುಂಡ್ರಂ ವಿಧಾನತಃ ।
ಮಧ್ಯಚ್ಛಿದ್ರೇಣ ಸಂಯುಕ್ತಂ ತದ್ಧಿ ವೈ ಮಂದಿರಂ ಹರೇಃ ॥ ೨೨ ॥

ಊರ್ಧ್ವಪುಂಡ್ರಮೃಜುಂ ಸೌಮ್ಯಂ ಸುಪಾರ್ಶ್ವಂ ಸುಮನೋಹರಂ |
ದಂಡಾಕಾರಂ ತು ಶೋಭಾಢ್ಯಂ ಮಧ್ಯೇ ಛಿದ್ರಂ ಪ್ರಕಲ್ಪಯೇತ್ ॥ ೨೩ ॥

---

೧೯. ಕುಲೀನನಾಗಿದ್ದರೂ ಬ್ರಾಹ್ಮಣನಾಗಿದ್ದರೂ ಅವನು ಭಸ್ಮವನ್ನು ಧರಿಸಿದರೆ ಅವನನ್ನು ಹೆಂಡದ ಗಡಿಗೆಯನ್ನು ದೂರದಲ್ಲಿ ಬಿಸಾಡುವಂತೆ ದೂರದಲ್ಲಿಯೇ ಬಿಡಬೇಕು.

೨೦. ಯಾವ ತ್ರಿಪುಂಡ್ರವನ್ನು ಶೂದ್ರರಿಗೂ ಶೂದ್ರರಂತಿರುವವರಿಗೂ ಹೇಳಿದ್ದೇವೆಯೋ ಅಂತಹ ತ್ರಿಪುಂಡ್ರವನ್ನು ವಿಪ್ರನು ಧರಿಸಿಕೊಂಡರೆ ಅವನು ಪತಿತನಾಗುತ್ತಾನೆ. ಸಂಶಯವಿಲ್ಲ.

೨೧. ಏಕಾಂತಿಗಳಾದ ಮಹಾತ್ಮರಾದ ಎಲ್ಲಾ ಪ್ರಾಣಿಗಳಿಗೂ ಹಿತವನ್ನು ಕೋರುವವರು ತ್ರಿಪುಂಡ್ರವನ್ನು ಮಧ್ಯದಲ್ಲಿ ಸ್ಥಳವನ್ನು ಬಿಟ್ಟು ವಿಷ್ಣುವಿನ ಪದದ ಆಕಾರವಾಗಿ ಧರಿಸಬೇಕು.

೨೨. ಊರ್ಧ್ವಪುಂಡ್ರವನ್ನು ಶಾಸ್ತ್ರದ ರೀತಿಯಲ್ಲಿ ಹರಿಯ ಪದದ ಆಕಾರವಾಗಿಡಬೇಕು. ಮಧ್ಯದಲ್ಲಿ ಛಿದ್ರಗಳಿರಬೇಕು. ಅದು ಹರಿಯು ಇರುವುದಕ್ಕೆ ಜಾಗವು.

೨೩. ಊರ್ಧ್ವಪುಂಡ್ರವು ನೇರವಾಗಿಯೂ ಸೌಮ್ಯವಾಗಿಯೂ ಪಾರ್ಶ್ವಗಳಲ್ಲಿ ಚನ್ನಾಗಿಯೂ ಮನೋಹರವಾಗಿಯೂ ದಂಡಾಕಾರವಾಗಿಯೂ ಕಾಂತಿಯುಳ್ಳದ್ದಾಗಿಯೂ ಮಧ್ಯದಲ್ಲಿ ಛಿದ್ರಾಕಾರವಾಗಿಯೂ ಇರಬೇಕು.

ತಸ್ಮಾಚ್ಛಿದ್ರಾನ್ವಿತಂ ಪುಂಡ್ರಂ ದಂಡಾಕಾರಂ ಸುಶೋಭನಂ |
ವಿಪ್ರಾಣಾಂ ಸತತಂ ಧಾರ್ಯಂ ಸ್ತ್ರೀಣಾಂ ಚ ಶುಭದರ್ಶನೇ ॥ ೨೪ ॥

ಊರ್ಧ್ವಪುಂಡ್ರಸ್ಯ ಮಧ್ಯೇ ತು ವಿಶಾಲೇ ಸುಮನೋಹರೇ |
ಸಾಂತರಾಳೇ ಸಮಾಸೀನೋ ಹರಿಸ್ತತ್ರ ಶ್ರಿಯಾ ಸಹ ॥ ೨೫ ॥

ನಿರಂತರಾಳಂ ಯಃ ಕುರ್ಯಾದೂರ್ಧ್ವಪುಂಡ್ರಂ ದ್ವಿಜಾಧಮಃ |
ಸ ಹಿ ತತ್ರ ಸ್ಥಿತಂ ಲಕ್ಷ್ಮ್ಯಾ ವಿಷ್ಣುಂ ಚೈವ ವ್ಯಪೋಹತಿ ॥ ೨೬ ॥

ಅಚ್ಛಿದ್ರಮೂರ್ಧ್ವಪುಂಡ್ರಂ ತು ಯೇ ಕುರ್ವಂತಿ ದ್ವಿಜಾಧಮಾಃ ।
ತೇಷಾಂ ಲಲಾಟೇ ಸತತಂ ಶುನಃ ಪದಂ ನ ಸಂಶಯಃ ॥ ೨೭ ॥

ತಸ್ಮಾಚ್ಛಿದ್ರಾನ್ವಿತಂ ಪುಂಡ್ರಂ ಮಹಚ್ಛಿದ್ರಂ ಶುಭಾನ್ವಿತಂ |
ಧಾರಯೇದ್ಬ್ರಾಹ್ಮಣೋ ನಿತ್ಯಂ ಹರಿಸಾಲೋಕ್ಯಸಿದ್ಧಯೇ ॥ ೨೮ ॥

---

೨೪. ಎಲೈ ಶುಭದರ್ಶನೆಯೆ! ಆದ್ದರಿಂದ ವಿಪ್ರರು ಛಿದ್ರದಿಂದ ಕೂಡಿದ ದಂಡಾಕಾರವೂ ಮನೋಹರವಾಗಿಯೂ ಇರುವ ಊರ್ಧ್ವಪುಂಡ್ರವನ್ನು ಧರಿಸಬೇಕು.

೨೫. ಊರ್ಧ್ವಪುಂಡ್ರದ ಮಧ್ಯದಲ್ಲಿ ವಿಶಾಲವಾದ ಮನೋಹರವಾದ ಸ್ಥಳದಲ್ಲಿ ಹರಿಯು ಲಕ್ಷ್ಮಿಯೊಡನೆ ಸುಖವಾಗಿ ಕುಳಿತುಕೊಳ್ಳುತ್ತಾನೆ.

೨೬. ಯಾವನು ಊರ್ಧ್ವಪುಂಡ್ರವನ್ನು ಜಾಗವನ್ನು ಬಿಡದೆ ಇಡುತ್ತಾನೆಯೋ ಅವನು ವಿಷ್ಣುವೂ ಲಕ್ಷ್ಮಿಯೂ ಕೂತುಕೊಳ್ಳದನ್ನೇ ಅಗಲಿಸುತ್ತಾನೆ.

೨೭. ಯಾವ ಬ್ರಾಹ್ಮಣಾಧಮನು ಊರ್ಧ್ವಪುಂಡ್ರವನ್ನು ಛಿದ್ರವಿಲ್ಲದಂತೆ ಮಾಡಿಕೊಳ್ಳುತ್ತಾನೆಯೋ ಅವನ ಹಣೆಯಲ್ಲಿ ನಾಯಿಯಕಾಲಿನ ಗುರುತಿದ್ದಂತೆ ಆಗುತ್ತದೆ.

೨೮. ಆದ್ದರಿಂದ ಪುಂಡ್ರವು ಛಿದ್ರದಿಂದ ಒಡಗೂಡಿರಬೇಕು. ದೊಡ್ಡದಾಗಿ ಛಿದ್ರಗಳಿದ್ದರೆ ಶುಭವಾಗಿರುವುದು. ಹೀಗೆ ಧರಿಸಿದರೆ ಬ್ರಾಹ್ಮಣನು ಹರಿಯ ಸಾಲೋಕ್ಯವನ್ನು ಹೊಂದುತ್ತಾನೆ.

ಆದಾಯ ಪರಯಾ ಭಕ್ತ್ಯಾ ವೈಕುಂಠಾಖ್ಯಹ್ರದಾನ್ಮೃದಂ ।
ಧಾರಯೇದೂರ್ಧ್ವಪುಂಡ್ರಾಣಿ ಹರಿಸಾಲೋಕ್ಯಸಿದ್ಧಯೇ ॥ ೨೯ ॥

ಶ್ರೀಕೃಷ್ಣತುಲಸೀಮೂಲೇ ಮೃದಮಾದಾಯ ಭಕ್ತಿಮಾನ್ ।
ಧಾರಯೇದೂರ್ಧ್ವಪುಂಡ್ರಾಣಿ ಹರಿಸ್ತತ್ರ ಪ್ರಸೀದತಿ ॥ ೩೦ ॥

ದ್ವಾರವತ್ಯಾಂ ಶುಭೇ ರಮ್ಯೇ ವಾಸುದೇವಹ್ರದೇ ತಥಾ ।
ತತ್ರೋದ್ಭವಾಂ ಮೃದಂ ಶುಭ್ರಾಮಾದಾಯ ದ್ವಿಜಸತ್ತಮಃ ॥ ೩೧ ॥

ಧಾರಯೇದೂರ್ಧ್ವಪುಂಡ್ರಾಣಿ ಸರ್ವಕಾಮಫಲಾಪ್ತಯೇ ।
ಆದಾಯ ಪರಯಾ ಭಕ್ತ್ಯಾ ಗಂಗಾತೀರೋದ್ಭವಾಂ ಮೃದಂ ॥ ೩೨ ॥

ತಯಾ ಧೃತೋರ್ಧ್ವಪುಂಡ್ರೇಣ ಸರ್ವಯಜ್ಞಫಲಂ ಲಭೇತ್ ।
ಚಂದನಂ ಚ ಹರಿದ್ರಾಂ ಚ ತಥಾ ಭಸ್ಮಾಗ್ನಿಹೋತ್ರಜಂ ॥ ೩೩ ॥

---

೨೯. ವೈಕುಂಠವೆಂಬ ಮಡುವಿನಿಂದ ಮಣ್ಣನ್ನು ತಂದು ಭಕ್ತಿಯಿಂದ ಊರ್ಧ್ವಪುಂಡ್ರವನ್ನು ಧರಿಸಿದರೆ ಹರಿಯ ಸಾಲೋಕ್ಯವು ಸಿಕ್ಕುತ್ತದೆ.

೩೦. ಶ್ರೀಕೃಷ್ಣತುಲಸಿಯ ಬುಡದಲ್ಲಿರುವ ಮಣ್ಣನ್ನು ಭಕ್ತಿಯಿಂದ ತಂದು ಊರ್ಧ್ವಪುಂಡ್ರವನ್ನಿಟ್ಟುಕೊಳ್ಳಬೇಕು. ಆಗ ಹರಿಯು ಪ್ರಸನ್ನನಾಗುತ್ತಾನೆ.

೩೧–೩೩. ದ್ವಾರಕೆಯಲ್ಲಿ ವಾಸುದೇವನ ಹ್ರದದಲ್ಲಿ ಇರುವ ಶುದ್ಧವಾದ ಮೃತ್ತಿಕೆಯನ್ನು ಬ್ರಾಹ್ಮಣನಾದವನು ತಂದು ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಹಾಗೆ ಮಾಡಿದರೆ ಎಲ್ಲಾ ಇಷ್ಟಗಳೂ ನೆರವೇರುತ್ತವೆ. ಗಂಗೆಯ ತೀರದಲ್ಲಿರುವ ಮೃತ್ತಿಕೆಯನ್ನು ಬಹುಭಕ್ತಿಯಿಂದ ತಂದು ಅದರಿಂದ ಊರ್ಧ್ವಪುಂಡ್ರವನ್ನು ಹಚ್ಚಿಕೊಂಡರೆ ಎಲ್ಲಾ ಯಜ್ಞಗಳ ಫಲವೂ ಬರುತ್ತದೆ. ಆ ಮೃತ್ತಿಕೆಯ ಜೊತೆಗೆ ಚಂದನ, ಅರಿಶಿನ, ಅಗ್ನಿಹೋತ್ರಭಸ್ಮ ಇವನ್ನು ಹಾಕಿಕೊಂಡು ಧರಿಸಿಕೊಂಡರೆ ಎಲ್ಲವೂ ವಶವಾಗುತ್ತವೆಯೆಂದು ಹೇಳಿದ್ದಾರೆ. ಎಲ್ಲಿ

ಸರ್ವವಶ್ಯಕರಂ ಪ್ರೋಕ್ತಮೂರ್ಧ್ವಪುಂಡ್ರಸ್ಯ ಧಾರಣಾತ್ ।
ಯತ್ರ ದಿವ್ಯಂ ಹರಿಕ್ಷೇತ್ರಂ ತತ್ರೈವ ಮೃದಮಾಹರೇತ್ ॥ ೩೪ ॥

ಪರ್ವತಾಗ್ರೇ ನದೀತೀರೇ ಬಿಲ್ವಮೂಲೇ ಜಲಾಶಯೇ ।
ಸಿಂಧುತೀರೇ ಚ ವಲ್ಮೀಕೇ ಹರಿಕ್ಷೇತ್ರೇ ವಿಶೇಷತಃ ॥ ೩೫ ॥

ವಿಷ್ಣೋಃ ಸ್ನಾನೋದಕಂ ಯತ್ರ ಪ್ರವಾಹಯತಿ ನಿತ್ಯಶಃ ।
ಪುಂಡ್ರಾಣಾಂ ಧಾರಣಾರ್ಥಾಯ ಗೃಹ್ಣೀಯಾತ್ತತ್ರ ಮೃತ್ತಿಕಾಂ ॥ ೩೬ ॥

ಶ್ರೀರಂಗವೆಂಕಟಾದ್ರೌ ಚ ಶ್ರೀಕೂರ್ಮೇ ದ್ವಾರಕೇ ಶುಭೇ ।
ಪ್ರಯಾಗೇ ನಾರಸಿಂಹಾದ್ರೌ ವಾರಾಹೇ ತುಳಸೀವನೇ ॥ ೩೭ ॥

ಗೃಹೀತ್ವಾ ಮೃತ್ತಿಕಾಂ ಭಕ್ತ್ಯಾ ವಿಷ್ಣುಪಾದಜಲೈಸ್ಸಹ ।
ಧೃತ್ವಾ ಪುಂಡ್ರಾಣಿ ಚಾಂಗೇಷು ವಿಷ್ಣುಸಾಯುಜ್ಯಮಾಪ್ನುಯಾತ್ ॥೩೮॥

---

ಉತ್ತಮವಾದ ಹರಿಕ್ಷೇತ್ರವಿದೆಯೋ ಅಲ್ಲಿಯೇ ಮೃತ್ತಿಕೆಯನ್ನೂ ತರಬೇಕು. ಅದಾಗದಿದ್ದರೆ ಪರ್ವತದತುದಿ, ನದಿಯ ದಡ, ಬಿಲ್ವಪತ್ರೆಯ ಮರದಬುಡ, ನೀರಿರುವ ಕೆರೆಗಳು, ಸಮುದ್ರತೀರ, ಹುತ್ತ–ಇವುಗಳಲ್ಲಿ ತರಬೇಕು. ಹರಿಕ್ಷೇತ್ರ ವಾಗಿದ್ದು ಅಲ್ಲಿ ಮೇಲೆ ಹೇಳಿರುವುಗಳಿದ್ದರೆ ಬಹು ವಿಶೇಷವು.

೩೬. ವಿಷ್ಣುವಿನ ಸ್ನಾನದನೀರು ಎಲ್ಲಿ ನಿತ್ಯವೂ ಹರಿಯುತ್ತದೆಯೋ ಅಲ್ಲಿ ಮೃತ್ತಿಕೆಯನ್ನು ತಂದುಕೊಂಡು ಪುಂಡ್ರಗಳನ್ನು ಧರಿಸಬೇಕು, ಎಂದರೆ ದೇವ ಸ್ಥಾನಗಳಲ್ಲಿ ದೇವರಿಗೆ ಸ್ನಾನಮಾಡಿಸಿದ ನೀರು ಹರಿಯುವ ಜಾಗದಲ್ಲಿ ಮಣ್ಣನ್ನು ತೆಗೆದುಕೊಳ್ಳಬೇಕೆಂದು ಅರ್ಥ.

೩೭-೩೮. ಶ್ರೀರಂಗ, ತಿರುಪತಿ, ಶ್ರೀಕೂರ್ಮ, ದ್ವಾರಕೆ, ಪ್ರಯಾಗ, ನರ ಸಿಂಹ ಪರ್ವತ, ವರಾಹ ಪರ್ವತ, ತುಲಸಿಯ ವನ,–ಇವುಗಳಲ್ಲಿ ಮೃತ್ತಿಕೆಯನ್ನು ಭಕ್ತಿಯಿಂದ ತಂದು ವಿಷ್ಣುವಿನ ಪಾದೋದಕವನ್ನು ಜೊತೆಗೆ ಹಾಕಿ ಚೆನ್ನಾಗಿ ಕಲಸಿ ಪುಂಡ್ರಗಳನ್ನು ಧರಿಸಿಕೊಂಡರೆ ವಿಷ್ಣುಸಾಯುಜ್ಯವು ಬರುತ್ತದೆ.

ಯಸ್ಮಿನ್ ಕಸ್ಮಿನ್ ಮಹಾಭಾಗೇ ವೈಷ್ಣವಾ ಧಾರಯನ್ತಿ ವೈ ।
ತಸ್ಮಿನ್ ವೈ ಮೃತ್ತಿಕಾ ಗ್ರಾಹ್ಯಾ ಊರ್ಧ್ವಪುಂಡ್ರಸ್ಯ ಧಾರಣೇ ॥ ೩೯ ॥

ಶ್ಯಾಮಂ ಶಾನ್ತಿಕರಂ ಪ್ರೋಕ್ತಂ ರಕ್ತಂ ವಶ್ಯಕರಂ ತಥಾ ।
ಶ್ರೀಕರಂ ಪೀತಮಿತ್ಯಾಹುಃ ಶ್ವೇತಂ ಮೋಕ್ಷಕರಂ ಶುಭಂ ॥ ೪೦ ॥

ವರ್ತುಲಂ ತಿರ್ಯಗಚ್ಛಿದ್ರಂ ಹ್ರಸ್ವಂ ದೀರ್ಘಂ ತತಂ ತನುಂ ।
ವಕ್ರಂ ವಿರೂಪಂ ವಕ್ರಾಗ್ರಂ ಛಿನ್ನಮೂಲಂ ಪದಚ್ಯುತಂ ॥ ೪೧ ॥

ಅಶುಭಂ ರೂಕ್ಷಮಾರಕ್ತಂ ತಥಾನಂಗುಳಿಕಲ್ಪಿತಂ ।
ವಿಗಂಧಮಸಹ್ಯಂ ಚ ಪುಂಡ್ರಮಾಹುರನರ್ಥಕಂ ॥ ೪೨ ॥

---

೩೯. ಇವೊಂದು ಸಿಕ್ಕದಿದ್ದರೂ ಎಲ್ಲಿ ವೈಷ್ಣವರು ಮೃತ್ತಿಗೆಯನ್ನು ತೆಗೆದು ಕೊಂಡು ಧರಿಸಿಕೊಳ್ಳುವರೋ ಆ ಜಾಗದಲ್ಲಿ ಮೃತ್ತಿಗೆಯನ್ನು ತೆಗೆದುಕೊಂಡು ಊರ್ಧ್ವಪುಂಡ್ರವನ್ನು ಧರಿಸಬಹುದು.

೪೦. ಕಪ್ಪು ಮೃತ್ತಿಗೆಯಲ್ಲಿ ಧರಿಸಿದ ಪುಂಡ್ರವು ಶಾನ್ತಿಯನ್ನುಂಟುಮಾಡುತ್ತದೆ. ಕೆಂಪಾದ ಮೃತ್ತಿಗೆಯು ಜನಗಳವಶ್ಯವನ್ನುಂಟುಮಾಡುತ್ತದೆ. ಹೊಂಬಣ್ಣದ ಮೃತ್ತಿಗೆಯು ಸಂಪತ್ತನ್ನುಂಟುಮಾಡುತ್ತದೆ.

೪೧-೪೨. ದುಂಡಗಿರುವುದು, ಅಡ್ಡಲಾಗಿರುವುದು, ಸಂದುಗಳಿಲ್ಲದಿರುವುದು, ಸಣ್ಣಗಿರುವುದು, ಉದ್ದವಾದುದು, ಚಿಕ್ಕದು, ವಕ್ರವಕ್ರವಾಗಿರುವುದು, ಚೆನ್ನಾಗಿಲ್ಲದಿರುವುದು, ತುದಿಯಲ್ಲಿ ಡೊಂಕಾಗಿರುವುದು, ಬುಡವು ಕತ್ತರಿಸಿದಂತಿರುವುದು, ಜಾಗವನ್ನು ಬಿಟ್ಟು ಬೇರೆ ಜಾಗದಲ್ಲಿ ಹಾಕಿಕೊಳ್ಳುವುದು, ಚೆನ್ನಾಗಿಲ್ಲದಿರುವುದು, ಬಹು ಹೆಚ್ಚಾಗಿ ಕಾಣುವುದು, ಬೆರಳಿನಲ್ಲಿ ಇಟ್ಟುಕೊಳ್ಳದಿರುವುದು, ವಾಸನೆಯಿಲ್ಲದಿರುವುದು, ಅಸಹ್ಯವಾಗಿರುವುದು—ಇಂತಹ ಪುಂಡ್ರಗಳು ಸಾರ್ಥಕವಾಗುವುದಿಲ್ಲವು.

ಆರಭ್ಯ ನಾಸಿಕಾಮೂಲಂ ಲಲಾಟೇ ತು ಲಿಖೇನ್ಮೃದಾ ।
ಸಮಾರಭ್ಯ ಭ್ರುವೋರ್ಮಧ್ಯಮಂತರಾಳಂ ಪ್ರಕಲ್ಪಯೇತ್ ॥ ೪೩ ॥

ಅಂತರಾಳಂ ದ್ವ್ಯಂಗುಳಂ ಸ್ಯಾತ್ ಪಾರ್ಶ್ವಾವಂಗುಳಿಮಾತ್ರಕೌ ।
ಮೃದಾ ಶುಭ್ರೇಣ ವಿಲಿಖೇತ್ ಪುಂಡ್ರಮೃಜುತರಂ ಶುಭಂ ॥ ೪೪ ॥

ಲಲಾಟೇ ಕೇಶವಂ ಧ್ಯಾಯೇನ್ನಾರಾಯಣಮಥೋದರೇ ।
ವಕ್ಷಸ್ಥಲೇ ಮಾಧವಂ ಚ ಗೋವಿಂದಂ ಕಂಠಕೂಬರೇ ॥ ೪೫ ॥

ವಿಷ್ಣುಂ ಚ ದಕ್ಷಿಣೇ ಕುಕ್ಷೌ ಬಾಹೌ ಚ ಮಧುಸೂದನಂ ।
ತ್ರಿವಿಕ್ರಮಂ ಕಂಧರೇ ತು ವಾಮನಂ ವಾಮಪಾರ್ಶ್ವಕೇ ॥ ೪೬ ॥

ಶ್ರೀಧರಂ ಬಾಹುಕೇ ವಾಮೇ ಹೃಷೀಕೇಶಂ ತು ಶ್ರೋತ್ರಕೇ ।
ಪೃಷ್ಠೇ ತು ಪದ್ಮನಾಭಂ ಚ ತ್ರಿಕೇ ದಾಮೋದರಂ ನ್ಯಸೇತ್ ॥ ೪೭ ॥

---

೪೩. ಮೂಗಿನ ಬುಡದಿಂದ ಹಿಡಿದು ಹಣೆಯ ಪೂರ್ತಿಯಾಗಿ ಮೇಲುಗಡೆಗೆ ಮಣ್ಣಿನಲ್ಲಿ ಪುಂಡ್ರವನ್ನು ಧರಿಸಬೇಕು. ಮೂಗಿನಿಂದ ಹುಬ್ಬುಗಳವರೆಗೆ ಬರುವವರೆಗೂ ಬೇರೆಬೇರೆಯಾಗಿರದೆ ಒಂದೇ ಜಗುಲಿಯಂತಿದ್ದು ಹುಬ್ಬಿನಿಂದ ಮೇಲಕ್ಕೆ ಹಣೆಯಲ್ಲಿ ಹೋಗುವಾಗ ಬೇರೆಬೇರೆಯಾಗಿ ಇಡಬೇಕು.

೪೪. ಒಂದೊಂದಕ್ಕೆ ಮಧ್ಯದಲ್ಲಿ ಎರಡು ಅಂಗುಲಗಳಷ್ಟು ಜಾಗವನ್ನು ಬಿಟ್ಟಿರಬೇಕು. ಹಣೆಯ ಆಕಡೆ ಈಕಡೆಯಲ್ಲಿ ಒಂದು ಬೆಟ್ಟಿನಷ್ಟು ಜಾಗ ಬಿಟ್ಟಿರಬೇಕು. ಈ ಮಧ್ಯದಲ್ಲಿ ಶುಭ್ರವಾದ ಮೃತ್ತಿಕೆಯಿಂದ ಉದ್ದವಾಗಿ ಶುಭವಾದ ಪುಂಡ್ರಗಳನ್ನಿಡಬೇಕು.

೪೫–೫೦. ಹಣೆಯಲ್ಲಿ ಕೇಶವನನ್ನೂ, ಹೊಟ್ಟೆಯಲ್ಲಿ ನಾರಾಯಣನನ್ನೂ, ಎದೆಯಲ್ಲಿ ಮಾಧವನನ್ನೂ, ಕತ್ತಿನ ಹಳ್ಳದಲ್ಲಿ ಗೋವಿಂದನನ್ನೂ ಬಲದ ಅಳ್ಳೆಯಲ್ಲಿ ವಿಷ್ಣುವನ್ನೂ, ಬಲಬಾಹುವಿನಲ್ಲಿ ಮಧುಸೂದನನನ್ನೂ ಹೆಗ್ಗತ್ತಿನಲ್ಲಿ ತ್ರಿವಿಕ್ರಮನನ್ನೂ, ಕತ್ತಿನ ಎಡಪಾರ್ಶ್ವದಲ್ಲಿ ವಾಮನನನ್ನೂ, ಎಡತೋಳಿನಲ್ಲಿ ಶ್ರೀಧರನನ್ನೂ, ಎಡಕಿವಿಯ ಬುಡದಲ್ಲಿ ಹೃಷೀಕೇಶನನ್ನೂ, ಹಿಂದುಗಡೆಯ ಕುಂಡೆಗಳ ಮಧ್ಯದ ಮೇಲುಗಡೆಯಲ್ಲಿ ಪದ್ಮನಾಭನನ್ನೂ, ತ್ರಿಕದಲ್ಲಿ ದಾಮೋದರನನ್ನೂ,

ತತ್ ಪ್ರಕ್ಷಾಳನತೋಯೇನ ವಾಸುದೇವಂ ತು ಮೂರ್ಧನಿ ।
ಲಲಾಟೇ ಭುಜಯುಗ್ಮೇ ತು ಪೃಷ್ಠಯೋಃ ಕಂಠಕೂಬರೇ ॥ ೪೮ ॥

ಧಾರಯೇದೂರ್ಧ್ವಪುಂಡ್ರಾಣಿ ಚತುರಂಗುಲಮಾನತಃ ।
ಕುಕ್ಷೌ ತತ್ಪಾರ್ಶ್ವಯೋಃ ಪ್ರೋಕ್ತಮಾಯತಂ ತು ದಶಾಂಗುಲಂ ॥ ೪೯ ॥

ಬಾಹ್ವೋರ್ವಕ್ಷಸ್ಥಲೇ ಪುಂಡ್ರಮಷ್ಟಾಂಗುಳಮುದಾಹೃತಂ ।
ಏವಂ ದ್ವಾದಶಪುಂಡ್ರಾಣಿ ಬ್ರಾಹ್ಮಣಸ್ಸತತಂ ಧರೇತ್ ॥ ೫೦ ॥

ತತಃ ಪುಂಡ್ರಾಣಿ ತನ್ಮೂರ್ತೀರ್ಧ್ಯಾತ್ವಾ ಮಂತ್ರೇಣ ಧಾರಯೇತ್ ।
ಅಂತರಾಳೇಷು ಸರ್ವೇಷು ಹರಿದ್ರಾಂ ಧಾರಯೇಚ್ಛ್ರಿಯಂ ॥ ೫೧ ॥

ಚತ್ವಾರಿ ಭೂಭೃತಾಂ ಪ್ರೋಕ್ತಂ ಪುಂಡ್ರಾಣಿ ದ್ವೇ ವಿಶಾಂ ಸ್ಮೃತೇ ।
ಏಕಂ ಪುಂಡ್ರಂ ತು ನಾರೀಣಾಂ ಶೂದ್ರಾಣಾಂ ಚ ವಿಧೀಯತೇ ॥ ೫೨ ॥

---

ಧ್ಯಾನಮಾಡಿ ಪುಂಡ್ರಗಳನ್ನಿಟ್ಟುಕೊಳ್ಳಬೇಕು. ಅನಂತರ ಕೈಯ್ಯಲ್ಲಿ ಕಲಸಿಕೊಂಡು ಇಟ್ಟುಕೊಂಡಮೇಲೆ ಉಳಿದುದನ್ನು ತೊಳೆದುಕೊಂಡು ಆ ನೀರನ್ನು ವಾಸುದೇವನನ್ನು ಸ್ಮರಿಸಿ ತಲೆಯಲ್ಲಿಟ್ಟುಕೊಳ್ಳಬೇಕು. ಹಣೆ, ಎರಡುಭುಜಗಳು ತ್ರಿಕದ ಎರಡುಕಡೆ, ಕತ್ತಿನಹಳ್ಳ ಇವುಗಳಲ್ಲಿ ಪುಂಡ್ರಗಳನ್ನು ನಾಲ್ಕು ಅಂಗುಲಗಳಷ್ಟು ಉದ್ದಕ್ಕೆ ಮೇಲುಮುಖವಾಗಿಟ್ಟುಕೊಳ್ಳಬೇಕು. ಹೊಟ್ಟೆ, ಹೊಟ್ಟೆಯ ಪಕ್ಕಗಳು, ಇವುಗಳಲ್ಲಿ ಹತ್ತು ಅಂಗುಲಗಳಷ್ಟು ಉದ್ದಕ್ಕೆ ಪುಂಡ್ರಗಳನ್ನಿಟ್ಟುಕೊಳ್ಳಬೇಕು. ಬಾಹು, ಎದೆಗಳಲ್ಲಿ ಎಂಟಂಗುಲಗಳ ಉದ್ದಕ್ಕೆ ಇಟ್ಟುಕೊಳ್ಳಬೇಕು. ಈ ರೀತಿಯಾಗಿ ಬ್ರಾಹ್ಮಣನಾದವನು ಹನ್ನೆರಡು ಪುಂಡ್ರಗಳನ್ನು ಯಾವಾಗಲೂ ಇಟ್ಟುಕೊಳ್ಳಬೇಕು.

೫೧. ಈ ರೀತಿಯಾಗಿ ಆಯಾಮೂರ್ತಿಗಳನ್ನು ಆಯಾಜಾಗದಲ್ಲಿ ಧ್ಯಾನಿಸಿಕೊಂಡು ಮಂತ್ರದಿಂದ ತ್ರಿಪುಂಡ್ರವನ್ನು ಧರಿಸಬೇಕು. ಈ ಪುಂಡ್ರಗಳ ಮಧ್ಯದ ಜಾಗದಲ್ಲಿ ಒಳ್ಳೆಯ ಅರಿಶಿನವನ್ನು ನಾಮದಂತೆ ಧರಿಸಬೇಕು.

೫೨. ಕ್ಷತ್ರಿಯರಿಗೆ ನಾಲ್ಕೂ ವೈಶ್ಯರಿಗೆ ಎರಡೂ ಹೆಂಗಸರಿಗೂ ಶೂದ್ರರಿಗೂ ಒಂದೊಂದೂ ಪುಂಡ್ರಗಳು ಹೇಳಲ್ಪಟ್ಟವೆ.

ಲಲಾಟೇ ಹೃದಿ ಬಾಹ್ವೋಶ್ಚ ಚತುಷ್ಪುಂಡ್ರಾಣಿ ಧಾರಯೇತ್ ।
ಲಲಾಟೇ ಹೃದಯೇ ದ್ವೇ ತು ಭಾಲೇ ತ್ವೇಕಂ ವಿಧೀಯತೇ ॥ ೫೩ ॥

ಊರ್ಧ್ವಪುಂಡ್ರಂ ಲಲಾಟೇ ತು ಸರ್ವೇಷಾಂ ಪ್ರಥಮಂ ಸ್ಮೃತಂ ।
ಲಲಾಟಾದಿಕ್ರಮೇಣೈವ ಧಾರಣಂ ತು ವಿಧೀಯತೇ ॥ ೫೪ ॥

ಮೂರ್ತಯೋ ವಾಸುದೇವಾದ್ಯಾಶ್ಚತುಷ್ಪುಂಡ್ರೇಷು ಧಾರಯೇತ್ ।
ದ್ವಯೋರ್ಗೋವಿಂದಕೃಷ್ಣೌ ತು ಏಕಂ ನಾರಾಯಣಂ ಧರೇತ್ ॥ ೫೫ ॥

ಏವಂ ಪುಂಡ್ರವಿಧಿಃ ಪ್ರೋಕ್ತಃ ಸರ್ವೇಷಾಂ ಗಿರಿಜೇ ಮಯಾ ।
ಅಶ್ವತ್ಥಪತ್ರಸಂಕಾಶೋ ವೇಣುಪತ್ರಾಕೃತಿಸ್ತಥಾ ॥ ೫೬ ॥

---

೫೩. ಹಣೆ, ಹೃದಯ, ಎರಡುತೋಳುಗಳು, ಇವುಗಳಲ್ಲಿ, ನಾಲ್ಕು ನಾಲ್ಕನ್ನು ಕ್ಷತ್ರಿಯರು ಇಟ್ಟುಕೊಳ್ಳಬೇಕು. ಹಣೆ, ಹೃದಯ ಎರಡರಲ್ಲಿ ಎರಡೆರಡು ಪುಂಡ್ರಗಳನ್ನು ವೈಶ್ಯನಿಟ್ಟುಕೊಳ್ಳಬೇಕು. ಹೆಂಗಸರು ಶೂದ್ರರು ಹಣೆಯಲ್ಲಿ ಮಾತ್ರ ಒದೊಂದನ್ನಿಟ್ಟುಕೊಳ್ಳಬೇಕು.

೫೪. ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಮೊದಲಿಟ್ಟುಕೊಳ್ಳಬೇಕು. ಅನಂತರದಲ್ಲಿ ಕ್ರಮವಾಗಿ ಮುಂದುಮುಂದಕ್ಕೆ ಇಡಬೇಕು. ಎಂದರೆ (ಮೇಲಿನಿಂದ ಕ್ರಮವಾಗಿ ಎಂದು ತಿಳಿಯತಕ್ಕದ್ದು.)

೫೫. ವಾಸುದೇವಾದಿ ನಾಲ್ಕು ಮೂರ್ತಿಗಳನ್ನೂ ನಾಲ್ಕು ಪುಂಡ್ರಗಳಲ್ಲಿ ಧ್ಯಾನಿಸಿ ಆವಾಹಿಸಿಕೊಳ್ಳಬೇಕು. ಎರಡನ್ನು ಇಟ್ಟುಕೊಂಡವರು ಗೋವಿಂದ ಕೃಷ್ಣರನ್ನು ಹೇಳಿ ಧರಿಸಬೇಕು. ಒಂದು ಪುಂಡ್ರವನ್ನು ಇಡುವವರು ನಾರಾಯಣನನ್ನು ಹೇಳಿ ಆವಾಹಿಸಿ ಇಡಬೇಕು.

೫೬–೫೭. ಎಲೈ ಗಿರಿಜೆಯೆ! ಈ ರೀತಿಯಾಗಿ ಎಲ್ಲರೂ ಪುಂಡ್ರವನ್ನು ಧರಿಸಬೇಕೆಂಬ ವಿಧಿಯನ್ನು ಹೇಳಿದ್ದೇನೆ. ಆ ಪುಂಡ್ರವು ಅರಳಿಯ ಎಲೆಯ ಆಕಾರಕ್ಕಾಗಲಿ, ಬಿದಿರಿನ ಎಲೆಯ ಆಕಾರಕ್ಕಾಗಲಿ ಇರಬಹುದು. ಇಲ್ಲವೆ ಪದ್ಮದ ಮೊಗ್ಗಿನ ಆಕಾರಕ್ಕೂ ಇರಬಹುದು. ಈ ಮೂರು ಬಗೆಯಿರತಕ್ಕವು.

**ಪದ್ಮಕುಡ್ಮಲಸಂಕಾಶೋ ಮೋಕ್ಷದಂ ತ್ರಿತಯಂ ಸ್ಮೃತಂ ।
ಮಹಾಭಾಗವತಃ ಶುದ್ಧಃ ಪುಂಡ್ರಂ ಹರಿಪದಾಕೃತಿಂ ।
ದಂಡಾಕಾರಂ ತು ವಾ ದೇವೀ ಧಾರಯೇದೂರ್ಧ್ವಪುಂಡ್ರಕಂ ॥ ೫೭ ॥**

**ಸುದರ್ಶನೇನಾಂಕಿತ ಬಾಹುಮೂಲಾಃ
ತಥೋರ್ಧ್ವಪುಂಡ್ರಾಂಕಿತಸರ್ವಗಾತ್ರಾಃ ।
ಮಾಲಾರವಿಂದಾಕ್ಷಧರಾ ವಿಶುದ್ಧಾ
ರಕ್ಷಂತಿ ಲೋಕಾನ್ ದುರಿತೌಘಸಂಗಾತ್ ॥ ೫೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಮಾಘಮಾಹಾತ್ಮ್ಯೇ
ವಸಿಷ್ಠ ದಿಲೀಪ ಸಂವಾದೇ ಊರ್ಧ್ವಪುಂಡ್ರವಿಧಾನಂ ನಾಮ
ತ್ರಿಪಂಚಾಶದಧಿಕದ್ವಿಶತತಮೋಧ್ಯಾಯಸ್ಸಮಾಪ್ತಃ**

---

ಮೋಕ್ಷವನ್ನು ಕೊಡುತ್ತವೆ. ಭಾಗವತನಾಗಿಯೂ ಶುದ್ಧನಾಗಿಯೂ ಇರುವವನು ಹರಿಯ ಪಾದಗಳಂತೆ ಆಕಾರವುಳ್ಳದ್ದನ್ನಾಗಿ ಪುಂಡ್ರವನ್ನು ಧರಿಸಬೇಕು. ಅದಿಲ್ಲದಿದ್ದರೆ ದಂಡಾಕಾರವಾಗಿಯಾದರೂ ಧರಿಸಬಹುದು.

೫೮. ತೋಳಿನ ಬುಡದಲ್ಲಿ ಚಕ್ರಾಂಕಿತವನ್ನು ಮಾಡಿಸಿಕೊಂಡು ದೇಹದಲ್ಲೆಲ್ಲಾ ಉತ್ತಮವಾದ ಜಾಗದಲ್ಲಿ ಊರ್ಧ್ವಪುಂಡ್ರವನ್ನು ಧರಿಸಿಕೊಂಡು ಕತ್ತಿನಲ್ಲಿ ತುಲಸಿಮಾಲೆಯನ್ನು (ಅಕ್ಷಮಾಲೆಯನ್ನು ಆದರೂ ಆಗಬಹುದು) ಧರಿಸಿ ಶುದ್ಧನಾದವನು ಲೋಕದ ಪಾಪವನ್ನೇ ಹಾಳುಮಾಡುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಊರ್ಧ್ವಪುಂಡ್ರ ಕಥನ ಎಂಬ ಇನ್ನೂರ ಐವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುಷ್ಪಂಚಾಶದಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ಶಂಕರ ಉವಾಚ ॥

ನ್ಯಾಸೇ ವಾಪ್ಯರ್ಚನೇ ವಾಪಿ ಮಂತ್ರಮೇಕಂ ತು ನಾಶ್ರಯೇತ್ ।
ಅವೈಷ್ಣವೋಪದಿಷ್ಟೇನ ಮಂತ್ರೇಣ ನ ಪರಾ ಗತಿಃ ॥ ೧ ॥

ಅವೈಷ್ಣವೋಪದಿಷ್ಟಶ್ಚ ಪೂರ್ವಮನ್ತ್ರವರದ್ವಯಂ ।
ಪುನಶ್ಚ ವಿಧಿನಾ ಸಮ್ಯಗ್ವೈಷ್ಣವಾದ್ಗ್ರಾಹಯೇನ್ಮನುಂ ॥ ೨ ॥

ಸಹಸ್ರಶಾಖಾಧ್ಯಾಯೀ ಚ ಸರ್ವಯಜ್ಞೇಷು ದೀಕ್ಷಿತಃ ।
ಕುಲೇ ಮಹತಿ ಜಾತೋಽಪಿ ನ ಗುರುಸ್ಸ್ಯಾದವೈಷ್ಣವಃ ॥ ೩ ॥

---

## ಇನ್ನೂರ ಐವತ್ತನಾಲ್ಕನೆಯ ಅಧ್ಯಾಯವು



೧. ಶ್ರೀ ಶಂಕರನು ಹೇಳಿದನು-ನ್ಯಾಸಕ್ಕಾಗಲಿ, ಅರ್ಚನೆಗಾಗಲಿ ಒಂದೇ ಮಂತ್ರವನ್ನು ಆಶ್ರಯಿಸಬಾರದು. ವೈಷ್ಣವನಲ್ಲದವನು ಉಪದೇಶಮಾಡಿದ ಮಂತ್ರದಿಂದ ಮುಕ್ತಿಯು ಸಿಕ್ಕುವುದಿಲ್ಲ.

೨. ಮೊದಲನೆಯಬಾರಿ ನ್ಯಾಸ ಅರ್ಚನೆಗಳಿಗೆ ಉಪದೇಶಿಸಿಕೊಂಡ ಮಂತ್ರಗಳೆರಡೂ ವೈಷ್ಣವನಾಗಿ ಉಪದೇಶಮಾಡಿಕೊಂಡಂತಾಗುವುದಿಲ್ಲ. ಅನಂತರ ಸರಿಯಾದ ವಿಧಾನದಿಂದ ವೈಷ್ಣವನಿಂದ ಮಂತ್ರವನ್ನು ತೆಗೆದುಕೊಳ್ಳಬೇಕು.

೩. ಸಾವಿರ ಶಾಖೆಗಳನ್ನು ಅಧ್ಯಯನಮಾಡಿರಲಿ ಎಲ್ಲಾ ಯಜ್ಞಗಳನ್ನೂ ಮಾಡಿರಲಿ ಒಳ್ಳೆಯ ಕುಲದಲ್ಲಿ ಹುಟ್ಟಿರಲಿ ಅವನು ವೈಷ್ಣವನಲ್ಲದಿದ್ದರೆ ಗುರುವಾಗಲಾರನು.

ಯಸ್ತು ಮಂತ್ರದ್ವಯಂ ಸಮ್ಯಗಧ್ಯಾಪಯತಿ ವೈಷ್ಣವಃ ।
ಸ ಆಚಾರ್ಯಸ್ತು ವಿಜ್ಞೇಯಃ ಭವಬಂಧವಿದಾರಕಃ ॥ ೪ ॥

ಆಚಾರ್ಯಂ ಸಂಶ್ರಯಿತ್ವಾಥ ವತ್ಸರಂ ಸೇವಯದ್ದ್ವಿಜಃ ।
ತಸ್ಯ ವೃತ್ತಿಂ ಪರಿಜ್ಞಾತ್ವಾ ಮಂತ್ರಮಧ್ಯಾಪಯೇದ್ಗುರುಃ ॥ ೫ ॥

ಕೃತ್ವಾ ತಾಪಾದಿಸಂಸ್ಕಾರಾನ್ ಪಶ್ಚಾನ್ಮಂತ್ರಮುದೀರಯೇತ್ ।
ತತಃ ಪುಂಡ್ರಂ ತಥಾ ನ್ಯಾಸಂ ಕೃತ್ವಾ ವೈ ವಿಧಿನಾ ಗುರುಃ ॥ ೬ ॥

ಪಶ್ಚಾದಧ್ಯಾಪಯೇನ್ಮಂತ್ರಂ ಶಿಷ್ಯಂ ನಿರ್ಮಲಚೇತಸಂ ।
ಚಕ್ರೇಣ ವಿಧಿನಾ ತಪ್ತಂ ತಾಪ ಇತ್ಯಭಿಧೀಯತೇ ॥ ೭ ॥

ಪುಂಡ್ರಮೂರ್ಧ್ವಂ ಯಥಾ ಪ್ರೋಕ್ತಂ ನಾಮ ವೈಷ್ಣವಮುಚ್ಯತೇ ।
ತತೋ ಮಂತ್ರಂ ವಿಧಾನೇನ ಶಿಷ್ಯಮಧ್ಯಾಪಯೇದ್ಗುರುಃ ॥ ೮ ॥

---

೪. ಯಾವನು ಈ ಎರಡು ಮಂತ್ರಗಳನ್ನೂ ವೈಷ್ಣವನಾಗಿ ಹೇಳಿಕೊಡುವನೋ ಅವನೇ ಆಚಾರ್ಯನು ಸಂಸಾರದ ಬಂಧವನ್ನು ನಾಶಮಾಡತಕ್ಕವನು. ಎಂದು ತಿಳಿಯಬೇಕು.

೫. ಮಂತ್ರವನ್ನು ಉಪದೇಶಿಸಿಕೊಳ್ಳತಕ್ಕವನು ಆಚಾರ್ಯನನ್ನು ಆಶ್ರಯಿಸಿಕೊಂಡು ಒಂದು ವರ್ಷದವರೆಗೂ ಸೇವಿಸುತ್ತಿರಬೇಕು. ಅನಂತರ ಆಚಾರ್ಯನಾದವನು ಅವನ ರೀತಿಯನ್ನು ತಿಳಿದು ಮಂತ್ರವನ್ನು ಉಪದೇಶಮಾಡಬೇಕು.

೬-೭. ಅನಂತರ ತನ್ನ ಗೃಹ್ಯದ ರೀತಿಯಲ್ಲಿ ಅಗ್ನಿಪ್ರತಿಷ್ಠೆಯನ್ನು ಮಾಡಿ ಅದರಲ್ಲಿ ಶಂಖಚಕ್ರಗಳನ್ನು ಕಾಯಿಸಿ ಅದರಿಂದ ಮುದ್ರಾಧಾರಣೆಯನ್ನು ಶಾಸ್ತ್ರೋಕ್ತವಾಗಿ ಮಾಡಬೇಕು. ಅನಂತರ ಮಂತ್ರವನ್ನು ಉಪದೇಶಿಸಬೇಕು. ಅನಂತರ ಪುಂಡ್ರಗಳನ್ನು ಹಾಕುವ ವಿಧಾನವನ್ನೂ ಅದರ ಮಂತ್ರಗಳನ್ನೂ ಹೇಳಬೇಕು. ಅನಂತರ ಆ ಶಿಷ್ಯನು ನಿರ್ಮಲನಾದನಂತರ ಮಂತ್ರವನ್ನುಪದೇಶಿಸಬೇಕು.

೮. ಶಾಸ್ತ್ರರೀತಿಯಿಂದ ಚಕ್ರದಿಂದ ಸುಡಿಸುಕೊಳ್ಳುವಿಕೆಯೇ ತಾಪವೆನಿಸಿಕೊಳ್ಳುವುದು. ಊರ್ಧ್ವಪುಂಡ್ರಗಳನ್ನು ಧರಿಸಿಕೊಳ್ಳುವಿಕೆಯೇ ವೈಷ್ಣವನೆಂದೆನಿಸಿಕೊಳ್ಳುವುದು. ಅನಂತರ ಗುರುವು ಶಿಷ್ಯನಿಗೆ ಮಂತ್ರವನ್ನುಪದೇಶಿಸಬೇಕು.

ನ್ಯಾಸಮಷ್ಟಾಕ್ಷರಂ ಮಂತ್ರಮನ್ಯಚ್ಚ ವೈಷ್ಣವಂ ಪರಂ ।
ನ್ಯಾಸಮೇವಾತ್ರ ಪರಮಂ ವೈಷ್ಣವಾನಾಂ ಶುಭಾನನೇ ॥ ೯ ॥

ತಸ್ಮಾತ್ತು ನ್ಯಾಸಮೇವೈಷಾಮತಿರಿಕ್ತಮಿಹೋಚ್ಯತೇ ।
ನ್ಯಾಸವಿದ್ಯಾಪರೋ ಯಸ್ತು ಬ್ರಾಹ್ಮಣಃ ಶ್ರೇಷ್ಠ ಉಚ್ಯತೇ ॥ ೧೦ ॥

ನ್ಯಾಸಾತ್ಪರತರಂ ಮಂತ್ರಂ ನಾಸ್ತಿ ಸತ್ಯಂ ಬ್ರವೀಮಿ ತೇ ।
ನ್ಯಾಸದ್ವಯಂ ಪ್ರಪತ್ತಿಃ ಸ್ಯಾತ್ ಪರ್ಯಾಯೇಣ ನಿಬೋಧ ಮೇ ॥ ೧೧ ॥

ದ್ವಯೋಪದೇಶಪೂರ್ವೇಣ ಸರ್ವಕರ್ಮ ಸಮಾಚರೇತ್ ।
ದ್ವಯಾಧಿಕಾರೀ ನ ಭವೇತ್ ಸರ್ವಮಂತ್ರೇಷು ನಾರ್ಹತಿ ॥ ೧೨ ॥

ತಸ್ಮಾದ್ದ್ವಯಮಧೀತ್ಯೈವ ತಸ್ಮಾನ್ಮಂತ್ರಮನುತ್ತಮಂ ।
ಶ್ರೀಮದಷ್ಟಾಕ್ಷರಂ ಮಂತ್ರಮಭ್ಯಸೇದ್ದ್ವಿಜಸತ್ತಮಃ ॥ ೧೩ ॥

---

೯. ನ್ಯಾಸವೆಂಬುದು ಅಷ್ಟಾಕ್ಷರ ಮಂತ್ರದಿಂದ ಮಾಡಿಸಿಕೊಳ್ಳತಕ್ಕದ್ದು. ಮಿಕ್ಕ ಮಂತ್ರಗಳು ವೈಷ್ಣವಮಂತ್ರಗಳಾಗುತ್ತವೆ. ವೈಷ್ಣವರಿಗೆ ನ್ಯಾಸವೇ ಮುಖ್ಯವಾದುದು.

೧೦. ಆದ್ದರಿಂದ ನ್ಯಾಸವೇನೇ ವೈಷ್ಣವರಿಗೆ ಉತ್ತಮವೆಂದು ಹೇಳಿದೆ. ನ್ಯಾಸವನ್ನು ಸರಿಯಾಗಿ ಮಾಡಿಕೊಳ್ಳಲು ತಿಳಿದವನೇ ಬ್ರಾಹ್ಮಣರಲ್ಲಿ ಶ್ರೇಷ್ಠನೆಂದು ತಿಳಿಯಬೇಕು.

೧೧. ನ್ಯಾಸಕ್ಕಿಂತಲೂ ಉತ್ತಮವಾದ ಮಂತ್ರವು ಇಲ್ಲವೇ ಇಲ್ಲ. ಇದನ್ನು ಸತ್ಯವಾಗಿ ಹೇಳುತ್ತೇನೆ. ಈ ಎರಡು ನ್ಯಾಸಗಳೂ ಸೇರಿ ಪ್ರಪತ್ತಿ ಎಂದಾಗುತ್ತದೆ. ಅವನ್ನು ಕ್ರಮವಾಗಿ ಹೇಳುತ್ತೇನೆ, ಕೇಳು.

೧೨. ಈ ನ್ಯಾಸದ್ವಯವನ್ನುಪದೇಶಿಸಿಕೊಂಡು ಅನಂತರ ತನ್ನ ವೈದಿಕ ಕಾರ್ಯಗಳನ್ನು ಮಾಡಿಕೊಳ್ಳಬೇಕು. ಈ ನ್ಯಾಸದ್ವಯಕ್ಕೆ ಅಧಿಕಾರಿಯಾಗದವನು ಮತ್ತೊಂದು ಮಂತ್ರಕ್ಕೂ ಅರ್ಹನಲ್ಲ.

೧೩. ಆದ್ದರಿಂದ ಈ ಎರಡು ನ್ಯಾಸಮಂತ್ರಗಳನ್ನೂ ಉಪದೇಶ ತೆಗೆದುಕೊಂಡು ಅನಂತರ ಉತ್ತಮವಾದ ಅಷ್ಟಾಕ್ಷರೀಮಂತ್ರವನ್ನೂ ಉಪದೇಶಿಸಿಕೊಂಡು ಅದನ್ನು ಪುನಶ್ಚರಣೆ ಮಾಡಬೇಕು.

ಮಂತ್ರಮಷ್ಟಾಕ್ಷರಂ ಪ್ರೋಕ್ತಂ ಪ್ರಣವಸ್ಯೈವ ಸಂಗ್ರಹಾತ್ |
ನೈಸರ್ಗಪ್ರಣವಾರ್ಥತ್ವಾತ್ಸ ಮಂತ್ರಃ ಪ್ರೋಚ್ಯತೇ ಬುಧೈಃ ॥ ೧೪ ॥

ನಾನ್ಯತ್ರ ಸರ್ವಮನ್ತ್ರೇಷು ಪ್ರಣವಸ್ಯ ಸ್ವಭಾವತಃ |
ಪೂರ್ತ್ಯೈ ಸರ್ವತ್ರ ಮಂತ್ರಾಣಂ ಯೋಜಯೇತ್ಪ್ರಣವಂ ಶುಭಂ ॥ ೧೫ ॥

ಓಂಕಾರಃ ಪ್ರಣವೋ ಬ್ರಹ್ಮಾ ಸರ್ವಮಂತ್ರೇಷು ನಾಯಕಃ |
ಆದೌ ಸರ್ವತ್ರ ಯುಂಜೀತ ಮಂತ್ರಾಣಾಂ ತು ಶುಭಾನನೇ ॥ ೧೬ ॥

ಸ್ವಭಾವಾತ್ಪ್ರಣವಂ ತಸ್ಮಿನ್ ಮೂಲಮಾತ್ರೇ ಪ್ರತಿಷ್ಠಿತಂ |
ಓಮಿತ್ಯೇಕಾಕ್ಷರಂ ಪೂರ್ವಂ ದ್ವ್ಯಕ್ಷರಂ ನಮ ಇತ್ಯಥ ॥ ೧೭ ॥

ತತೋ ನಾರಾಯಣಾಯೇತಿ ಪಂಚೈತಾನಿ ಯತಾಕ್ರಮಂ |
ಏವಮಷ್ಟಾಕ್ಷರೋ ಮಂತ್ರೋ ಜ್ಞೇಯಃ ಸರ್ವಾರ್ಥಸಾಧಕಃ ॥ ೧೮ ॥

---

೧೪. ಪ್ರಣವ(ಓಂಕಾರ)ವನ್ನು ಸೇರಿಸಿಕೊಂಡು ಈ ಮಂತ್ರಕ್ಕೆ ಅಷ್ಟಾಕ್ಷರೀಮಂತ್ರವೆಂದು ಹೆಸರು. ಇದರಲ್ಲಿ ಸ್ವಭಾವವಾಗಿಯೇ ಓಂಕಾರವು ಸೇರಿರುವುದರಿಂದ ಇದನ್ನು ಆ ಮಂತ್ರವೆಂದು ಕರೆಯುತ್ತಾರೆ.

೧೫. ಮಿಕ್ಕ ಮಂತ್ರಗಳಲ್ಲಿ ಈ ಪ್ರಣವವು ಸ್ವಭಾವವಾಗಿರುವುದೇ ಇಲ್ಲ. ಅವುಗಳಿಗೆ ಪೂರ್ಣತೆಯು ಬರಲು ಓಂಕಾರವಾದ ಪ್ರಣವವನ್ನು ಸೇರಿಸಿಕೊಳ್ಳಬೇಕು.

೧೬. ಓಂಕಾರವೇ ಪ್ರಣವವು. ಅದೇ ಬ್ರಹ್ಮವು. ಅದು ಎಲ್ಲಾ ಮಂತ್ರಗಳಿಗೂ ಮುಖ್ಯವು. ಎಲ್ಲಾ ಮಂತ್ರಗಳ ಆದಿಯಲ್ಲಿಯೂ ಈ ಪ್ರಣವವನ್ನು ಸೇರಿಸಿಕೊಳ್ಳಬೇಕು.

೧೭–೧೮. ಆ ಅಷ್ಟಾಕ್ಷರಿಯ ಮೂಲಮಂತ್ರದಲ್ಲಿ ಸ್ವಭಾವವಾಗಿಯೇ ಓಂಕಾರವು ಇರುವುದು. ಮೊದಲು "ಓಂ" ಎಂಬ ಒಂದಕ್ಷರವೂ ಅದಾದ ಮೇಲೆ "ನಮಃ" ಎಂಬ ಎರಡಕ್ಷರವೂ ಅನಂತರ ನಾರಾಯಣಾಯ, ಎಂಬುದಾಗಿ ಐದು ಅಕ್ಷರವೂ ಇವೆ. ಈ ರೀತಿಯಾಗಿ ಇದರ ಕ್ರಮವು. ಈ ರೀತಿಯಾಗಿ ಅಷ್ಟಾಕ್ಷರೀಮಂತ್ರವು ಸಕಲ ಇಷ್ಟಾರ್ಥಗಳನ್ನೂ ಕೊಡುತ್ತದೆಂದು ತಿಳಿ.

**ಸರ್ವದುಃಖಹರಃ ಶ್ರೀಮಾನ್ ಸರ್ವಮಂತ್ರಾತ್ಮಕಃ ಶುಭಃ ।**
**ಋಷಿರ್ನಾರಾಯಣಸ್ತಸ್ಯ ದೇವತಾ ಶ್ರೀಶ ಏವ ಚ ॥ ೧೯ ॥**

**ಛಂದಸ್ತು ದೇವಿ ಗಾಯತ್ರೀ ಪ್ರಣವೋ ಬೀಜಮುಚ್ಯತೇ ।**
**ನಿತ್ಯಾನಪಾಯಿನೀ ಶಕ್ತಿಸ್ತಸ್ಯ ಶ್ರೀರುಚ್ಯತೇ ಬುಧೈಃ ॥ ೨೦ ॥**

**ಪ್ರಥಮಂ ಪದಮೋಂಕಾರೋ ದ್ವಿತೀಯಂ ನಮ ಉಚ್ಯತೇ ।**
**ತೃತೀಯಂ ನಾರಾಯಣಾಯೇತಿ ಪದತ್ರಯಮುದಾಹೃತಂ ॥ ೨೧ ॥**

**ಅಕಾರಶ್ಚಾಪ್ಯುಕಾರಶ್ಚ ಮಕಾರಶ್ಚ ತತಃ ಪರಂ ।**
**ವೇದತ್ರಯಾತ್ಮಕಃ ಪ್ರೋಕ್ತಃ ಪ್ರಣವೋ ಬ್ರಹ್ಮಣಃ ಪುರಂ ॥ ೨೨ ॥**

**ಅಕಾರೇಣೋಚ್ಯತಿ ವಿಷ್ಣುಃ ಶ್ರೀರುಕಾರೇಣ ಉಚ್ಯತೇ ।**
**ಮಕಾರಸ್ತು ತಯೋರ್ದಾಸಃ ಪಂಚವಿಂಶಃ ಪ್ರಕೀರ್ತಿತಃ ॥ ೨೩ ॥**

---

೧೯. ಈ ಅಷ್ಟಾಕ್ಷರಿಯು ಎಲ್ಲಾ ದುಃಖಗಳನ್ನು ನಾಶಮಾಡುತ್ತದೆ. ಎಲ್ಲಾ ಮಂತ್ರಗಳೂ ಇದರಲ್ಲಿ ಅಡಗಿವೆ. ಶುಭವಾದುದು. ಇದಕ್ಕೆ ನಾರಾಯಣನು ಋಷಿಯು. ದೇವತೆಯು ಶ್ರೀಶನು ಎಂದು ತಿಳಿ.

೨೦. ಗಾಯಿತ್ರೀ ಛಂದಸ್ಸು, ಓಂಕಾರವೆಂಬ ಪ್ರಣವವೇ ಬೀಜವು. ವಿಷ್ಣುವನ್ನು ಯಾವಾಗಲೂ ಬಿಡದಿರುವ ಶ್ರೀದೇವಿಯೇ ಈ ಮಂತ್ರಕ್ಕೆ ಶಕ್ತಿಯು. ಎಂದು ತಿಳಿದವರು ಹೇಳುತ್ತಾರೆ.

೨೧. ಮೊದಲನೆಯ ಪದವು ಓಂಕಾರವು. ನಮಃ ಎಂಬುದು ಎರಡನೆಯ ಪದವು. ನಾರಾಯಣಾಯ ಎಂಬುದು ಮೂರನೆಯ ಪದವು. ಈ ರೀತಿಯಾಗಿ ಈ ಮಂತ್ರವು ಮೂರು ಪದಗಳಿಂದ ಕೂಡಿದೆ ಎಂದು ಹೇಳಲ್ಪಟ್ಟಿದೆ.

೨೨. ಅಕಾರ ಉಕಾರ ಮಕಾರವೆಂಬ ಮೂರಕ್ಷರಗಳು ಈ ಓಂಕಾರದಲ್ಲಿ ಸೇರಿವೆ. ಈಮೂರೂ ಮೂರು ವೇದಸ್ವರೂಪವಾದುವು. ಇದು ಓಂಕಾರವೆಂಬ ಪ್ರಣವವಾಗಿದೆ. ಇದು ಬ್ರಹ್ಮನ ಪಟ್ಟಣವು.

೨೩. ಅಕಾರವು ವಿಷ್ಣುವನ್ನು ಹೇಳುತ್ತದೆ. ಉಕಾರವು ಶ್ರೀಯನ್ನು ಎಂದರೆ ಲಕ್ಷ್ಮಿಯನ್ನು ಹೇಳುತ್ತದೆ. ಮಕಾರವು ಅವರಿಬ್ಬರಿಗೂ ದಾಸನಾದ ಇಪ್ಪತ್ತೈದನೆಯ ಆತ್ಮನನ್ನು ಹೇಳುತ್ತದೆ.

ವಾಸುದೇವಸ್ಯ ರೂಪಂ ತದಕಾರೇಣೋಚ್ಯತೇ ಬುಧೈಃ ।
ಉಕಾರೇಣ ಶ್ರಿಯಾ ದೇವ್ಯಾ ರೂಪಂ ಮುನಿಭಿರುಚ್ಯತೇ　　॥ ೨೪ ॥

ಮಕಾರೇಣೋಚ್ಯತೇ ಜೀವಃ ಪಂಚವಿಂಶಾಕ್ಷರಃ ಪುಮಾನ್ ।
ಭೂತಾನಿ ಚ ಕವರ್ಗೇಣ ಚವರ್ಗೇಣೇಂದ್ರಿಯಾಣಿ ಚ　　॥ ೨೫ ॥

ಟವರ್ಗೇಣ ತವರ್ಗೇಣ ಜ್ಞಾನಗಂಧಾದಯಸ್ತಥಾ ।
ಮನಃ ಪಕಾರೇಣೈವೋಕ್ತಂ ಫಕಾರೇಣ ತ್ವಹಂ ಕೃತಿಃ　　॥ ೨೬ ॥

ಬಕಾರೇಣ ಭಕಾರೇಣ ಮಹಾನ್ ಪ್ರಕೃತಿರುಚ್ಯತೇ ।
ಆತ್ಮಾ ಸ ತು ಮಕಾರಃ ಸ್ಯಾತ್ಪಂಚವಿಂಶಃ ಪ್ರಕೀರ್ತಿತಃ　　॥ ೨೭ ॥

ದೇಹೇಂದ್ರಿಯಮನಃ ಪ್ರಾಣಾದಿಭ್ಯೋಽನ್ಯೋಽನನ್ಯಸಾಧನಃ ।
ಭಗವಚ್ಛೇಷಭೂತೋಽಸೌ ಮಕಾರಾಖ್ಯಸ್ಸಚೇತನಃ　　॥ ೨೮ ॥

---

೨೪. ವಾಸುದೇವನ ಸ್ವರೂಪವೇ ಅಕಾರದಿಂದ ಉಕ್ತವಾಗಿದೆ. ಉಕಾರದಿಂದ ಲಕ್ಷ್ಮಿಯ ಸ್ವರೂಪವೇ ಪ್ರಕಟವಾಗಿದೆಯೆಂದು ಮುನಿಗಳು ಹೇಳುತ್ತಾರೆ.

೨೫-೨೭. ಮಕಾರದಿಂದ ಇಪ್ಪತ್ತೈದನೆಯದಾದ ನಾಶರಹಿತನಾದ ಜೀವನು ಹೇಳಲ್ಪಡುತ್ತದೆ. ಕವರ್ಗದಿಂದ ಪಂಚಭೂತಗಳು ಹೇಳಲ್ಪಡುತ್ತವೆ. ಚವರ್ಗದಿಂದ ಪಂಚೇಂದ್ರಿಯಗಳು ಹೇಳಲ್ಪಡುತ್ತವೆ. ಟವರ್ಗದಿಂದ ಜ್ಞಾನಪಂಚಕವೂ ತವರ್ಗದಿಂದ ಗಂಧಪಂಚಕವೂ ಹೇಳಲ್ಪಡುತ್ತವೆ. ಪಕಾರದಿಂದ ಮನಸ್ಸೂ ಫಕಾರದಿಂದ ಅಹಂಕಾರವೂ ಬಕಾರದಿಂದ ಮಹತ್ವವೂ ಭಕಾರದಿಂದ ಪ್ರಕೃತಿಯೂ ಹೇಳಲ್ಪಡುತ್ತವೆ. ಮಕಾರದಿಂದ ಇಪ್ಪತ್ತೈದನೆಯವನಾದ ಆತ್ಮನು ಹೇಳಲ್ಪಡುತ್ತಾನೆ.

೨೮. ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಆವುಗಳಿಗಿಂತಲೂ ಬೇರೆಯಾದ ಉತ್ತಮಸಾಧನವಾದ ಭಗವಂತನ ಶೇಷಭೂತವಾದ ಚೇತನದಿಂದ ಕೂಡಿದ ಆತ್ಮನು ಮಕಾರದಿಂದ ಹೇಳಲ್ಪಡುತ್ತಾನೆ.

ಅವಧಾರಣವಾಚ್ಯೇನ ಉಕಾರಃ ಕೈಶ್ಚಿದುಚ್ಯತೇ ।
ಶ್ರೀಶಬ್ದಮಪಿ ತತ್ಪಕ್ಷಾದುಕಾರೇಣೈವ ಚೋಚ್ಯತೇ ॥ ೨೯ ॥

ಭಾಸ್ಕರಸ್ಯ ಪ್ರಭಾಯದ್ವತ್ತಸ್ಯ ನಿತ್ಯಾನಪಾಯಿನೀ ।
ಅಕಾರೇಣೋಚ್ಯತೇ ವಿಷ್ಣುಃ ಶ್ರೀಶಃ ಕಾರಣಕಾರಣಂ ॥ ೩೦ ॥

ಶ್ರೀಶಃ ಸರ್ವಾತ್ಮನಾಂ ಶೇಷೋ ಜಗದ್ಬೀಜಂ ಪರಃ ಪುಮಾನ್ ।
ಜಗತ್ಕರ್ತಾ ಜಗದ್ಭರ್ತಾ ಈಶ್ವರೋ ಲೋಕಬಾಂಧವಃ ॥ ೩೧ ॥

ಜಗತಾಮೀಶ್ವರೀ ನಿತ್ಯಾ ವಿಷ್ಣೋರನಪಗಾಮಿನೀ ।
ಮಾತಾ ಸರ್ವಸ್ಯ ಜಗತಃ ಪತ್ನೀ ವಿಷ್ಣೋರ್ಮನೋರಮಾ ॥ ೩೨ ॥

---

೨೯. ಉಕಾರವು ಅವಧಾರಣವಾಚಕ ಶಬ್ದವೆಂದು ಕೆಲವರು ಹೇಳುವರು. ಆ ಪಕ್ಷದವರೇ ಉಕಾರವು ಶ್ರೀ ಶಬ್ದವಾಚಕವಾಗಿಯೂ ಇದೆಯೆಂದು ಹೇಳುತ್ತಾರೆ.

೩೦. ಉಕಾರವು ಅವಧಾರಣವಾಚಿಯಾಗಿಯೂ ಶ್ರೀ ವಾಚಕವಾಗಿಯೂ ಇದ್ದ ಮೇಲೆ ಇಲ್ಲಿ ಯಾವ ಅರ್ಥದಲ್ಲಿವೆ ? ಗಮಕವೇನೆಂದರೆ ಅದಕ್ಕೆ ಗಮಕವಾಗಿ ಅಕಾರದಿಂದ ವಿಷ್ಣುವನ್ನು ಯಾವಾಗ ಹೇಳಿದೆವೋ ಒಡನೆಯೇ ಲಕ್ಷ್ಮಿಯು ಆ ವಿಷ್ಣುವಿನ ಬಳಿಯಲ್ಲಿಯೇ ಇರುವವಳಾದುದರಿಂದ ಇಲ್ಲಿನ ಉಕಾರವು ಶ್ರೀ ಶಬ್ದವಾಚಕವು. ಸೂರ್ಯನಿಗೆ ಕಾಂತಿಯು ಹೇಗೆ ಜೊತೆಯಲ್ಲಿ ಇರುತ್ತದೆಯೋ ಹಾಗೆ ಲಕ್ಷ್ಮಿಯೂ ಇರುವುದರಿಂದ ಇಲ್ಲಿನ ಉಕಾರವು ಲಕ್ಷ್ಮಿಯನ್ನು ಹೇಳುತ್ತದೆ. ಅಕಾರವು ವಿಷ್ಣುವನ್ನು ಹೇಳುತ್ತದೆ. ಆ ಶ್ರೀಶನಾದ ವಿಷ್ಣುವು ನಾವು ಯಾವುದನ್ನು ಕಾರಣವೆಂದೆನ್ನುತ್ತೇವೆಯೋ ಅದಕ್ಕೂ ಕಾರಣನು.

೩೧. ವಿಷ್ಣುವು ಎಲ್ಲಾ ಆತ್ಮರಿಗೂ ಮೇಲಿರತಕ್ಕವನು. ಜಗತ್ತಿಗೆ ಬೀಜವು. ಪರಾತ್ಪರನಾದ ಮನುಷ್ಯನು. ಜಗತ್ತನ್ನೇ ಸೃಷ್ಟಿಸುವವನು. ಜಗವನ್ನು ಕಾಪಾಡುವವನು. ಲೋಕಕ್ಕೆ ಬಂಧುವು.

೩೨-೩೩. ಈ ಲಕ್ಷ್ಮಿಯು ಜಗತ್ತಿಗೆ ಈಶ್ವರಿಯು. ನಿತ್ಯಳು. ವಿಷ್ಣುವನ್ನು ಬಿಟ್ಟಿರತಕ್ಕವಳಲ್ಲ. ಎಲ್ಲಾ ಪ್ರಪಂಚಕ್ಕೂ ತಾಯಿಯು. ವಿಷ್ಣುವಿಗೆ ಹೆಂಡತಿಯು. ಮನಸ್ಸಿಗೆ ಸಂತೋಷವನ್ನುಂಟು ಮಾಡುವವಳು. ಜಗತ್ತಿಗೆ

ಜಗದಾಧಾರಭೂತಾ ಶ್ರೀರುಕಾರೇಣೈವ ಚೋಚ್ಯತೇ |
ಮಕಾರೇಣ ತಯೋರ್ದಾಸಃ ಕ್ಷೇತ್ರಜ್ಞಃ ಪ್ರೋಚ್ಯತೇ ಬುಧೈಃ ॥ ೩೩ ॥

ಜ್ಞಾನಾಶ್ರಯೋ ಜ್ಞಾನಗುಣಶ್ಚೇತಸಃ ಪ್ರಕೃತೇಃ ಪರಃ |
ನ ಜಾತೋ ನಿರ್ವಿಕಾರಶ್ಚ ಹ್ಯೇಕರೂಪಃ ಸ್ವರೂಪಭಾಕ್ ॥ ೩೪ ॥

ಅಣುರ್ನಿತ್ಯೋಽವ್ಯಾಪ್ಯಶೀಲಃ ಚಿದಾನಂದಾತ್ಮಕಸ್ತಥಾ |
ಅಹಮರ್ಥೋಽವ್ಯಯಃ ಕ್ಷೇತ್ರೀ ಭಿನ್ನರೂಪಸ್ಸನಾತನಃ ॥ ೩೫ ॥

ಅದಾಹ್ಯೋಽಚ್ಛೇದ್ಯೋ ಹ್ಯಕ್ಲೇದ್ಯೋ ಹ್ಯಶೋಷ್ಯೋಽಕ್ಷರ ಏವ ಚ |
ಏವಮಾದಿಗುಣೈರ್ಯುಕ್ತಃ ಶೇಷಭೂತಃ ಪರಸ್ಯ ವೈ ॥ ೩೬ ॥

ಮಕಾರೇಣೋಚ್ಯತೇ ಜೀವಃ ಕ್ಷೇತ್ರಜ್ಞಃ ಪರವಾನ್ ಸದಾ |
ದಾಸಭೂತೋ ಹರೇರೇವ ನಾನ್ಯಸ್ಯೈವ ಕದಾಚನ ॥ ೩೭ ॥

---

ಆಧಾರಳು. ಅಂತಹ ಲಕ್ಷ್ಮಿಯನ್ನು ಉಕಾರವು ಹೇಳುತ್ತದೆ. ಮಕಾರವು ಆ ಶ್ರೀ ಶ್ರೀಶರಿಗೆ ದಾಸನಾದ ಕ್ಷೇತ್ರಜ್ಞನೆಂದು ಹೆಸರುಳ್ಳ ಆತ್ಮನನ್ನು ಹೇಳುತ್ತದೆ.

೩೪–೩೬. ಅವನು ಜ್ಞಾನಕ್ಕೆ ಆಶ್ರಯನು. ಜ್ಞಾನವೇ ಗುಣವಾಗಿ ಉಳ್ಳವನು. ಚೇತನಪ್ರಕೃತಿಗಳಿಗಿಂತಲೂ ಬೇರೆಯಾದವನು. ಹುಟ್ಟಿದವನಲ್ಲ. ವಿಕಾರವನ್ನು ಹೊಂದುವವನಲ್ಲ. ಒಂದೇ ರೂಪಿನಲ್ಲಿರತಕ್ಕವನು. ಅವನಿಗೆ ಸ್ವರೂಪವುಂಟು. ಅಣುವು. ನಿತ್ಯನು. ವ್ಯಾಪಿಸುವುದಕ್ಕಾಗದೆ ಇರುವವನು. ಚಿತ್ ಸ್ವರೂಪನು. ಆನಂದಸ್ವರೂಪನು. "ಅಹಂ" ಎಂಬ ಪದಕ್ಕೆ ಅರ್ಥವಾಗಿರುವವನು. ದೇಹವುಳ್ಳವನು. ಬೇರೆ ಬೇರೆ ರೂಪವುಳ್ಳವನು. ಸನಾತನನು. ಸುಟ್ಟರೆ ಸುಡದವನು. ಕತ್ತರಿಸಲಾಗದವನು. ನೆನೆಸಲಾಗದವನು. ಶೋಷಿಸುವುದಕ್ಕಾಗದವನು. ನಾಶರಹಿತನು. ಈ ರೀತಿಯಾದ ಗುಣಗಳಿಂದ ಕೂಡಿದವನು. ಆ ಪರಮಾತ್ಮನಿಗಿಂತ ಬೇರೆಯಾಗಿರತಕ್ಕವನು.

೩೭. ಇಂತಹವನನ್ನು ಮಕಾರವು ಹೇಳುತ್ತದೆ. ಅವನೇ ಜೀವನು. ಅವನೇ ಕ್ಷೇತ್ರಜ್ಞನೆಂಬ ಆತ್ಮನು. ಅಧೀನನು. ಆ ಹರಿಯೊಬ್ಬನಿಗೆ ಅವನು ದಾಸನೇ ಹೊರತು ಮತ್ತೊಬ್ಬರಿಗೆ ದಾಸನಲ್ಲವೇ ಅಲ್ಲವು.

ಏವಂ ದಾಸತ್ವಮೇವಾಸ್ಯ ಮಧ್ಯಮೇನಾವಧಾರ್ಯತೇ |
ಇತ್ಯೇವಂ ಪ್ರಣವಸ್ಯಾರ್ಥೋ ಜ್ಞಾತವ್ಯೋಕ್ತೋ ಮಯಾನಘ ॥ ೩೮ ॥

ವಿವೃತೇ ಪ್ರಣವಸ್ಯಾರ್ಥೇ ಮಂತ್ರಶೇಷೇಣ ವೈ ಶುಭೇ ।
ನರಸ್ಯ ದಾಸಭೂತಸ್ಯ ಸ್ವಾತಂತ್ರ್ಯಂ ನ ಹಿ ವಿದ್ಯತೇ ॥ ೩೯ ॥

ತಸ್ಮಾನ್ಮಹದಹಂಕಾರಂ ಮನಸ್ಯಪಿ ನಿವರ್ತಯೇತ್ ।
ಸ್ವೋಪಾಯಬುದ್ಧ್ಯಾ ಯತ್ಕೃತ್ಯಂ ತದಪಿ ಪ್ರತಿಷಿಧ್ಯತೇ ॥ ೪೦ ॥

ಅಹಂಕೃತಿರ್ಮಕಾರಃ ಸ್ಯಾನ್ನಕಾರಸ್ತನ್ನಿಷೇಧಕಃ ।
ತಸ್ಮಾತ್ತನ್ಮನಸೈವಾಸ್ಯ ಅಹಂಕಾರವಿಮೋಚನಂ ॥ ೪೧ ॥

---

೩೮. ಈ ರೀತಿಯಾಗಿ ಆ ಜೀವನಿಗೆ ದಾಸತ್ವವು ಇರುತ್ತದೆ. ಅವಧಾರಣ ವಾಚಿಯಾದ ಆ ಉಕಾರವು ಶ್ಲೇಷೆಯಾಗಿರುವುದರಿಂದ ಹೀಗೆ ತಿಳಿಯಬೇಕು. ಈ ರೀತಿಯಾಗಿ ಓಂಕಾರ ರೂಪವಾದ ಪ್ರಣವಕ್ಕೆ ಅರ್ಥವು. ನಾನು ನಿನಗೆ ತಿಳಿಯುವಂತೆ ಹೇಳಿದ್ದೇನೆ.

೩೯. ಈ ರೀತಿಯಾಗಿ ಉಳಿದ ಮಂತ್ರದಿಂದಲೂ ಪ್ರಣವದ ಅರ್ಥವೇ ವಿವರಿಸಲ್ಪಡುತ್ತದೆ. ದಾಸಭೂತನಾದ ಮೂರನೆಯವನಿಗೆ ಸ್ವಾತಂತ್ರ್ಯವೆಂಬುದೇ ಇಲ್ಲವು.

೪೦. ಆದ್ದರಿಂದ ಬಹುವಾದ ಆಹಂಕಾರವನ್ನು ಮನಸ್ಸಿನಲ್ಲಿಯೂ ಇಡಬಾರದು. ತಾನೇ ಹೊಂದುವ ಬುದ್ಧಿಯಿಂದ (ತನಗೋಸ್ಕರ) ಮಾಡತಕ್ಕ ಕೆಲಸಗಳನ್ನೂ ನಿಷಿದ್ಧವಾದುವುಗಳೆಂದು ತಿಳಿ.

೪೧. ಮಕಾರಕ್ಕೆ ಅಹಂಕಾರವೆಂದು ಹೆಸರು. ನಕಾರವು ನಿಷೇಧಾರ್ಥಕವು. ಅಹಂಕಾರವು ಬೇಡ ಎಂದಾಗುತ್ತದೆ. ಆದ್ದರಿಂದ ಮನಸ್ಸಿನಲ್ಲಿಯೂ ಅಹಂಕಾರವನ್ನು ಬಿಡಬೇಕು.

ಮನಸಾ ಸರ್ವಸಿದ್ಧಿಸ್ಸ್ಯಾದನ್ಯಥಾ ನಾಶಮಾಪ್ನುಯಾತ್ ।
ಮನಸಾ ಸಹಿತಂ ಕಿಂಚಿತ್ತದಹಂಕಾರ ಉಚ್ಯತೇ ॥ ೪೨ ॥

ಸಾಹಂಕಾರೇಣ ಯುಕ್ತಸ್ಯ ಸುಖಂ ಕಿಂಚಿನ್ನ ವಿದ್ಯತೇ ।
ಅಹಂಕಾರವಿಮೂಢಾತ್ಮಾ ಅಂಧೇತಮಸಿ ಮಜ್ಜತಿ ॥ ೪೩ ॥

ತಸ್ಮಾತ್ತು ಮನಸಾ ಕ್ಷೇತ್ರಸ್ವಾತಂತ್ರ್ಯಂ ಪ್ರತಿಷಿಧ್ಯತೇ ।
ಭಗವತ್ಪರತಂತ್ರೋಽಸೌ ತದಾಯತ್ತಾತ್ಮಜೀವನಃ ॥ ೪೪ ॥

ತಸ್ಮಾತ್ಸಾಧನಕರ್ತೃತ್ವಂ ಚೇತನಸ್ಯ ನ ವಿದ್ಯತೇ ।
ಈಶ್ವರಸ್ಯೈವ ಸಂಕಲ್ಪಾದ್ವರ್ತತೇ ಸಚರಾಚರಂ ॥ ೪೫ ॥

ತಸ್ಮಾತ್ಸ್ವಸಾಮರ್ಥ್ಯವಿಧಿಂ ತ್ಯಜೇತ್ಸರ್ವಮಶೇಷತಃ ।
ಈಶ್ವರಸ್ಯ ತು ಸಾಮರ್ಥ್ಯಾನ್ನಾಲಭ್ಯಂ ತಸ್ಯ ವಿದ್ಯತೇ ॥ ೪೬ ॥

---

೪೨. ಆ ರೀತಿಯಾಗಿ ಮನಸ್ಸು ಸರಿಯಾಗಿದ್ದರೆ ಸರ್ವಸಿದ್ಧಿಯೂ ಆಗುವುದು. ಇಲ್ಲದಿದ್ದರೆ ನಾಶವಾಗುತ್ತದೆ. ಮನಸ್ಸಿನಲ್ಲಿ ಯಾವುದಾದರೂ ಇಟ್ಟುಕೊಂಡಿರುವಿಕೆಯೇ ಅಹಂಕಾರವೆಂದೆನಿಸುವುದು.

೪೩. ಅಹಂಕಾರದಿಂದ ಕೂಡಿದವನಿಗೆ ಸುಖವೆಂಬುದೇ ಇರುವುದಿಲ್ಲ. ಅಹಂಕಾರದಿಂದ ಮೂಢನಾದವನು ಅಂಧತಮಸ್ಸೆಂಬ ನರಕದಲ್ಲಿ ಬೀಳುತ್ತಾನೆ.

೪೪. ಆದ್ದರಿಂದ ಮನಸ್ಸಿನಿಂದಲೂ ಕೂಡ ಆತ್ಮನು ಇದು ನನ್ನ ದೇಹವೆಂದೆನ್ನುವ ಸ್ವಾತಂತ್ರ್ಯವನ್ನು ಹೊಂದಕೂಡದೆಂದು ನಿಷೇಧಿಸಲ್ಪಟ್ಟಿದೆ. ಈ ಆತ್ಮನು ಭಗವಂತನಿಗೆ ಅಧೀನನು. ಭಗವಂತನ ಅಧೀನವಾದ ಜೀವನವುಳ್ಳವನು.

೪೫. ಕಾರಣದಲ್ಲಿ ಕರ್ತೃವಾಗಿರುವಿಕೆಯು ಚೇತನನಿಗೆ ಇರುವುದೇ ಇಲ್ಲ. ಈಶ್ವರನ ಸಂಕಲ್ಪದಿಂದಲೇ ಈ ಚರಾಚರಗಳು ಇರುವುದು. ಮತ್ತು ನಡೆಯುವುದು.

೪೬. ಆದ್ದರಿಂದ ಈ ಚೇತನನು ತನ್ನ ಸಾಮರ್ಥ್ಯದಿಂದ ಹೊಂದುವುದಕ್ಕೆ ಪ್ರಯತ್ನ ಪಡುವಿಕೆಯನ್ನು ಪೂರ್ಣವಾಗಿ ಬಿಟ್ಟುಬಿಡಬೇಕು. ಆದರೆ ಇವನಿಗೆ ಈಶ್ವರನ ಸಾಮರ್ಥ್ಯದಿಂದ ಎಲ್ಲವೂ ಸಿಕ್ಕುತ್ತವೆಯೇ ಹೊರತು ಸಿಕ್ಕದಿರುವುದು ಒಂದೂ ಇಲ್ಲ.

ತಸ್ಮಿನ್ನ್ಯಸ್ತಭರಃ ಶ್ರೀಶೇ ತತ್ಕರ್ಮೈವ ಸಮಾಚರೇತ್ ।
ಪರಮಾತ್ಮಾ ಹರಿರ್ದಾಸಃ ಸ್ಯಾಮಹಂ ತಸ್ಯ ಸರ್ವದಾ ॥ ೪೭ ॥

ಇಚ್ಛಯಾ ವಿನಿಯೋಕ್ತವ್ಯಃ ತಸ್ಯೈವಾತ್ಮೇಶ್ವರಸ್ಯ ಹಿ ।
ಇತ್ಯೇವಂ ಮನಸಾ ತ್ಯಾಜ್ಯಮಹಂತಾಮಮತೋರ್ಜಿತಂ ॥ ೪೮ ॥

ದೇಹೇಷ್ವಹಂಮತಿರ್ಮೂಲಂ ಸಂಸೃತೌ ಕರ್ಮಬಂಧನೇ ।
ತಸ್ಮಾನ್ಮಹದಹಂಕಾರೌ ಮನಸಾ ವರ್ಜಯೇದ್ಬುಧಃ ॥ ೪೯ ॥

ಅಥ ನಾರಾಯಣಪದಂ ವಕ್ಷ್ಯಾಮಿ ಗಿರಿಜೇ ಶುಭೇ ।
ನಾರಾ ಇತ್ಯಾತ್ಮನಾಂ ಸಂಘಃ ತೇಷಾಂ ಗತಿರಸೌ ಪುಮಾನ್ ॥ ೫೦ ॥

ತಾನ್ಯೇವ ಚಾಯನಂ ತಸ್ಯ ತಸ್ಮಾನ್ನಾರಾಯಣಃ ಸ್ಮೃತಃ ।
ಸರ್ವಂ ಹಿ ಚಿದಚಿದ್ವಸ್ತು ಶ್ರೂಯತೇ ದೃಶ್ಯತೇ ಚ ಯತ್ ॥ ೫೧ ॥

---

೪೭-೪೮. ಆ ಶ್ರೀಶನಲ್ಲಿ ಭಾರವನ್ನು ಹಾಕಿ ಅವನ ಕರ್ಮವೆಂದೇ ಮಾಡುತ್ತಿರಬೇಕು. ಹರಿಯು ಪರಮಾತ್ಮನು. ನಾನು ಯಾವಾಗಲೂ ದಾಸನಾಗಿದ್ದೇನೆ. ಆತ್ಮಸ್ವರೂಪನಾದ ಅವನು ತನ್ನ ಇಚ್ಛೆ ಬಂದಂತೆ ನನ್ನನ್ನು ವಿನಿಯೋಗಮಾಡಿಕೊಂಡು ಅಪ್ಪಣೆಮಾಡಬಹುದು. ಈ ರೀತಿಯಾಗಿ ಮನಸ್ಸಿನಲ್ಲಿ ಮಾಡಿಕೊಂಡು ಅಹಂಕಾರ ಮಮಕಾರಗಳನ್ನು ಮನಸ್ಸಿನಿಂದಲೂ ಬಿಟ್ಟುಬಿಡಬೇಕು.

೪೯. ಸಂಸಾರದಲ್ಲಿಯೂ ಕರ್ಮದ ಅಧೀನವಾಗುವುದರಲ್ಲಿಯೂ ದೇಹದಲ್ಲಿಟ್ಟಿರುವ ಅಹಂಕಾರ ಮಮಕಾರಗಳೇ ಮೂಲಗಳು. ಆದ್ದರಿಂದ ಮಮಕಾರ ಅಹಂಕಾರಗಳನ್ನು ಮನಸ್ಸಿನಲ್ಲಿಯೂ ತಿಳಿದವನು ಇಟ್ಟುಕೊಳ್ಳಬಾರದು.

೫೦-೫೯. ಇನ್ನು ಮುಂದೆ ನಾರಾಯಣ ಎಂಬ ಪದಕ್ಕೆ ಅರ್ಥವನ್ನು ಹೇಳುತ್ತೇನೆ. ಕೇಳು. ನಾರಾ ಎಂದರೆ ಆತ್ಮಗಳ ಗುಂಪು. ಅವರಿಗೆಲ್ಲಾ ಈ ಪುರುಷನು ಗತಿಯಾಗಿರುವನು. ಆ ಆತ್ಮಸಂಘವೇ ಇವನಿಗೆ ಮನೆಯಾದುದರಿಂದ ಇವನಿಗೆ "ನಾರಾಯಣ" ಎಂದು ಹೆಸರು ಬಂದಿದೆ. ಪ್ರಪಂಚದಲ್ಲಿ ಚಿತ್ ಅಚಿತ್ ವಸ್ತುಗಳೆಂದು ಯಾವುವಿವೆಯೋ ಅವೆಲ್ಲವನ್ನೂ ಈ ನಾರಾಯಣನು

ಯೋಽಸೌ ವ್ಯಾಪ್ಯ ಸ್ಥಿತೋ ನಿತ್ಯಂ ಸ ವೈ ನಾರಾಯಣಃ ಸ್ಮೃತಃ ।
ನಾರಾಸ್ತ್ವಿತಿ ಸ ವೈ ಪುಂಸಾಂ ಸಮೂಹಃ ಪರಿಕೀರ್ತಿತಃ ॥ ೫೨ ॥

ಗತಿರಾಲಂಬನಂ ತೇಷಾಂ ತಸ್ಮಾನ್ನಾರಾಯಣಃ ಸ್ಮೃತಃ
ನರಾಜ್ಜಾತಾನಿ ತತ್ವಾನಿ ನಾರಾ ಇತಿ ಜಗುರ್ಬುಧಾಃ ॥ ೫೩ ॥

ತಾನ್ಯೇವ ಚಾಯನಂ ತಸ್ಯ ತೇನ ನಾರಾಯಣಃ ಸ್ಮೃತಃ ।
ಕಲ್ಪಾಂತೇಽಪಿ ಜಗತ್ ಕೃತ್ಸ್ನಂ ಗ್ರಸಿತ್ವಾ ಯೇನ ಧಾರ್ಯತೇ ॥ ೫೪ ॥

ಪುನಃ ಸಂಸೃಜ್ಯತೇ ಯೇನ ಸ ವೈ ನಾರಾಯಣಃ ಸ್ಮೃತಃ ।
ಚರಾಚರಂ ಜಗತ್ ಕೃತ್ಸ್ನಂ ನಾರ ಇತ್ಯಭಿಧೀಯತೇ ॥ ೫೫ ॥

ತಸ್ಯ ವಾಸಂ ಪತಿರ್ಯೇನ ತೇನ ನಾರಾಯಣಃ ಸ್ಮೃತಃ ।
ನಾರೋ ನರಾಣಾಂ ಸಂಘಾತಃ ತಸ್ಯಾಸ್ಯಾದಯನಂ ಗತಿಃ ॥ ೫೬ ॥

ತೇನಾಸ್ಮಿ ಮುನಿಭಿರ್ನಿತ್ಯಂ ನಾರಾಯಣ ಇತೀರಿತಃ ।
ಪ್ರಭವಂತಿ ಯಥಾ ಲೋಕಾ ಮಹಾಬ್ಧೌ ಪೃಥುಫೇನವತ್ ॥ ೫೭ ॥

---

ಯಾವಾಗಲೂ ವ್ಯಾಪಿಸಿಕೊಂಡಿರುವವನು. ಆದ್ದರಿಂದ ಅವನಿಗೆ ನಾರಾಯಣನೆಂದು ಹೆಸರು ಬಂದಿದೆ. ನಾರಾ ಎಂದರೆ ಮನುಷ್ಯರ ಗುಂಪೆಂದು ಅರ್ಥವಾಗುತ್ತೆ. ಅವರಿಗೆ ಗತಿಯು. ಅಥವಾ ಆಶ್ರಯ ಪದಾರ್ಥನು. ಆದ್ದರಿಂದ ಇವನಿಗೆ ನಾರಾಯಣನೆಂದು ಹೆಸರು. ನರನಿಂದ ಹುಟ್ಟಿದ ತತ್ವಗಳಿಗೆ ನಾರಾಗಳೆಂದು ಹೆಸರು ಅವುಗಳೇ ಇವನಿಗೆ ಸ್ಥಾನವಾದುದರಿಂದ ಇವಗೆ ನಾರಾಯಣನೆಂದು ಹೆಸರು. ಕಲ್ಪದ ಕೊನೆಯಲ್ಲಿ ಪ್ರಪಂಚವೆಲ್ಲವನ್ನೂ ನುಂಗಿ ಧರಿಸಿಕೊಂಡಿದ್ದು ಮತ್ತೆ ಅದನ್ನು ಸೃಷ್ಟಿಮಾಡುವುದರಿಂದ ಇವನು ನಾರಾಯಣನೆಂದೆನಿಸಿ ಕೊಳ್ಳುತ್ತಾನೆ. ಚರಾಚರರೂಪವುಳ್ಳ ಈ ಜಗತ್ತೆಲ್ಲವೂ ನಾರಾ ಎಂಬುದಾಗಿ ಹೇಳಲ್ಪಡುತ್ತದೆ ಅದರೊಡನೆ ಇವನಿಗೆ ಸಂಬಂಧವಿರುವುದರಿಂದ ನಾರಾಯಣ ನೆಂದೆನಿಸಿಕೊಳ್ಳುತ್ತಾನೆ. ನಾರವೆಂದರೆ ನರರ ಸಂಘಾತವು. ಅವುಗಳಿಗೆ ಈತನು ಗತಿಯು ಆದ್ದರಿಂದ ಮುನಿಗಳು ಈತನನ್ನು ನಾರಾಯಣನೆಂದೆನ್ನುತ್ತಾರೆ. ದೊಡ್ಡದಾದ ಸಮುದ್ರದಲ್ಲಿ ದೊಡ್ಡ ದೊಡ್ಡ ಅಲೆಗಳೆದ್ದು ಮತ್ತೆ ಆ ಸಮುದ್ರ

ಪುನರ್ಯಸ್ಮಾತ್ಪ್ರಲೀಯನ್ತೇ ತಸ್ಮಾನ್ನಾರಾಯಣಃ ಸ್ಮೃತಃ |
ಯೋ ವೈ ನಿತ್ಯಪದೋ ನಿತ್ಯೋ ನಿತ್ಯಯುಕ್ತೈಕಭೋಗವಾನ್ || ೫೮ ||

ಈಶಸ್ಸರ್ವಸ್ಯ ಜಗತಃ ಸ ವೈ ನಾರಾಯಣಃ ಸ್ಮೃತಃ |
ದಿವ್ಯ ಏಕಸ್ಸದಾ ನಿತ್ಯೋ ಹರಿರ್ನಾರಾಯಣೋಽಚ್ಯುತಃ || ೫೯ ||

ಯತ್ರ ದ್ರಷ್ಟಾ ಚ ದ್ರಷ್ಟವ್ಯಂ ಶ್ರೋತಾ ಶ್ರೋತವ್ಯಮೇವ ಚ |
ಸ್ಪ್ರಷ್ಟಾ ಸ್ಪ್ರಷ್ಟವ್ಯಂ ಚ ತಥಾ ಧ್ಯಾತಾ ಧ್ಯಾತವ್ಯಮೇವ ಚ || ೬೦ ||

ವಕ್ತಾ ಚ ವಾಚ್ಯಂ ಜ್ಞಾತಾ ಚ ಜ್ಞಾತವ್ಯಂ ಚಿದಚಿಜ್ಜಗತ್ |
ತಚ್ಚ ಸರ್ವಂ ಹರಿಃ ಶ್ರೀಶಃ ನಾರಾಯಣ ಉದಾಹೃತಃ || ೬೧ ||

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ |
ಸ ಲೋಕಾನ್ ಸರ್ವತೋ ವ್ಯಾಪ್ಯ ಅತ್ಯತಿಷ್ಠದ್ದಶಾಂಗುಲಂ || ೬೨ ||

---

ದಲ್ಲಿಯೇ ಅಡಗಿಕೊಳ್ಳುವಂತೆ ಈ ಪ್ರಪಂಚವೂ ಈಗ ಕಾಣುತ್ತಿದ್ದು ಕೊನೆಗೆ ಆ ಸ್ವಾಮಿಯಲ್ಲಿಯೇ ಅಡಗಿ ಹೋಗುವುದು. ಈ ನಾರಾಯಣನು ಇಂತಹವನು. ಆದ್ದರಿಂದ ಇವನಿಗೆ ನಾರಾಯಣನೆಂದು ಹೆಸರು ಬಂದಿರುವುದು. ಯಾವನು ನಿತ್ಯಪದವನ್ನು ಕೊಡುವನೋ, ನಿತ್ಯನೋ, ನಿತ್ಯದಿಂದ ಕೂಡಿರುವ ಭೋಗವುಳ್ಳ ವನೋ ಎಲ್ಲಾ ಲೋಕಕ್ಕೂ ಒಡೆಯನೋ ಅವನೇ ನಾರಾಯಣನು.

೬೦-೬೧. ನೋಡುವವನು, ನೋಡಿಕೊಳ್ಳುವವನು, ಕೇಳುವವನು, ಕೇಳತಕ್ಕ ಪದಾರ್ಥವು, ಮುಟ್ಟುವವನು, ಮುಟ್ಟಿಸಿಕೊಳ್ಳತಕ್ಕದ್ದು, ಧ್ಯಾನ ಮಾಡಿಸಿಕೊಳ್ಳುವವನು, ಧ್ಯಾನಮಾಡುವವನು, ಹೇಳುವವನು, ಹೇಳಿಸಿಕೊಳ್ಳು ವವನು, ತಿಳಿಯುವವನು, ತಿಳಿಯತಕ್ಕವನು ಚಿತ್ ಅಚಿತ್ ಇವೆಲ್ಲವೂ ಕೂಡ ಆ ಹರಿಯೇ ಆಗಿರುವನು. ಅವನೇ ನಾರಾಯಣನು.

೬೨-೬೪. ಸಾವಿರತಲೆಗಳೂ, ಸಾವಿರಕಣ್ಣುಗಳೂ, ಸಾವಿರಪಾದಗಳೂ, ಇರುವವನು. ಅವನು ಲೋಕವೆಲ್ಲವನ್ನೂ ವ್ಯಾಪಿಸಿಕೊಂಡು ಹತ್ತು

ಯದ್ಭೂತಂ ಯಚ್ಚ ಭಾವ್ಯಂ ಚ ಸರ್ವಂ ನಾರಾಯಣೋ ಹರಿಃ ।
ಉತಾಮೃತತ್ವಸ್ಯೇಶಾನಃ ಯದನ್ನೇನ ವಿರಾಟ್ ಪುಮಾರ್‌ ॥ ೬೩ ॥

ಸ ಏವ ಪುರುಷೋ ವಿಷ್ಣುಃ ವಾಸುದೇವೋಽಚ್ಯುತೋ ಹರಿಃ ।
ಹಿರಣ್ಮಯೋಽಥ ಭಗವಾನಮೃತಃ ಶಾಶ್ವತಃ ಶಿವಃ ॥ ೬೪ ॥

ಪತಿರ್ವಿಶ್ವಸ್ಯ ಜಗತಃ ಸರ್ವಲೋಕೇಶ್ವರಃ ಪ್ರಭುಃ ।
ಹಿರಣ್ಯಗರ್ಭಸ್ಸವಿತಾ ಅನಂತೋಽಸೌ ಮಹೇಶ್ವರಃ ॥ ೬೫ ॥

ಭಗವಾನಿತಿಶಬ್ದೋಽಯಂ ತಥಾ ಪುರುಷ ಇತ್ಯಪಿ ।
ವರ್ತತೇ ನಿರುಪಾಧಿಶ್ಚ ವಾಸುಧೇವೋಽಖಿಲಾತ್ಮನಿ ॥ ೬೬ ॥

ಈಶ್ವರೋ ಭಗವಾರ್‌ ವಿಷ್ಣುಃ ಪರಮಾತ್ಮಾ ಜಗತ್ಸ್ರಹೃತ್ ।
ಶಾಸ್ತಾ ಚರಾಚರಸ್ಯೈಕೋ ಯತೀನಾಂ ಪರಮಾ ಗತಿಃ ॥ ೬೭ ॥

---

ಅಂಗುಲಗಳು ಹೆಚ್ಚಾಗಿಯೂ ಇರುವನು. ಕಳೆದುವೂ ಮುಂದೆ ಆಗತಕ್ಕವೂ ಯಾವುವು ಇವೆಯೋ ಅವೆಲ್ಲವೂ ನಾರಾಯಣನೇ ಆಗಿರುವನು. ಯಾವುದನ್ನು ತಿನ್ನುವುದರಿಂದ ಶಾಶ್ವತನಾದ ಪುರುಷನಾಗುವನೋ ಅಂತಹ ಉತಾಮೃತತ್ವಕ್ಕೇ ಒಡೆಯನು. ಅವನೇನೇ ಪುರುಷನು. ವಿಷ್ಣುವು. ವಾಸುದೇವನು. ಹರಿಯು. ಹಿರಣ್ಮಯನು ಭಗವಂತನು. ಅಮೃತನು. ಶಾಶ್ವತನು. ಶಿವನು. ಮಂಗಳಸ್ವರೂಪನು.

೬೫. ಎಲ್ಲಾ ಪ್ರಪಂಚಕ್ಕೂ ಒಡೆಯನು. ಹಿರಣ್ಯಗರ್ಭನು. ಎಲ್ಲವನ್ನೂ ಉತ್ಪತ್ತಿಮಾಡುವವನು. ಅನಂತನು. ಮಹೇಶ್ವರನು.

೬೬–೬೭. ಭಗವಾರ್‌ ಎಂಬ ಉತ್ತಮ ಶಬ್ದವನ್ನು ಹೊಂದಿರುವವನು. ಪುರುಷನು. ಉಪಾಧಿಗಳಿಲ್ಲದವನು. ವಾಸುದೇವನು. ಎಲ್ಲರಲ್ಲಿಯೂ ಇರತಕ್ಕವನು. ಚರಾಚರಗಳಿಗೆ ನಿಯಾಮಕನು. ಯತಿಗಳಿಗೆ ಉತ್ತಮವಾದ ಗತಿಯು.

ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾನ್ತೇ ಚ ಪ್ರತಿಷ್ಠಿತಃ ।
ತಸ್ಯ ಪ್ರಕೃತಿಲೀಲಸ್ಯ ಯಃ ಪರಸ್ಸ ಮಹೇಶ್ವರಃ ॥ ೬೮ ॥

ಯೋಽಸಾವಕಾರೋ ವೈ ವಿಷ್ಣುಃ ವಿಷ್ಣುರ್ನಾರಾಯಣೋ ಹರಿಃ ।
ಸ ಏವ ಪುರುಷೋ ನಿತ್ಯಃ ಪರಮಾತ್ಮಾ ಮಹೇಶ್ವರಃ ॥ ೬೯ ॥

ಯಸ್ಮಿನ್ನೀಶ್ವರಸಂಜ್ಞಾಪಿ ಪ್ರೋಚ್ಯತೇ ಮುನಿಭಿಸ್ತಥಾ ।
ನಿರುಪಾಧೀಶ್ವರತ್ವಂ ಹಿ ವಾಸುದೇವೇ ಪ್ರತಿಷ್ಠಿತಂ ॥ ೭೦ ॥

ಆತ್ಮೇಶ್ವರ ಇತಿ ಪ್ರೋಕ್ತೋ ವೇದವಾದ್ಯೈಸ್ಸನಾತನೈಃ ।
ತಸ್ಮಾನ್ಮಹೇಶ್ವರತ್ವಂ ತು ವಾಸುದೇವೇ ಪ್ರತಿಷ್ಠಿತಂ ॥ ೭೧ ॥

---

೬೮. ವೇದದ ಆದಿಯಲ್ಲಿ ಯಾವನು ಓಂಕಾರವಾದ ಸ್ವರದರೂಪದಲ್ಲಿರುವನೋ, ವೇದಾನ್ತದಲ್ಲಿ ಯಾವನನ್ನು ಹೊಗಳುತ್ತಾರೆಯೋ, ಯಾವನು ಪ್ರಪಂಚದ ಪ್ರಕೃತಿಯೇ ಲೀಲೆಯಾಗಿ ಉಳ್ಳವನೋ, ಅವನೇ ಮಹೇಶ್ವರನಾದ ನಾರಾಯಣನು.

೬೯. ಯಾವನು ಅಕಾರವಾಚ್ಯನೋ ಅವನೇ ವಿಷ್ಣುವು. ವಿಷ್ಣುವೇ ನಾರಾಯಣನು. ಹರಿಯು. ಅವನೇ ನಿತ್ಯನಾದ ಪುರುಷನು. ಪರಮಾತ್ಮನು. ಮಹೇಶ್ವರನು.

೭೦. ಈಶ್ವರನೆಂಬುದಾಗಿ ಯಾವನನ್ನು ಮುನಿಗಳು ಹೇಳುತ್ತಾರೆಯೋ ಅಂತಹ ಉಪಾಧಿರಹಿತವಾದ ಈಶ್ವರತ್ವವು ವಾಸುದೇವನಾದ ನಾರಾಯಣನಲ್ಲಿ ನಿಂತಿದೆ.

೭೧. ವೇದವಾದಿಗಳಾದ ಹಿಂದಿನವರು ಈ ನಾರಾಯಣನನ್ನೇ ಆತ್ಮೇಶ್ವರನೆಂದು ಹೇಳುತ್ತಾರೆ. ಆ ಮಹೇಶ್ವರತ್ವವು ಈ ವಾಸುದೇವನಾದ ನಾರಾಯಣನಲ್ಲಿದೆ.

ಅಸೌತ್ರಿಪಾದಭೂತೇಷು ಲೀಲಯಾ ಅಪಿ ಚೇಶ್ವರಃ |
ವಿಭೂತಿದ್ವಯಮನ್ಯೈಶ್ವರ್ಯಂ ತಸ್ಯೈವ ಸಕಲಾತ್ಮನಃ || ೭೨ ||

ಶ್ರೀಭೂಲೀಲಾಪತಿರ್ಯೋಽಸಾವಚ್ಯುತಸ್ಸ ಉದಾಹೃತಃ |
ತಸ್ಮಾತ್ಸರ್ವೇಶ್ವರತ್ವಂ ತು ವಾಸುದೇವೇ ಪ್ರತಿಷ್ಠಿತಂ || ೭೩ ||

ಯೋಽಸೌ ಮಹೇಶ್ವರೋ ಯಜ್ಞೋ ಯಜ್ಞಭುಗ್ಯಜ್ಞಕೃದ್ವಿಭುಃ |
ಯಜ್ಞಭೃದ್ಯಜ್ಞಪುರುಷಃ ಸ ಏವ ಪರಮೇಶ್ವರಃ || ೭೪ ||

ಯಜ್ಞೇಶ್ವರೋ ಹವ್ಯಸಮಸ್ತಕವ್ಯ
ಭೋಕ್ತಾವ್ಯಯಾತ್ಮಾ ಹರಿರೀಶ್ವರೋಽತ್ರ |
ತತ್ಸನ್ನಿಧಾನಾದಪಯಾಂತಿ ಸದ್ಯೋ
ರಕ್ಷಾಂಸ್ಯಶೇಷಾಣ್ಯಸುರಾಶ್ಚ ಭೂತಾಃ || ೭೫ ||

---

೭೨. ಈತನೇ ತ್ರಿಪಾದಭೂತಗಳಲ್ಲಿರುವ ಈಶ್ವರನು. ವಿಭೂತಿದ್ವಯವುಳ್ಳವನು. ಈಶ್ವರನ ರೂಪವಾದ ಐಶ್ವರ್ಯವುಳ್ಳವನು.

೭೩. ಶ್ರೀ ಮತ್ತು ಭೂಮಿಗಳಿಗೆ ಒಡೆಯನಾಗಿರುವವನು. ಅಚ್ಯುತನೆಂದು ಹೆಸರನ್ನು ಹೊಂದಿರುವವನು. ಆದ್ದರಿಂದಲೇ ಸರ್ವೇಶ್ವರತ್ವವು ಈ ವಾಸುದೇವನಲ್ಲಿ ನೆಲಸಿದೆ.

೭೪. ಆ ನಾರಾಯಣನೇ ಮಹೇಶ್ವರನು. ಯಜ್ಞವು ಯಜ್ಞವನ್ನು ತಿನ್ನುವವನು. ಯಜ್ಞವನ್ನು ಧರಿಸುವವನು. ಯಜ್ಞಪುರುಷನು. ಅವನೇ ಮಹೇಶ್ವರನು.

೭೫. ಆ ನಾರಾಯಣನು ಯಜ್ಞೇಶ್ವರನು. ಹವಿಸ್ಸನ್ನು ತಿನ್ನುವವನು. ಅವ್ಯಯನಾದ ಆತ್ಮಸ್ವರೂಪನು. ಈಶ್ವರನು. ಅವನು ಹತ್ತಿರವಿದ್ದರೇ ರಾಕ್ಷಸರು, ಅಸುರರು, ಭೂತಗಳು ಎಲ್ಲರೂ ಒಡನೆಯೇ ಓಡಿಹೋಗುತ್ತಾರೆ.

ಯೋಽಸೌ ವಿರಾಟ್ಸ್ವರೂಪಸ್ಸ್ಯೋಽ ಹರಿರ್ಭೂತಾತ್ಮಾ ಜನಾರ್ದನಃ ।
ಸಂತರ್ಪಯತಿ ಲೋಕಾಂಸ್ತ್ರೀನ್ ಸ ಏವ ಪರಮೇಶ್ವರಃ ॥ ೭೬ ॥

ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ ।
ತಸ್ಮಾದ್ಯಜ್ಞಾತ್ಸಮುತ್ಪನ್ನಾ ಯೆ ಕೇ ಚೋಭಯಾದತಃ ॥ ೭೭ ॥

ತಸ್ಮಾದ್ಯಜ್ಞಾತ್ಸರ್ವಹುತಃ ಋಚಸ್ಸಾಮಾನಿ ಜಜ್ಞಿರೇ ।
ತಸ್ಮಾದಶ್ವಾ ಅಜಾಯನ್ತ ಗಾವಶ್ಚ ಪುರುಷಾದಯಃ ॥ ೭೮ ॥

ಪುರುಷಸ್ಯ ತನೋೇರಸ್ಯ ಸರ್ವಯಜ್ಞಮಯಸ್ಯ ವೈ ।
ಹರೇಸ್ಸರ್ವಂ ಸಮುದ್ಭೂತಂ ಜಗತ್ ಸ್ಥಾವರಜಂಗಮಂ ॥ ೭೯ ॥

---

೭೬. ಯಾವನು ವಿರಾಟ್‌ಸ್ವರೂಪನೋ, ಹರಿಯೂ ಜನಾರ್ದನನೂ ಎನ್ನಿಸಿಕೊಳ್ಳುವನೋ, ಯಾವನು ಭೂತಗಳನ್ನು ತೃಪ್ತಿಪಡಿಸುವನೋ, ಅವನೇ ನಾರಾಯಣನು.

೭೭. ಯಾವ ಪುರುಷನ ರೂಪವಾದ ಹವಿಸ್ಸಿನಿಂದ ದೇವತೆಗಳು ಯಜ್ಞವನ್ನು ಮಾಡಿಹರೋ ಅಂತಹ ಯಜ್ಞದಿಂದ ಹುಟ್ಟಿ ಭಯವನ್ನು ನಾಶ ಮಾಡುವವರು ಆ ಹವಿಸ್ಸಿನ ದೆಸೆಯಿಂದ ಯಾರು ಹುಟ್ಟಿದರೋ ಅವರೇ ನಾರಾಯಣನು.

೭೮. ಹೋಮಮಾಡಿದ ಆ ಯಜ್ಞದಿಂದ ಋಕ್ಕುಗಳೂ ಸಾಮಗಳೂ ಹುಟ್ಟಿದುವು. ಅದರಿಂದಲೇ ಕುದುರೆಗಳೂ ಹುಟ್ಟಿದುವು. ಗೋವುಗಳೂ ಪುರುಷರೂ ಇನ್ನೂ ಅನೇಕವೂ ಹುಟ್ಟಿದುವು.

೭೯. ಸರ್ವಯಜ್ಞಮಯನಾಗಿರುವ ಈ ಪುರುಷನ ರೂಪವಾದ ಹರಿಯಿಂದ ಸ್ಥಾವರಜಂಗಮರೂಪವಾದ ಸಮಸ್ತವೂ ಹುಟ್ಟಿದುವು.

ಮುಖಬಾಹೂರೂಪಾದೇಭ್ಯಃ ತಸ್ಯ ವರ್ಣಾ ಯಥಾಕ್ರಮಂ ।
ಪದ್ಭ್ಯಾಂ ತು ಪೃಥಿವೀ ತಸ್ಯ ಶಿರಸೋ ದ್ಯೌರಜಾಯತ || ೮೦ ||

ಮನಸಶ್ಚಂದ್ರಮಾ ಜಾತಶ್ಚಕ್ಷುಷಶ್ಚ ಪ್ರಭಾಕರಃ ।
ಮುಖಾದಗ್ನಿಃ ಶೀರ್ಷಣೋ ದ್ಯೌಃ ವಾಯುಃ ಪ್ರಾಣಾತ್ಸದಾಗತಿಃ || ೮೧ ||

ನಾಭೇರಭೂದ್ವೈ ಗಗನಂ ಜಗತ್ಸರ್ವಂ ಚರಾಚರಂ ।
ಯಸ್ಮಾತ್ಸರ್ವಂ ಸಮುದ್ಭೂತಂ ಜಗದ್ವಿಷ್ಣೋಸ್ಸನಾತನಂ || ೮೨ ||

ತಸ್ಮಾತ್ಸರ್ವಮಯೋ ವಿಷ್ಣುಃ ನಾರಾಯಣ ಇತೀರಿತಃ ।
ಏವಂ ಸೃಷ್ಟ್ವಾ ಜಗತ್ಸರ್ವಂ ಪುನಃ ಸಂಗ್ರಸತೇ ಹರಿಃ || ೮೩ ||

ನಿಜಲೀಲಾಸಮುದ್ಭೂತಂ ತಾಂತವಂ ತೂರ್ಣನಾಭಿವತ್ ।
ಬ್ರಹ್ಮಾಣಮಿಂದ್ರಂ ರುದ್ರಂ ಚ ಯಮಂ ವರುಣಮೇವ ಚ || ೮೪ ||

---

೮೦. ಆ ನಾರಾಯಣನ ಮುಖದಿಂದ ಬ್ರಾಹ್ಮಣನೂ ಬಾಹುವಿನಿಂದ ಕ್ಷತ್ರಿಯನೂ ಊರುವಿನಿಂದ ವೈಶ್ಯನೂ ಪಾದಗಳಿಂದ ಶೂದ್ರನೂ ಹುಟ್ಟಿದರು. ಪಾದಗಳಿಂದ ಭೂಮಿಯೂ ತಲೆಯಿಂದ ಆಕಾಶವೂ ಹುಟ್ಟಿದುವು.

೮೧-೮೨. ಮನಸ್ಸಿನಿಂದ ಚಂದ್ರನೂ ಕಣ್ಣುಗಳಿಂದ ಸೂರ್ಯನೂ ಮುಖದಿಂದ ಅಗ್ನಿಯೂ ತಲೆಯಿಂದ ಆಕಾಶವೂ ಪ್ರಾಣದಿಂದ ವಾಯುವೂ ನಾಭಿಯಿಂದ ಗಗನವೂ ಈ ರೀತಿಯಾಗಿ ಚರಾಚರಗಳು ಆ ಸನಾತನನಾದ ವಿಷ್ಣುವಿನಿಂದ ಉತ್ಪನ್ನವಾದುವು.

೮೩. ಆದ್ದರಿಂದ ವಿಷ್ಣುವು ಸರ್ವಮಯನು. ಅವನೇ ನಾರಾಯಣನು. ಈ ನಾರಾಯಣನು ಹೀಗೆ ಜಗತ್ತನ್ನು ಸೃಷ್ಟಿಸಿ ಮತ್ತೆ ಅದೆಲ್ಲವನ್ನೂ ನಾಶಮಾಡಿ ಬಿಡುವನು.

೮೪-೮೬. ನಾರಾಯಣನು ತನ್ನ ಲೀಲೆಯಿಂದ ಉತ್ಪತ್ತಿಮಾಡಿದ ಬ್ರಹ್ಮ ಇಂದ್ರ ರುದ್ರ ಯಮ ವರುಣ ಮೊದಲಾದವರನ್ನು ಜೇಡನು ತನ್ನ ಹೊಕ್ಕಳಿನಿಂದ

ನಿಗೃಹ್ಯ ಹರತೇ ಯಸ್ಮಾತ್ತಸ್ಮಾದ್ಧರಿರಿಹೋಚ್ಯತೇ ।
ಆಸಾವೇಕಾರ್ಣವೀಭೂತೇ ಮಾಯಾವಟದಲೇ ಪುಮಾನ್ ॥ ೮೫॥

ಜಗತ್ ಸ್ವಜಠರೇ ಕೃತ್ವಾ ಶೇತೇ ತಸ್ಮಿನ್ ಸನಾತನಃ ।
ಆಸೀದೇಕೋ ಹಿ ವೈ ಚಾತ್ರ ವಿಷ್ಣುರ್ನಾರಾಯಣೋವ್ಯಯಃ ॥ ೮೬ ॥

ನ ಬ್ರಹ್ಮಾ ನ ಚ ರುದ್ರಶ್ಚ ನ ದೇವಾ ನ ಮಹರ್ಷಯಃ ।
ನ ಇಮೇ ದ್ಯಾವಾಪೃಥಿವೀ ನ ಸೋಮೋ ನ ಚ ಭಾಸ್ಕರಃ ॥ ೮೭ ॥

ನ ನಕ್ಷತ್ರಾಣಿ ಲೋಕಾನಿ ನ ಚಾಂಡಂ ಮಹದಾವೃತಂ ।
ಯಸ್ಮಾಜ್ಜಗದ್ಧೃತಂ ತೇನ ಸಕಲಂ ಹರಿಣಾ ಶುಭೇ ॥ ೮೮ ॥

ಸೃಷ್ಟಂ ಪುನಸ್ತಥಾ ಸರ್ಗೇ ತಸ್ಮಾನ್ನಾರಾಯಣಃ ಸ್ಮೃತಃ ।
ತಸ್ಯ ದಾಸ್ಯಂ ಚತುರ್ಥ್ಯಂತಮಂತ್ರೈಃಪ್ರೋಕ್ತಂ ತು ಪಾರ್ವತಿ ॥ ೮೯ ॥

---

ನೂಲನ್ನು ಬಿಟ್ಟು ಮತ್ತೆ ತಾನೇ ನುಂಗುವಂತೆ ನುಂಗುತ್ತಾನೆ. ಈ ರೀತಿ ಸಂಹರಿಸುವುದರಿಂದ ಹರಿಯೆಂದು ಹೆಸರನ್ನು ಹೊಂದಿರುವನು. ಪ್ರಪಂಚವೆಲ್ಲವೂ ನೀರಾಗಿ ಒಂದೇ ಸಮುದ್ರದಂತೆ ಆದಾಗ ಈ ಸ್ವಾಮಿಯು ಎಲ್ಲಾ ಪ್ರಪಂಚವನ್ನೂ ತನ್ನ ಹೊಟ್ಟೆಯಲ್ಲಿಟ್ಟುಕೊಂಡು ಮಾಯೆಯಿಂದ ಆಲದೆಲೆಯನ್ನು ಮಾಡಿಕೊಂಡು ಅದರಲ್ಲಿ ಇರುತ್ತಾನೆ. ಆವಾಗ ಅವ್ಯಯನಾದ ನಾರಾಯಣನೊಬ್ಬನೇ ಇರುತ್ತಾನೆ.

೮೭–೯೦. ಬ್ರಹ್ಮ, ರುದ್ರ, ದೇವತೆಗಳು, ಮಹರ್ಷಿಗಳು, ಭೂಮ್ಯಾಕಾಶಗಳು, ಸೂರ್ಯ, ಚಂದ್ರ, ನಕ್ಷತ್ರಗಳು, ಈ ಲೋಕಗಳು, ಬ್ರಹ್ಮಾಂಡ ಇವುಗಳೊಂದೂ ಇಲ್ಲದಂತೆ ತಾನೇ ನುಂಗಿ ಧರಿಸಿಕೊಳ್ಳುತ್ತಾನೆ ಅವನೇ ಜಗತ್ತೆಲ್ಲವನ್ನೂ ನುಂಗಿ ಮತ್ತೆ ಸೃಷ್ಟಿಮಾಡುವಾಗ ಅಂತೆಯೇ ಸೃಷ್ಟಿಮಾಡುವನು. ಇದರಿಂದಲೇ ಇವನು ನಾರಾಯಣನು. ಎಂದು ಎನಿಸಿಕೊಳ್ಳುತ್ತಾನೆ. ಚತುರ್ಥೀ ವಿಭಕ್ತಿಯು ಆ ಸ್ವಾಮಿಗೆ ದಾಸ್ಯವನ್ನು ಹೇಳುತ್ತದೆ. ಈ ಬ್ರಹ್ಮನೇ ಮುಂತಾದ

ದಾಸಭೂತಂ ಜಗತ್ತಸ್ಯ ಬ್ರಹ್ಮಾದ್ಯಂ ಸಕಲಂ ಜಗತ್ ।
ಏವಮರ್ಥಂ ವಿದಿತ್ವಾ ವೈ ಪಶ್ಚಾನ್ಮಂತ್ರಂ ಪ್ರಯೋಜಯೇತ್ ।
ಅವಿದಿತ್ವಾರ್ಥಂ ಮಂತ್ರಸ್ಯ ಸಂಸಿದ್ಧಿಂ ನಾಧಿಗಚ್ಛತಿ　　　　॥ ೯೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಮಂತ್ರೋಪದೇಶ ಕಥನಂ ನಾಮ ಚತುಃಪಂಚಾಶದಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ

---

ಜಗತ್ತೂ ಎಲ್ಲವೂ ಆ ಸ್ವಾಮಿಗೆ ದಾಸಭೂತವಾಗಿದೆ. ಮೊದಲು ಅರ್ಥವನ್ನು ತಿಳಿದುಕೊಂಡು ಅನಂತರ ಮಂತ್ರವನ್ನು ಹೇಳಿಸಿಕೊಂಡು ಪುನಶ್ಚರಣೆ ಮಾಡಬೇಕು. ಮಂತ್ರದ ಅರ್ಥವನ್ನು ತಿಳಿದುಕೊಳ್ಳದಿದ್ದರೆ ಸಿದ್ಧಿಯನ್ನು ಹೊಂದಲಾರನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡ ಉಮಾಮಹೇಶ್ವರ ಸಂವಾದದಲ್ಲಿ ಮಂತ್ರೋಪದೇಶ ಕಥನವೆಂಬ ಇನ್ನೂರ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಪಂಚಾಶದಧಿಕದ್ವಿಶತತಮೋಽಧ್ಯಾಯಃ ||



|| ಶ್ರೀ ಪಾರ್ವತ್ಯುವಾಚ ||

ವಿಸ್ತರೇಣ ಮಮಾಚಕ್ಷ್ವ ಮಂತ್ರಾರ್ಥಪದಗೌರವಂ |
ಈಶ್ವರಸ್ಯ ಸ್ವರೂಪಂ ಚ ತದ್ಗುಣಾಂಶ್ಚ ವಿಭೂತಯಃ || ೧ ||

ತದ್ವಿಷ್ಣೋಃ ಪರಮಂ ಧಾಮ ವ್ಯೂಹಭೇದಾಂಸ್ತಥಾ ಹರೇಃ |
ಸರ್ವಮಾಖ್ಯಾಹಿ ತತ್ವೇನ ಮಮ ಸರ್ವಸುರೇಶ್ವರ || ೨ ||

|| ಈಶ್ವರ ಉವಾಚ ||

ಶೃಣು ದೇವಿ ಪ್ರವಕ್ಷ್ಯಾಮಿ ಸ್ವರೂಪಂ ಪರಮಾತ್ಮನಃ |
ವಿಭೂತಿಗುಣಸಂಘಾತಂ ತದವಸ್ಥಾತ್ಮಕಂ ಹರೇಃ || ೩ ||

---

## ಇನ್ನೂರ ಐವತ್ತೈದನೆಯ ಅಧ್ಯಾಯ



೧. ಶ್ರೀ ಪಾರ್ವತಿಯು ಹೇಳಿದಳು–ಎಲೈ ಮಹಾದೇವನೇ! ಆ ಈಶ್ವರನಾದ ನಾರಾಯಣನ ಮಂತ್ರದ ಅರ್ಥದ ಮಹಿಮೆಯನ್ನೂ ಸ್ವರೂಪವನ್ನೂ ವಿಸ್ತಾರವಾಗಿ ಹೇಳು.

೨. ಆ ವಿಷ್ಣುವಿನ ಜಾಗಗಳನ್ನೂ ಅದರಲ್ಲಿರುವ ಭಾಗಗಳನ್ನೂ ಎಲ್ಲವನ್ನೂ ಕೂಡ ತಿಳಿಯುವಂತೆ ವಿಸ್ತಾರವಾಗಿ ಹೇಳು.

೩. ಈಶ್ವರನು ಹೇಳಿದನು–ಎಲೈ ದೇವಿಯೇ! ಪರಮಾತ್ಮನ ಸ್ವರೂಪವನ್ನೂ ಅವನ ಮಹಿಮೆಯ ಪರಂಪರೆಯನ್ನೂ ಅವುಗಳ ಸ್ಥಿತಿಯನ್ನೂ ಹೇಳುತ್ತೇನೆ. ಕೇಳು.

ವಿಶ್ವತಃ ಪಾಣಿಪಾದಶ್ಚ ಚಕ್ಷುಷ್ಮಾನ್ ವಿಶ್ವತಃ ಪ್ರಭುಃ |
ವಿಶ್ವಾನಿ ಭುವನಾನ್ಯಸ್ಮಿನ್ ಧಾಮಾನಿ ಪರಮಾಣಿ ವೈ　　|| ೪ ||

ಧಾರಯನ್ ಸೋಽಪ್ಯತಿಷ್ಠನ್ಮನಾಂಸಿ ಚ ಮಹರ್ಷಿಣಾಂ |
ಏವಂ ಬೃಹತ್ ಸ್ವರೂಪೋಽಯಂ ಶ್ರೀಪತಿಃ ಪುರುಷೋತ್ತಮಃ　　|| ೫ ||

ಈಶ್ವರ್ಯಾ ಸಹ ಭೋಗಾರ್ಥಂ ದಿವ್ಯಮಂಗಳರೂಪವಾನ್　　|| ೬ ||

ಬೃಹಚ್ಛರಿರೋ ವಿಮಿಮಾನರೂಪೋ
ಯುವಾ ಕುಮಾರತ್ವಮುಪೇಯಿವಾನ್ ಹರಿಃ |
ರೇಮೇ ಶ್ರಿಯಾಽಸೌ ಜಗತಾಂ ಜನನ್ಯಾ
ಸ್ವಜ್ಯೋತ್ಸ್ನಯಾ ಚಂದ್ರ ಇವಾಮೃತಾಂಶುಃ　　|| ೭ ||

ಅಯಂ ಚ ಜಗದೀಶ್ವರ್ಯಾ ಕುಮಾರೋ ನಿತ್ಯಯೌವನಃ |
ಕಂದರ್ಪಕೋಟಿಲಾವಣ್ಯಃ ಸ ತಸ್ಥೌ ಪರಮೇ ಪದೇ　　|| ೮ ||

---

೪. ಅವನು ಎಲ್ಲಾ ಕಡೆಗೂ ಕೈಕಾಲುಗಳುಳ್ಳವನು. ಎಲ್ಲಾ ಕಡೆಗೂ ಕಣ್ಣುಳ್ಳವನು. ಪ್ರಭುವು ಅವನಿಗೆ ಎಲ್ಲಾ ಕಡೆಯಲ್ಲಿಯೂ ಮನೆಗಳೇ. ಪ್ರಪಂಚವೇ ವಾಸಸ್ಥಾನವು.

೫-೬. ಅವನು ಮಹರ್ಷಿಗಳ ಮನಸ್ಸನ್ನು ಧರಿಸಿಕೊಂಡಿದ್ದಾನೆ. ಶ್ರೀಪತಿಯಾದ ಆ ಪುರುಷೋತ್ತಮನು ಈ ರೀತಿಯಾದ ದೊಡ್ಡ ರೂಪವುಳ್ಳವನು. ತನ್ನ ಹೆಂಡತಿಯಾದ ಈಶ್ವರಿಯಾದ ಲಕ್ಷ್ಮಿಯೊಡನೆ ಸುಖಿಸಲು ಉತ್ತಮವಾದ ಮಂಗಳರೂಪವಾದ ದೇಹವನ್ನು ಹೊಂದಿದ್ದಾನೆ.

೭. ಆ ಸ್ವಾಮಿಯು ದೊಡ್ಡರೂಪವುಳ್ಳವನು. ಹೆದರಿಕೆಯಾದ ಆಕಾರವುಳ್ಳವನು. ಯುವಕನು. ಇನ್ನೂ ಹುಡುಗನಾಗಿಯೇ ಇರುವನು. ಜಗಜ್ಜನನಿಯಾದ ಲಕ್ಷ್ಮಿಯೊಡನೆ ಚಂದ್ರನು ಜ್ಯೋತಿರೂಪವಾದ ಚಂದ್ರಿಕೆಯೊಡನೆ ರಮಿಸುವಂತೆ ರಮಿಸುವನು.

೮. ಈ ಸ್ವಾಮಿಯು ನಿತ್ಯ ಯೌವನವುಳ್ಳವನಾಗಿ ಕೋಟಿಜನ ಮನ್ಮಥರಂತೆ ಲಾವಣ್ಯವುಳ್ಳವನಾಗಿ ಜಗದೀಶ್ವರಿಯಾದ ಲಕ್ಷ್ಮಿಯೊಡನೆ ಪರಮಪದವಾದ ವೈಕುಂಠದಲ್ಲಿರುವನು.

ಭೋಗಾರ್ಥಂ ಪರಮಂ ವ್ಯೋಮ ಲೀಲಾರ್ಥಮಖಿಲಂ ಜಗತ್ ।
ಭೋಗಕ್ರೀಡತಯಾ ವಿಷ್ಣೋಃ ವಿಭೂತಿದ್ವಯಮಾಸ್ಥಿತಂ ॥ ೯ ॥

ಭೋಗೇ ನಿತ್ಯಾ ಸ್ಥಿತಿಸ್ತಸ್ಯ ಲೀಲಾಂ ಸಂಹರತೇ ಯದಾ ।
ಭೋಗೋ ಲೀಲಾ ಉಭೌ ತಸ್ಯ ಧಾರ್ಯೇತೇ ಶಕ್ತಿಮತ್ತಯಾ ॥ ೧೦ ॥

ತ್ರಿಪಾದ್ವ್ಯಾಪಿ ಪರಂ ಧಾಮ ಪಾದೋಸ್ಯೇಹಾಭವತ್ಪುನಃ ।
ತ್ರಿಪಾದ್ವಿಭೂತಿರ್ನಿತ್ಯಾ ಸ್ಯಾದನಿತ್ಯಂ ಪಾದಮೈಶ್ವರಂ ॥ ೧೧ ॥

ನಿತ್ಯಂ ತದ್ರೂಪಮೀಶಸ್ಯ ಪರಧಾಮ್ನಿ ಸ್ಥಿತಂ ಶುಭಂ ।
ಅಚ್ಯುತಂ ಶಾಶ್ವತಂ ದಿವ್ಯಂ ಸದಾ ಯೌವನಮಾಶ್ರಿತಂ ॥ ೧೨ ॥

---

೯. ಇವನ ಭೋಗಕ್ಕೋಸ್ಕರ ವೈಕುಂಠವಿರುವುದು. ಲೀಲೆಗೋಸ್ಕರ ಈ ಜಗತ್ತು ಇರುವುದು. ಭೋಗ ಕ್ರೀಡೆಗಳಿಗೊಸ್ಕರ ಈ ಎರಡು ರೂಪವಾದ ಮಹಿಮೆಗಳನ್ನೂ ಹೊಂದಿರುವನು.

೧೦. ಆ ಸ್ವಾಮಿಯು ತಾನು ಲೀಲಾರ್ಥವಾದ ಈ ಜಗತ್ತನ್ನು ಸಂಹರಿಸಿದಾಗ ಭೋಗದಲ್ಲಿ ನಿತ್ಯವಾಗಿ ಸುಖಿಸುತ್ತಾ ಇದ್ದುಬಿಡುವನು. ಈ ರೀತಿ ಭೋಗ ಮತ್ತು ಲೀಲೆಗಳೆರಡನ್ನೂ ತನ್ನ ಶಕ್ತಿಯಿಂದ ಹೊಂದಿ ಧರಿಸಿರುವನು.

೧೧. ಆ ವೈಕುಂಠವು ಈ ಸ್ವಾಮಿಯ ತ್ರಿಪಾದ್ವಿಭೂತಿಯಿಂದ ಕೂಡಿದೆ. ಅದೂ ಅಲ್ಲದೆ ಪಾದವಿಭೂತಿಯಿಂದಲೂ ಕೂಡಿಕೊಂಡಿರುವುದು. ತ್ರಿಪಾದ್ವಿಭೂತಿಯ ಆ ಮಹಿಮೆಯು ನಿತ್ಯವಾದುದು. ಪಾದವಿಭೂತಿಯ ಈ ಮಹಿಮೆಯು ನಶ್ವರವಾದುದು.

೧೨. ವೈಕುಂಠದಲ್ಲಿರುವ ಸ್ವಾಮಿಯ ಆ ರೂಪವು ನಿತ್ಯವಾದುದು. ಚ್ಯುತವಾಗತಕ್ಕದ್ದಲ್ಲ. ಶಾಶ್ವತವಾದುದು. ನಿತ್ಯವಾದುದು. ಯಾವಾಗಲೂ ಯೌವನದಿಂದಲೇ ಕೂಡಿರುವುದು.

ನಿತ್ಯಂ ಸಂಭೋಗಮೀಶ್ವರ್ಯಾ ಶ್ರಿಯಾ ಭೂಮ್ಯಾ ಚ ಸಂವೃತಂ ।
ನಿತ್ಯೈವೈಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ ॥ ೧೩ ॥

ಯಥಾ ಸರ್ವಗತೋ ವಿಷ್ಣುಃ ತಥಾ ಲಕ್ಷ್ಮೀಃ ಶುಭಾನನೇ ।
ಈಶಾನಾ ಸರ್ವಜಗತೋ ವಿಷ್ಣುಪತ್ನೀ ಸದಾಶಿವಾ ॥ ೧೪ ॥

ಸರ್ವತಃ ಪಾಣಿಪಾದಾನ್ತಾ ಸರ್ವತೋಕ್ಷಿಶಿರೋಮುಖೀ ।
ನಾರಾಯಣೀ ಜಗನ್ಮಾತಾ ಸಮಸ್ತಜಗದಾಶ್ರಯಾ ॥ ೧೫ ॥

ಯದಪಾಂಗಾಶ್ರಿತಂ ಸರ್ವಂ ಜಗತ್ ಸ್ಥಾವರಜಂಗಮಂ ।
ಜಗತ್‌ಸ್ಥಿತಿಲಯೌ ತಸ್ಯಾ ಉನ್ಮೀಲನನಿಮೀಲನಾತ್ ॥ ೧೬ ॥

---

೧೩. ಶ್ರೀದೇವಿಯಿಂದಲೂ, ಭೂದೇವಿಯಿಂದಲೂ ಕೂಡಿಕೊಂಡು ಈ ಸ್ವಾಮಿಯು ನಿತ್ಯಭೋಗವನ್ನು ಅನುಭವಿಸುವನು. ಈ ಜಗನ್ಮಾತೆಯಾದ ಲಕ್ಷ್ಮಿಯು ನಿತ್ಯಳು. ವಿಷ್ಣುವನ್ನು ಬಿಟ್ಟಿರತಕ್ಕವಳೇ ಅಲ್ಲ.

೧೪. ವಿಷ್ಣುವು ಹೇಗೆ ಎಲ್ಲದರಲ್ಲಿಯೂ ವ್ಯಾಪಕನೋ ಅಂತೆಯೇ ಈ ಲಕ್ಷ್ಮಿಯೂ ಎಲ್ಲದರಲ್ಲಿಯೂ ವ್ಯಾಪಿಸಿರುವಳು. ಈ ವಿಷ್ಣುಪತ್ನಿಯಾದ ಶ್ರೀಯು ಎಲ್ಲಾ ಜಗತ್ತಿಗೂ ಬೇಕಾದುದನ್ನು ಕೊಡುವಳು. ಯಾವಾಗಲೂ ಮಂಗಳಕರಳು.

೧೫. ಅವಳ ಕೈಕಾಲುಗಳು ಎಲ್ಲಾ ಕಡೆಯಲ್ಲಿಯೂ ಹರಡಿವೆ. ಕಣ್ಣು, ತಲೆ, ಮುಖಗಳೂ ಎಲ್ಲೆಲ್ಲಿಯೂ ಹರಡಿವೆ. ನಾರಾಯಣನನ್ನೇ ಆಶ್ರಯಿಸಿ ಕೊಂಡಿರತಕ್ಕವಳು. ಪ್ರಪಂಚಕ್ಕೆ ತಾಯಿಯು. ಎಲ್ಲಾ ಪ್ರಪಂಚವನ್ನೂ ಆಶ್ರಯಿಸಿಕೊಂಡಿರುವವಳು.

೧೬. ಚರಾಚರಗಳೆಲ್ಲವೂ ಆ ಲಕ್ಷ್ಮಿಯ ಕಡೆಗಣ್ಣಿನ ನೋಟವನ್ನು ಆಶ್ರಯಿಸಿ ನಿಂತಿವೆ. ಆಕೆಯು ಕಣ್ಣನ್ನು ಬಿಟ್ಟರೆ ಜಗತ್ತು ನಿಂತಿರುತ್ತದೆ. ಆಕೆಯು ಕಣ್ಣನ್ನು ಮುಚ್ಚಿದರೆ ಜಗತ್ತು ನಾಶವಾಗುತ್ತದೆ.

ಸರ್ವಸ್ಯಾದ್ಯಾ ಮಹಾಲಕ್ಷ್ಮೀಸ್ತ್ರಿಗುಣಾ ಪರಮೇಶ್ವರೀ ।
ಲಕ್ಷ್ಯಾಲಕ್ಷ್ಯಸ್ವರೂಪಾ ಸಾ ವ್ಯಾಪ್ಯ ಕೃತ್ಸ್ನಂ ವ್ಯವಸ್ಥಿತಾ ॥ ೧೭ ॥

ತೋಯಯಾದಿರಸರೂಪೇಣ ಸೈವ ಲೀಲಾವಪುರ್ಭವೇತ್ ।
ಲಕ್ಷ್ಮೀರೂಪತ್ವಮಾಪನ್ನಾ ಧನವತ್ತಾರ್ಪಣೇ ಹಿ ಸಾ ॥ ೧೮ ॥

ಏವಂವಿಧಸ್ವರೂಪಾ ಸಾ ಜಗತಃ ಶ್ರೀಃ ಶ್ರಿತಾ ಹರಿಂ ।
ಸಮಸ್ತವೇದ್ಯಂ ವೇದಾಶ್ಚ ಲಕ್ಷ್ಮೀರೂಪಂ ವರಾನನೇ ॥ ೧೯ ॥

ಸ್ತ್ರೀರೂಪಮಖಿಲಂ ಸರ್ವಂ ತಸ್ಯೈವ ವಪುರುಚ್ಯತೇ ।
ಸೌಂದರ್ಯಂ ಶೀಲವೃತ್ತಂ ಚ ಸೌಭಾಗ್ಯಂ ಸ್ತ್ರೀಷು ಸಂಸ್ಥಿತಂ ॥ ೨೦ ॥

ತಸ್ಯಾ ರೂಪಂ ಚ ಗಿರಿಜೇ ಸರ್ವಾಸಾಂ ಮೂರ್ಧ್ನಿ ಯೋಷಿತಾಂ ॥ ೨೧ ॥

---

೧೭. ಈ ಮಹಾಲಕ್ಷ್ಮಿಯು ಎಲ್ಲಕ್ಕೂ ಆದಿಭೂತಳು. ಸತ್ವರಜಸ್ತಮೋ ಗುಣಗಳುಳ್ಳವಳು. ಉತ್ಕೃಷ್ಟಸ್ಥಾನದಲ್ಲಿರುವಳು. ಕಂಡರೂ ಕಾಣದಹಾಗೆ ಇರುವಳು. ಎಲ್ಲಾ ಪ್ರಪಂಚವನ್ನೂ ವ್ಯಾಪಿಸಿಕೊಂಡು ಇರುವಳು.

೧೮. ನೀರೇ ಮುಂತಾದ ಸ್ವರೂಪಗಳಿಂದ ಲೀಲಾತ್ಮಕವಾದ ಶರೀರವನ್ನು ಹೊಂದಿರುವಳು. ಧನವಂತರ ಧನದ ರೂಪದಲ್ಲಿ ಲಕ್ಷ್ಮಿಯು ತನ್ನ ರೂಪವನ್ನು ಹೊಂದಿರುವಳು.

೧೯. ಆ ಲಕ್ಷ್ಮಿಯು ಈ ರೀತಿಯಾದ ಸ್ವರೂಪವುಳ್ಳವಳು. ಯಾವಾಗಲೂ ಹರಿಯನ್ನೇ ಆಶ್ರಯಿಸಿರುವಳು. ಎಲ್ಲರಿಗೂ ತಿಳಿಯುವಂತಿರುವ ವೇದಗಳೂ ಲಕ್ಷ್ಮಿಯ ರೂಪದಲ್ಲಿವೆ.

೨೦-೨೧. ಹೆಂಗಸರ ರೂಪವಾಗಿರುವ ಎಲ್ಲರೂ ಲಕ್ಷ್ಮಿಯ ರೂಪವೆಂದೇ ಹೇಳುತ್ತಾರೆ. ಸೌಂದರ್ಯ, ಸುಶೀಲತ್ವ, ಒಳ್ಳೆಯ ಸ್ವಭಾವ, ಸೌಭಾಗ್ಯ, ಮತ್ತೆ ಯಾವು ಯಾವುವು ಹೆಂಗಸರಲ್ಲಿವೆಯೋ ಅವೆಲ್ಲವೂ ಕೂಡ ಆ ಲಕ್ಷ್ಮಿಯ ರೂಪವೇ. ಆ ಲಕ್ಷ್ಮಿಯು ಹೆಂಗಸರಿಗೆಲ್ಲಾ ಮೇಲಿನ ಸ್ಥಾನದಲ್ಲಿರುವಳು.

ಯಸ್ಯಾಃ ಕಟಾಕ್ಷಾಯುತಮಾತ್ರದೃಷ್ಟಾಃ
ಬ್ರಹ್ಮಾ ಶಿವಸ್ತ್ರಿದಶಪತಿರ್ಮಹೇಂದ್ರಃ ।
ಚಂದ್ರಶ್ಚ ಸೂರ್ಯೋ ಧನದೋ ಯಮೋಽಗ್ನಿಃ
ಪ್ರಭೂತಮೈಶ್ವರ್ಯಮಥಾಪ್ನುವಂತಿ ॥ ೨೨ ॥

ಲಕ್ಷ್ಮೀಃ ಶ್ರೀಃ ಕಮಲಾ ವಿದ್ಯಾ ಮಾತಾ ವಿಷ್ಣುಪ್ರಿಯಾ ಸತೀ ।
ಪದ್ಮಾಲಯಾ ಪದ್ಮಹಸ್ತಾ ಪದ್ಮಾಕ್ಷೀ ಪದ್ಮಸುಂದರೀ ॥ ೨೩ ॥

ಭೂತಾನಾಮೀಶ್ವರೀ ನಿತ್ಯಾ ಸತ್ಯಾ ಸರ್ವಗತಾ ಶುಭಾ ।
ವಿಷ್ಣುಪತ್ನೀ ಮಹಾದೇವೀ ಕ್ಷೀರೋದತನಯಾ ರಮಾ ॥ ೨೪ ॥

ಅನಂತಲೋಕನಾಭೀರ್ಭೂರ್ಲೀಲಾ ಸರ್ವಸುಖಪ್ರದಾ ।
ರುಕ್ಮಿಣೀ ಚ ತಥಾ ಸೀತಾ ಸರ್ವವೇದವತೀ ಶುಭಾ ॥ ೨೫ ॥

ಸತೀ ಸರಸ್ವತೀ ಗೌರೀ ಶಾಂತಿಸ್ಸ್ವಾಹಾ ಸ್ವಧಾ ರತಿಃ ।
ನಾರಾಯಣವರಾರೋಹಾ ವಿಷ್ಣೋರ್ನಿತ್ಯಾನಪಾಯಿನೀ ॥ ೨೬ ॥

---

೨೨. ಬ್ರಹ್ಮ, ಶಿವ, ದೇವಲೋಕಕ್ಕೆ ಒಡೆಯನಾದ ಮಹೇಂದ್ರ ಸೂರ್ಯ ಚಂದ್ರ, ಕುಬೇರ, ಯಮ, ಅಗ್ನಿ ಇವರು ಆ ಲಕ್ಷ್ಮಿಯ ಕಡೆಗಣ್ಣಿನ ನೋಟದಿಂದಲೇ ಬಹುವಾದ ಐಶ್ವರ್ಯವನ್ನು ಹೊಂದಿರುವರು. ಮತ್ತು ಹೊಂದುವರು.

೨೩-೨೪. ಲಕ್ಷ್ಮಿ, ಶ್ರೀ, ಕಮಲೆ, ವಿದ್ಯೆ, ಮಾತೆ, ವಿಷ್ಣುಪ್ರಿಯೆ, ಸತಿ, ಪದ್ಮಾಲಯೆ, ಪದ್ಮಹಸ್ತೆ, ಪದ್ಮಾಕ್ಷಿ, ಪದ್ಮಸುಂದರಿ, ಪ್ರಾಣಿಗಳಿಗೆ ಒಡೆಯಳು, ನಿತ್ಯಳು, ಸತ್ಯಳು, ಸರ್ವದಲ್ಲಿಯೂ ಇರುವವಳು, ಶುಭೆಯು, ವಿಷ್ಣುಪತ್ನಿಯು, ಮಹಾದೇವಿಯೂ ಕ್ಷೀರಸಮುದ್ರದಮಗಳು, ರಮೆಯು.

೨೫-೨೬. ಎಲ್ಲಾ ಲೋಕಗಳಿಗೆ ಮೂಲಭೂತಳು. ಭೂಮಿಯ ಸ್ವರೂಪಳು. ಲೀಲೆಯಿಂದಲೇ ಎಲ್ಲಾ ಸುಖಗಳನ್ನೂ ಕೊಡುತ್ತಾಳೆ. ರುಕ್ಮಿಣಿಯು. ಸೀತೆಯು. ವೇದಗಳ ಸ್ವರೂಪಳು. ಶುಭಳು. ಸತಿಯು. ಸರಸ್ವತಿಯು. ಗೌರಿಯು. ಶಾಂತಿಯು. ಸ್ವಾಹೆಯು. ಸ್ವಧೆಯು. ರತಿಯು. ನಾರಾಯಣನ ಉತ್ತಮಳಾದ ಹೆಂಡತಿಯು. ವಿಷ್ಣುವನ್ನು ಯಾವಾಗಲೂ ಬಿಡದೇ ಇರತಕ್ಕವಳು..

ಏತಾನಿ ಸರ್ವನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ।
ಸ ಮಹಚ್ಛ್ರಿಯಮಾಪ್ನೋತಿ ಧನಧಾನ್ಯಮಕಲ್ಮಷಂ ॥ ೨೭ ॥

ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಂ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ವಿಷ್ಣೋರನಪಗಾಮಿನೀಂ ॥ ೨೮ ॥

ಗಂಧದ್ವಾರಾಂ ಧುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ ।
ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥ ೨೯ ॥

ಏವಮೃಕ್ಸಂಹಿತಾಯಾಂ ತು ಸ್ತೂಯಮಾನಾ ಮಹೇಶ್ವರೀ ।
ಸರ್ವೈಶ್ವರ್ಯಂ ಸುಖಂ ಪ್ರಾದಾಚ್ಛಿವಾದೀನಾಂ ದಿವೌಕಸಾಂ ॥ ೩೦ ॥

ಅಸ್ಯೇಶಾನಾ ಹಿ ಜಗತಃ ವಿಷ್ಣುಪತ್ನೀ ಸನಾತನೀ ।
ಯಸ್ಯಾಪಾಂಗಾಶ್ರಯಂ ಸರ್ವಂ ಜಗತ್ ಸ್ಥಾವರಜಂಗಮಂ ॥ ೩೧ ॥

---

೨೭. ಲಕ್ಷ್ಮಿಯ ಈ ಎಲ್ಲಾ ಹೆಸರುಗಳನ್ನೂ ಬೆಳಗ್ಗೆ ಎದ್ದು ಯಾವನು ಹೇಳುತ್ತಾನೆಯೋ ಅವನು ಬಹುವಾದ ಸಂಪತ್ತನ್ನು ಹೊಂದುತ್ತಾನೆ. ನಾಶವಾಗದ ಧನವನ್ನೂ ಧಾನ್ಯವನ್ನೂ ಹೊಂದುತ್ತಾನೆ.

೨೮–೨೯. ಚಿನ್ನದ ಬಣ್ಣವುಳ್ಳ, ಹರಿಣದಂತೆ ಇರುವ, ಚಿನ್ನ ಬೆಳ್ಳಿಗಳ ಹೂಮಾಲೆಯುಳ್ಳ, ಚಂದ್ರನ ರೂಪಳಾದ, ಸುವರ್ಣದ ವಿಕಾರಳಾದ, ವಿಷ್ಣುವನ್ನು ಬಿಡದಿರುವ, ಗಂಧದ ಸುವಾಸನೆಯನ್ನುಳ್ಳ, ಇತರರಿಂದ ತಡೆಯಲಾಗದ, ಯಾವಾಗಲೂ ಪುಷ್ಟರನ್ನಾಗಿಯೇ ಮಾಡುವ ಸ್ವಭಾವವುಳ್ಳ, ಎಲ್ಲಾ ಪ್ರಾಣಿಗಳಿಗೂ ಒಡೆಯಳಾದ, ಆ ಲಕ್ಷ್ಮಿಯನ್ನು ಇಲ್ಲಿಗೆ ಕರೆಯುತ್ತೇನೆ.

೩೦. ಈ ರೀತಿಯಾಗಿ ಆ ಋಗ್ವೇದ ಸಂಹಿತೆಯಲ್ಲಿ ಹೇಳಿದೆ. ಈ ರೀತಿಯಾಗಿಯೇ ಲಕ್ಷ್ಮಿಯನ್ನು ಸ್ತೋತ್ರಮಾಡಿದ ಶಿವನೇ ಮುಂತಾದ ದೇವತೆಗಳಿಗೆ ಈ ಮಹೇಶ್ವರಿಯಾದ ಲಕ್ಷ್ಮಿಯು ಎಲ್ಲಾ ಐಶ್ವರ್ಯವನ್ನೂ ಕೊಟ್ಟಳು.

೩೧-೩೨. ಈ ಜಗತ್ತಿಗೆ ಲಕ್ಷ್ಮಿಯು ಒಡೆಯಳು. ಕೇಳಿದುದನ್ನು ಕೊಡುವವಳು. ವಿಷ್ಣುವಿಗೆ ಹೆಂಡತಿಯು. ಬಹುಕಾಲದವಳು. ಸ್ಥಾವರ

ಯಸ್ಯ ವಕ್ಷಸಿ ಸಾ ದೇವೀ ಪ್ರಭಾಗ್ನಾವಿವ ತಿಷ್ಠತಿ ।
ಸ ವೈ ಸರ್ವೇಶ್ವರಃ ಶ್ರೀಮಾನ್ ಅಕ್ಷರಃ ಪುರುಷೋಽವ್ಯಯಃ ॥ ೩೨ ॥

ಸ ವೈ ನಾರಾಯಣಃ ಶ್ರೀಮಾನ್ ವಾತ್ಸಲ್ಯಗುಣಸಾಗರಃ ।
ಸ್ವಾಮೀ ಸುಶೀಲಃ ಸುಭಗಃ ಸರ್ವಜ್ಞಃ ಸರ್ವಶಕ್ತಿಮಾನ್ ॥ ೩೩ ॥

ನಿತ್ಯಂ ಸಂಪೂರ್ಣಕಾಮಶ್ಚ ನೈಸರ್ಗಿಕಸುಹೃತ್ಸುಖೀ ।
ಕೃಪಾಪೀಯೂಷಜಲಧಿಃ ಶರಣಂ ಸರ್ವದೇಹಿನಾಂ ॥ ೩೪ ॥

ಸ್ವರ್ಗಾಪವರ್ಗಸುಖದೋ ಭಕ್ತಾನಾಂ ಕರುಣಾಕರಃ ।
ಶ್ರೀಮತೇ ವಿಷ್ಣವೇ ತಸ್ಮೈ ದಾಸ್ಯಂ ಸರ್ವಂ ಕರೋಮ್ಯಹಂ ॥ ೩೫ ॥

ದೇಶಕಾಲಾದ್ಯವಸ್ಥಾಸು ಸರ್ವಾಸು ಕಮಲಾಪತೇಃ ।
ಇತಿ ಸ್ವರೂಪಸಂಸಿದ್ಧಃ ಸುಖಂ ದಾಸ್ಯಮವಾಪ್ನುಯಾಂ ॥ ೩೬ ॥

---

ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಆ ಲಕ್ಷ್ಮಿಯ ಕಡೆಗಣ್ಣನ್ನು ಆಶ್ರಯಿಸಿ ನಿಂತಿರುವುದು. ಯಾವ ಸ್ವಾಮಿಯ ಹೃದಯ ಪ್ರದೇಶದಲ್ಲಿ ಆ ಲಕ್ಷ್ಮಿಯು ಅಗ್ನಿಯಲ್ಲಿ ಪ್ರಭೆಯು ಇರುವಂತೆ ಇರುವಳೋ ಅಂತಹ ಸರ್ವೇಶ್ವರನಾದ, ಶ್ರೀಮಂತನಾದ, ನಾಶರಹಿತನಾದ, ಅವ್ಯಯ ಪುರುಷನಾದ, ವಿಷ್ಣುವು ಎಲ್ಲಾ ಶಕ್ತಿಯನ್ನೂ ಹೊಂದಿದ್ದಾನೆ.

೩೩. ಆ ಲಕ್ಷ್ಮಿಯು ಯಾವನನ್ನು ಆಶ್ರಯಿಸಿರುವಳೋ ಅವನೇ ನಾರಾಯಣನು ಶ್ರೀಮಂತನು. ವಾತ್ಸಲ್ಯವೆಂಬ ಗುಣಕ್ಕೆ ಸಾಗರನು. ಸ್ವಾಮಿಯು ಸುಶೀಲನು. ಸುಭಗನು. ಸರ್ವಜ್ಞನು ಸರ್ವಶಕ್ತಿಯುಳ್ಳವನು.

೩೪–೩೫. ಆ ವಿಷ್ಣುವು ಯಾವಾಗಲೂ ಪೂರ್ಣಕಾಮನು. ಸ್ವಭಾವವಾದ ಸ್ನೇಹಿತನು. ಸುಖಿಯು. ಕೃಪೆಯೆಂಬ ಅಮೃತಕ್ಕೆ ಸಾಗರನು. ಎಲ್ಲಾ ದೇಹಿಗಳಿಗೂ ರಕ್ಷಕನು. ಸ್ವರ್ಗಮೋಕ್ಷಗಳ ಸುಖವನ್ನು ಕೊಡತಕ್ಕವನು. ಭಕ್ತರಿಗೆ ಕರುಣೆಯನ್ನು ತೋರಿಸುವವನು. ಅಂತಹ ವಿಷ್ಣುವಿಗೆ ನಮಸ್ಕಾರವು. ಅವನಿಗೆ ಎಲ್ಲಾ ದಾಸ್ಯವನ್ನೂ ಮಾಡುತ್ತೇನೆ

೩೬. ನಾನು ಈ ರೀತಿಯಾದ ಸ್ಥಿತಿಯನ್ನು ಹೊಂದಿದವನಾಗಿ ದೇಶಕಾಲ ಅವಸ್ಥೆಗಳಿಗೆ ತಕ್ಕಂತೆ ಆ ಕಮಲಾಪತಿಯಾದ ಸ್ವಾಮಿಗೆ ದಾಸನಾಗಿದ್ದುಕೊಂಡು ಸುಖವಾಗಿರುತ್ತೇನೆ.

ಏವಂ ವಿದಿತ್ವಾ ಮಂತ್ರಾರ್ಥಂ ತದ್ಭಕ್ತಿಂ ಸಮ್ಯಗಾಚರೇತ್ ।
ದಾಸಭೂತಮಿದಂ ತಸ್ಯ ಜಗತ್ ಸ್ಥಾವರಜಂಗಮಂ ॥ ೩೭ ॥

ಶ್ರೀಮನ್ನಾರಾಯಣಃ ಸ್ವಾಮೀ ಜಗತಾಂ ಪ್ರಭುರೀಶ್ವರಃ ।
ಭ್ರಾತಾ ಮಾತಾ ಪಿತಾ ಬಂಧುರ್ನಿವಾಸಃ ಶರಣಂ ಗತಿಃ ॥ ೩೮ ॥

ಕಲ್ಯಾಣಗುಣವಾನ್ ಶ್ರೀಶಃ ಸರ್ವಕಾಮಫಲಪ್ರದಃ ।
ಯೋಽಸೌ ನಿರ್ಗುಣ ಇತ್ಯುಕ್ತಃ ಶಾಸ್ತ್ರೇಷು ಜಗದೀಶ್ವರಃ ॥ ೩೯ ॥

ಪ್ರಾಕೃತೈರ್ಹೇಯಸಂಯುಕ್ತೈಃ ಗುಣೈರ್ಹೀನತ್ವಮುಚ್ಯತೇ ।
ಯತ್ರ ಮಿಥ್ಯಾಪ್ರಪಂಚತ್ವಂ ವಾಕ್ಯೈರ್ವೇದಾಂತಗೋಚರೈಃ ॥ ೪೦ ॥

ದೃಶ್ಯಮಾನಮಿದಂ ಸರ್ವಮನಿತ್ಯಮಿತಿ ಚೋಚ್ಯತೇ ।
ಅತ್ರಾಪಿ ಪ್ರಾಕೃತಂ ರೂಪಮಂಡಸ್ಯೈವ ವಿನಾಶನಂ ॥ ೪೧ ॥

---

೩೭. ಈ ರೀತಿಯಾಗಿ ಮಂತ್ರಾರ್ಥವನ್ನು ತಿಳಿದು ಆ ಸ್ವಾಮಿಯಲ್ಲಿ ಭಕ್ತಿಯನ್ನು ಪೂರ್ತಿಯಾಗಿಡಬೇಕು. ಸ್ಥಾವರಜಂಗಮಾತ್ಮಕವಾದ ಈ ಜಗತ್ತು ಆ ಸ್ವಾಮಿಗೆ ಯಾವಾಗಲೂ ದಾಸವಾಗಿರುವುದು.

೩೮–೪೧. ಶ್ರೀಮನ್ನಾರಾಯಣನು ಜಗತ್ತಿಗೆ ಸ್ವಾಮಿಯು. ಪ್ರಭುವು. ಈಶ್ವರನು. ಅವನೇ ಜಗತ್ತಿಗೆ ಸೋದರನು. ತಾಯಿಯು. ತಂದೆಯು. ಬಂಧುವು. ವಾಸಿಸುವುದಕ್ಕೆ ಸ್ಥಳವು. ಶರಣನು. ಗತಿಯು. ಕಲ್ಯಾಣಗುಣವುಳ್ಳವನು ಲಕ್ಷ್ಮೀಪತಿಯು. ಎಲ್ಲಾ ಇಷ್ಟಗಳನ್ನೂ ಕೊಡುವವನು. ಶಾಸ್ತ್ರಗಳಲ್ಲಿ ನಿರ್ಗುಣನೆಂಬದಾಗಿ ಆ ಈಶ್ವರನನ್ನು ಹೊಗಳಿರುವರು. ಅದಕ್ಕೆ ಪ್ರಾಕೃತವಾದ ಕೆಟ್ಟಗುಣಗಳಿಲ್ಲದವನೆಂದರ್ಥವು. ಇಂತಹ ಹೇಯಗುಣಗಳು ಅವನಲ್ಲಿಲ್ಲದುದರಿಂದ ಅವನು ಈ ಗುಣಗಳಿಂದ ಹೀನನು. ವೇದಾಂತಿಗಳಾದವರು ಈ ಪ್ರಪಂಚವನ್ನು ಮಿಥ್ಯಾ ಪ್ರಪಂಚವೆಂದು ಹೇಳುವರು. ಅದಕ್ಕೇ ಇಲ್ಲಿ ನಮ್ಮ ಕಣ್ಣಿಗೆ ಕಾಣುವುದೆಲ್ಲವೂ ಅನಿತ್ಯವು. ಆದುದರಿಂದ ಅದೆಲ್ಲವೂ ಮಿಥ್ಯೆಯು. ಈ ವಿಷ್ಣುವಿನ ಲೀಲಾರ್ಥವಾದ ಈ ಬ್ರಹ್ಮಾಂಡವೆಂಬುದೇ ಪ್ರಾಕೃತರೂಪವು. ಆ ರೂಪಕ್ಕೇ ವಿನಾಶವು.

ಪ್ರಾಕೃತಾನಾಂ ಹಿ ರೂಪಾಣಾಮನಿತ್ಯತ್ವಂ ತಥೋಚ್ಯತೇ ।
ಇದಮರ್ಥಂ ಮಹಾದೇವಿ ಪ್ರಕೃತೇರುದ್ಭವಂ ಹರೇಃ ॥ ೪೨ ॥

ಕ್ರೀಡಾರ್ಥಂ ದೇವದೇವಸ್ಯ ವಿಷ್ಣೋರ್ಲೀಲಾವಿಕಾರಿಣಃ ।
ಲೋಕೈಶ್ಚತುರ್ಭಿರ್ದಶಭಿಃ ಸಾಗರೈರ್ದ್ವೀಪಸಂಯುತೈಃ ॥ ೪೩ ॥

ಭೂತೈಶ್ಚತುರ್ದಶಭಿಶ್ಚ ಭೂಧರೈಶ್ಚ ಮಹೋತ್ಸವೈಃ ।
ಪರಿಪೂರ್ಣಮಿದಂ ರಮ್ಯಮಂಡಂ ಪ್ರಕೃತಿಸಂಭವಂ ॥ ೪೪ ॥

ವಸ್ತ್ರೈರಾವರಣೈರ್ಜುಷ್ಟಂ ದಶೋತ್ತರಗುಣಾನ್ವಿತೈಃ ।
ಕಲಾಕಾಷ್ಠಾದಿರೂಪೇಣ ಯಃ ಕಾಲಃ ಪರಿವರ್ತತೇ ॥ ೪೫ ॥

ಕಾಲೇನೈವ ಜಗತ್ಸರ್ಗಸ್ಥಿತಿಸಂಹಾರಕಂ ಭವೇತ್ ।
ಚತುರ್ಯುಗಸಹಸ್ರೇ ದ್ವೇ ಬ್ರಹ್ಮಣೋ ದಿವಸೋ ಭವೇತ್ ॥ ೪೬ ॥

---

೪೨–೪೪. ಪ್ರಕೃತಿಯ ಸಂಬಂಧವಾದುದು ಪ್ರಾಕೃತವು. ಈ ಕೃತಕವಾದ ಬ್ರಹ್ಮಾಂಡಾದಿರೂಪಗಳು ಅನಿತ್ಯವೆಂದೆನಿಸುತ್ತವೆ. ಈ ವಿಷಯವೆಲ್ಲವೂ ಹರಿಯ ಪ್ರಕೃತಿಯಿಂದಲೆ ಹುಟ್ಟಿದುವು. ಇವೆಲ್ಲವೂ ಕೂಡಾ ಲೀಲೆಯಲ್ಲಿ ಆಸಕ್ತನಾಗಿ ರುವ ದೇವ ದೇವನಾದ ವಿಷ್ಣುವಿನ ಕ್ರೀಡೆಗೋಸ್ಕರವಾಗಿರತಕ್ಕವುಗಳು. ಈ ಪ್ರಾಕೃತವಾದ ಬ್ರಹ್ಮಾಂಡರೂಪವಾದ ಅನಿತ್ಯದೇಹವು ಹದಿನಾಲ್ಕು ಲೋಕ ಗಳಿಂದಲೂ ಸಾಗರಗಳಿಂದಲೂ ದ್ವೀಪಗಳಿಂದಲೂ ಚತುರ್ದಶ ಭೂತಗಳಿಂದಲೂ ದೊಡ್ಡ ದೊಡ್ಡದಾದ ಪರ್ವತಗಳಿಂದಲೂ ತುಂಬಿದೆ.

೪೫. ಬಟ್ಟೆಯು ಅಂಚಿನಲ್ಲಿ ಗಟ್ಟಿಯಾಗಿ ಹೆಣದಿರುವ ಶೆರಗಿನಿಂದ ಕೂಡಿ ಕೊಂಡಿರುವಂತೆ ವಿಷ್ಣುವಿನ ಆ ಜಾಗವು ಹತ್ತು ಆವರಣಗಳಿಂದ ಕೂಡಿದೆ. ವಿಷ್ಣುರೂಪವಾದ ಕಾಲವು ಕಲಾ ಕಾಷ್ಠ ಮುಂತಾದ ರೂಪಗಳಿಂದ ಕೂಡಿ ಕೊಂಡು ನಡೆಯುತ್ತಿರುವುದು.

೪೬. ಆ ಕಾಲವೇ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತದೆ. ನಾಲ್ಕು ಯುಗಗಳು ಎರಡು ಸಾವಿರಬಾರಿಯಾದರೆ ಬ್ರಹ್ಮನಿಗೆ ಒಂದುದಿನ ವಾಗುತ್ತದೆ.

**ತಾವಂತಿ ಶತವರ್ಷಾಣಿ ಬ್ರಹ್ಮಣೋಽವ್ಯಕ್ತಜನ್ಮನಃ ।**
**ಕ್ಷಯೇ ತು ಬ್ರಹ್ಮಣಃ ಪ್ರಾಪ್ತೇ ಸರ್ವಸಂಹಾರಕೋ ಭವೇತ್ ॥ ೪೭ ॥**

**ಅಂಡಮಂಡಗತಾ ಲೋಕಾ ದಹ್ಯಂತೇ ಕಾಲವಹ್ನಿನಾ ।**
**ಸರ್ವಾತ್ಮನಸ್ತಥಾ ವಿಷ್ಣೋಃ ಪ್ರಕೃತ್ಯಾಂ ವಿನಿವೇಶಿತಾಃ ॥ ೪೮ ॥**

**ಅಂಡಾವರಣಭೂತಾನಿ ಪ್ರಕೃತೌ ಲಯಮಾಪ್ನುಯುಃ ।**
**ಸಾ ಸರ್ವಜಗದಾಧಾರಾ ಪ್ರಕೃತಿರ್ಹರಿಸಂಶ್ರಿತಾ ॥ ೪೯ ॥**

**ತಯಾ ಜಗತ್ಸರ್ಗಲಯೌ ಕರೋತಿ ಭಗವಾನ್ ಸದಾ ।**
**ಕ್ರೀಡಯಾ ದೇವದೇವೇನ ಸೃಷ್ಟಾ ಮಾಯಾ ಜಗನ್ಮಯೀ ॥ ೫೦ ॥**

**ಅವಿದ್ಯಾ ಪ್ರಕೃತಿರ್ಮಾಯಾ ಮಹಾವಿದ್ಯಾ ಜಗನ್ಮಯೀ ।**
**ಸರ್ಗಸ್ಥಿತಿಲಯಾನಾಂ ಸಾ ಹೇತುಭೂತಾ ಸನಾತನೀ ॥ ೫೧ ॥**

---

೪೭. ಆ ಎರಡು ಸಾವಿರಬಾರಿಯ ನಾಲ್ಕು ಯುಗಗಳಿಂದ ಕೂಡಿದ ವರ್ಷವು ನೂರುಬಾರಿಯಾದರೆ ಅದು ಅವ್ಯಕ್ತಸ್ವರೂಪನಾದ ಪರಬ್ರಹ್ಮನಿಗೆ ಕೊಟ್ಟಿರುವ ಆಯುಸ್ಸು. ಈ ರೀತಿಯಾಗಿ ದಿನಗಳು ತುಂಬಿ ಆ ಅವ್ಯಕ್ತಬ್ರಹ್ಮನಿಗೆ ಆಯುಸ್ಸು ತುಂಬಿ ಕ್ಷಯಕಾಲವು ಪ್ರಾಪ್ತವಾದಾಗ ಎಲ್ಲವನ್ನೂ ನಾಶಮಾಡುತ್ತಾನೆ.

೪೮. ಬ್ರಹ್ಮಾಂಡವೂ ಬ್ರಹ್ಮಾಂಡಗತವಾದ ಲೋಕಗಳೂ ಸರ್ವಾತ್ಮನಾದ ವಿಷ್ಣುವಿನಲ್ಲಿ ಪ್ರಾಕೃತವಾಗಿರುತ್ತವೆ. ಇವು ಆ ಕೊನೆಗಾಲದಲ್ಲಿ ಕಾಲವೆಂಬ ಅಗ್ನಿಯಿಂದ ಸುಡಲ್ಪಡುತ್ತವೆ.

೪೯. ಅಂಡದಲ್ಲಿರುವ ಪ್ರಾಣಿಗಳೂ ಆವರಣದಲ್ಲಿರುವ ಪ್ರಾಣಿಗಳೂ ಆ ಪ್ರಕೃತಿಯಲ್ಲಿ ಸೇರಿಹೋಗುತ್ತವೆ ಸರ್ವಜಗತ್ತಿಗೂ ಆಧಾರವಾದ ಪ್ರಕೃತಿಯು ಹರಿಯಲ್ಲಿ ಅಡಗಿಕೊಳ್ಳುತ್ತದೆ.

೫೦. ಆ ಪ್ರಕೃತಿಯಿಂದ ಆ ಪರಬ್ರಹ್ಮನು ಸೃಷ್ಟಿನಾಶಗಳನ್ನು ಯಾವಾಗಲೂ ಮಾಡುತ್ತಿರುವನು. ಆ ದೇವದೇವನಾದ ವಿಷ್ಣುವಿನಿಂದಲೇ ಮಾಯಾರೂಪವಾದ ಈ ಜಗತ್ತೂ ಕ್ರೀಡೆಯಿಂದಲೇ ಸೃಷ್ಟವಾಗಿರುವುದು.

೫೧. ಮಾಯೆಯೆಂಬುದು ಅವಿದ್ಯೆಯೇ ಕಾರಣವಾಗಿ ಉಳ್ಳದ್ದು. ಜಗದ್ರೂಪವಾಗಿರುವುದು. ಮಹಾ ಅವಿದ್ಯೆ ಎಂದೆನಿಸಿಕೊಳ್ಳುತ್ತದೆ. ಆ ಮಹಾ

ಯೋಗನಿದ್ರಾ ಮಹಾಮಾಯಾ ಪ್ರಕೃತಿಸ್ತ್ರಿಗುಣಾನ್ವಿತಾ |
ಅವ್ಯಕ್ತಂ ಚ ಪ್ರಧಾನಂ ಚ ವಿಷ್ಣೋರ್ಲೀಲಾವಿಕಾರಿಣಃ　　|| ೫೨ ||

ಜಗತ್ಸರ್ಗಲಯೌ ಸ್ಯಾತಾಂ ಪ್ರಕೃತೇರೇವ ಸರ್ವದಾ |
ಅಸಂಖ್ಯಂ ಪ್ರಕೃತಿಸ್ಥಾನಂ ನಿಬಿಡಧ್ವಾನ್ತಮವ್ಯಯಂ　　|| ೫೩ ||

ಊರ್ಧ್ವೇ ತು ಸೀಮ್ನಿ ವಿರಜಾ ನಿಸ್ಸೀಮಾ ತು ಸನಾತನೀ |
ತಯಾ ವೃತಂ ಜಗತ್ಸರ್ವಂ ಸ್ಥೂಲಸೂಕ್ಷ್ಮಾದ್ಯವಸ್ಥಯಾ　　|| ೫೪ ||

---

ಅವಿದ್ಯೆಯೇ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾಗಿರುವುದು. ಅಲ್ಲದೆ ಈ ಮಹಾ ಅವಿದ್ಯೆಯು ಸನಾತನವಾದುದು. ಈ ಕಾರಣಭೂತವಾದುದನ್ನು ಅವಿದ್ಯೆ ಯೆಂದೂ, ಪ್ರಕೃತಿಯೆಂದೂ, ಮಾಯೆಯೆಂದೂ, ಮಹಾವಿದ್ಯೆಯೆಂದೂ, ಜಗನ್ಮಯವೆಂದೂ, ಹೇಳುತ್ತಾರೆ.

೫೨. ವಿಷ್ಣುವಿನ ಯೋಗನಿದ್ರೆಯೆಂದೂ ಮಹಾಮಾಯೆಯೆಂದೂ ಅದಕ್ಕೆ ಹೆಸರುಂಟು. ಅದು ಸತ್ವರಜಸ್ತಮೋಗುಣಗಳಿಂದ ಕೂಡಿದ, ಪ್ರಕೃತಿಯು ಲೀಲೆಯನ್ನಾಡುವ, ವಿಷ್ಣುವಿಗೆ ಈ ಮಹಾಮಾಯಾ ರೂಪವಾದ, ಯೋಗ ನಿದ್ರೆಯು. ಅದು ಅವ್ಯಕ್ತನಾಗಿ ಪ್ರಧಾನವಾಗುವುದು.

೫೩. ಪ್ರಕೃತಿಯಿಂದಲೇ ಜಗತ್ತಿನ ಸೃಷ್ಟಿನಾಶಗಳು ಯಾವಾಗಲೂ ಆಗುತ್ತಿರುವುವು. ಆ ಪ್ರಕೃತಿಯ ಸ್ಥಾನವು ಅಸಂಖ್ಯಾತವಾಗಿ ಬಹುವಾಗಿರು ವುದು. ಬಹುವಾದ ಅಂಧಕಾರವುಳ್ಳದ್ದು. ಆದರೆ ನಾಶರಹಿತವಾದುದು.

೫೪. ಎಲ್ಲಕ್ಕಿಂತಲೂ ಮೇಲಿನ ಪ್ರದೇಶದಲ್ಲಿ ವಿಂಜಾ ಎಂಬ ನದಿಯಿರು ವುದು. ಅದರ ಕೆಳಕ್ಕೆ ಎಲ್ಲೇಯೇ ಇಲ್ಲವು. ಆ ಸ್ಥಾನವು ಬಹುಕಾಲದಿಂದ ಇರುವುದು. ಅದರಿಂದ ಈ ಪ್ರಪಂಚವೆಲ್ಲವೂ ಸ್ಥೂಲಸೂಕ್ಷ್ಮ ಇದೇ ಮೊದಲಾದ ಅವಸ್ಥೆಗಳಿಂದ ಕೂಡಿಕೊಂಡು ಮುಚ್ಚಲ್ಪಟ್ಟಿರುವುದು.

**ವಿಕಾಸಸಂಕೋಚಾವಸ್ಥಾಭ್ಯಾಂ ತಸ್ಯಾಃ ಸರ್ಗಲಯೌ ಸ್ಮೃತೌ |**
**ಏವಂ ಭೂತಾನಿ ಸರ್ವಾಣಿ ಪ್ರಕೃತ್ಯಂತರ್ಗತಾನಿ ವೈ || ೫೫ ||**

**ತತಶ್ಶೂನ್ಯಮಿದಂ ಸರ್ವಂ ಪ್ರಕೃತ್ಯಂತರ್ಗತಂ ಮಹತ್ |**
**ಏವಂ ಪ್ರಾಕೃತರೂಪಸ್ಯ ವಿಭೂತೇರೂಪಮುತ್ತಮಂ || ೫೬ ||**

**ತ್ರಿಪಾದ್ವಿಭೂತಿರೂಪಂ ತು ಶೃಣು ಭೂಧರನಂದಿನಿ |**
**ಪ್ರಧಾನಪರಮವ್ಯೋಮ್ನೋರಂತರೇ ವಿರಜಾ ನದೀ || ೫೭ ||**

**ವೇದಾಂಗಸ್ವೇದಜನಿತತೋಯೈಃ ಪ್ರಸ್ರಾವಿತಾ ಶುಭಾ |**
**ತಸ್ಯಾಃ ಪಾರೇ ಪರೇ ವ್ಯೋಮ್ನಿ ತ್ರಿಪಾದ್ಭೂತಂ ಸನಾತನಂ || ೫೮ ||**

**ಅಮೃತಂ ಶಾಶ್ವತಂ ನಿತ್ಯಂ ಅನಂತಂ ಪರಮಂ ಪದಂ |**
**ಶುದ್ಧಂ ಸರ್ವಮಯಂ ದಿವ್ಯಮಕ್ಷರಂ ಬ್ರಹ್ಮಣಃ ಪದಂ || ೫೯ ||**

---

೫೫. ಆ ವಿರಜಾಸ್ಥಾನವು ಸಂಕೋಚವಾಗುವುದೇ ಲಯವು. ವಿಕಾಸವಾಗುವುದೇ ಸೃಷ್ಟಿಯು. ಪ್ರಕೃತಿಯಲ್ಲಿರುವ ಎಲ್ಲವೂ ಕೂಡಾ ಈ ರೀತಿಯಾದ ಸ್ಥಿತಿಯನ್ನು ಹೊಂದಿವೆ.

೫೬. ಇಷ್ಟನ್ನು ಹೇಳಿದುದರಿಂದ ಪ್ರಕೃತಿಯಲ್ಲಿ ಸೇರಿಕೊಂಡಿರುವ ಈ ಮಹದ್ಭೂತವೂ ಕೂಡ ಎಲ್ಲವೂ ಶೂನ್ಯವೆಂದು ತಿಳಿ. ಈ ರೀತಿಯಾಗಿ ಆ ಸ್ವಾಮಿಯ ಪ್ರಾಕೃತರೂಪವಾದ ವಿಭೂತಿಯು ಉತ್ತಮವಾದ ರೂಪವು.

೫೭. ಎಲೈ ಪಾರ್ವತಿಯೆ! ಇನ್ನು ತ್ರಿಪಾತ್ತೆಂಬ ಸ್ಥಾನದ ವಿಭೂತಿ ರೂಪವನ್ನು ಕೇಳು. ಪ್ರಧಾನವ್ಯೋಮ ಪರಮವ್ಯೋಮ (ಸ್ಥಾನ)ಗಳಿಗೆ ಮಧ್ಯದಲ್ಲಿ ವಿರಜಾನದಿಯು ಇವೆ.

೫೮-೫೯. ಆ ವಿರಜಾನದಿಯು ವೇದಗಳ ಅವಯವದಿಂದ ಹುಟ್ಟಿದ ಬೆವರಿನ ರೂಪವಾದುದು. ಶುಭವಾದುದು. ಆ ವಿರಜಾನದಿಯ ಆಚೆಯ ದಡದಲ್ಲಿರುವ ಉತ್ತಮವಾದ ಸ್ಥಾನದಲ್ಲಿ ಆ ತ್ರಿಪಾತ್ ಸ್ಥಾನವಿರುವುದು. ಅದು ಸನಾತನವು. ಅದು ಅಮೃತಸ್ವರೂಪವಾದುದು. ಶಾಶ್ವತವಾದುದು. ನಿತ್ಯವೂ ಅನಂತವೂ ಆದುದು. ಪರಮಪದವಾದುದು. ಶುದ್ಧವಾದುದು. ಸತ್ವಗುಣದಿಂದ ಕೂಡಿರುವುದು ದಿವ್ಯವಾದುದು ನಾಶರಹಿತವಾದುದು. ಅದು ಬ್ರಹ್ಮನ ಸ್ಥಾನವು.

ಅನೇಕಕೋಟಿಸೂರ್ಯಾಗ್ನಿತುಲ್ಯವರ್ಚಸಮುವ್ಯಯಂ ।
ಸರ್ವವೇದಮಯಂ ಶುದ್ಧಂ ಸರ್ವಪ್ರಲಯವರ್ಜಿತಂ ॥ ೬೦ ॥

ಅಸಂಖ್ಯಮಜರಂ ನಿತ್ಯಂ ಜಾಗ್ರತ್ಸ್ವಪ್ನಾದಿವರ್ಜಿತಂ ।
ಹಿರಣ್ಮಯಂ ಮೋಕ್ಷಪದಂ ಬ್ರಹ್ಮಾನಂದಸುಖಾಹ್ವಯಂ ॥ ೬೧ ॥

ಸಮಾನಾಧಿಕರಹಿತಮಾದ್ಯಂತರಹಿತಂ ಶುಭಂ ।
ತೇಜಸಾತ್ಯದ್ಭುತಂ ರಮ್ಯಂ ನಿತ್ಯಮಾನಂದಸಾಗರಂ ॥ ೬೨ ॥

ಏವಮಾದಿಗುಣೋಪೇತಂ ತದ್ವಿಷ್ಣೋಃ ಪರಮಂ ಪದಂ ।
ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ॥ ೬೩॥

---

೬೦-೬೧. ಆ ಸ್ಥಾನವು ಅನೇಕ ಕೋಟಿಸೂರ್ಯರಿಗಿಂತಲೂ ಹೆಚ್ಚಿನ ಕಾಂತಿಯುಳ್ಳದ್ದು. ಎಲ್ಲಾ ವೇದಗಳ ರೂಪವಾದುದು ಶುದ್ಧವಾದುದು. ಯಾವ ರೀತಿಯಾದ ನಾಶಗಳೂ ಅಲ್ಲಿರುವುದಿಲ್ಲ. ಅಸಂಖ್ಯವಾದುದು. ಮುಪ್ಪು ಬರದಿರುವುದು. ನಿತ್ಯವಾದುದು. ಜಾಗ್ರದವಸ್ಥೆ ಸ್ವಪ್ನಾವಸ್ಥೆಗಳಿಲ್ಲದಿರುವುದು. ಚಿನ್ನದ ವಿಕಾರವಾದುದು. ಮೋಕ್ಷಸ್ಥಾನವು. ಅದರಲ್ಲಿರುವ ಆನಂದವು ಬ್ರಹ್ಮಾನಂದಕ್ಕೆ ಸಮವಾದುದು.

೬೨. ಸಮಾನರು, ಹೆಚ್ಚಿನವರು, ಕಮ್ಮಿಯವರು ಎಂಬ ಭೇದವಿಲ್ಲದಿರುವ ಜಾಗವು. ಆದಿಯಾಗಲಿ ಅಂತ್ಯವಾಗಲಿ ಇಲ್ಲವು. ಶುಭವಾದುದು. ಅದ್ಭುತವಾದ ತೇಜಸ್ಸುಳ್ಳದ್ದು. ರಮ್ಯವಾದುದು. ನಿತ್ಯವಾದುದು. ಆನಂದಸಮುದ್ರವೇ ಅದಾಗಿರುವುದು.

೬೩. ವಿಷ್ಣುವಿನ ಪರಮಪದವು ಈ ರೀತಿಯಾದ ಗುಣಗಳುಳ್ಳದ್ದು. ಸೂರ್ಯನು ಅದನ್ನು ಪ್ರಕಾಶಿಸುವಂತೆ ಮಾಡಲಾರನು. ಚಂದ್ರನಾಗಲಿ ಅಗ್ನಿಯಾಗಲಿ ಅದನ್ನು ಪ್ರಕಾಶಿಸುವಂತೆ ಮಾಡಲಾರರು. ಎಂದರೆ ಅವರ ತೇಜಸ್ಸಿಗಿಂತಲೂ ಆ ಪರಮಪದದ ತೇಜಸ್ಸು ಬಲು ಹೆಚ್ಚಿನದು.

ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಹರೇಃ ।
ತದ್ವಿಷ್ಣೋಃ ಪರಮಂ ಧಾಮ ಶಾಶ್ವತಂ ನಿತ್ಯಮಚ್ಯುತಂ ॥
ನ ಹಿ ವರ್ಣಯಿತುಂ ಶಕ್ಯಂ ಕಲ್ಪಕೋಟಿಶತೈರಪಿ ॥ ೬೪ ॥

ಹರೇಃ ಪದಂ ವರ್ಣಯಿತುಂ ನ ಶಕ್ಯಂ
ಮಯಾ ಚ ಧಾತ್ರಾ ಚ ಮುನೀಂದ್ರವರ್ಯೈಃ ।
ಯಸ್ಮಿನ್ ಪದೇ ಅಚ್ಯುತ ಈಶ್ವರೋ ಯಃ
ಸ ವೇದ ಚೇದಂ ಯದಿ ವಾ ನ ವೇದ ॥ ೬೫ ॥

ಯದಕ್ಷರಂ ವೇದ ಗುಹ್ಯಂ ಯಸ್ಮಿನ್ ದೇವಾ ಅಧಿನಿಶ್ವೇ ನಿಷೇದುಃ ।
ಯಸ್ತನ್ನ ವೇದಕಿ ಮೃಚಾ ಕರಿಷ್ಯತಿ ಯ ಇತ್ತದ್ವಿದುಃ ತ ಇಮೇ
ಸಮಾಸತೇ ॥ ೬೬ ॥

---

೬೪. ಆ ಹರಿಯ ಪರಮಪದಕ್ಕೆ ಹೋದವರು ಮತ್ತೆ ಹಿಂದಿರುಗುವುದೇ ಇಲ್ಲ. ವಿಷ್ಣುವಿನ ಅಂತಹ ಸ್ಥಾನವು ಶಾಶ್ವತವಾದುದು. ನಿತ್ಯವಾದುದು. ಅದಕ್ಕೆ ನಾಶವಿಲ್ಲವು. ನೂರುಕೋಟಿಕಲ್ಪಗಳಾದರೂ ಅದನ್ನು ವರ್ಣಿಸುವುದಕ್ಕೇ ಆಗುವುದಿಲ್ಲವು.

೬೫. ನಾನಾಗಲೀ ಬ್ರಹ್ಮನಾಗಲೀ ಮುನಿಶ್ರೇಷ್ಠರಾಗಲೀ ಯಾರೇ ಆಗಲಿ ಆ ಹರಿಯ ಪದವನ್ನು ವರ್ಣಿಸಲಾಗುವುದೇ ಇಲ್ಲ. ಯಾವ ಆ ಹರಿಯ ಜಾಗದಲ್ಲಿ ಅಚ್ಯುತನು ಸರ್ವಸ್ವತಂತ್ರನಾಗಿರುವನೋ ಅವನಿಗೇನೇ ಆ ಸ್ಥಳದ ಮಹಿಮೆಯು ಗೊತ್ತಿರುವುದೋ, ಅಥವಾ ಇಲ್ಲವೋ ತಿಳಿಯದು.

೬೬. ಆ ಸ್ಥಾನವು ನಾಶರಹಿತವಾದುದು. ಅದನ್ನೇ ಯಾವಾಗಲೂ ತಿಳಿಯುತ್ತಾ ಎಲ್ಲಾ ದೇವತೆಗಳೂ ಇರುವರು. ವೇದದಿಂದ ತಿಳಿಯಲು ಸಾಧ್ಯವಾದುದು. ದೇವತೆಗಳೆಲ್ಲರ ಮೇಲೆಯೂ ಅದಿರುವುದು. ಅದನ್ನು ಯಾರು ತಿಳಿಯುವುದಿಲ್ಲವೋ ಅವನಿಗೆ ಋಗ್ವೇದದಿಂದ ಪ್ರಯೋಜನವೇನು ? ಯಾವನು ಇದನ್ನು ತಿಳಿಯುವನೋ ಅವನು ಇದನ್ನು ಹೊಂದುತ್ತಾನೆ.

ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।
ಅಕ್ಷರಂ ಶಾಶ್ವತಂ ನಿತ್ಯಂ ದಿವೀವ ಚಕ್ಷುರಾತತಂ ॥ ೬೭ ॥

ತತ್ಪ್ರವೇಷ್ಟುಮಶಕ್ಯಂ ಚ ಬ್ರಹ್ಮರುದ್ರಾದಿದೈವತೈಃ ।
ಜ್ಞಾನೇನ ಶಾಸ್ತ್ರಮಾರ್ಗೇಣ ವೀಕ್ಷ್ಯತೇ ಯೋಗಪುಂಗವೈಃ ॥ ೬೮ ॥

ಅಹಂ ಬ್ರಹ್ಮಾ ಚ ದೇವಾಶ್ಚ ನ ಜಾನಂತಿ ಮಹರ್ಷಯಃ ।
ಸರ್ವೋಪನಿಷದಾಮರ್ಥಂ ದೃಷ್ಟ್ವಾ ವಕ್ಷ್ಯಾಮಿ ಸುವ್ರತೇ ॥ ೬೯ ॥

ವಿಷ್ಣೋಃ ಪದೇ ಹಿ ಪರಮೇ ಪದೇ ತತ್ಸಶುಭಾಹ್ವಯೇ ।
ಯತ್ರ ಗಾವೋ ಭೂರಿಶೃಂಗಾ ಆಸತೇ ಸುಸುಖಾಃ ಪ್ರಜಾಃ ॥ ೭೦ ॥

ಅತ್ರಾಹ ತತ್ಪರಂ ಧಾಮ ಗೀಯಮಾನಸ್ಯ ಶಾರ್ಙ್ಗಿಣಃ ।
ತದ್ಭಾತಿ ಪರಮಂ ಧಾಮ ಗೋಭಿಃ ಪೇಯೈಃ ಸುಖಾವಹೈಃ ॥ ೭೧ ॥

---

೬೭. ಅದೇನೇ ವಿಷ್ಣುವಿನ ಪರಮಪದವು. ಅದನ್ನು ವಿದ್ವಾಂಸರು ಯಾವಾಗಲೂ ಚಿಂತಿಸುತ್ತಿರುತ್ತಾರೆ. ಅದು ವಿದ್ವಾಂಸರಿಗೆ ತಿಳಿದಿರುವುದು. ಅದು ನಾಶರಹಿತವಾದುದು. ಶಾಶ್ವತವಾದುದು. ನಿತ್ಯವಾದುದು. ಅಂತರಿಕ್ಷದಂತೆ ಕಣ್ಣುಗಳಿಗೆ ವಿಷಯುವಾಗಿ ದೊಡ್ಡದಾಗಿರುವುದು.

೬೮. ಬ್ರಹ್ಮರುದ್ರ ಮುಂತಾದ ದೇವತೆಗಳೂ ಕೂಡಾ ಅಲ್ಲಿಗೆ ಪ್ರವೇಶಿಸಲಾರರು. ಅದನ್ನು ಯೋಗಿಗಳು ಯೋಗಮಾರ್ಗದ ಜ್ಞಾನದಿಂದ ತಿಳಿಯುತ್ತಾರೆ.

೬೯. ನಾನೂ, ಬ್ರಹ್ಮನೂ, ಮಹರ್ಷಿಗಳೂ, ಯಾರೂ ಕೂಡ ಅದನ್ನು ತಿಳಿಯಲಾರೆವು. ಎಲ್ಲಾ ಉಪನಿಷತ್ತುಗಳ ಅರ್ಥವನ್ನೂ ನೋಡಿಕೊಂಡು ಆ ಸ್ಥಾನದ ರೀತಿಯನ್ನು ಹೇಳುತ್ತಿದ್ದೇನೆ.

೭೦. ಆ ವಿಷ್ಣುಪದವು ಶುಭಸ್ಥಾನವು. ಅಲ್ಲಿರುವ ಗೋವುಗಳು ಬಹುವಾದ ಕೊಂಬುಳ್ಳವು. ಪ್ರಜೆಗಳೂ ಅಲ್ಲಿ ಬಹು ಸುಖವಾಗಿದ್ದಾರೆ.

೭೧. ಇದನ್ನೇ ನಾವು ಹೊಗಳುತ್ತಿರುವ ವಿಷ್ಣುವಿನ ಜಾಗವೆಂದು ಹೇಳುತ್ತೇವೆ. ಸುಖವನ್ನು ಕೊಡುವ ಗೋವುಗಳು ಅಲ್ಲಿದ್ದುಕೊಂಡು ಪ್ರಕಾಶಿಸುತ್ತವೆ. ಕೇಳಿದುದನ್ನು ಕೊಡುತ್ತವೆ. ಮತ್ತು ಸುಖರೂಪವೂ ಸಹಿಸಲು ಶಕ್ಯವೂ ಆದ ಕಾಂತಿಯಿಂದ ಅದು ಪ್ರಕಾಶಿಸುತ್ತದೆ.

ಆದಿತ್ಯವರ್ಣಂ ತಮಸಃ ಪರಸ್ತಾಜ್ಜ್ಯೋತಿರಚ್ಯುತಂ |
ಅಥಾತೋ ಬ್ರಹ್ಮಣೋ ಲೋಕಃ ಶುದ್ಧಸತ್ವಃ ಸನಾತನಃ || ೭೨ ||

ಸಾಮಾನ್ಯಾ ವಿದ್ಯತೇ ಭೂಮಿಃ ಅಂತೇಸ್ಮಿನ್ ಶಾಶ್ವತೇ ಪದೇ |
ತಸ್ಥತುರ್ಜಾಗರೂಕೇಸ್ಮಿನ್ ಯುವಾನೌ ಶ್ರೀಸನಾತನೌ || ೭೩ ||

ಯತಃ ಸ್ವಸಾರೌ ಯುವತೀ ಭೂಲೀಲೇ ವಿಷ್ಣುವಲ್ಲಭೇ |
ಅತ್ರ ಪೂರ್ವೇ ಚ ಯೇ ಸಾಧ್ಯಾ ವಿಶ್ವೇ ದೇವಾಃ ಸನಾತನಾಃ || ೭೪ ||

ತೇ ಹ ನಾಕಂ ಮಹಿಮಾನಃ ಸಚಂತ ಶುಭದರ್ಶನೇ |
ತತ್ಪದಂ ಜ್ಞಾನಿನೋ ವಿಪ್ರಾ ಯಾಂತಿ ಸಂವಾಸಮಿಚ್ಛವಃ || ೭೫ ||

ತದ್ವಿಷ್ಣೋಃ ಪರಮಂ ಧಾಮ ಮೋಕ್ಷ ಇತ್ಯಭಿಧೀಯತೇ |
ತಸ್ಮಿನ್ ಬಂಧವಿನಿರ್ಮುಕ್ತಾಃ ಪ್ರಾಪ್ಸ್ಯಂತೇ ಸ್ವಸುಖಂ ಪದಂ || ೭೬ ||

---

೭೨. ಅದು ಆದಿತ್ಯನ ವರ್ಣವುಳ್ಳದ್ದು. ಕತ್ತಲೆಗೆ ಬಹು ದೂರದಲ್ಲಿದೆ. ಅಲ್ಲದೆ ಕತ್ತಲೆಯಿಂದ ದೂರವಾದ ಜ್ಯೋತಿಸ್ಸುಗಳೆಲ್ಲಾ ಅಲ್ಲಿವೆ. ನಾಶರಹಿತವಾದುದು. ಇದೇ ಆ ಪರಬ್ರಹ್ಮನ ಲೋಕವು. ಶುದ್ಧವಾದ ಸತ್ವವುಳ್ಳದ್ದು. ಸನಾತನವಾದುದು.

೭೩-೭೫. ಈ ಶಾಶ್ವತವಾದ ಜಾಗದಲ್ಲಿ ಭೂಮಿಯು ಚೆನ್ನಾಗಿರುವುದು. ಈಸ್ಥಳದಲ್ಲಿ ಯುವತಿಯರೂ ಹಳಬರೂ ಅಕ್ಕತಂಗಿಯರೂ ಆದ ಭೂದೇವಿಯೂ ಲಕ್ಷ್ಮಿಯೂ ಇರುವರು. ಇದೇ ಜಾಗವನ್ನು ಪೂರ್ವದಲ್ಲಿ ಸಾಧ್ಯರೂ ವಿಶ್ವೇದೇವರೂ ಇನ್ನೂ ಹಿಂದಿನವರೂ ತಪಸ್ಸಿನಿಂದ ಮಹಿಮೆಯನ್ನು ಹೊಂದಿದವರಾಗಿ ಹೊಂದಿದರು. ಅಂತಹ ಜಾಗವನ್ನು ಜ್ಞಾನಿಗಳಾದವರು ಹೊಂದಬೇಕೆಂದೂ ಅಲ್ಲಿ ವಾಸಿಸಬೇಕೆಂದೂ ಇಚ್ಛಿಸಿ ಹೊಂದುತ್ತಾರೆ.

೭೬. ವಿಷ್ಣುವಿನ ಆ ಸ್ಥಳವನ್ನೇ ಮೋಕ್ಷವೆಂದು ಹೇಳುತ್ತೇವೆ. ಅದು ಉತ್ತಮವಾದುದು. ಬಂಧದಿಂದ ತಪ್ಪಿಸಿಕೊಂಡವರೆಲ್ಲರೂ ಆ ಸುಖವಾದ ಜಾಗವನ್ನು ಹೊಂದುತ್ತಾರೆ.

ಯತ್ಪ್ರಾಪ್ಯ ನ ನಿವರ್ತಂತೇ ತಸ್ಮಾನ್ಮೋಕ್ಷ ಉದಾಹೃತಃ ।
ಮೋಕ್ಷಂ ಪರಂ ಪದಂ ಲಿಂಗಮಮೃತಂ ವಿಷ್ಣುಮಂದಿರಂ ॥ ೭೭ ॥

ಅಕ್ಷರಂ ಪರಮಂ ಧಾಮ ವೈಕುಂಠಂ ಶಾಶ್ವತಂ ಪದಂ ।
ನಿತ್ಯಂ ಚ ಪರಮಂ ವ್ಯೋಮ ಸರ್ವೋತ್ಕೃಷ್ಟಂ ಸನಾತನಂ ॥ ೭೮ ॥

ಪರ್ಯಾಯವಾಚಕಾನ್ಯಸ್ಯ ಪರಧಾಮ್ನೋಽಚ್ಯುತಸ್ಯ ಹಿ ।
ತಸ್ಯ ತ್ರಿಪಾದ್ವಿಭೂತೇಸ್ತು ರೂಪಂ ವಕ್ಷ್ಯಾಮಿ ವಿಸ್ತರಾತ್ ॥ ೭೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಂಚಪಂಚಾಶತ್‌ಸಾಹಸ್ರ್ಯಾಂ
ಸಂಹಿತಾಯಾಮುತ್ತರಖಂಡೇ ಉಮಾಮಹೇಶ್ವರ ಸಂವಾದೇ
ತ್ರಿಪಾದವಿಭೂತಿ ಕಥನಂ ನಾಮ ಪಂಚಪಂಚಾಶದಧಿಕ
ದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೭-೭೯. ಆ ಸ್ಥಳವನ್ನು ಹೊಂದಿದವರು ಮತ್ತೆ ಬಾರದಿರುವುದರಿಂದ ಅದು ಮೋಕ್ಷವೆನಿಸಿಕೊಳ್ಳುತ್ತದೆ. ಮೋಕ್ಷ, ಪರಮಪದ, ಲಿಂಗ, ಅಮೃತ, ವಿಷ್ಣುಮಂದಿರ, ಅಕ್ಷರ, ಪರಮಧಾಮ, ವೈಕುಂಠ, ಶಾಶ್ವತಪದ, ನಿತ್ಯ. ಪರಮ ವ್ಯೋಮ, ಸರ್ವೋತ್ಕೃಷ್ಟ, ಸನಾತನ, ಈ ಪದವೆಲ್ಲವೂ ಕೂಡ ಆ ಅಚ್ಯುತನ ಪದವು, ಲೋಕಕ್ಕೆ ಪರ್ಯಾಯನಾಮಗಳು. ಇನ್ನುಮೇಲೆ ಆ ತ್ರಿಪಾದ್ವಿಭೂತಿಯ ಸ್ವರೂಪವನ್ನು ವಿಸ್ತಾರವಾಗಿ ಹೇಳುತ್ತೇನೆ.

ಇಂತು ಐವತ್ತೈದುಸಾವಿರ ಶ್ಲೋಕವುಳ್ಳ ಶ್ರೀ ಪದ್ಮಮಹಾಪುರಾಣದ
ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿನ ತ್ರಿಪಾದ್ವಿಭೂತಿ ಎಂಬ
ಇನ್ನೂರ ಐವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಟ್ಪಂಚಾಶದಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

ತ್ರಿಪಾದ್ವಿಭೂತೇರ್ಲೋಕಾಸ್ತು ಅಸಂಖ್ಯಾಃ ಪರಿಕೀರ್ತಿತಾಃ ।
ಶುದ್ಧಸತ್ತ್ವಮಯಾಸ್ಸರ್ವೇ ಬ್ರಹ್ಮಾನಂದಸುಖಾಹ್ವಯಾಃ ॥ ೧ ॥

ಸರ್ವೇ ನಿತ್ಯಾ ನಿರ್ವಿಕಾರಾ ಹೇಯಗುಣವಿವರ್ಜಿತಾಃ ।
ಸರ್ವೇ ಹಿರಣ್ಮಯಾಃ ಶುದ್ಧಾಃ ಕೋಟಿಸೂರ್ಯಸಮಪ್ರಭಾಃ ॥ ೨ ॥

ಸರ್ವೇ ವೇದಮಯಾ ದಿವ್ಯಾಃ ಕಾಮಕ್ರೋಧಾದಿವರ್ಜಿತಾಃ ।
ನಾರಾಯಣಪದಾಂಭೋಜಭಕ್ತ್ಯೇಕರಸಸೇವಿತಾಃ ॥ ೩ ॥

---

## ಇನ್ನೂರ ಐವತ್ತಾರನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು-ತ್ರಿಪಾದ್ವಿಭೂತಿಯ ಲೋಕಗಳನ್ನು ಲೆಕ್ಕಮಾಡುವುದಕ್ಕೇ ಆಗುವುದಿಲ್ಲ. ಎಲ್ಲವೂ ಕೂಡ ಶುದ್ಧಸತ್ತ್ವಮಯವಾದುವು. ಬ್ರಹ್ಮಾನಂದದ ಸುಖವನ್ನೇ ಕೊಡತಕ್ಕವು.

೨. ಅವೆಲ್ಲವೂ ನಿತ್ಯವಾದುವು. ವಿಕಾರವಾಗದವು. ಕೆಟ್ಟ ಗುಣಗಳೆಂಬುದು ಇರುವುದೇ ಇಲ್ಲ. ಎಲ್ಲವೂ ಸುವರ್ಣಮಯವಾದುವು. ಕೋಟಿಸೂರ್ಯರ ಸಮವಾದ ಪ್ರಭೆಗಳುಳ್ಳವು.

೩. ಅವೆಲ್ಲವೂ ವೇದಮಯವಾದುವು. ದಿವ್ಯವಾದುವು. ಕಾಮಕ್ರೋಧಗಳಿಂದ ಬಿಡಲ್ಪಟ್ಟವು. ನಾರಾಯಣನ ಪಾದಕಮಲಗಳಲ್ಲಿರುವ ಭಕ್ತಿಯೊಂದರಿಂದಲೇ ಕೂಡಿಕೊಂಡಿರತಕ್ಕವು. ಮತ್ತು ಹೊಂದತಕ್ಕವು.

ನಿರಂತರಂ ಸಾಮಗಾನಪರಿಪೂರ್ಣಸುಖಂ ಶ್ರಿತಾಃ ।
ಸರ್ವೇ ಪಂಚೌಪನಿಷದಸ್ವರೂಪಾ ವೇದವರ್ಚಸಃ ॥ ೪ ॥

ಸರ್ವೇ ವೇದಮಯೈರ್ದಿವ್ಯೈಃ ಪುರುಷೈಃ ಸ್ತ್ರೀಭಿರಾವೃತಾಃ ।
ವೇದೈಕರಸತೋಯಾಢ್ಯೈಃ ಸರೋಭಿರುಪಶೋಭಿತಾಃ ॥ ೫ ॥

ಶ್ರುತಿಸ್ಮೃತಿಪುರಾಣಾದಿರೂಪಾಃ ಸ್ಥಾವರಸಂಯುತಾಃ ।
ಸರ್ವಂ ವರ್ಣಯಿತುಂ ಶಕ್ಯಂ ನ ಮಯಾ ಲೋಕವಿಶ್ರುತಂ ॥ ೬ ॥

ವಿರಜಾಯಾಃ ಪರವ್ಯೋಮ್ನೋ ಹ್ಯಂತರಂ ಕೇವಲಂ ಸ್ಮೃತಂ ।
ತತ್‌ಸ್ಥಾನಮುಪಭೋಕ್ತವ್ಯಮವ್ಯಕ್ತಬ್ರಹ್ಮಸೇವಿನಾಂ ॥ ೭ ॥

---

೪. ಯಾವಾಗಲೂ ಎಡಬಿಡದೆ ಸಾಮಗಾನದ ಸುಖವನ್ನು ಪರಿಪೂರ್ಣವಾಗಿ ಹೊಂದಿರುತ್ತವೆ. ಯಾವಾಗಲೂ ಕಿವಿಗಿಂಪಾದ ಸಾಮಗಾನವು ಅಲ್ಲಿ ನಡೆಯುತ್ತಿದೆ. ಎಲ್ಲವೂ ಐದು ಉಪನಿಷತ್ತುಗಳ ಸ್ವರೂಪವಾದುವು. ವೇದದ ತೇಜಸ್ಸನ್ನು ಹೊಂದಿರುವುವು.

೫. ಆ ಲೋಕಗಳಲ್ಲಿರುವವರೆಲ್ಲರೂ ವೇದಮಯವೂ ದಿವ್ಯವೂ ಆದ ಹೆಂಗಸರು ಗಂಡಸರುಗಳಿಂದ ಕೂಡಿಕೊಂಡಿದ್ದಾರೆ. ವೇದರಸದಿಂದಲೇ ಕೂಡಿರುವ ಸರೋವರಗಳು ಅಲ್ಲಿ ಪ್ರಕಾಶಿಸುತ್ತಿವೆ.

೬. ಎಲ್ಲವೂ ಸ್ಮೃತಿ ಶ್ರುತಿ ಪುರಾಣರೂಪವಾದ ಮರಗಳಿಂದಲೇ ಕೂಡಿಕೊಂಡಿವೆ. ಎಲ್ಲರಿಗೂ ತಿಳಿಯುವಂತೆ ಅಲ್ಲಿರುವುವೆಲ್ಲವನ್ನೂ ವರ್ಣಿಸುವುದಕ್ಕೆ ನನ್ನಿಂದ ಆಗುವುದೇ ಇಲ್ಲ.

೭. ವಿರಜಾನದಿಗೂ ಪರಮವ್ಯೋಮಕ್ಕೂ ಮಧ್ಯದಲ್ಲಿ ಸ್ವಲ್ಪವೇ ಜಾಗವಿರುವುದು. ಆ ಸ್ಥಾನವು ಅವ್ಯಕ್ತಬ್ರಹ್ಮನನ್ನು ಸೇವಿಸುವವರು ಅನುಭವಿಸತಕ್ಕದ್ದು.

ಸ್ವಾತ್ಮಜಾನಂದಸುಖದಂ ಕೇವಲಂ ಪರಮಂ ಪದಂ ।
ನಿಶ್ಶ್ರೇಯಸಂ ಚ ನಿರ್ವಾಣಂ ಕೈವಲ್ಯಂ ಮೋಕ್ಷ ಉಚ್ಯತೇ ॥ ೮ ॥

ಶ್ರೀಶಾಂಘ್ರಿಭಕ್ತಿಸೇವೈಕರಸಭೋಗವಿವರ್ಧಿತಾಃ ।
ಮಹಾತ್ಮಾನೋ ಮಹಾಭಾಗಾಃ ಭಗವತ್ಪಾದಸೇವಕಾಃ ॥ ೯ ॥

ತದ್ವಿಷ್ಣೋಃ ಪರಮಂ ಧಾಮ ಯಾನ್ತಿ ಬ್ರಹ್ಮಸುಖಪ್ರದಂ ।
ನಾನಾಜನಪದಾಕೀರ್ಣಂ ವೈಕುಂಠಂ ತದ್ಧರೇಃ ಪದಂ ॥ ೧೦ ॥

ಪ್ರಾಕಾರೈಶ್ಚ ವಿಮಾನೈಶ್ಚ ಸೌಧೈ ರತ್ನಮಯೈರ್ವೃತಂ ।
ತನ್ಮಧ್ಯೇ ನಗರೀ ದಿವ್ಯಾ ಸಾಯೋಧ್ಯೇತಿ ಪ್ರಕೀರ್ತಿತಾ ॥ ೧೧ ॥

ಮಣಿಕಾಂಚನಚಿತ್ರಾಢ್ಯಪ್ರಾಕಾರೈಸ್ತೋರಣೈರ್ವೃತಾ ।
ಚತುರ್ದ್ವಾರಸಮಾಯುಕ್ತಾ ತುಂಗಗೋಪುರಸಂವೃತಾ ॥ ೧೨ ॥

---

೮. ಆ ಪರಮಪದವು ಆತ್ಮಾನಂದವನ್ನು ಕೊಡತಕ್ಕದ್ದು. ಬಹುವಾದ ಶ್ರೇಯಸ್ಸನ್ನು ಕೊಡತಕ್ಕದ್ದು. ಅದು ನಿಶ್ರೇಯಸವೆಂದೂ ನಿರ್ವಾಣವೆಂದೂ ಕೈವಲ್ಯವೆಂದೂ ಮೋಕ್ಷವೆಂದೂ ಹೇಳಿಸಿಕೊಳ್ಳುತ್ತದೆ.

೯ ಶ್ರೀಶನಾದ ವಿಷ್ಣುವಿನಲ್ಲಿ ಭಕ್ತಿಯು ಸೇವೆಯೆಂಬ ರಸದಿಂದಲೇ ಬಹುವಾಗಿ ಕೂಡಿರುವುದು. ಅಲ್ಲಿರುವವರೆಲ್ಲರೂ ಮಹಾತ್ಮರು. ಮಹಾಭಾಗ್ಯರು. ಭಗವತ್ಪಾದಸೇವಕರು.

೧೦. ಅದು ವಿಷ್ಣುವಿನ ಪರಮಪದವು. ಬ್ರಹ್ಮಸುಖವನ್ನು ಕೊಡುತ್ತದೆ. ಅಲ್ಲಿ ಅನೇಕ ದೇಶಗಳೂ ಕೂಡಿಕೊಂಡಿವೆ. ವೈಕುಂಠವು ಹರಿಯಸ್ಥಾನವು.

೧೧. ಅದು ಅನೇಕವಾದ ತೊಟ್ಟಿಗಳೂ ಮಹಡಿಗಳೂ ಅರಮನೆಗಳೂ ಉಳ್ಳ ಇಂತಹ ಮನೆಗಳಿಂದ ಕೂಡಿಕೊಂಡಿರುವುದು. ಇವುಗಳನ್ನೊಳಗೊಂಡ ಒಂದು ದಿವ್ಯವಾದ ಪಟ್ಟಣವಿರುವುದು. ಅದಕ್ಕೆ ಅಯೋಧ್ಯೆಯೆಂದು ಹೆಸರು.

೧೨. ಮಣಿಗಳಿಂದಲೂ ಚಿನ್ನಗಳಿಂದಲೂ ಚಿತ್ರವಾಗುವಂತೆ ಮಾಡಿರುವ ಹೊರಬಾಗಿಲಿನ ಬಾಗಿಲುವಾಡಗಳುಳ್ಳವುಗಳಾಗಿವೆ. ಆ ಊರಿಗೆ ನಾಲ್ಕು ಹೆಬ್ಬಾಗಿಲುಗಳಿವೆ. ಎತ್ತರವಾದ ಗೋಪುರಗಳಿವೆ.

ಚಂಡಾದಿದ್ವಾರಪಾಲೈಸ್ತು ಕುಮುದಾದ್ಯೈಸ್ಸುರಕ್ಷಿತಾ ।
ಚಂಡಪ್ರಚಂಡೌ ಪ್ರಾಗ್ದ್ವಾರೇ ಯಾಮ್ಯೇ ಭದ್ರಸುಭದ್ರಕೌ　　॥ ೧೩ ॥

ವಾರುಣ್ಯಾಂ ಜಯವಿಜಯೌ ಸೌಮ್ಯೇ ಧಾತೃವಿಧಾತರೌ ।
ಕುಮುದಃ ಕುಮುದಾಕ್ಷಶ್ಚ ಪುಂಡರೀಕೋಥ ವಾಮನಃ　　॥ ೧೪ ॥

ಶಂಕುಕರ್ಣಃ ಸರ್ವನಿದ್ರಃ ಸುಮುಖಃ ಸುಪ್ರತಿಷ್ಠಿತಃ ।
ಏತೇ ದಿಕ್ಪತಯಃಪ್ರೋಕ್ತಾಃಪುರ್ಯಾಮತ್ರ ಶುಭಾನನೇ　　॥ ೧೫ ॥

ಕೋಟಿವೈಶ್ವಾನರಪ್ರಖ್ಯೈಃ ಗೃಹಪಂಕ್ತಿಭಿರಾವೃತಾಃ ।
ಆರೂಢಯೌವನೈರ್ನಿತ್ಯಂ ದಿವ್ಯನಾರೀನರೈರ್ಯುತಾಃ　　॥ ೧೬ ॥

ಅಂತಃಪುರಂ ತು ದೇವಸ್ಯ ಮಧ್ಯೇ ಪುರ್ಯಾಂ ಮನೋಹರಂ ।
ಮಣಿಪ್ರಾಕಾರಸಂಯುಕ್ತಂ ವರತೋರಣಶೋಭಿತಂ　　॥ ೧೭ ॥

---

೧೩-೧೫. ಚಂಡನೇ ಮುಂತಾದ ದ್ವಾರಪಾಲಕರಿಂದಲೂ ಕುಮುದಾಕ್ಷನೇ ಮುಂತಾದ ಕಾವಲುಗಾರರಿಂದಲೂ ರಕ್ಷಿಸಲ್ಪಟ್ಟಿದೆ. ಚಂಡಪ್ರಚಂಡರು ಪೂರ್ವ ದಿಕ್ಕಿನಲ್ಲಿಯೂ ಭದ್ರಸುಭದ್ರಕರು ದಕ್ಷಿಣದಲ್ಲಿಯೂ ಜಯವಿಜಯರು ಪಶ್ಚಿಮ ದಿಕ್ಕಿನಲ್ಲಿಯೂ ಧಾತೃವಿಧಾತೃಗಳೂ ಉತ್ತರದಿಕ್ಕಿನಲ್ಲಿಯೂ ದ್ವಾರಪಾಲಕರಾಗಿ ಕಾದುಕೊಂಡಿರುವರು. ಕುಮುದ, ಕುಮುದಾಕ್ಷ, ಪುಂಡರೀಕ, ವಾಮನ, ಶಂಕುಕರ್ಣ, ಸರ್ವನಿದ್ರ, ಸುಮುಖ, ಸುಪ್ರತಿಷ್ಠಿತ, ಇವರೆಲ್ಲರೂ ದಿಕ್ಪತಿಗಳು. ಕಾಲಕಾಲದಲ್ಲಿ ಸಹಾಯಮಾಡುತ್ತ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿರುವರು ಈ ರೀತಿಯಾಗಿ ಈ ಊರಿನಲ್ಲಿ ದಿಕ್ಕಿಗೆ ಒಡೆಯರಾದವರು ಇರುವರು.

೧೬-೧೭. ಕೋಟಿಜನ ಅಗ್ನಿಯರಂತೆ ಬೆಳಗುವ ಮನೆಯ ಸಾಲುಗಳಿಂದ ಕೂಡಿದ ಅವನ ಅಂತಃಪುರವು ಆ ಪಟ್ಟಣದ ಮಧ್ಯದಲ್ಲಿದೆ. ಅಂತಃಪುರದಲ್ಲಿರುವವರೆಲ್ಲರೂ ಆಗತಾನೆ ಹೊಂದಿರುವ ಯೌವನವುಳ್ಳ ಹೆಂಗಸರು. ಇಂತಹವರು ಅನೇಕ ಜನರಿರುವರು. ಈ ಅಂತಃಪುರವು ಮಣಿಯಿಂದ ಕೂಡಿದ ಸುತ್ತುಗೋಡೆಯಿಂದ (ಕೋಟೆ) ಕೂಡಿದೆ. ಒಳ್ಳೊಳ್ಳೆಯ ಬಾಗಿಲುಗಳಿವೆ.

ವಿಮಾನೈರ್ಗೃಹಮುಖ್ಯೈಶ್ಚ ಪ್ರಾಸಾದೈರ್ಬಹುಭಿರ್ವೃತಂ |
ದಿವ್ಯಾಪ್ಸರೋಗಣೈಸ್ತ್ರೀಭಿಃ ಸರ್ವತಃ ಸಮಲಂಕೃತಂ ॥ ೧೮ ॥

ಮಧ್ಯೇ ತು ಮಂಡಪಂ ದಿವ್ಯಂ ರಾಜಸ್ಥಾನಂ ಮಹೋತ್ಸವಂ ।
ಮಾಣಿಕ್ಯಸ್ತಂಭಸಾಹಸ್ರಜುಷ್ಟಂ ರತ್ನಮಯಂ ಶುಭಂ ॥ ೧೯ ॥

ದಿವ್ಯಮುಕ್ತೈಸ್ಸಮಾಕೀರ್ಣಂ ಸಾಮಗಾನೋಪಶೋಭಿತಂ |
ಮಧ್ಯೇ ಸಿಂಹಾಸನಂ ರಮ್ಯಂ ಸರ್ವವೇದಮಯಂ ಶುಭಂ ॥ ೨೦ ॥

ಧರ್ಮಾದಿದೈವತೈರ್ನಿತ್ಯಂ ವೃತಂ ವೇದಮಯಾತ್ಮಕೈಃ |
ಧರ್ಮಜ್ಞಾನಮಯೈಶ್ವರ್ಯವೈರಾಗ್ಯೈಃ ಪಾದವಿಗ್ರಹೈಃ ॥ ೨೧ ॥

ಋಗ್ಯಜುಸ್ಸಾಮಾಥರ್ವಾಣರೂಪೈರ್ನಿತ್ಯೈರ್ವೃತಂ ಕ್ರಮಾತ್ ।
ಶಕ್ತಿರಾಧಾರಶಕ್ತಿಶ್ಚ ಚಿಚ್ಛಕ್ತಿಶ್ಚ ಸದಾಶಿವಾ ॥ ೨೨ ॥

---

೧೮. ಮಹಡಿಗಳಿಂದ ಕೂಡಿರುವ ಒಳ್ಳೊಳ್ಳೆಯ ಮನೆಗಳಿಂದಲೂ, ಅನೇಕವಾದ ಪ್ರಾಸಾದಗಳಿಂದಲೂ ಕೂಡಿದೆ. ದಿವ್ಯವಾದ ಅಪ್ಸರಸ್ತ್ರೀಯರಿಂದಲೂ ಎಲ್ಲಾ ಕಡೆಯಲ್ಲಿಯೂ ಕೂಡಿಕೊಂಡಿರುವುದು.

೧೯. ಮಧ್ಯದಲ್ಲಿ ಒಂದು ಮಂಡಪವಿರುವುದು. ಅದೇ ರಾಜಾಸ್ಥಾನವು. ಉತ್ಸವವು ನಡೆಯುವ ಜಾಗವು. ಸಾವಿರಾರು ಮಾಣಿಕ್ಯದ ಕಂಬಗಳಿಂದ ಕೂಡಿದೆ ರತ್ನಮಯವಾಗಿ ಮನೋಹರವಾಗಿದೆ.

೨೦. ದಿವ್ಯವಾದ ಮುತ್ತುಗಳಿಂದ ಕೂಡಿದೆ. ಸಾಮಗಾನದಿಂದ ರಂಜಿತವಾಗಿದೆ. ಮಧ್ಯದಲ್ಲಿ ಒಂದು ಸಿಂಹಾಸನವಿದೆ. ಅದು ಸರ್ವವೇದಮಯವಾದುದು. ಮಂಗಳಕರವಾದುದು.

೨೧. ವೇದಮಯವಾಗಿರುವ ಧರ್ಮವೇ ಮುಂತಾದ ದೇವತೆಗಳಿಂದ ಯಾವಾಗಲೂ ಆ ಮಂಡಪವು ಕೂಡಿಕೊಂಡಿರುವುದು. ಧರ್ಮ, ಜ್ಞಾನ, ಐಶ್ವರ್ಯ, ವೈರಾಗ್ಯ ರೂಪವಾದ ಕಾಲುಗಳು ಆ ಮಂಟಪಕ್ಕೆ ಇರುವುವು.

೨೨–೨೩. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದವೆಂಬ ನಿತ್ಯವಾದ ವೇದಗಳಿಂದ ಯಾವಾಗಲೂ ಕೂಡಿಕೊಂಡಿವೆ. ಆಧಾರಶಕ್ತಿ,

ಧರ್ಮಾದಿದೇವತಾನಾಂ ಚ ಶಕ್ತಯಃ ಪರಿಕೀರ್ತಿತಾಃ ।
ವಸಂತಿ ಮಧ್ಯಮೇ ತತ್ರ ವಹ್ನಿಸೂರ್ಯಸುಧಾಂಶವಃ ॥ ೧೩ ॥

ಕೂರ್ಮಶ್ಚ ನಾಗರಾಜಶ್ಚ ವೈನತೇಯಸ್ತ್ರಯೀಶ್ವರಃ ।
ಛಂದಾಂಸಿ ಸರ್ವಮಂತ್ರಾಶ್ಚ ಪೀಠರೂಪತ್ವಮಾಸ್ಥಿತಾಃ ॥ ೧೪ ॥

ಸರ್ವಾಕ್ಷರಮಯಂ ದಿವ್ಯಂ ಯೋಗಪೀಠಮಿತಿ ಸ್ಮೃತಂ ।
ತನ್ಮಧ್ಯೇಽಷ್ಟದಳಂ ಪದ್ಮಮುದಯಾರ್ಕಸಮಪ್ರಭಂ ॥ ೧೫ ॥

ತನ್ಮಧ್ಯೇ ಕರ್ಣಿಕಾಯಾಂ ತು ಸಾವಿತ್ರ್ಯಾಂ ಶುಭದರ್ಶನೇ ।
ಈಶ್ವರ್ಯಾ ಸಹ ದೇವೇಶಃ ತತ್ರಾಸೀನಃ ಪರಃ ಪುಮಾನ್ ॥ ೧೬ ॥

ಇಂದೀವರದಳಶ್ಯಾಮಃ ಕೋಟಿಸೂರ್ಯಪ್ರಕಾಶವಾನ್ ।
ಯುವಾ ಕುಮಾರಃ ಸ್ನಿಗ್ಧಾಂಗಃ ಕೋಮಲಾವಯವೈರ್ಯುತಃ ॥ ೧೭ ॥

---

ಚಿಚ್ಛಕ್ತಿ, ಸದಾಶಿವಶಕ್ತಿ ಈ ಶಕ್ತಿಗಳಿಂದ ಕೂಡಿದೆ. ಮಧ್ಯದಲ್ಲಿ ಅಗ್ನಿ, ಸೂರ್ಯ ಚಂದ್ರರು ವಾಸಿಸುತ್ತಿರುವರು.

೧೪. ಕೂರ್ಮ, ನಾಗರಾಜ, ವೈನತೇಯ, ಬ್ರಹ್ಮ, ಛಂಧಸ್ಸು, ಸರ್ವ ಮಂತ್ರಗಳು, ಇವೆಲ್ಲವೂ ಪೀಠರೂಪವನ್ನು ಹೊಂದಿವೆ.

೧೫. ಎಲ್ಲಾ ಅಕ್ಷರಗಳಿಂದಲೂ ಕೂಡಿದ ದಿವ್ಯವಾದ ಯೋಗಪೀಠವೊಂದಿರುವುದು. ಅದರ ಮಧ್ಯದಲ್ಲಿ ಎಂಟು ದಳಗಳುಳ್ಳ ಪದ್ಮವೊಂದಿರುವುದು. ಅದು ಉದಯಿಸುತ್ತಿರುವ ಸೂರ್ಯನಂತಿರುವುದು.

೧೬. ಆ ಪದ್ಮದಲ್ಲಿರುವ ಕರ್ಣಿಕೆಯಲ್ಲಿ ಸಾವಿತ್ರಿ ಪೀಠದಲ್ಲಿ ಲಕ್ಷ್ಮಿಯೊಡನೆ ಆ ವಿಷ್ಣುವು ಸುಖವಾಗಿ ಕುಳಿತಿರುವನು.

೧೭-೧೮. ಆ ಸ್ವಾಮಿಯು ಕನ್ನೈದಿಲೆಯಂತೆ ಶ್ಯಾಮವರ್ಣದವನಾಗಿರುವನು. ಕೋಟಿಸೂರ್ಯರಂತೆ ಪ್ರಕಾಶಮಾನವಾಗಿದ್ದಾನೆ. ಯುವಕನು. ಮನ್ಮಥನನ್ನು ತಿರಸ್ಕರಿಸುವಂತಿರುವನು. ಮನೋಹರವಾದ ಅವಯವವುಳ್ಳವನು. ಕೋಮಲವಾದ ಅವಯವಗಳಿಂದ ಕೂಡಿರುವನು. ಅರಳಿರುವ

ಫುಲ್ಲರಕ್ತಾಂಬುಜನಿಭಃ ಕೋಮಲಾಂಘ್ರಿಕರಾಬ್ಜವಾನ್ ।
ಪ್ರಬುದ್ಧಪುಂಡರೀಕಾಕ್ಷಃ ಸುಭ್ರೂಲತಾಯುಗಾಂಕಿತಃ ॥ ೨೮ ॥

ಸುನಾಸಃ ಸುಕಪೋಲಾಢ್ಯಃ ಸುಶೋಭಮುಖಪಂಕಜಃ ।
ಮುಕ್ತಾಫಲಾಭದಂತಾಢ್ಯಃ ಸಸ್ಮಿತಾಧರವಿದ್ರುಮಃ ॥ ೨೯ ॥

ಪರಿಪೂರ್ಣೇಂದುಸಂಕಾಶಃ ಸುಸ್ಮಿತಾನನಪಂಕಜಃ ।
ತರುಣಾದಿತ್ಯವರ್ಣಾಭ್ಯಾಂ ಕುಂಡಲಾಭ್ಯಾಂ ವಿರಾಜಿತಃ ॥ ೩೦ ॥

ಸುಸ್ನಿಗ್ಧನೀಲಪಟೇಲಕುಂತಲೈರುಪಶೋಭಿತಃ ।
ಮಂದಾರಪಾರಿಜಾತಾಢ್ಯಃ ಕಬರೀಕೃತಕೇಶವಾನ್ ॥ ೩೧ ॥

ಪ್ರಾತರುದ್ಯತ್ಸಹಸ್ರಾಂಶುನಿಭಕೌಸ್ತುಭಶೋಭಿತಃ ।
ಹಾರಸ್ವರ್ಣಸ್ರಗಾಸಕ್ತಕಂಬುಗ್ರೀವಾವಿರಾಜಿತಃ ॥ ೩೨ ॥

---

ಕೆಂಪುಕಮಲದಂತೆ ಇರುವನು. ಕೋಮಲವಾದ ಕೈಕಾಲುಗಳುಳ್ಳವನು. ಅರಳಿರುವ ಕನ್ನೆಯದೆಲೆಯಂತೆ ಕಣ್ಣುಗಳುಳ್ಳವನು. ಲಕ್ಷ್ಮಿಯು ತೋಳನ್ನು ಹೆಗಲಿನಮೇಲೆ ಇಟ್ಟುಕೊಂಡಿರುವಳು. ಚೆನ್ನಾಗಿರುವ ಮೂಗುಳ್ಳವನು. ಒಳ್ಳೆಯ ಕಪೋಲವುಳ್ಳವನು. ಚೆನ್ನಾಗಿರುವ ಮುಖಪದ್ಮವುಳ್ಳವನು. ಮುತ್ತಿನಂತಿರುವ ಹಲ್ಲುಗಳಿಂದ ಕೂಡಿಕೊಂಡಿರುವವನು. ನಗುವಿನಿಂದ ಕೂಡಿರುವ ಕೆಳದುಟಿಯುಳ್ಳವನು.

೩೦. ಪೂರ್ಣವಾದ ಚಂದ್ರನಂತೆ ಇರುವನು. ನಗುವಿನಿಂದ ಕೂಡಿದ ಮುಖವುಳ್ಳವನು. ಬಾಲಸೂರ್ಯನಂತೆ ಬೆಳಗುತ್ತಿರುವ ಕರ್ಣಾಭರಣಗಳಿಂದ ಪ್ರಕಾಶಿಸುತ್ತಿರುವನು.

೩೧–೩೨. ನುಣುಪಾಗಿಯೂ, ಕಪ್ಪಗೂ, ಡೊಂಕುಡೊಂಕಾಗಿಯೂ ಇರುವ ತಲೆಗೂದಲಿನಿಂದ ಕೂಡಿರುವನು. ಪಾರಿಜಾತದ ಹೂವನ್ನು ಧರಿಸಿಕೊಂಡಿರುವನು. ತಲೆಗೂದಲನ್ನು ತುರುಬನ್ನಾಗಿ ಕಟ್ಟಿಕೊಂಡಿರುವನು. ಬೆಳಗ್ಗೆ ಉದಯವಾಗುತ್ತಿರುವ ಸಾವಿರ ಸೂರ್ಯರುಗಳಂತೆ ಕಾಂತಿಯುಳ್ಳ ಕೌಸ್ತುಭಮಣಿಯಿಂದ ಪ್ರಕಾಶಿಸುತ್ತಿರುವನು. ಒಳ್ಳೆಯ ಬಣ್ಣದಿಂದ ಕೂಡಿರುವ ಹಾರವನ್ನು ಕತ್ತಿಗೆ ಹಾಕಿಕೊಂಡು ಪ್ರಕಾಶಿಸುತ್ತಿರುವನು.

ಸಿಂಹಸ್ಕಂಧನಿಭೈಃ ಪ್ರೋಚ್ಚೈಃ ಪೀನೈರಂಸೈರ್ವಿರಾಜಿತಃ ।
ಮಾನವೃತ್ತಾಯತಭುಜೈಶ್ಚತುರ್ಭಿರುಪಶೋಭಿತಃ ॥ ೩೩ ॥

ಅಂಗುಲೀಯೈಶ್ಚ ಕಟಕೈಃ ಕೇಯೂರೈರುಪಶೋಭಿತಃ
ಬಾಲಾರ್ಕಕೋಟಿಸಂಕಾಶೈಃ ಕೌಸ್ತುಭಾದ್ಯೈಃ ಸುಭೂಷಣೈಃ ॥ ೩೪ ॥

ವಿರಾಜಿತಮಹಾವಕ್ಷಾ ವನಮಾಲಾ ವಿಭೂಷಿತಃ ।
ವಿಧಾತುರ್ಜನನಸ್ಥಾನನಾಭಿಪಂಕಜಶೋಭಿತಃ ॥ ೩೫ ॥

ಬಾಲಾತಪನಿಭಶ್ಲಕ್ಷ್ಣಪೀತವಸ್ತ್ರಸಮನ್ವಿತಃ ।
ನಾನಾರತ್ನವಿಚಿತ್ರಾಂಘ್ರಿಕಟಕಾಭ್ಯಾಂ ವಿರಾಜಿತಃ ॥ ೩೬ ॥

ಸಜ್ಯೋತ್ಸ್ನಚಂದ್ರಪ್ರತಿಮನಖಪಂಕ್ತಿಭಿರಾವೃತಃ ।
ಕೋಟಿಕಂದರ್ಪಲಾವಣ್ಯಃ ಸೌಂದರ್ಯನಿಧಿರಚ್ಯುತಃ ॥ ೩೭ ॥

---

೩೩. ಅವನ ಭುಜಗಳು ಸಿಂಹದ ಕತ್ತಿನಂತೆ ಇದೆ. ಎತ್ತರವಾಗಿಯೂ ಇದೆ. ದಪ್ಪನಾಗಿಯೂ ಇದೆ. ಇದರಿಂದ ಪ್ರಕಾಶಿಸುತ್ತಿರುವನು. ಇವನ ಭುಜಗಳು ಮಾವಿನಂತೆ ಬರಬರುತ್ತಾ ಸಣ್ಣದಾಗಿದೆ. ಇಂತಹವು ನಾಲ್ಕು ಇವೆ. ಇವುಗಳಿಂದ ಪ್ರಕಾಶಿತನಾಗಿದ್ದಾನೆ.

೩೪-೩೫. ಉಂಗುರಗಳು, ಕೈಬಳೆಗಳು, ಭುಜಕೀರ್ತಿಗಳು ಇವುಗಳಿಂದ ಪ್ರಕಾಶಿಸುತ್ತಿರುವನು. ಬಾಲಸೂರ್ಯರ ಕೋಟಿಜನಗಳಂತೆ ಪ್ರಕಾಶಮಾನವಾಗಿರುವ ಕೌಸ್ತುಭವೇ ಮುಂತಾದ ಭೂಷಣಗಳಿಂದ ಅವನ ವಕ್ಷಸ್ಥಳವು ಪ್ರಕಾಶಿತವಾಗಿದೆ. ಮತ್ತು ವನಮಾಲೆಯೆಂಬ ಮಾಲೆಯನ್ನು ಹಾಕಿಕೊಂಡಿದ್ದಾನೆ. ಬ್ರಹ್ಮನಿಗೆ ಉತ್ಪತ್ತಿಸ್ಥಾನವಾದ ನಾಭಿಕಮಲದಿಂದ ಪ್ರಕಾಶಿತನಾಗಿದ್ದಾನೆ.

೩೬. ಬಾಲಸೂರ್ಯನಂತೆ ಬಣ್ಣವುಳ್ಳ ಹೊಂಬಣ್ಣದ ಬಟ್ಟೆಯನ್ನು ಧರಿಸಿದ್ದಾನೆ. ಬಗೆಬಗೆಯಾದ ರತ್ನಗಳಿಂದ ವಿಚಿತ್ರವಾಗಿರುವ ಕಾಲುಬಳೆಗಳಿಂದ ಪ್ರಕಾಶಿಸುತ್ತಿರುವನು.

೩೭. ಚಂದ್ರಿಕೆಯೊಡನೆ ಕೂಡಿರುವ ಚಂದ್ರನಂತಿರುವ ಬೆರಳ ಉಗುರುಗಳಿಂದ ಕೂಡಿರುವನು. ಕೋಟಿಜನ ಮನ್ಮಥರಂತೆ ಲಾವಣ್ಯವುಳ್ಳವನು. ಸೌಂದರ್ಯಕ್ಕೆ ನಿಧಿಯು. ಅಚ್ಯುತನು.

ದಿವ್ಯಚಂದನಲಿಪ್ತಾಂಗೋ ದಿವ್ಯಮಾಲಾವಿಭೂಷಿತಃ ।
ಶಂಖಚಕ್ರಗೃಹೀತಾಭ್ಯಾಮುದ್ಬಾಹುಭ್ಯಾಂ ವಿರಾಜಿತಃ ॥ ೩೮ ॥

ವರದಾಭಯಹಸ್ತಾಭ್ಯಾಮಿತರಾಭ್ಯಾಂ ತಥೈವ ಚ ।
ವಾಮಾಂಕೇ ಸಂಸ್ಥಿತಾ ದೇವೀ ಮಹಾಲಕ್ಷ್ಮೀರ್ಮಹೇಶ್ವರೀ ॥ ೩೯ ॥

ಹಿರಣ್ಯವರ್ಣಾ ಹರಿಣೀ ಸುವರ್ಣರಜತಸ್ರಜಾ ।
ಸರ್ವಲಕ್ಷಣಸಂಪನ್ನಾ ಯೌವನಾರಂಭವಿಗ್ರಹಾ ॥ ೪೦ ॥

ರತ್ನಕುಂಡಲಸಂಯುಕ್ತಾ ನೀಲಾಕುಂಚಿತಶೀರ್ಷಜಾ ।
ದಿವ್ಯಚಂದನಲಿಪ್ತಾಂಗಾ ದಿವ್ಯಪುಷ್ಪೋಪಶೋಭಿತಾ ॥ ೪೧ ॥

ಮಂದಾರಕೇತಕೀಜಾತೀಪುಷ್ಪಾಂಚಿತಸುಕುಂತಲಾ ।
ಸುಭ್ರೂಸ್ಸುನಾಸಾ ಸುಶ್ರೋಣೀ ಪೀನೋನ್ನತಪಯೋಧರಾ ॥ ೪೨ ॥

---

೩೮. ಮೈಗೆಲ್ಲವೂ ದಿವ್ಯವಾದ ಶ್ರೀಗಂಧವನ್ನು ಬಳಿದುಕೊಂಡಿರುವನು. ದಿವ್ಯಮಾಲೆಯನ್ನು ಹಾಕಿಕೊಂಡಿರುವನು. ಶಂಖಚಕ್ರಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು ಆ ಕೈಗಳನ್ನು ಮೇಲಕ್ಕೆತ್ತಿಕೊಂಡಿರುವನು.

೩೯-೪೦. ಮತ್ತೆರಡು ಹಸ್ತಗಳಲ್ಲಿ ಒಂದನ್ನು ವರದ ಹಸ್ತವನ್ನಾಗಿಯೂ ಮತ್ತೊಂದನ್ನು ಅಭಯ ಹಸ್ತವನ್ನಾಗಿಯೂ ಧರಿಸಿರುವನು. ಅವನ ಎಡಗಡೆಯಲ್ಲಿ ಮಹೇಶ್ವರಿಯಾದ ಲಕ್ಷ್ಮಿಯು ಕುಳಿತಿರುವಳು. ಚಿನ್ನದ ಬಣ್ಣಕ್ಕಿರುವಳು. ಚಂಚಲಾಕ್ಷಿಯು. ಚಿನ್ನಬೆಳ್ಳಿಯ ಮಾಲೆಗಳನ್ನು ಧರಿಸಿರುವಳು. ಎಲ್ಲಾ ಲಕ್ಷಣಗಳಿಂದಲೂ ಕೂಡಿರುವಳು. ಆಕೆಗೆ ಈಗ ಯೌವನವು ಬರುತ್ತಿರುವಂತೆ ಇರುವುದು.

೪೧. ರತ್ನದ ಕುಂಡಲಗಳಿಂದ ಕೂಡಿರುವಳು ನೀಲವಾಗಿಯೂ ಡೊಂಕುಡೊಂಕಾಗಿಯೂ ಇರುವ ತಲೆಗೂದಲುಳ್ಳವಳು. ದಿವ್ಯವಾದ ಚಂದನವನ್ನು ಪೂಸಿಕೊಂಡಿರುವಳು. ದಿವ್ಯವಾದ ಮಾಲೆಯನ್ನು ಹಾಕಿಕೊಂಡಿರುವಳು.

೪೨. ಪಾರಿಜಾತ, ತಾಳೆ, ಜಾಜಿ ಇವೇ ಮುಂತಾದ ಹೂಗಳಿಂದ ಮಾಲೆಯನ್ನು ಕಟ್ಟಿ ತಲೆಗೆ ಮುಡಿದುಕೊಂಡಿರುವಳು. ಹುಬ್ಬು ಚೆನ್ನಾಗಿರುವುದು. ಮೂಗು ಚೆನ್ನಾಗಿರುವುದು. ನಡುವು ಚೆನ್ನಾಗಿದೆ. ದೊಡ್ಡದಾಗಿರುವ ಸ್ತನಗಳುಳ್ಳವಳು.

ಪರಿಪೂರ್ಣೇಂದುಸಂಕಾಶಸುಸ್ಮಿತಾನನಪಂಕಜಾ ।
ತರುಣಾದಿತ್ಯವರ್ಣಾಭ್ಯಾಂ ಕುಂಡಲಾಭ್ಯಾಂ ವಿರಾಜಿತಾ || ೪೩ ||

ತಪ್ತಕಾಂಚನವರ್ಣಾಭಾ ತಪ್ತಕಾಂಚನಭೂಷಣಾ ।
ಹಸ್ತೈಶ್ಚತುರ್ಭಿಸ್ಸಂಯುಕ್ತಾ ಕನಕಾಂಬುಜಭೂಷಿತಾ || ೪೪ ||

ನಾನಾವಿಚಿತ್ರರತ್ನಾಢ್ಯಾ ಕನಕಾಂಬುಜಮಾಲಯಾ ।
ಹಾರಕೇಯೂರಕಟಕೈರಂಗುಲೀಯೈಶ್ಚ ಶೋಭಿತಾ || ೪೫ ||

ಭುಜದ್ವಯಧೃತೋದಗ್ರಪದ್ಮಯುಗ್ಮವಿರಾಜಿತಾ ।
ಗೃಹೀತಮಾತುಲುಂಗಾಖ್ಯಜಾಂಬೂನದಕರಾಂಚಿತಾ || || ೪೬ ||

ಏವಂ ನಿತ್ಯಾನಪಾಯಿನ್ಯಾ ಮಹಾಲಕ್ಷ್ಮ್ಯಾ ಮಹೇಶ್ವರಃ ।
ಮೋದತೇ ಪರಮವ್ಯೋಮ್ನಿ ಶಾಶ್ವತೇ ಸರ್ವದಾ ಪ್ರಭುಃ || ೪೭ ||

---

೪೩-೪೪. ಪೂರ್ಣಚಂದ್ರನಂತಿರುವ ಮುಖಪದ್ಮವುಳ್ಳವಳು. ಬಾಲಸೂರ್ಯನಂತಿರುವ ಕರ್ಣಾಭರಣ (ಓಲೆ) ಗಳನ್ನು ಹಾಕಿಕೊಂಡಿರುವಳು. ಕಾಯಿಸಿದ ಚಿನ್ನದಂತೆ ಬಣ್ಣವುಳ್ಳವಳು. ಕಾಯಿಸಿದ ಚಿನ್ನದ ಭೂಷಣಗಳುಳ್ಳವಳು. ನಾಲ್ಕು ಕೈಗಳನ್ನು ಹೊಂದಿರುವಳು. ಚಿನ್ನದ ಕಮಲವನ್ನು ಹಿಡಿದಿರುವಳು.

೪೫ ನಾನಾಬಗೆಯಾದ ರತ್ನಗಳನ್ನು ಹಾಕಿಕೊಂಡಿರುವಳು. ಚಿನ್ನದ ಕಮಲಗಳ ಮಾಲೆಯನ್ನು ಹಾಕಿಕೊಂಡಿರುವಳು. ಹಾರ, ಭುಜಕೀರ್ತಿ, ಕೈಬಳೆ, ಉಂಗುರ ಇವುಗಳನ್ನು ಹಾಕಿಕೊಂಡು ಪ್ರಕಾಶಿಸುತ್ತಿರುವಳು.

೪೬. ಎರಡು ಕೈಗಳಲ್ಲಿ ಪದ್ಮವನ್ನು ಹಿಡಿದುಕೊಂಡು ಆ ಕೈಗಳನ್ನು ಎತ್ತಿಕೊಂಡಿರುವಳು. ಕೈಯ್ಯಲ್ಲಿ ಚಿನ್ನದ ಮಾದಲದ ಹಣ್ಣನ್ನು ಹಿಡಿದುಕೊಂಡಿರುವಳು.

೪೭. ಈ ರೀತಿಯಾಗಿರುವ ಯಾವಾಗಲೂ ತನ್ನನ್ನು ಅಗಲದೆ ಇರುವ ಮಹಾಲಕ್ಷ್ಮಿಯಿಂದ ಕೂಡಿಕೊಂಡು ಆ ಸ್ವಾಮಿಯು ಆ ವೈಕುಂಠದಲ್ಲಿ ಸುಖಿಸುತ್ತಿರುವನು.

ಪಾರ್ಶ್ವಯೋರವನೀಲೀಲೇ ಸಮಾಸೀನೇ ಶುಭಾನನೇ ।
ಅಷ್ಟದಿಕ್ಷು ದಳಾಗ್ರೇಷು ವಿಮಲಾದ್ಯಾಶ್ಚ ಶಕ್ತಯಃ ॥ ೪೮ ॥

ವಿಮಲೋತ್ಕರ್ಷಿಣೀ ಜ್ಞಾನಾ ಕ್ರಿಯಾ ಯೋಗಾ ತಥೈವ ಚ ।
ಪ್ರಹ್ವೀ ಸತ್ಯಾ ತಥೇಶಾನಾ ಮಹಿಷ್ಯಃ ಪರಮಾತ್ಮನಃ ॥ ೪೯ ॥

ಗೃಹೀತ್ವಾ ಚಾಮರಾನ್ ದಿವ್ಯಾನ್ ಸುಧಾಕರಸಮಪ್ರಭಾನ್ ।
ಸರ್ವಲಕ್ಷಣಸಂಪನ್ನಾ ಮೋದಂತೇ ಪತಿಮಚ್ಯುತಂ ॥ ೫೦ ॥

ದಿವ್ಯಾಪ್ಸರೋಗಣಾಃ ಪಂಚಶತಸಂಖ್ಯಾಶ್ಚ ಯೋಷಿತಃ ।
ಅಂತಃಪುರನಿವಾಸಿನ್ಯಃ ಸರ್ವಾಭರಣಭೂಷಿತಾಃ ॥ ೫೧ ॥

ಪದ್ಮಹಸ್ತಾಶ್ಚ ತಾಸ್ಸರ್ವಾಃ ಕೋಟಿವೈಶ್ವಾನರಪ್ರಭಾಃ ।
ಸರ್ವಲಕ್ಷಣಸಂಪನ್ನಾಃ ಶೀತಾಂಶುಸದೃಶಾನನಾಃ ॥ ೫೨ ॥

---

೪೮. ಎರಡು ಪಕ್ಕದಲ್ಲಿಯೂ ಭೂದೇವಿ, ಶ್ರೀದೇವಿಯರಿರುವರು. ಸುತ್ತಲೂ ಎಂಟು ದಿಕ್ಕಿನ ದಳಗಳಲ್ಲಿ ವಿಮಲೆಯೇ ಮುಂತಾದ ಶಕ್ತಿ ದೇವತೆಗಳು ಇರುವರು.

೪೯. ವಿಮಲಾಶಕ್ತಿ, ಉತ್ಕರ್ಷಿಣಿಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ, ಯೋಗಶಕ್ತಿ, ಪ್ರಹ್ವೀಶಕ್ತಿ, ಸತ್ಯಾಶಕ್ತಿ, ಈಶಾನಶಕ್ತಿ, ಇವರು ಇಷ್ಟುಜನರೂ ಪರಮಾತ್ಮನ ಹೆಂಡಿರು.

೫೦. ಉತ್ತಮವಾದ ಚಾಮರಗಳನ್ನು ತೆಗೆದುಕೊಂಡು ಬೀಸುತ್ತಿರುವರು. ಅವರೆಲ್ಲರೂ ಚಂದ್ರನಂತಿರುವರು. ಎಲ್ಲ ಲಕ್ಷಣಗಳಿಂದ ಕೂಡಿರುವರು. ಆ ಅಚ್ಯುತನಾದ ವೈಕುಂಠ ಪತಿಯನ್ನು ಸಂತೋಷಗೊಳಿಸುತ್ತಿರುವರು.

೫೧–೫೨. ಐನೂರು ಜನ ಅಪ್ಸರ ಸ್ತ್ರೀಯರು ಅವನ ಅಂತಃಪುರದಲ್ಲಿ ವಾಸಮಾಡಿಕೊಂಡಿರುವರು ಎಲ್ಲಾ ಆಭರಣಗಳನ್ನೂ ಧರಿಸಿರುವರು. ಪದ್ಮಗಳನ್ನು ಹಿಡಿದಿರುವರು. ಕೋಟಿಜನ ಅಗ್ನಿಯರಂತೆ ಪ್ರಭೆಯುಳ್ಳವರು. ಎಲ್ಲಾ ಲಕ್ಷಣಗಳನ್ನೂ ಹೊಂದಿರುವರು. ಚಂದ್ರನಂತೆ ಮುಖವುಳ್ಳವರು.

ತಾಭಿಃ ಪರಿವೃತೋ ರಾಜಾ ಶುಶುಭೇ ಪರಮಃ ಪುಮಾನ್ ।
ಅನಂತವಿಹಗಾಧೀಶಸೇನಾನ್ಯಾಖ್ಯಸುರೇಶ್ವರೈಃ ॥ ೫೩ ॥

ಅನ್ಯೈಃ ಪರಿಜನೈರ್ನಿತ್ಯೈಃ ಮುಕ್ತೈಶ್ಚ ಪರಿಸಂವೃತಃ ।
ಮೋದತೇ ರಮಯಾ ಸಾರ್ಧಂ ಭೋಗೈಶ್ವರ್ಯೈಃ ಪರಃಪುಮಾನ್ ॥ ೫೪ ॥

ಏವಂ ವೈಕುಂಠನಾಥೋಽಸೌ ರಮತೇ ಪರಮೇ ಪದೇ ।
ತದ್ವ್ಯೂಹಭೇದಾನ್ ಲೋಕಾಂಶ್ಚ ವಕ್ಷ್ಯಾಮಿ ಗಿರಿಜೇ ಶುಭೇ ॥ ೫೫ ॥

ಪ್ರಾಚ್ಯಾಂ ವೈಕುಂಠಲೋಕಸ್ಯ ವಾಸುದೇವಸ್ಯ ಮಂದಿರಂ ।
ಆಗ್ನೇಯ್ಯಾಂ ಲಕ್ಷ್ಮ್ಯಾ ಲೋಕಸ್ತು ಯಾಮ್ಯಾಂ ಸಂಕರ್ಷಣಾಲಯಃ ॥ ೫೬ ॥

ಸಾರಸ್ವತಂ ತು ನೈಋರ್ತ್ಯಾಂ ಪ್ರಾದ್ಯುಮ್ನಃ ಪಶ್ಚಿಮೇ ತಥಾ ।
ರತಿಲೋಕಸ್ತು ವಾಯವ್ಯಾಮುದೀಚ್ಯಾಮನಿರುದ್ಧಭೂಃ ॥ ೫೭ ॥

---

೫೩-೫೪ ಆ ಹೆಂಗಸರಿಂದ ಕೂಡಿಕೊಂಡು ಆ ಪರಮಪುರುಷನು ಪ್ರಕಾಶಿಸುತ್ತಿರುವನು. ಅನಂತನೆಂಬ ಸರ್ಪ, ಗರುಡ, ಸೇನಾನಿಯೇ ಮುಂತಾದವರಿಂದಲೂ ನಿತ್ಯಮುಕ್ತರಾದ ಇನ್ನೂ ಅನೇಕರಿಂದಲೂ ಕೂಡ ಕೂಡಿಕೊಂಡಿರುವನು. ರಮೆಯೊಡನೆ ಅನೇಕವಾದ ಭೋಗಗಳಿಂದ ಸಂತೋಷಿಸುತ್ತಿರುವನು.

೫೫. ಈ ರೀತಿಯಾಗಿ ಆ ವೈಕುಂಠಪತಿಯು ಪರಮಪದದಲ್ಲಿ ರಮೆಯೊಡನೆ ರಮಿಸುತ್ತಿರುವನು. ಅವನ ಗುಂಪುಗಳ ಭೇದವನ್ನೂ ಅವನ ಲೋಕಗಳನ್ನೂ ಹೇಳುತ್ತೇನೆ. ಕೇಳು.

೫೬—೬೧. ಆ ವೈಕುಂಠಲೋಕದ ಪೂರ್ವಕ್ಕೆ ವಾಸುದೇವನ ಮನೆಯೂ, ಆಗ್ನೇಯಕ್ಕೆ ಲಕ್ಷ್ಮಿಯ ಮನೆಯೂ, ದಕ್ಷಿಣಕ್ಕೆ ಸಂಕರ್ಷಣನ ಮನೆಯೂ, ನೈಋುತ್ಯದಲ್ಲಿ ಸರಸ್ವತಿಯ ಮನೆಯೂ, ಪಶ್ಚಿಮದಲ್ಲಿ ಪ್ರದ್ಯುಮ್ನನ ಮನೆಯೂ, ವಾಯುವ್ಯದಲ್ಲಿ ರತಿಯ ಮನೆಯೂ, ಉತ್ತರದಲ್ಲಿ ಅನಿರುದ್ಧನ ಮನೆಯೂ,

ಐಶಾನ್ಯಾಂ ಶಾನ್ತಿಲೋಕಃ ಸ್ಯಾತ್ ಪ್ರಥಮಾವರಣಂ ಸ್ಮೃತಂ ।
ಪ್ರಹ್ಲಾದಾದ್ಯಾ ಮಹಾತ್ಮಾನೋ ದ್ವಿತೀಯಾವರಣಂ ಸ್ಮೃತಂ ॥ ೫೮ ॥

ಮತ್ಸ್ಯಕೂರ್ಮಾದಿಲೋಕಾಸ್ತು ತೃತೀಯಾವರಣಂ ಪರಂ ।
ಸತ್ಯಾಚ್ಯುತಾನಂತದುರ್ಗಾವಿಷ್ವಕ್ಸೇನಗಜಾನನಾಃ ॥ ೫೯ ॥

ಶಂಖಪದ್ಮನಿಧೀಲೋಕಾಶ್ಚತುರ್ಥಾವರಣಂ ಸ್ಮೃತಂ ।
ಋಗ್ಯಜುಸ್ಸಾಮಾಥರ್ವಣಲೋಕಾದಿಷು ಮಹತ್ಸು ಚ ॥ ೬೦ ॥

ಸಾವಿತ್ರ್ಯಾ ವಿಹಗೇಶಸ್ಯ ಧರ್ಮಸ್ಯ ಚ ಮಖಸ್ಯ ಚ ।
ಪಂಚಮಾವರಣಂ ಪ್ರೋಕ್ತಮಕ್ಷಯಂ ಸರ್ವಪಾಙ್ಮಯಂ ॥ ೬೧ ॥

ಶಂಖಚಕ್ರಗದಾಪದ್ಮಖಡ್ಗಶಾಂರ್ಗಹಲಂ ತಥಾ ।
ಮೌಸಲಂ ಚ ತಥಾ ಲೋಕಾಃ ಸರ್ವೇ ಶಸ್ತ್ರಾಸ್ತ್ರಸಂಯುತಾಃ ॥ ೬೨ ॥

ಷಷ್ಠಮಾವರಣಂ ಪ್ರೋಕ್ತಂ ಮನ್ತ್ರಾಸ್ತ್ರಮಯಮಕ್ಷರಂ ।
ಐಂದ್ರಪಾವಕಯಾಮ್ಯಾನಿ ನೈರ್ಋತಂ ವಾರುಣಂ ತಥಾ ॥ ೬೩ ॥

---

ಈಶಾನ್ಯದಲ್ಲಿ ಶಾನ್ತಿಯ ಮನೆಯೂ ಇರುವುವು. ಇದು ಪ್ರಥಮಾವರಣವು. (ಮೊದಲನೆಯ ಸುತ್ತು) ಪ್ರಹ್ಲಾದನೇ ಮುಂತಾದ ಮಹಾತ್ಮರು ಇರತಕ್ಕದ್ದು. ಎರಡನೆಯ ಆವರಣವು. ಮತ್ಸ್ಯ, ಕೂರ್ಮ, ಮುಂತಾದವರ ಲೋಕವು ಮೂರನೆಯ ಆವರಣವು. ಸತ್ಯ, ಅಚ್ಯುತ, ಅನಂತ, ದುರ್ಗ, ವಿಷ್ವಕ್ಸೇನ, ಗಜಾನನ, ಶಂಖ, ಪದ್ಮ, ನಿಧಿಗಳ ಲೋಕಗಳಿರುವುದು ನಾಲ್ಕನೆಯ ಆವರಣವು. ಋಕ್, ಯಜಸ್ಸು, ಸಾಮ, ಅಥರ್ವಣ, ಇವುಗಳ ಲೋಕಗಳು, ಸಾವಿತ್ರಿಯ ಲೋಕ, ಗರುಡನ ಲೋಕ, ಧರ್ಮನ ಲೋಕ, ಯಜ್ಞದ ಲೋಕ, ಇವೆಲ್ಲವೂ ಐದನೆಯ ಆವರಣಕ್ಕೆ ಸೇರಿದುವು. ಇವೆಲ್ಲವೂ ಅಕ್ಷಯವಾದುವು. ವಾಗ್ರೂಪವಾದುವು.

೬೨-೬೫. ಶಂಖ, ಚಕ್ರ, ಗದೆ, ಪದ್ಮ, ಖಡ್ಗ, ಶಾಂರ್ಗ, ಹಲ, ಮುಸಲ, ಇವೇ ಮುಂತಾದ ಶಸ್ತ್ರಾಸ್ತ್ರಗಳು ತುಂಬಿರುವ ಲೋಕಗಳೂ ಇರುವುವು. ಈಶಸ್ತ್ರಾಸ್ತ್ರಗಳು ಕೂಡಿರುವ, ಮಂತ್ರದಿಂದಲೂ ಕೂಡಿರುವ, ನಾಶರಹಿತವಾದ ಲೋಕವು ಆರನೆಯದು. ಇಂದ್ರ, ಯಮ, ಅಗ್ನಿ, ನಿಋುಋತಿ, ವರುಣ, ವಾಯುವ್ಯ, ಸೌಮ್ಯ,

ವಾಯವ್ಯಂ ಸೌಮ್ಯಮೈಶಾನಂ ಸಪ್ತಮಂ ಮುನಿಭಿಃ ಸ್ಮೃತಂ ।
ಸಾಧ್ಯಾ ಮರುದ್ಗಣಾಶ್ಚೈವ ವಿಶ್ವೇದೇವಾಸ್ತಥೈವ ಚ || ೬೪ ||

ನಿತ್ಯಾಃ ಸರ್ವೇ ಪರೇಧಾಮ್ನಿ ಯೇ ಚಾನ್ಯೇ ಚ ದಿವೌಕಸಃ ।
ತೇ ವೈ ಪ್ರಾಕೃತನಾಕೇಽಸ್ಮಿನ್ನನಿತ್ಯಾಸ್ತ್ರಿದಶೇಶ್ವರಾಃ || ೬೫ ||

ತೇ ಹ ನಾಕಂ ಮಹಿಮಾನಃ ಸಚಂತ ಇತಿ ವೈ ಶ್ರುತಿಃ ।
ಏವಂ ಪರಂ ಪದಂ ನಿತ್ಯೈಃ ಮುಕ್ತಿಭೋಗಪರಾಯಣೈಃ || ೬೬ ||

ದಿವ್ಯಾಭಿರ್ಮಹಿಷೀಭಿಶ್ಚ ರಾಜತೇ ವಿಭುರೀಶ್ವರಃ ।
ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ || ೬೭ ||

ಯದ್ಗತ್ವಾ ನ ನಿವರ್ತಂತೇ ಯೋಗಿನಃ ಸಂಶಿತವ್ರತಾಃ ।
ದ್ವಯೈಕಮಂತ್ರನಿಷ್ಠಾ ಯೇ ತೇ ವೈ ಯಾಂತಿ ತದವ್ಯಯಂ || ೬೮ ||

---

ಈಶಾನ, ಈ ಲೋಕಗಳು ಏಳನೆಯದು. ಸಾಧ್ಯರು, ಮರುದ್ಗಣಗಳು, ವಿಶ್ವೇದೇವರು, ನಿತ್ಯರಾಗಿ ಆ ಪರಧಾಮದಲ್ಲಿದ್ದು ಕೊಂಡಿರುವರು. ಈ ದೇವತೆಗಳ ಲ್ಲದೆ ಅನಿತ್ಯರಾದ ದೇವತೆಗಳೂ ಇದ್ದುಕೊಂಡಿರುವರು.

೬೬–೬೮. ಅವರೆಲ್ಲರೂ ಕೂಡ ವೈಕುಂಠದ ಮಹಿಮೆಯನ್ನು ಹೆಚ್ಚಿಸು ತ್ತಾರೆ. ಎಂದು ಶ್ರುತಿಯು ಹೇಳುತ್ತದೆ. ಈ ರೀತಿಯಾಗಿ ಆ ಪರಮಪದವು ಇರುವುದಲ್ಲದೆ ನಿತ್ಯರೂ ಮುಕ್ತಿಯನ್ನು ಭೋಗಿಸುವರೂ ಆದ ದಿವ್ಯರಾದ ಮಹರ್ಷಿಯರಿಂದಲೂ ಕೂಡಿಕೊಂಡಿರುವುದು. ಅವರಿಂದ ಆ ಸ್ವಾಮಿಯು ಪ್ರಕಾಶಿಸುತ್ತಾನೆ. ಆ ಲೋಕವನ್ನು ಸೂರ್ಯನಾಗಲಿ, ಚಂದ್ರನಾಗಲಿ, ಅಗ್ನಿಯಾಗಲಿ, ಬೆಳಕು ಮಾಡಲಾರರು. ಯೋಗಿಗಳೂ, ನಿಯಮಿಗಳೂ, ಆ ಲೋಕಕ್ಕೆ ಹೋದನಂತರ ಹಿಂದಿರುಗಿ ಬರುವುದಿಲ್ಲ. ಲಕ್ಷ್ಮೀನಾರಾಯಣ ರಿಬ್ಬರನ್ನು ಬೋಧಿಸುವ ಒಂದೇ ಮಂತ್ರದಲ್ಲಿ ನಿಷ್ಠರಾಗಿರುವವರು. ಆ ಅವ್ಯಯ ವಾದ ಲೋಕವನ್ನು ಹೊಂದುವರು.

ನ ವೇದಯಜ್ಞಾಧ್ಯಯನೈರ್ನ ದಾನೈರ್ನ ವ್ರತೈಃ ಶುಭೈಃ ।
ನ ತಪೋಭಿರ್ನಿರಾಹಾರೈಃ ನ ಚ ಸಾಧನಕರ್ಮಭಿಃ ॥ ೬೯ ॥

ಏಕೇನ ದ್ವಯಮಂತ್ರೇಣ ಯಥಾ ಭಕ್ತ್ಯಾ ತ್ವನನ್ಯಯಾ ।
ತದ್ಗಮ್ಯಂ ಶಾಶ್ವತಂ ದಿವ್ಯಂ ಪ್ರಪದ್ಯೇದ್ವೈ ಸನಾತನಂ ॥ ೭೦ ॥

॥ ಶ್ರೀ ಪಾರ್ವತ್ಯುವಾಚ ॥

ಸಾಧೂಕ್ತಂ ಪರಮಂ ಸ್ವರ್ಗಸ್ವರೂಪಂ ಭವತಾ ಪ್ರಭೋ ।
ಪರವ್ಯೋಮ್ನಿ ಸ್ಥಿತೋ ದೇವಃ ಕಥಂ ಪ್ರಕೃತಿಮಂಡಲೇ ॥ ೭೧ ॥

ಸ್ಥಿತವಾನ್ ಕಿಂ ನಿಮಿತ್ತೇನ ಲೀಲಯಾ ಕಿಂ ಪ್ರಯೋಜನಂ ।
ಶುದ್ಧಸತ್ವಮಯೇ ಲೋಕೇ ಸಂಸ್ಥಿತಃ ಪರಮೇಶ್ವರಃ ॥
ಕಥಂ ರಜಸ್ತಮೋಮಿಶ್ರವಿಭೂತ್ಯಾ ಸ್ಥಿತವಾನ್ ಪ್ರಭುಃ ॥ ೭೨ ॥

---

೬೯-೭೦. ಈ ಲಕ್ಷ್ಮೀನಾರಾಯಣರಿಬ್ಬರನ್ನೂ ಬೋಧಿಸುವ ಒಂದು ಮಂತ್ರವನ್ನು ಭಕ್ತಿಯಿಂದ ಜಪಿಸಿದರೆ ಆ ಶಾಶ್ವತವಾದ ಲೋಕವು ಸಿಕ್ಕುವಂತೆ ವೇದದಿಂದಾಗಲಿ, ಯಜ್ಞದಿಂದಾಗಲಿ, ಅಧ್ಯಯನದಿಂದಾಗಲಿ, ದಾನದಿಂದಾಗಲಿ, ವ್ರತಗಳಿಂದಾಗಲಿ, ನಿರಾಹಾರಗಳಿಂದಾಗಲಿ, ತಪಸ್ಸಿನಿಂದಾಗಲಿ, ಇನ್ನು ಯಾವ ಸಾಧನ ಕರ್ಮಗಳಿವೆಯೊ, ಅವು ಒಂದರಿಂದಲೂ ಹೊಂದಲು ಸಾಧ್ಯವಾಗುವುದಿಲ್ಲ

೭೧-೭೨. ಶ್ರೀ ಪಾರ್ವತಿಯು ಹೇಳಿದಳು—ಎಲೈ ! ಪ್ರಭುವೆ ! ಸ್ವರ್ಗದ ಸ್ವರೂಪವನ್ನು ನೀನು ಬಹಳ ಚೆನ್ನಾಗಿ ಹೇಳಿದೆ. ಪರಮಂಡಲವಾದ ವೈಕುಂಠದಲ್ಲಿರುವ ಸ್ವಾಮಿಯು ನಶ್ವರವಾದ ಪ್ರಕೃತಿಯ ಮಂಡಲದಲ್ಲಿರುವುದು ಹೇಗೆ ? ಹಾಗಿರಲು ಕಾರಣವೇನು ? ಆ ಲೀಲೆಯಿಂದ ಪ್ರಯೋಜನವೇನು ? ಶುದ್ಧಸತ್ವದಿಂದ ಕೂಡಿರುವ ಲೋಕದಲ್ಲಿದ್ದುಕೊಂಡಿರುವಾಗ ಆ ಸ್ವಾಮಿಯು ರಜೋಗುಣ ತಮೋಗುಣಗಳಿಂದ ಕೂಡಿರುವುದು ತಾನೆ ಹೇಗೆ ?

|| ಶ್ರೀ ರುದ್ರ ಉವಾಚ ||

ತ್ರಿಪಾದ್ವಿಭೂತೌ ಭಗವಾನೀಶ್ವರ್ಯಾ ಪರಮೇಶ್ವರಃ ।
ನಿತ್ಯಮುಕ್ತ್ಯೈಕಭೋಗ್ಯೋಽಸೌ ಮೋದತೇ ಸತತಂ ವಿಭುಃ || ೭೩ ||

ತಮೀಶ್ವರಂ ಮಹಾಮಾಯಾ ಪ್ರಕೃತ್ಯಾ ಜಗದಾಶ್ರಯಾ ।
ಕೃತಾಂಜಲಿಪುಟಾ ಭೂತ್ವಾ ತುಷ್ಟಾವ ಪರಮೇಶ್ವರಂ || ೭೪ ||

॥ ಮಹಾಮಾಯೋವಾಚ ॥

ನಮಸ್ತೇ ತ್ರಿಜಗದ್ಧಾಮ್ನೇ ನಮಸ್ತೇ ವಿಶ್ವರೂಪಿಣೇ ।
ಪುರಾಣಾಯ ನಮಸ್ತುಭ್ಯಂ ಜಗದುತ್ಪತ್ತಿಹೇತವೇ ॥ ೭೫ ॥

ಶ್ರೀಭೂಲೀಲಾಧಿಪತಯೇ ನಮೋ ನಾರಾಯಣಾಯ ಚ ।
ನಮೋ ಭಗವತೇ ತುಭ್ಯಂ ವಾಸುದೇವಾಯ ಶಾಂರ್ಙ್ಗಿಣೇ ॥ ೭೬ ॥

---

೭೩. ಶ್ರೀ ರುದ್ರನು ಹೇಳಿದನು–ಭಗವಂತನಾದ ಆ ಪರಮೇಶ್ವರನು ಈಶ್ವರಿಯಾದ ಲಕ್ಷ್ಮಿಯೊಡನೆ ನಿತ್ಯಮುಕ್ತನಾಗಿ ಭೋಗಿಸುತ್ತ ಯಾವಾಗಲೂ ಸಂತೋಷಿಸುತ್ತಿರುವನು.

೭೪ ಪ್ರಕೃತಿಯ ರೂಪದಿಂದ ಜಗತ್ತನ್ನು ಆಶ್ರಯಿಸಿಕೊಂಡಿರುವ ಆ ಮಹಾಮಾಯೆಯು ಕೈಮುಗಿದುಕೊಂಡು ಆ ಈಶ್ವರನನ್ನು ಕುರಿತು ಇಂತೆಂದು ಸ್ತುತಿಸಿದಳು

೭೫. ಮಹಾಮಾಯೆಯು ಹೇಳಿದಳು–ಮೂರುಲೋಕವೇ ಸ್ಥಾನವಾಗಿ ಉಳ್ಳ ನಿನಗೆ ನಮಸ್ಕಾರವು. ವಿಶ್ವರೂಪಿಯಾದ ನಿನಗೆ ನಮಸ್ಕಾರವು. ಬಹುಕಾಲಬನಾದ ನಿನಗೆ ನಮಸ್ಕಾರವು. ಜಗತ್ತಿನ ಉತ್ಪತ್ತಿ ಸ್ಥಿತಿಗಳಿಗೆ ಕಾರಣನಾದ ನಿನಗೆ ನಮಸ್ಕಾರವು.

೭೬. ಶ್ರೀದೇವಿ ಭೂದೇವಿ, ಲೀಲಾದೇವಿಯರಿಗೆ ಒಡೆಯನಾದ ನಾರಾಯಣನಿಗೆ ನಮಸ್ಕಾರವು. ವಾಸುದೇವನೂ ಶಾಂರ್ಗವೆಂಬ ಧನುಸ್ಸನ್ನು ಹಿಡಿದಿರುವನೂ ಆದ ನಿನಗೆ ನಮಸ್ಕಾರವು.

ಸರ್ವದೇವಸ್ವರೂಪಾಯ ವಿಷ್ಣವೇ ಜಿಷ್ಣವೇ ನಮಃ ।
ಸಹಸ್ರಮೂರ್ತಯೇ ತುಭ್ಯಮನಂತಾಯ ನಮೋಽಸ್ತು ತೇ ॥ ೭೭ ॥

ಅಚ್ಯುತಾಯಾವಿಕಾರಾಯ ಶುದ್ಧಸತ್ವಸ್ವರೂಪಿಣೇ ।
ಆದಿಮಧ್ಯಾನ್ತರಹಿತಸ್ವರೂಪಾಯ ನಮೋ ನಮಃ ॥ ೭೮ ॥

ನಮೋ ಹಿರಣ್ಯಗರ್ಭಾಯ ಜ್ಞಾನಾಯ ಪರಮಾತ್ಮನೇ ।
ಸರ್ವಭೂತಾತ್ಮನೇ ತುಭ್ಯಂ ಸರ್ವಭೂತಾಶ್ರಯಾಯ ಚ ॥ ೭೯ ॥

ಬ್ರಹ್ಮಣೇ ಜ್ಯೋತಿಷೇ ತುಭ್ಯಂ ನಮಸ್ತೇ ವಿಶ್ವರೂಪಿಣೇ ।
ನಮಃ ಶುಚಿಷದೇ ತುಭ್ಯಂ ಸೂರ್ಯಾಯ ಶುಭವರ್ಚಸೇ ॥ ೮೦ ॥

---

೭೭. ಎಲ್ಲಾ ದೇವತೆಗಳ ಸ್ವರೂಪನಾದ ವ್ಯಾಪಕನಾದ ಜಯಶೀಲನಾದ ನಿನಗೆ ನಮಸ್ಕಾರವು. ಸಹಸ್ರಮೂರ್ತಿಯಾದ ನಿನಗೆ ನಮಸ್ಕಾರವು. ಅನಂತನಾದ ನಿನಗೆ ನಮಸ್ಕಾರವು.

೭೮. ಅಚ್ಯುತನೂ, ವಿಕಾರವಿಲ್ಲದವನೂ, ಆದ ಸರ್ವಸ್ವರೂಪಿಯಾದ ನಿನಗೆ ನಮಸ್ಕಾರವು. ಆದಿಮಧ್ಯ ಅಂತ್ಯವಿಲ್ಲದ ನಿನಗೆ ನಮಸ್ಕಾರವು

೭೯. ಹಿರಣ್ಯಗರ್ಭನಾದ ನಿನಗೆ ನಮಸ್ಕಾರವು. ಜ್ಞಾನರೂಪನೂ ಪರಮಾತ್ಮನೂ ಆದ ನಿನಗೆ ನಮಸ್ಕಾರವು. ಸರ್ವಭೂತಗಳಿಗೂ ಆತ್ಮ ಸ್ವರೂಪನಾದ ನಿನಗೆ ನಮಸ್ಕಾರವು. ಸರ್ವಭೂತಗಳಿಗೂ ಆಶ್ರಯನಾದ ಸ್ವಾಮಿಗೆ ನಮಸ್ಕಾರವು.

೮೦. ಜ್ಯೋತಿರೂಪನಾದ, ಪರಬ್ರಹ್ಮನಾದ, ನಿನಗೆ ನಮಸ್ಕಾರವು. ವಿಶ್ವರೂಪಿಯಾದ ನಿನಗೆ ನಮಸ್ಕಾರವು. ಶುಚಿಯಾದ ಅಗ್ನಿಗೆ ವಾಸಸ್ಥಾನವಾದ ನಿನಗೆ ನಮಸ್ಕಾರವು. ಸೂರ್ಯರೂಪನಾದ ಒಳ್ಳೆಯ ಕಾಂತಿಯುಳ್ಳ ನಿನಗೆ ನಮಸ್ಕಾರವು.

ಅಗ್ನಯೇ ಹವ್ಯಭೋಕ್ತ್ರೇ ಚ ತಸ್ಮೈ ಯಜ್ಞಾತ್ಮನೇ ನಮಃ ।
ನಮಸ್ತೇ ಪ್ರಸವಿತ್ರೇ ಚ ಸರ್ಗಸ್ಥಿತ್ಯಂತಹೇತವೇ ॥ ೮೧ ॥

ನಮೋ ವೇದಾಂತವೇದ್ಯಾಯ ಚತುರಾತ್ಮಸ್ವರೂಪಿಣೇ ।
ಬ್ರಹ್ಮಣೇ ಜ್ಯೋತಿಷೇ ತುಭ್ಯಂ ಶಂಕರಾಯ ಹರಾಯ ಚ ॥ ೮೨ ॥

ತ್ರಿಗುಣಾಯ ನಮಸ್ತುಭ್ಯಂ ಸರ್ಗಸ್ಥಿತ್ಯಂತಹೇತವೇ ।
ನಿರ್ಗುಣಾಯ ನಮಸ್ತುಭ್ಯಂ ಸರ್ವಾತ್ಮಾಂತರವರ್ತಿನೇ ॥ ೮೩ ॥

ಅವ್ಯಕ್ತಾಯ ನಮಸ್ತಸ್ಮೈ ವಿಷ್ಣವೇ ಲೋಕಸಾಕ್ಷಿಣೇ ।
ನಾರಾಯಣಾಯ ಈಶಾಯ ಪೂರ್ಣಷಾಡ್ಗುಣ್ಯಮೂರ್ತಯೇ ॥ ೮೪ ॥

---

೮೧. ಹವಿಸ್ಸನ್ನು ತಿನ್ನುವ ಅಗ್ನಿರೂಪನಾದ ನಿನಗೆ ನಮಸ್ಕಾರವು. ಯಜ್ಞಸ್ವರೂಪನಾದ ನಿನಗೆ ನಮಸ್ಕಾರವು. ಎಲ್ಲವನ್ನೂ ಉತ್ಪತ್ತಿಮಾಡುವ ನಿನಗೆ ನಮಸ್ಕಾರವು. ಸೃಷ್ಟಿ ಸ್ಥಿತಿ ನಾಶಗಳಿಗೆ ಕಾರಣನಾದ ನಿನಗೆ ನವ-ಸ್ಕಾರವು.

೮೨. ವೇದಾಂತದಿಂದ ತಿಳಿಯತಕ್ಕ ನಿನಗೆ ನಮಸ್ಕಾರವು. ನಾಲ್ಕು ಬಗೆಯಾಗಿ ಆತ್ಮವನ್ನು ವಿಭಜಿಸಿರುವ ನಿನಗೆ ನಮಸ್ಕಾರವು. ಜ್ಯೋತಿರೂಪನೂ ಬ್ರಹ್ಮರೂಪನೂ ಆದ ನಿನಗೆ ನಮಸ್ಕಾರವು. ಶಂಕರನೂ ಹರನೂ ಆದ ನಿನಗೆ ನಮಸ್ಕಾರವು.

೮೩. ಸತ್ವರಜಸ್ತಮೋರೂಪನಾದ ನಿನಗೆ ನಮಸ್ಕಾರವು. ಸೃಷ್ಟಿಸ್ಥಿತಿ ಲಯುಗಳನ್ನು ಮಾಡುವ ನಿನಗೆ ನಮಸ್ಕಾವು. ಎಲ್ಲಾ ಆತ್ಮಗಳಲ್ಲಿ ಸೇರಿಕೊಂಡಿರುವ ಗುಣಶೂನ್ಯನಾದ ನಿನಗೆ ನಮಸ್ಕಾರವು.

೮೪. ಅವ್ಯಕ್ತನಾದ ನಿನಗೆ ನಮಸ್ಕಾರವು. ಸಾಕ್ಷಿಯೂ ವಿಷ್ಣುವೂ ಆದ ನಿನಗೆ ನಮಸ್ಕಾರವು. ನಾರಾಯಣನೂ ಈಶನೂ ಆದ ನಿನಗೆ ನಮಸ್ಕಾರವು. ಷಡ್ಗುಣಗಳಿಂದ ಪೂರ್ತಿಯಾಗಿರುವ ನಿನಗೆ ನಮಃಸ್ಕಾರವು.

ಅನಂತಗುಣಪೂರ್ಣಾಯ ನಮಃ ಸರ್ವಾರ್ಥದಾಯಿನೇ ।
ನಮಸ್ತೇ ವಾಸುದೇವಾಯ ಪಂಚಾವಸ್ಥಸ್ವರೂಪಿಣೇ ॥ ೮೫ ॥

ನಮಃ ಪಂಚನವವ್ಯೂಹಭೇದರೂಪಾಯ ತೇ ನಮಃ ।
ನಮೋ ಯಜ್ಞವರಾಹಾಯ ಗೋವಿಂದಾಯ ನಮೋ ನಮಃ ॥ ೮೬ ॥

ಅವಿಕಾರಾಯ ಶುದ್ಧಾಯ ಹೇಯಪ್ರತಿಭಯಾಯ ಚ ।
ನಾರಾಯಣಾಯ ಕೃಷ್ಣಾಯ ನಮಃ ಸಿಂಹಾಯ ತೇ ನಮಃ ॥ ೮೭ ॥

ಕೇಶವಾಯ ನಮಸ್ತುಭ್ಯಂ ಜಗತಾಂ ಕ್ಲೇಶಹಾರಿಣೇ ।
ತ್ವಮೇವ ಸರ್ವಲೋಕಾನಾಮಾಶ್ರಯಃ ಪುರುಷೋತ್ತಮಃ ॥ ೮೮ ॥

ಪ್ರಸೀದ ದೇವದೇವೇಶ ಸರ್ವಲೋಕಹಿತಾಯ ವೈ ।
ಜೀವಾಸ್ತ್ವಚೇತನಾಸ್ಸರ್ವೇ ಜ್ಞಾನಹೀನಾ ನಿರಾಶ್ರಯಾಃ ॥ ೮೯ ॥

---

೮೫. ಅನಂತವಾದ ಗುಣಗಳುಳ್ಳ ನಿನಗೆ ನಮಸ್ಕಾರವು. ಎಲ್ಲವನ್ನೂ ಕೊಡುವ ನಿನಗೆ ನಮಸ್ಕಾರವು. ವಾಸುದೇವನಾದ ನಿನಗೆ ನಮಸ್ಕಾರವು ಐದು ಅವಸ್ಥೆಗಳನ್ನು ಹೊಂದಿರುವ ನಿನಗೆ ನಮಸ್ಕಾರವು.

೮೬–೮೭. ಹದಿನಾಲ್ಕು ವ್ಯೂಹಗಳ ರೂಪವಾದ ಭೇದವುಳ್ಳ ನಿನಗೆ ನಮಸ್ಕಾರವು. ಯಜ್ಞವರಾಹರೂಪನಾದ ಗೋವಿಂದನಾದ ನಿನಗೆ ನಮಸ್ಕಾರವು. ವಿಕಾರವಿಲ್ಲದೆ ಶುದ್ಧನಾದ ಅಯೋಗ್ಯರಿಗೆ ಭಯಂಕರನಾದ ನಿನಗೆ ನಮಸ್ಕಾರವು. ನಾರಾಯಣನೂ ಕೃಷ್ಣನೂ ನರಸಿಂಹನೂ ಆದ ನಿನಗೆ ನಮಸ್ಕಾರವು.

೮೮. ಜಗತ್ತಿಗೆಲ್ಲಾ ಕ್ಲೇಶಗಳನ್ನು ನಾಶಮಾಡುವ ಕೇಶವನಿಗೆ ನಮಸ್ಕಾರವು. ಎಲೈ ಪುರುಷೋತ್ತಮನೆ! ನೀನೇನೇ ಎಲ್ಲಾ ಲೋಕಗಳಿಗೂ ಆಶ್ರಯನು.

೮೯-೯೦. ಎಲೈ ದೇವನೆ! ಎಲ್ಲಾ ಲೋಕಗಳಿಗೂ ಹಿತವನ್ನುಂಟುಮಾಡಲು ಪ್ರಸನ್ನನಾಗು. ಪ್ರಾಣಿಗಳೆಲ್ಲವೂ ನಿನ್ನಿಂದಲೇ ಜ್ಞಾನವನ್ನು ಹೊಂದುವುವು. ನಿನ್ನನ್ನೇ ಆಶ್ರಯಿಸಿಕೊಂಡಿರುವುವು. ಅವುಗಳಿಗೆ ಜ್ಞಾನವೆಂಬುದೇ ಇಲ್ಲವು.

**ಹೀನದೇಹಾ ನಿರಾಕಾರಾಃ ಸರ್ವೇಂದ್ರಿಯವಿವರ್ಜಿತಾಃ ।**
**ಸರ್ವಾನುಷ್ಠಾನರಹಿತಾಃ ಸತತಂ ದುಃಖಭಾಗಿನಃ ॥ ೯೦ ॥**

**ತೇಷಾಂ ಲೋಕಾಂಶ್ಚ ದೇಹಾಂಶ್ಚ ದಾತುಮರ್ಹಸಿ ಕೇಶವ**
**ಲೀಲಾವಿಭೂತಿಂ ಸರ್ವಜ್ಞ ಯಥಾಪೂರ್ವಂ ಪ್ರಕಲ್ಪಯ ॥ ೯೧ ॥**

**ಚೇತನಾಚೇತನಂ ಕೃತ್ಸ್ನಂ ಜಗತ್ ಸ್ಥಾವರಜಂಗಮಂ ।**
**ಪಶ್ಯ ಸಮ್ಮೋಹಿತಂ ಸರ್ವಂ ಲೀಲಾರ್ಥಂ ಪರಮೇಶ್ವರ ॥ ೯೨ ॥**

**ಪ್ರಕೃತ್ಯಾ ಚ ಮಯಾ ಸಾರ್ಧಂ ಸೃಜಸ್ವ ಪರಮೇಶ್ವರ ।**
**ಧರ್ಮಾಧರ್ಮೌ ಸುಖಂ ದುಃಖಂ ತಸ್ಮಿನ್ನಿಕ್ಷಿಪ್ಯ ಸಂಸೃತೌ ॥**
**ಮಾಮಧಿಷ್ಠಾಯ ಲೀಲಾಂ ವೈ ಕರ್ತುಮರ್ಹಸಿ ಮಾಚಿರಂ ॥ ೯೩ ॥**

---

ಅವುಗಳು ದೇಹವನ್ನು ಸರಿಯಾಗಿ ಹೊಂದಿಲ್ಲ. ಆಕಾರವು ಕೆಟ್ಟು ಹೋಗಿರುವುದು. ಇಂದ್ರಿಯಗಳೂ ಕೂಡ ಇಲ್ಲವೇ ಇಲ್ಲವು. ಅನುಷ್ಠಾನಗಳನ್ನೇ ಮಾಡಲು ಬರುವುದಿಲ್ಲ. ಯಾವಾಗಲೂ ದುಃಖವನ್ನೇ ಹೊಂದಿರುತ್ತವೆ.

೯೧. ಅವುಗಳಿಗೆ ಸರಿಯಾದ ಲೋಕಗಳನ್ನೂ ದೇಹವನ್ನೂ ನೀನು ಕೊಡಬೇಕು. ಎಲೈ ಸರ್ವಜ್ಞನೇ ! ಲೀಲೆಯೇ ನಿನ್ನ ಸುಖವಾಗಿ ಉಳ್ಳವನೇ ! ಮೊದಲಿನಂತೆಯೇ ಅವೆಲ್ಲವನ್ನೂ ಮಾಡು.

೯೨. ಎಲೈ ಪರಮೇಶ್ವರನೇ ! ನಿನ್ನ ಲೀಲೆಯಿಂದ ಈ ಸ್ಥಾವರ ಜಂಗಮವಾದ ಪ್ರಪಂಚವೆಲ್ಲವೂ ಮೋಹಗೊಂಡಿದೆ. ಅದನ್ನು ಗಮನಿಸು.

೯೩. ಪ್ರಕೃತಿ ಭೂತಳಾದ ಮಾಯೆಯಾದ ನನ್ನೊಡನೆ ಈ ಪ್ರಪಂಚವನ್ನು ಸೃಷ್ಟಿಸು. ಧರ್ಮ, ಅಧರ್ಮ, ಸುಖ, ದುಃಖಗಳನ್ನು ಈ ಸಂಸಾರದಲ್ಲಿಟ್ಟು ನನ್ನನ್ನು ಅದರ ಜೊತೆಗೆ ಸೇರಿಸಿ ನಿನ್ನ ಲೀಲೆಯನ್ನು ತೋರಿಸು.

|| ಶ್ರೀ ಮಹಾದೇವ ಉವಾಚ ||

ಏವಮುಕ್ತಸ್ತಯಾ ದೇವ್ಯಾ ಮಾಯಯಾ ಪರಮೇಶ್ವರಃ
ತಸ್ಯಾಂ ನಿರ್ದಿಶ್ಯಮಾನಾಯಾಂ ಜಗತ್ ಸ್ರಷ್ಟುಂ ಪ್ರಚಕ್ರಮೇ || ೯೪ ||

ಯೋಽಸೌ ಪ್ರಕೃತಿಪುರುಷಃ ಪ್ರೋಚ್ಯತೇ ಸ ಇಹಾಚ್ಯುತಃ ।
ಸ ಏವ ಭಗವಾನ್ ವಿಷ್ಣುಃ ಪ್ರಕೃತ್ಯಾಂ ಪ್ರವಿವೇಶ ಹ || ೯೫ ||

ಅಸೃಜತ್ ಪ್ರಣಕೃತೌ ಬ್ರಹ್ಮ ಭೂತಾದಿ ಮಹದಾಹ್ವಯಂ ।
ಮಹತಃ ಪುರುಷಾದಸ್ಮಾದಹಂಕಾರೋಽಭ್ಯಜಾಯತ || ೯೬ ||

ತೇಭ್ಯೋ ಗುಣೇಭ್ಯಸ್ತನ್ಮಾತ್ರಮಸೃಜದ್ವಿಶ್ವಭಾವನಃ ।
ತಸ್ಮಾತ್ತೇಭ್ಯೋ ಹ್ಯಜಾಯಂತ ಮಹಾಭೂತಾನಿ ತತ್ಕ್ಷಣಾತ್ || ೯೭ ||

---

೯೪. ಶ್ರೀ ಮಹಾದೇವನು ಹೇಳಿದನು–ಆ ಮಾಯಾ ದೇವಿಯು ಹೀಗೆ ಹೇಳಲು ಅವಳು ಹೇಳಿದ್ದ ರೀತಿಯಲ್ಲಿಯೇ ಈ ಪ್ರಪಂಚವನ್ನು ಸೃಷ್ಟಿಸಲು ಮೊದಲು ಮಾಡಿದನು.

೯೫. ಯಾವನನ್ನು ಪ್ರಕೃತಿ ಪುರುಷನೆಂದು ನಾವು ಹೇಳುತ್ತೇವೆಯೋ ಅವನನ್ನೇ ಅಚ್ಯುತನೆಂದು ಹೇಳುತ್ತಾರೆ. ಆ ಭಗವಂತನಾದ ವಿಷ್ಣುವೇ ಆ ಪ್ರಕೃತಿಯಲ್ಲಿ ಸೇರಿಕೊಂಡನು.

೯೬. ಬ್ರಹ್ಮನಾದ ಈ ಸ್ವಾಮಿಯು ಪ್ರಕೃತಿಯಲ್ಲಿ ಭೂತಗಳಿಗೆ ಆಶ್ರಯವಾದ ಮಹತ್ತನ್ನು ಹುಟ್ಟಿಸಿದನು. ಈ ಮಹತ್ತಿನದೆಸೆಯಿಂದ ಅಹಂಕಾರವು ಹುಟ್ಟಿತು.

೯೭. ಆ ಮಹತ್ ಅಹಂಕಾರಗಳಿಂದ ತನ್ಮಾತ್ರಾಗುಣವನ್ನು ಸೃಷ್ಟಿಸಿದನು. ಅವುಗಳಿಂದ ಒಡನೆಯೇ ಮಹಾಭೂತಗಳು ಹುಟ್ಟಿದುವು.

ಆಕಾಶಾದೀನಿ ಭೂತಾನಿ ಸೃಷ್ಟಾನ್ಯೇಕೋತ್ತರಾಣಿ ವೈ ।
ಆಕಾಶಾದಭವದ್ವಾಯುರ್ವಾಯೋರಗ್ನಿರಜಾಯತ ॥ ೯೮ ॥

ಅಗ್ನೇರಾಪಸ್ಸಮುದ್ಭೂತಾ ಅದ್ಭ್ಯಶ್ಚ ಪೃಥಿವೀ ಮತಾ ।
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ತದ್ಗುಣಾಃ ॥ ೯೯ ॥

ಏಕೋತ್ತರಗುಣಾನ್ ದೃಷ್ಟ್ವಾ ತಾನ್ಯಾದಾಯ ಮಹಾಪ್ರಭುಃ ।
ತೇಷಾಂ ವಿಮಿಶ್ರಮಸೃಜಜ್ಜಗದಂಡಂ ಮಹತ್ತರಂ ॥ ೧೦೦ ॥

ಅಸೃಜತ್ಸರ್ವಲೋಕಾನ್ವೈ ಸಂಖ್ಯಯಾ ಯೇ ಚತುರ್ದಶ ।
ಬ್ರಹ್ಮಾದಿತ್ರಿದಶಾಂಸ್ತಸ್ಮಿನ್ನಸೃಜತ್ಪುರುಷೋತ್ತಮಃ ॥ ೧೦೧ ॥

---

೯೮. ಅವೇ ಆಕಾಶ ಮುಂತಾದ ಭೂತಗಳು. ಈ ಆಕಾಶಗಳಿಂದ ಮುಂದು ಮುಂದಕ್ಕೆ ಒಂದರಿಂದ ಒಂದೊಂದು ಹೆಚ್ಚಾಗುವಂತೆ ಅವನ್ನು ಸೃಷ್ಟಿಸಿದನು. ಆಕಾಶದಿಂದ ವಾಯುವೂ ವಾಯುವಿನಿಂದ ಅಗ್ನಿಯೂ ಹುಟ್ಟಿದುವು.

೯೯. ಅಗ್ನಿಯಿಂದ ನೀರೂ ನೀರಿನಿಂದ ಭೂಮಿಯೂ ಉಂಟಾದುವು ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು. ಆ ಆಕಾಶಾದಿ ಭೂತಗಳಿಗೆ ಗುಣಗಳು ಎಂದರೆ ಆಕಾಶಕ್ಕೆ ಶಬ್ದವೂ, ವಾಯುವಿಗೆ ಸ್ಪರ್ಶವೂ, ತೇಜಸ್ಸಿಗೆ ರೂಪವೂ, ಪೃಥಿವಿಗೆ ಗಂಧವೂ, ನೀರಿಗೆ ರಸವೂ, ಗುಣಗಳಾಗಿರುವುವು.

೧೦೦. ಆ ಪ್ರಭುವು ಈ ಭೂತಗಳು ತಮ್ಮಲ್ಲಿ ಒಂದೊಂದು ಗುಣವನ್ನು ಹೆಚ್ಚಾಗಿ ಹೊಂದಿರುವುದನ್ನು ನೋಡಿದನು. ಅನಂತರ ಅವುಗಳನ್ನು ಮಿಶ್ರ ಮಾಡಿ ಮಹಾ ದೊಡ್ಡದಾದ ಜಗದಂಡವನ್ನು ಸೃಷ್ಟಿಸಿದನು.

೧೦೧. ಆಗ ಅವುಗಳಿಂದ ಹದಿನಾಲ್ಕು ಲೋಕಗಳನ್ನು ಸೃಷ್ಟಿಮಾಡಿದನು. ಬ್ರಹ್ಮನೇ ಮೊದಲುಗೊಂಡ ದೇವತೆಗಳನ್ನು ಅವುಗಳಲ್ಲಿ ಅನುಗುಣವಾಗಿಟ್ಟನು.

ದೈವಸ್ತಿರ್ಯಕ್ ತಥಾ ಮರ್ತ್ಯಃ ಸ್ಥಾವರಶ್ಚ ಚತುರ್ವಿಧಃ ।
ತಥಾ ಸೃಷ್ಟೋ ಮಹಾಸರ್ಗಃ ತೇನ ವೈ ಜಲಜೇಕ್ಷಣೇ ॥ ೧೦೨ ॥

ತತ್ರ ಕರ್ಮಾನುರೂಪೇಣ ತ್ರಿದಶಾದಿಷು ಯೋನಿಷು ।
ಸಂಸ್ಥಿತಾಂ ಪ್ರಕೃತೌ ಪೂರ್ವಮಾತ್ಮನಃ ಪ್ರಭವಂತಿ ಹಿ ॥ ೧೦೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಪರಮವ್ಯೋಮಾದಿವರ್ಣನಂ ನಾಮ ಷಟ್‌ಪಂಚಾಶದಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೧೦೨. ದೇವತೆಗಳು, ತಿರ್ಯಕ್ ಜಾತಿಗಳು, ಮನುಷ್ಯರು ಸ್ಥಾವರ ಗಳೆಂಬ ನಾಲ್ಕು ಬಗೆಯನ್ನು ಸೃಷ್ಟಿಸಿದನು. ಈ ರೀತಿಯಾಗಿ ಆ ಸ್ವಾಮಿಯು ಮಹಾಸೃಷ್ಟಿಯನ್ನು ಮಾಡಿದನು.

೧೦೩. ಈ ದೇವತೆಗಳೇ ಮೊದಲಾದವರ ಹೊಟ್ಟೆಯಲ್ಲಿ ಹಿಂದೆ ಪ್ರಕೃತಿ ಯಲ್ಲಿ ನೀನಿರಿಸಿಕೊಂಡಿದ್ದ ಆ ಆತ್ಮಗಳು ಹುಟ್ಟುವುದಕ್ಕೆ ಮೊದಲಾದುವು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡ ಉಮಾಮಹೇಶ್ವರ ಸಂವಾದದಲ್ಲಿ ಪರಮವ್ಯೋಮಾದಿ ವರ್ಣನವೆಂಬ ಇನ್ನೂರ ಐವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತಪಂಚಾಶದಧಿಕದ್ವಿಶತತಮೋಽಧ್ಯಾಯಃ ॥



॥ ಪಾರ್ವತ್ಯುವಾಚ ॥

ವಿಸ್ತರೇಣ ಮಮಾಖ್ಯಾಹಿ ದೇವಸರ್ಗಮನುತ್ತಮಂ ।
ಬ್ರಹ್ಮಾದಿತ್ರಿದಿವಶ್ರೇಷ್ಠಾ ಕಥಂ ಜಾತಾಸ್ಸನಾತನಾಃ ॥
ಈಶ್ವರಸ್ಯಾವತಾರಾಂಶ್ಚ ವಿಸ್ತರೇಣ ವದಸ್ವ ಮೇ ॥ ೧ ॥

॥ ಶ್ರೀ ರುದ್ರ ಉವಾಚ ॥

ಆಕಾಶಾನಿಲತೇಜಾಂಬುಭುವಃ ಸೃಷ್ಟ್ವಾ ಯಥಾಕ್ರಮಂ ।
ತೇಷಾಂ ಮಧ್ಯೇಽಸೃಜದ್ಬ್ರಹ್ಮಾ ಅಗಾಧಜಲಮರ್ಣವಂ ॥ ೨ ॥

---

### ಇನ್ನೂರ ಐವತ್ತೇಳನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು—ಎಲೈ ವಲ್ಲಭನೇ! ಉತ್ತಮವಾದ ದೇವತೆಗಳ ಸೃಷ್ಟಿಯನ್ನು ನನಗೆ ತಿಳಿಸು. ಸನಾತನರಾದ ಬ್ರಹ್ಮನೇ ಮುಂತಾದ ದೇವಶ್ರೇಷ್ಠರು ಹೇಗೆ ಹುಟ್ಟಿದರು? ಅದನ್ನೂ ಈಶ್ವರನಾದ ವಿಷ್ಣುವಿನ ಅವತಾರಗಳನ್ನೂ ವಿಸ್ತಾರವಾಗಿ ಹೇಳು.

೨. ಶ್ರೀರುದ್ರನು ಹೇಳಿದನು—ಆಕಾಶ, ಗಾಳಿ, ತೇಜಸ್ಸು, ನೀರು, ಭೂಮಿ ಇವುಗಳನ್ನು ಕ್ರಮವಾಗಿ ಆ ಸ್ವಾಮಿಯು ಸೃಷ್ಟಿಸಿ ಅವುಗಳ ಮಧ್ಯದಲ್ಲಿ ದೊಡ್ಡದಾದ ಲವಣ ಸಮುದ್ರವನ್ನು ಸೃಷ್ಟಿಸಿದನು.

ಅಸ್ಮಿನ್ನೇಕಾರ್ಣವೀಭೂತೇ ಜಲೇ ಮಯಾವಟಚ್ಛದೇ ।
ಆದಾಯ ಸರ್ವಭೂತಾನಿ ಯೋಗನಿದ್ರಾಂ ಯಯೌ ಹರಿಃ ॥ ೩ ॥

ಜಗತ್ಸಂಸ್ರಷ್ಟುಕಾಮಸ್ತು ಯೋಗನಿದ್ರಾಮುಪೇಯಿವಾನ್ ।
ತಯಾ ರೇಮೇ ಚಿರಂ ಕಾಲಂ ಮಾಯಯಾ ಮಧುಸೂದನಃ ॥ ೪ ॥

ತಸ್ಯಾಂ ತು ಜನಯಾಮಾಸ ಕಾಲಾತ್ಮಾನಮನುತ್ತಮಂ ।
ಕಲಾಕಾಷ್ಠಾಮುಹೂರ್ತಾ ಯೇ ಪಕ್ಷಮಾಸಾದಿರೂಪಿಣಃ ॥ ೫ ॥

ತಸ್ಮಿನ್ ಕಾಲೇ ಹರೇರ್ನಾಭಿಪಂಕಜಂ ಮುಕುಲಾಕೃತಿ ।
ವಿಕಸತ್ಸರ್ವಜಗತೋ ಬೀಜಭೂತಂ ಸುವರ್ಚಸಂ ॥ ೬ ॥

---

೩. ಈ ಪ್ರಪಂಚವೆಲ್ಲವೂ ಕೂಡ ನೀರಿನಿಂದ ಆವರಿಸಲ್ಪಟ್ಟು ಒಂದೇ ಸಮುದ್ರವಾಗಿ ಕಾಣುತ್ತಿರಲು ಮಾಯಾವಟದ ಒಂದು ಎಲೆಯನ್ನು ತೆಗೆದು ಕೊಂಡು ಅದನ್ನು ನೀರಿನಮೇಲೆ ಹಾಕಿಕೊಂಡು ಅದರಲ್ಲಿ ಮಲಗಿರುತ್ತ ಎಲ್ಲಾ ಪ್ರಾಣಿಗಳನ್ನೂ ತೆಗೆದು ತನ್ನ ಹೊಟ್ಟೆಯಲ್ಲಿಟ್ಟುಕೊಂಡು ಆ ಹರಿಯು ಯೋಗ ನಿದ್ದೆಯನ್ನು ಹೊಂದಿದನು.

೪. ಅನಂತರ ಜಗತ್ತನ್ನು ಸೃಷ್ಟಿಸಬೇಕೆಂದು ಇಚ್ಛೈಬರಲು ಹಾಗೆಯೇ ಆ ಸ್ವಾಮಿಯು ಯೋಗನಿದ್ದೆಯನ್ನು ಮಾಡುತ್ತ ಆ ಮಾಯೆಯೊಡನೆ ಬಹುಕಾಲ ರಮಿಸಿದನು.

೫. ಈರೀತಿಯಾಗಿ ರಮಿಸುತ್ತ ಆ ಮಾಯೆಯಲ್ಲಿ ಕಲೆ, ಕಾಷ್ಠ, ಮುಹೂರ್ತ, ಪಕ್ಷ, ಮಾಸ, ಸಂವತ್ಸರ ರೂಪವಾದ ಕಾಲವನ್ನು ಸೃಷ್ಟಿಸಿದನು.

೬. ಆ ಸಮಯದಲ್ಲಿಯೇ ಪ್ರಪಂಚಕ್ಕೆ ಬೀಜಭೂತವಾದ ಪ್ರಕಾಶ ಮಾನವಾಗಿರುವ ಹರಿಯ ನಾಭಿಕಮಲವು ಮಗ್ಗಾಗಿದ್ದುದು ಅರಳಿತು.

ಉತ್ತಸ್ಥಾವುದಭೂತ್ತತ್ರ ಬ್ರಹ್ಮಾ ಚ ಸುಮಹಾಮತಿಃ ।
ಸ ಜಗತ್ ಸ್ರಷ್ಟುಕಾಮಸ್ತು ರಜೋಗುಣವಿಚೋದಿತಃ ॥
ತುಷ್ಟಾವ ಯೋಗನಿದ್ರಾಯಾಂ ಶಯಾನಂ ಪರಮೇಶ್ವರಂ ॥ ೭ ॥

॥ ಬ್ರಹ್ಮೋವಾಚ ॥

ನಮೋಽಸ್ತು ವಿಷ್ಣವೇ ತುಭ್ಯಂ ಸರ್ಗಸ್ಥಿತ್ಯಂತಹೇತವೇ ।
ಜಗದ್ಭೂಷಣಭೂಷಾಯ ಶ್ರೀಮತೇ ವಿಶ್ವರೂಪಿಣೇ ॥ ೮ ॥

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋನಮಃ ॥ ೯ ॥

ಪ್ರಧಾನಕಾಲರೂಪಾಯ ಪುರುಷಾಯೇಶ್ವರಾಯ ಚ ।
ನಮಃ ಪ್ರಪಂಚರೂಪಾಯ ನಿಷ್ಪ್ರಪಂಚಸ್ವರೂಪಿಣೇ ॥ ೧೦ ॥

---

೭. ಆ ನಾಭಿಕಮಲವು ಅರಳಿ ಮೇಲಕ್ಕೆ ಎದ್ದಿರಲು ಅದರಲ್ಲಿ ಬಹು ಬುದ್ಧಿವಂತನಾದ ಬ್ರಹ್ಮನು ಹುಟ್ಟಿದನು. ಆತನು ರಜೋಗುಣದಿಂದ ಕೂಡಿದವನಾಗಿ ಪ್ರಪಂಚವನ್ನು ಸೃಷ್ಟಿಮಾಡಬೇಕೆಂಬುದನ್ನು ಇಚ್ಛಿಸಿ ಆ ಯೋಗನಿದ್ದೆಯಲ್ಲಿದ್ದ ಸ್ವಾಮಿಯನ್ನು ಸ್ತುತಿಸಿದನು.

೮–೯. ಬ್ರಹ್ಮನು ಹೇಳಿದನು– ಸೃಷ್ಟಿಸ್ಥಿತಿಸಂಹಾರಗಳನ್ನು ಮಾಡಲು ಕಾರಣವಾದ ವಿಷ್ಣುವಾದ ನಿನಗೆ ನಮಸ್ಕಾರವು. ಜಗತ್ತಿಗೆಲ್ಲಾ ಒಡವೆಯಾಗಿರುವುದಕ್ಕೆ ಒಡವೆಯಾಗಿರುವ, ಶ್ರೀಮಂತನಾದ, ವಿಶ್ವರೂಪಿಯಾದ, ನಿನಗೆ ನಮಸ್ಕಾರವು. ಬ್ರಾಹ್ಮಣರೇ ದೇವರಾಗಿರುವ ನಿನಗೆ ನಮಸ್ಕಾರವು. ಗೋವಿಗೂ ಬ್ರಾಹ್ಮಣರಿಗೂ ಹಿತವನ್ನುಂಟುಮಾಡುವ ನಿನಗೆ ನಮಸ್ಕಾರವು. ಜಗತ್ತಿಗೆ ಹಿತವನ್ನುಂಟುಮಾಡುವ ಗೋವಿಂದನಾದ ನಿನಗೆ ನಮಸ್ಕಾರವು.

೧೦–೧೨. ಪ್ರಧಾನಕಾಲರೂಪನಾದ ನಿನಗೆ ನಮಸ್ಕಾರವು. ಪುರುಷನೂ ಈಶ್ವರನೂ ಆದ ನಿನಗೆ ನಮಸ್ಕಾರವು. ಪ್ರಪಂಚ ರೂಪನಾದ ನಿನಗೆ ನಮಸ್ಕಾರವು. ಪ್ರಪಂಚಕ್ಕಿಂತ ಬೇರೆಯಾದ ನಿನಗೆ ನಮಸ್ಕಾರವು.

ನಾರಾಯಣಾಯ ವಿಶ್ವಾಯ ವಿಶ್ವೇಶಾಯ ನಮೋ ನಮಃ ।
ಶ್ರೀಭೂಲೀಲಾಧಿಪತಯೇ ಬ್ರಹ್ಮಣೇ ಪರಮಾತ್ಮನೇ ॥ ೧೧ ॥

ನಮೋಽಸ್ತು ವಾಸುದೇವಾಯ ವಿಶ್ವರೂಪಾಯ ಶಾಂರ್ಗಿಣೇ ।
ತ್ರಯೀನಾಥಾಯ ಹರಯೇ ವಿಶ್ವನಾಥಸ್ವರೂಪಿಣೇ । ॥ ೧೨ ॥

ಅನಂತಕಲ್ಯಾಣಗುಣಪರಿಪೂರ್ಣಾಯ ತೇ ನಮಃ ।
ಜಗಚ್ಚ ಸರ್ವೇ ಸ್ವಪಿತಿ ತ್ವಯಿ ಸುಪ್ತೇ ಜಗನ್ಮಯೇ ॥ ೧೩ ॥

ವೃತಂ ಸರ್ವಂ ಜಗನ್ನಾಥ ಪ್ರಪಂಚಂ ಸಚರಾಚರಂ ।
ತ್ವಮೇವ ಕಾರಣಂ ಕರ್ತಾ ಕಾರ್ಯಂ ಚ ತ್ರಿಗುಣೋದ್ಭವಂ ॥ ೧೪ ॥

---

ನಾರಾಯಣನೂ ವಿಶ್ವರೂಪನೂ ಆದ ನಿನಗೆ ನಮಸ್ಕಾರವು. ಪ್ರಪಂಚಕ್ಕೆ ಒಡೆಯನಾದ ನಿನಗೆ ನಮಸ್ಕಾರವು. ಶ್ರೀದೇವಿ ಭೂದೇವಿ ಲೀಲಾದೇವಿಯರಿಗೆ ಒಡೆಯನಾದ ನಿನಗೆ ನಮಸ್ಕಾರವು. ಬ್ರಹ್ಮನೂ ಪರಮಾತ್ಮನೂ ಆದ ನಿನಗೆ ನಮಸ್ಕಾರವು. ವಾಸುದೇವನಾದ ನಿನಗೆ ನಮಸ್ಕಾರವು. ವಿಶ್ವರೂಪನಾದ ಶಾಂರ್ಗಿಯೂ ಆದ ನಿನಗೆ ನಮಸ್ಕಾರವು. ವೇದಗಳಿಗೆ ಒಡೆಯನಾದ ನಿನಗೆ ನಮಸ್ಕಾರವು. ಹರಿಯೂ ವಿಶ್ವಕ್ಕೆಲ್ಲಾ ಒಡೆಯನೂ ಆದ ನಿನಗೆ ನಮಸ್ಕಾರವು.

೧೩-೧೪. ಅನಂತವಾಗಿರುವ ಕಲ್ಯಾಣಗುಣಗಳಿಂದ ಪೂರ್ಣನಾಗಿರುವ ನಿನಗೆ ನಮಸ್ಕಾರವು. ಜಗನ್ನಾಯಕನಾದ ನೀನು ಮಲಗಿರಲು ಪ್ರಪಂಚವೆಲ್ಲವೂ ಮಲಗಿರುತ್ತದೆ. ಚರಾಚರಾತ್ಮವಾದ ಈ ಪ್ರಪಂಚವೆಲ್ಲವೂ ನಿನ್ನಿಂದ ಆವರಿಸಲ್ಪಟ್ಟಿದೆ. ನೀನೇನೇ ಕಾರಣ ಸ್ವರೂಪನು. ಕರ್ತೃವೂ ಆಗಿದ್ದೀಯೆ. ಸತ್ವರಜಸ್ತಮೋಗುಣಗಳ ಕಾರ್ಯರೂಪನೂ ಆಗಿದ್ದೀಯೆ.

ಸ್ರಷ್ಟಾ ಧಾತಾ ವಿಧಾತಾ ಚ ತ್ವಮೇವ ಪರಮೇಶ್ವರಃ ।
ಜಾಗರ್ಷಿ ಶುದ್ಧಸತ್ತ್ವಸ್ಥಸ್ತವ ನಿದ್ರಾ ಕುತಃ ಪ್ರಭೋ ॥
ದೇವ ತ್ವಯಿ ಸ್ಥಿತಾ ಲೋಕಾಃ ಸರ್ವಾದಿಷ್ಟಾಸ್ಸನಾತನಾಃ ॥ ೧೫ ॥

॥ ಶಿವ ಉವಾಚ ॥

ಏವಮುಕ್ತೋ ಹೃಷೀಕೇಶೋ ಬ್ರಹ್ಮಣಾ ಪರಮೇಶ್ವರಃ ।
ಉತ್ತಸ್ಥೌ ಶಯನಾತ್ತಸ್ಮಾದ್ವಿಮುಕ್ತೋ ಯೋಗನಿದ್ರಯಾ ॥ ೧೬ ॥

ನಿಯಮ್ಯ ಯೋಗನಿದ್ರಾಂ ತಾಂ ಜಗತ್ ಸ್ರಷ್ಟುಂ ಪ್ರಚಕ್ರಮೇ ।
ಅಚಿಂತಯತ್ ಕ್ಷಣಾದ್ದೇವೋ ಜಗತಾಂ ಪ್ರಭುರಚ್ಯುತಃ ॥ ೧೭ ॥

ಚಿಂತಯಿತ್ವಾ ಜಗತ್ಸರ್ವಮಸೃಜತ್ಸ ಪುಮಾಂಸ್ತತಃ ।
ಲೋಕೈಶ್ಚ ಸರ್ವೈಶ್ಚ ತದಾ ಯುಕ್ತಮಂಡಂ ಹಿರಣ್ಮಯಂ ॥ ೧೮ ॥

---

೧೫. ಸೃಷ್ಟಿಕರ್ತನೂ, ಪೋಷಿಸುವವನೂ ಅದರಲ್ಲಿ ಸತ್ವವನ್ನು ಇಡುವವನೂ ನೀನೇ ಆಗಿದ್ದೀಯೆ. ನೀನೇನೆ ಎಲ್ಲಕ್ಕೂ ಒಡೆಯನು. ಶುದ್ಧ ಸತ್ವ ಗುಣವನ್ನು ಹೊಂದಿ ಎಚ್ಚರದಿಂದಲೇ ಇದ್ದೀಯೆ. ಎಲೈ ಪ್ರಭುವೆ ! ನಿನಗೆ ನಿದ್ದೆಯೆಲ್ಲಿಂದ ಬಂದೀತು ? ಸನಾತನವಾದ ಲೋಕಗಳೆಲ್ಲವೂ ನಿನ್ನಲ್ಲಿಯೇ ಇವೆ.

೧೬. ಶಿವನು ಹೇಳಿದನು–ಬ್ರಹ್ಮನು ಈ ರೀತಿಯಾಗಿ ಹೊಗಳಲು ಆ ಸ್ವಾಮಿಯಾದ ಹರಿಯು ಯೋಗ ನಿದ್ರೆಯನ್ನು ಬಿಟ್ಟು ಹಾಸಿಗೆಯಿಂದ ಮೇಲಕ್ಕೆದ್ದನು.

೧೭. ಆ ಯೋಗ ನಿದ್ದೆಯನ್ನು ತಡೆದು ಜಗತ್ತನ್ನು ಸೃಷ್ಟಿಸುವುದಕ್ಕೆ ಮೊದಲು ಮಾಡಿದನು. ಆಗ ಆ ಜಗತ್ಪ್ರಭುವಾದ ಅಚ್ಯುತನು ಒಂದು ಕ್ಷಣಕಾಲದಲ್ಲಿಯೇ ಇಂತೆಂದು ಯೋಚಿಸಿದನು.

೧೮. ಆಗ ಆ ಪರಮಪುರುಷನು ಎಲ್ಲಾ ಜಗತ್ತನ್ನು ಸೃಷ್ಟಿಸಿದನು. ಆಗ ಹಿರಣ್ಮಯವಾದ ಅಂಡವನ್ನೂ ಅದರೊಳಗೆ ಲೋಕಗಳನ್ನೂ ಸೃಷ್ಟಿಸಿದನು.

ಸಪ್ತದ್ವೀಪಾಂ ಸಮುದ್ರಾಂತಾಂ ಮೇದಿನೀಂ ಭೂಧರೈರ್ಯುತಾಂ ।
ಸಹೈಕಾಂಡಕಟಾಹೇನ ನಾಭಿಪದ್ಮೇಽಸೃಜತ್ಪ್ರಭುಃ ॥ ೧೯ ॥

ತದಂಡಮಧ್ಯೇ ಚಾಸ್ಥಾನಮೀಶ್ವರಃ ಕೃತವಾನ್ ಹರಿಃ ।
ಅಥ ನಾರಾಯಣಃ ಕಾಮಮಾಧ್ಯಾಯತಾತ್ಮಚೇತಸಾ ॥ ೨೦ ॥

ಧ್ಯಾನಾಂತೇ ತಸ್ಯ ಭಾಲೇ ತು ಸ್ವೇದಬಿಂದುರಜಾಯತ ।
ಸ ಸ್ವೇದೋ ಬುದ್ಬುದಾಕಾರಃ ಪೃಥಿವ್ಯಾಮಪತತ್ ಕ್ಷಣಾತ್ ॥ ೨೧ ॥

ತಸ್ಮಾತ್ತು ಬುದ್ಬುದಾತ್ಸೋಽಹಮುತ್ಪನ್ನೋಽಸ್ಮಿ ವರಾನನೇ ।
ಅಕ್ಷತ್ರಿಶೂಲಹಸ್ತೋಽಹಂ ಜಟಾಮುಕುಟಮಂಡಿತಃ ॥ ೨೨ ॥

ಕಿಂ ಕರೋಮೀತಿ ದೇವೇಶಮವೋಚಂ ವಿನಯಾನ್ವಿತಃ ।
ತತೋ ನಾರಾಯಣೋ ದೇವೋ ಮಾಮಿತ್ಯಾಹ ಮುದಾನ್ವಿತಃ ॥ ೨೩ ॥

---

೧೯. ಏಳು ದ್ವೀಪದಿಂದ ಕೂಡಿಕೊಂಡಿರುವ ಸಮುದ್ರವೇ ಎಲ್ಲೆಯಾಗಿರುವ ಅನೇಕ ಬೆಟ್ಟಗಳಿಂದ ಕೂಡಿಕೊಂಡಿರುವ ಭೂಮಿಯನ್ನು ಹಂಡೆಯಂತಿರುವ ಒಂದಂಡದಲ್ಲಿ ಸೃಷ್ಟಿಸಿ ಆ ಅಂಡವನ್ನು ನಾಭಿಪದ್ಮದಲ್ಲಿ ಸೃಷ್ಟಿಸಿದನು.

೨೦. ಆ ಹರಿಯಾದ ವಿಷ್ಣುವೇ! ಆ ಅಂಡದ ಮಧ್ಯದಲ್ಲಿ ಆ ಸ್ಥಾನವನ್ನು ಮಾಡಿಕೊಂಡನು. ಅನಂತರ ಆ ನಾರಾಯಣನಾದ ವಿಷ್ಣುವೇ ತನ್ನ ಮನಸ್ಸಿನಲ್ಲಿ ಇಂತೆಂದು ಯೋಚಿಸಿದನು.

೨೧. ಆ ಸ್ವಾಮಿಯು ಧ್ಯಾನ ಮಾಡಿದ ಮೇಲೆ ಅವನ ಹಣೆಯಲ್ಲಿ ಬೆವರು ಗುಳ್ಳೆಗುಳ್ಳೆಯಾಗಿ ಹುಟ್ಟಿತು. ಆ ಗುಳ್ಳೆಯಾಗಿರುವ ಬೆವರು ಅಂತೆಯೇ ನೆಲದ ಮೇಲೆ ಬಿದ್ದಿತು.

೨೨. ಎಲೈ ವರಾನನೆಯೆ! ಆ ಗುಳ್ಳೆಯಿಂದ ಅಕ್ಷಮಾಲೆಯನ್ನು ತ್ರಿಶೂಲವನ್ನೂ ಹಿಡಿದುಕೊಂಡು ಜಡೆ ಕಿರೀಟಗಳನ್ನು ಹಾಕಿಕೊಂಡು ನಾನು ಹುಟ್ಟಿದೆನು.

೨೩. ಆಗ ನಾನು ವಿನಯದಿಂದ ಎಲೈ ದೇವೇಶನೇ! ನಾನು ಏನು ಮಾಡಬೇಕೆಂದು ಕೇಳಲು ಆಗ ದೇವನಾದ ನಾರಾಯಣನು ನನ್ನನ್ನು ಕುರಿತು ಸಂತೋಷದಿಂದ ಇಂತೆಂದನು.

ಕರ್ತಾಸಿ ಜಗತೋ ರುದ್ರ ಸಂಹಾರಂ ಭೀಮದರ್ಶನಂ ।
ಸಾಕ್ಷಾತ್ಸಂಕರ್ಷಣಾಂಶೇನ ಸಂಹಾರಾರ್ಥಂ ವರಾನನೇ ॥ ೨೪ ॥

ತಸ್ಮಾನ್ನಾರಾಯಣಾದ್ದೇವಿ ಉತ್ಪನ್ನೋಽಸ್ಮಿ ಭಯಂಕರಃ ।
ನಿಯೋಜ್ಯ ಮಾಂ ತು ಸಂಹಾರೇ ಪುನರೇವ ಜನಾರ್ದನಃ ॥ ೨೫ ॥

ನೇತ್ರಾಭ್ಯಾಮಸೃಜಚ್ಚಂದ್ರಸೂರ್ಯೌ ಧ್ವಾಂತಾಪಹಾರಿಣೌ ।
ವಾಯುಂ ದಿಶಶ್ಚ ಶ್ರೋತ್ರಾಭ್ಯಾಮಿಂದ್ರಾಗ್ನೀ ಚ
ಮುಖಾಂಬುಜಾತ್ ॥ ೨೬ ॥

ನಾಸಾಭ್ಯಾಂ ವರುಣಂ ಮಿತ್ರಮಸೃಜತ್ಪಂಕಜೇಕ್ಷಣಃ ।
ಬಾಹುಭ್ಯಾಮಖಿಲಾನ್ ದೇವಾನ್ ಸಸಾಧ್ಯಾನ್ ಸಮರುದ್ಗಣಾನ್ ॥ ೨೭ ॥

ಸಮಸ್ತರೋಮಕೂಪೇಭ್ಯೋ ವನಾನ್ಯೋಷಧಯಸ್ತಥಾ ।
ತ್ವಚಿ ಶೈಲಾಸ್ಸಮುದ್ರಾಶ್ಚ ಗವಾದ್ಯಾಃ ಪಶವಸ್ತಥಾ ॥ ೨೮ ॥

---

೨೪. ಎಲೈ ರುದ್ರನೆ ! ನೀನು ಭಯಂಕರನಾಗಿ ಜಗತ್ತಿನ ಸಂಹಾರವನ್ನು ಮಾಡು. ಆ ಸಂಹಾರಕ್ಕೋಸ್ಕರವಾಗಿಯೇ ಸಂಕರ್ಷಣಾಂಶದಿಂದ ಉತ್ಪನ್ನನಾಗಿದ್ದೀಯೆ.

೨೫-೨೬. ಎಲೈ ದೇವಿಯೆ ! ಈ ರೀತಿಯಾಗಿ ಭಯಂಕರನಾಗಿ ಆ ನಾರಾಯಣನಿಂದ ನಾನು ಉತ್ಪನ್ನನಾದೆನು. ಆ ಸ್ವಾಮಿಯು ನನ್ನನ್ನು ಪ್ರಪಂಚದ ಸಂಹಾರಕಾರ್ಯದಲ್ಲಿ ನಿಯಮಿಸಿದನು. ಅನಂತರ ಆ ಸ್ವಾಮಿಯು ಕಣ್ಣುಗಳಿಂದ ಸೂರ್ಯಚಂದ್ರರನ್ನು ಸೃಷ್ಟಿಮಾಡಿ ಅವರನ್ನು ಕತ್ತಲೆಯನ್ನು ನಾಶಮಾಡುವಂತೆ ಅಪ್ಪಣೆಮಾಡಿದನು. ಕಿವಿಯಿಂದ ವಾಯುವನ್ನೂ ದಿಕ್ಕುಗಳನ್ನೂ ಸೃಷ್ಟಿಮಾಡಿ ಮುಖದಿಂದ ಇಂದ್ರ ಅಗ್ನಿಗಳನ್ನು ಸೃಷ್ಟಿಸಿದನು.

೨೭-೨೮. ಮೂಗಿನಿಂದ ವರುಣನನ್ನೂ ಮಿತ್ರನನ್ನೂ ಸೃಷ್ಟಿಸಿದನು. ತೋಳುಗಳಿಂದ ಎಲ್ಲಾ ದೇವತೆಗಳನ್ನೂ ಸಾಧ್ಯರನ್ನೂ ಮರುತ್ತುಗಳನ್ನೂ ಸೃಷ್ಟಿಸಿದನು. ರೋಮಕೂಪಗಳಿಂದ ವನಗಳನ್ನೂ ಔಷಧಿಗಳನ್ನೂ ಸೃಷ್ಟಿಸಿದನು. ಚರ್ಮದಿಂದ ಸಮುದ್ರಗಳನ್ನೂ ಬೆಟ್ಟಗಳನ್ನೂ ಗೋವುಗಳನ್ನೂ ಪಶುಗಳನ್ನೂ

ಮುಖತೋ ಬ್ರಾಹ್ಮಣಃ ಸೃಷ್ಟೋ ಬಾಹುಭ್ಯಾಂ ಕ್ಷತ್ರಿಯಸ್ತಥಾ ।
ಊರ್ವೋರ್ವೈಶ್ಯಸ್ತತಃ ಪದ್ಭ್ಯಾಂ ಶೂದ್ರಶ್ಚೈವಮಜಾಯತ ॥ ೨೯ ॥

ಏವಂ ಸೃಷ್ಟ್ವಾ ಜಗತ್ಸರ್ವಮಚೇತನಮವಸ್ಥಿತಂ ।
ವಿಶ್ವರೂಪೇಣ ದೇವೇಶೋ ಯಸ್ಯಾಂತರಮಧಿಷ್ಠಿತಃ ॥ ೩೦ ॥

ಶಕ್ತ್ಯಾ ವಿನಾ ಹರೇಸ್ತಸ್ಯ ನೋನ್ಮೇಷೋ ವಿದ್ಯತೇ ಯತಃ ।
ತಸ್ಮಾತ್ಸರ್ವಜಗತ್ಪ್ರಾಣೋ ವಿಷ್ಣುರೇವ ಸನಾತನಃ ॥ ೩೧ ॥

ಸ ಏವಾವ್ಯಕ್ತರೂಪಸ್ಸ ಪರಮಾತ್ಮಾ ವ್ಯವಸ್ಥಿತಃ ।
ಸರ್ಗಸ್ಥಿತಿಲಯೇ ಬ್ರಹ್ಮಾ ಸ್ವಯಮೇವ ಪ್ರವರ್ತತೇ ॥ ೩೨ ॥

ಷಾಡ್ಗುಣ್ಯಪರಿಪೂರ್ಣೋಽಸೌ ವಾಸುದೇವಃ ಸನಾತನಃ ।
ತ್ರೈಗುಣ್ಯಾದಾತ್ಮನೋ ರೂಪಂ ಚತುರ್ಧಾ ಕುರುತೇ ಜಗತ್ ॥ ೩೩ ॥

---

ಸೃಷ್ಟಿಮಾಡಿದನು. ಮುಖದಿಂದ ಬ್ರಾಹ್ಮಣರನ್ನೂ ಬಾಹುಗಳಿಂದ ಕ್ಷತ್ರಿಯರನ್ನೂ ತೊಡೆಗಳಿಂದ ವೈಶ್ಯರನ್ನೂ ಪಾದಗಳಿಂದ ಶೂದ್ರರನ್ನೂ ಸೃಷ್ಟಿಮಾಡಿದನು.

೩೦-೩೧. ಈ ರೀತಿಯಾಗಿ ಜಗತ್ತೆಲ್ಲವನ್ನೂ ಸೃಷ್ಟಿಮಾಡಿದನು. ಆಗ ಅವೆಲ್ಲವೂ ಚೇತನವಿಲ್ಲದೇ ಇದ್ದಿತು. ಆ ದೇವೇಶನು ವಿಶ್ವರೂಪದಿಂದ ಯಾವುದರೊಳಗೆಲ್ಲಾ ಇರುವನೋ ಯಾವ ಹರಿಯ ಶಕ್ತಿಯಿಲ್ಲದಿದ್ದರೆ ಪ್ರಪಂಚವೇ ಕಣ್ಣನ್ನು ಬಿಡುವುದಿಲ್ಲವೋ ಅಂತಹ ವಿಷ್ಣುವು ಎಲ್ಲದರಲ್ಲಿಯೂ ಸೇರಿಕೊಂಡು ಜಗತ್ತಿಗೆ ಪ್ರಾಣರೂಪನಾಗಿರುವನು.

೩೨. ಆ ಸ್ವಾಮಿಯೇ ಅವ್ಯಕ್ತರೂಪನು. ಪರಮಾತ್ಮರೂಪನಾಗಿ ಪ್ರಾಣಿಗಳಲ್ಲಿ ಇದ್ದುಕೊಂಡಿರುವನು. ಅವನು ತಾನು ಸ್ವಂತವಾಗಿಯೇ ಸೃಷ್ಟಿಸ್ಥಿತಿ ನಾಶಗಳಲ್ಲಿ ಪ್ರವರ್ತಿಸುವನು.

೩೩. ಈ ಸ್ವಾಮಿಯು ಆರು ಗುಣಗಳಿಂದಲೂ ಪೂರ್ಣನಾಗಿರುವನು. ವಸುದೇವನ ಮಗನಾಗಿ ಹುಟ್ಟಿದನು. ಸನಾತನನು. ಸತ್ವರಜಸ್ತಮೋಗುಣ ಗಳಿಂದ ಕೂಡಿದುದನ್ನಾಗಿಯೂ ಬಾಲ್ಯಯೌವನ ಕೌಮಾರವಾರ್ಧಕ್ಯಗಳ ರೂಪವಾಗಿ ನಾಲ್ಕು ಅವಸ್ಥೆಗಳುಳ್ಳದ್ದನ್ನಾಗಿಯೂ ಜಗತ್ತನ್ನು ಸೃಷ್ಟಿಸುತ್ತಾನೆ.

ಪ್ರದ್ಯುಮ್ನಮೂರ್ತಿರ್ಭಗವಾನ್ ಸರ್ವೈಶ್ವರ್ಯಸಮನ್ವಿತಃ ।
ವಿಧೇಃ ಪ್ರಜಾಪತೀನಾಂ ಚ ಕಾಲಸ್ಯ ಚ ಜನಸ್ಯ ಚ ॥ ೩೪ ॥

ಅಂತರ್ಯಾಮಿತ್ವಮಾಪನ್ನಃ ಸರ್ಗಂ ಸಮ್ಯಕ್ಕರೋತಿ ಹಿ ।
ಸೇತಿಹಾಸಾಂಸ್ತತೋ ವೇದಾನ್ ದದೌ ತಸ್ಮೈ ಮಹಾತ್ಮನೇ ॥ ೩೫ ॥

ಪ್ರದ್ಯುಮ್ನಸ್ಯಾಂಶಭಾಗೋಽಸೌ ಬ್ರಹ್ಮಾ ಲೋಕಪಿತಾಮಹಃ ।
ಜಗತ್ಸರ್ಗಸ್ಥಿತಿಂ ಸರ್ವಾಮಕರೋತ್ಪದ್ಮಸಂಭವಃ ॥ ೩೬ ॥

ಅನಿರುದ್ಧಶ್ಚ ಭಗವಾನ್ ಶಕ್ತಿತೇಜಸ್ಸಮನ್ವಿತಃ ।
ಮನೂನಾಂ ಪಾರ್ಥಿವಾನಾಂ ಚ ಕಾಲಸ್ಯ ಚ ಜನಸ್ಯ ಚ ॥ ೩೭ ॥

ಸ್ಥಿತಿಂ ಕರೋತಿ ಭಗವಾನನ್ತರ್ಯಾಮಿತ್ವಮಾಸ್ಥಿತಃ ।
ಸಂಕರ್ಷಣೋ ಮಹಾವಿಷ್ಣುಃ ವಿದ್ಯಾಬಲಸಮನ್ವಿತಃ ॥ ೩೮ ॥

ಕಾಲಸ್ಯ ಸರ್ವಭೂತಾನಾಂ ರುದ್ರಸ್ಯ ಚ ಯಮಸ್ಯ ಚ ।
ಅಂತರ್ಯಾಮಿತ್ವಮಾಸ್ಥಾಯ ಜಗತ್ಸಂಹರತೇ ವಿಭುಃ ॥ ೩೯ ॥

---

೩೪-೩೫. ಅವನೇ ಪ್ರದ್ಯುಮ್ನಮೂರ್ತಿಯು. ಭಗವಂತನು. ಎಲ್ಲಾ ಐಶ್ವರ್ಯಗಳಿಂದಲೂ ಕೂಡಿರುವನು. ಬ್ರಹ್ಮನಿಗೂ ದಕ್ಷಾದಿ ಪ್ರಜಾಪತಿಗಳಿಗೂ ಕಾಲಕ್ಕೂ ಜನಗಳಿಗೂ ಆತ್ಮಭೂತನಾಗಿ ಒಳಗೆ ಸೇರಿಕೊಂಡು ಸೃಷ್ಟಿಯನ್ನು ಉತ್ಕೃಷ್ಟರೀತಿಯಿಂದ ಮಾಡುವನು. ಅವರಿಗೆಲ್ಲಾ ಇತಿಹಾಸದೊಡನೆ ಕೂಡಿರುವ ವೇದಗಳನ್ನೆಲ್ಲಾ ಕೊಟ್ಟನು.

೩೬-೩೯. ಆ ಸ್ವಾಮಿಯು ಪ್ರದ್ಯುಮ್ನಾಂಶವನ್ನು ಲೋಕ ಪಿತಾಮಹನಾದ ಬ್ರಹ್ಮನಲ್ಲಿಟ್ಟಿರುವನು. ಆ ಬ್ರಹ್ಮನು ಕಮಲದಲ್ಲಿ ಹುಟ್ಟಿ ಪ್ರಪಂಚವನ್ನು ಸೃಷ್ಟಿಸುವನು ಅನಿರುದ್ಧನ ಅಂಶವಾದ ಶಕ್ತಿ ತೇಜಸ್ಸುಗಳನ್ನು ಮನ್ವಾದಿ ರಾಜರುಗಳಲ್ಲಿಟ್ಟು ಕಾಲ ಮತ್ತು ಜನಗಳಲ್ಲಿ ತಾನು ಇದ್ದುಕೊಂಡು ಸ್ಥಿತಿ (ರಕ್ಷಣೆ) ಯನ್ನು ಮಾಡುವನು. ಮಹಾವಿಷ್ಣುವು ಸಂಕರ್ಷಣರೂಪದಿಂದ ವಿದ್ಯಾಬಲಗಳನ್ನು ಹೊಂದಿ ಕಾಲ, ರುದ್ರ, ಯಮ ಇವರಲ್ಲಿ ಇದ್ದುಕೊಂಡು ಜಗತ್ತನ್ನು ನಾಶಮಾಡುವನು.

ಇತ್ಯಂತರ್ಯಾಮ್ಯವಸ್ಥಾ ಯಾಮನ್ತರ್ಯಾಮಿತ್ವಮಾತ್ಮನಃ ।
ಮತ್ಸ್ಯಃ ಕೂರ್ಮೋ ವರಾಹಶ್ಚ ನರಸಿಂಹೋಥ ವಾಮನಃ ॥ ೪೦ ॥

ರಾಮೋ ರಾಮಶ್ಚ ಕೃಷ್ಣಶ್ಚ ಬುದ್ಧಃ ಕಲ್ಕಿಶ್ಚ ತೇ ದಶ ।
ಏತೇ ತು ವಿಭವಾವಸ್ಥಾ ಬ್ರಹ್ಮಣಃ ಪರಮಾತ್ಮನಃ ॥ ೪೧ ॥

ನೃಸಿಂಹರಾಮಕೃಷ್ಣೇಷು ಷಾಡ್ಗುಣ್ಯಂ ಪರಿಕೀರ್ತಿತಂ ।
ಪರಾವಸ್ಥಾ ತು ದೇವಸ್ಯ ದೀಪಾದುತ್ಪನ್ನದೀಪವತ್ ॥ ೪೨ ॥

---

೪೦-೪೧. ಈ ರೀತಿಯಾಗಿ ಆ ಪರಮಾತ್ಮನು ಅಂತರ್ಯಾಮಿ ಅವಸ್ಥೆಯನ್ನು ಹೊಂದಿ ಆತ್ಮಗಳಲ್ಲಿ ಅಂತರ್ಯಾಮಿಯಾಗಿದ್ದುಕೊಂಡಿರುವನು. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ರಾಮ, ಪರಶುರಾಮ, ಕೃಷ್ಣ, ಬುದ್ಧ, ಕಲ್ಕಿ ಎಂಬ ಈ ಹತ್ತು ಅವತಾರಗಳನ್ನು ಆ ಸ್ವಾಮಿಯು ಮಾಡಿ ತನ್ನ ವೈಭವವನ್ನು ತೋರಿಸಿರುವನು.

೪೨. ನರಸಿಂಹ, ರಾಮ, ಕೃಷ್ಣರಲ್ಲಿ ಷಡ್ಗುಣಗಳಿರುವುವು. ಇವು ದೇವದೇವನ ಉತ್ಕೃಷ್ಟವಾದ ಅವಸ್ಥೆಗಳು. ಈ ಅವತಾರಗಳು ದೇವದೇವನಿಂದ ದೀಪದಿಂದ ದೀಪವು ಹುಟ್ಟುವ್ವಂತೆ ಹುಟ್ಟುತ್ತವೆ. (ಷಡ್ಗುಣಗಳೆಂದರೆ ಯುದ್ಧಕಾಲದಲ್ಲಿ ಶತ್ರುಗಳನ್ನು ಎದುರಿಸುವಾಗ್ಗ ಉಪಯೋಗಿಸುವ ಆರುಬಗೆಯ ಉಪಾಯಗಳು. ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯಗಳೆನ್ನುವಿಕೆ. ಸಂಧಿ ಎಂದರೆ ಒಬ್ಬರಿಗೊಬ್ಬರು ತಮ್ಮ ತಮ್ಮ ಅನುಕೂಲಗಳಿಗೆ ತಕ್ಕಂತೆ ನಿಯಮಗಳನ್ನು ಏರ್ಪಡಿಸಿಕೊಂಡು ಯುದ್ಧವನ್ನು ನಿಲ್ಲಿಸಿ ಶತ್ರುವಿನೊಡನೆ ಸಮಾಧಾನ ಮಾಡಿಕೊಳ್ಳುವಿಕೆ. ವಿಗ್ರಹವೆಂದರೆ ಸೈನ್ಯಗಳನ್ನು ಕೂಡಿಟ್ಟುಕೊಂಡು ಹೊಡೆದಾಡುವಿಕೆ. ಯಾನವೆಂದರೆ ಶತ್ರುವಿನೆದುರಿಗೆ ದಂಡನ್ನು ತೆಗೆದುಕೊಂಡು ಹೋಗುವಿಕೆ. ಆಸನವೆಂದರೆ ಯುದ್ಧಕಾಲ ಬಂದಾಗ ಶತ್ರುವಿನೆದುರಿಗೆ ಹೋಗಿ ಬಹಳಕಾಲವಾದ ದುರ್ಗಮಾಡಿಕೊಂಡು ಠಾಣ್ಯಹಾಕಿ ಆತನ ಬಲಾಬಲಗಳನ್ನು ನಿರೀಕ್ಷಿಸುತ್ತ ಸಮಯವನ್ನು ನೋಡುತ್ತ ಹೊಂಚುಹಾಕಿ ಮೇಲೆ ಬೀಳುವಿಕೆ. ದ್ವೈಧವೆಂದರೆ ಶತ್ರುಗಳ ದಳಕ್ಕೆ ತಮ್ಮವರನ್ನು ತಿಳಿಯದಂತೆ ಕಳುಹಿಸಿ ಅವರೊಳಗೆ ಜಗಳವನ್ನು ಹುಟ್ಟಿಸಿ ಅಗಲಿಸುವಿಕೆ. ಆಶ್ರಯವೆಂದರೆ ತನಗಿಂತಲೂ ಬಲವಾದ ಶತ್ರುವನ್ನು ಗೆಲ್ಲಲು ಆ ಶತ್ರುವಿಗಿಂತಲೂ ಬಲಿಷ್ಠನಾದ ಅಥವಾ ಸಮನಾದ ಮತ್ತೊಬ್ಬನನ್ನು ಅನುಸರಿಸಿ ಅವನ ಜೊತೆಯನ್ನು ಹೊಂದುವಿಕೆ.)

ಸಾ ಹ್ಯವಸ್ಥಾ ಹರೇರಸ್ಯ ಶೃಣುಷ್ವ ಗಿರಿಜೇ ಶುಭೇ ।
ವೈಕುಂಠಂ ಪರಮೋ ಲೋಕೋ ವಿಷ್ಣುಲೋಕೋ ಹ್ಯನುತ್ತಮಃ ॥ ೪೩ ॥

ಶ್ವೇತದ್ವೀಪಸ್ವರೂಪಂ ತು ಕ್ಷೀರಸಾಗರ ಉತ್ತಮಃ ।
ಏವಂ ಚತುರ್ಧಾ ವ್ಯೂಹಸ್ತು ಸಮ್ಯಗುಕ್ತೋ ಮಹರ್ಷಿಭಿಃ ॥ ೪೪ ॥

ಜಲಾವರಣಮಧ್ಯೇ ತು ವೈಕುಂಠಂ ಕಾರಣಂ ಶುಭಂ ।
ಕೋಟಿವೈಶ್ವಾನರಪ್ರಖ್ಯಂ ಸರ್ವಧರ್ಮವದವ್ಯಯಂ ॥ ೪೫ ॥

ಆಮೋದಕರಮಂದಾರವೃಕ್ಷೈರ್ಬಹುಭಿರಾಸ್ಥಿತಂ ।
ನಾನಾಮಣಿಮಯೈರ್ದಿವ್ಯೈರ್ವಿಮಾನೈಃ ಕೋಟಿಭಿರ್ಯುತಂ ॥ ೪೬ ॥

---

೪೩–೪೪. ಈ ರೀತಿಯಾಗಿ ಇವು ಹರಿಯು ಮಾಡುವ ಲೀಲಾವಸ್ಥೆಗಳು. ಇನ್ನೂ ಈತನ ಲೀಲಾವಸ್ಥೆಗಳನ್ನು ಕ್ರಮವಾಗಿ ಹೇಳುತ್ತೇನೆ. ಕೇಳು. ವೈಕುಂಠವೆಂಬುದು ಉತ್ತಮಲೋಕವು. ವಿಷ್ಣುಲೋಕವೆಂಬುದು ಎರಡನೆಯದು. ಶ್ವೇತ ದ್ವೀಪವೆಂಬುದು ಮೂರನೆಯದು. ಕ್ಷೀರಸಾಗರವೆಂಬುದು ನಾಲ್ಕನೆಯದು. ಈ ಲೋಕಗಳಿಗೆ ವ್ಯೂಹಗಳೆಂದು ಹೆಸರು. ಈ ರೀತಿಯಾಗಿ ನಾಲ್ಕುಬಗೆಯಾದ ವ್ಯೂಹಗಳಿವೆಯೆಂದು ಮಹರ್ಷಿಗಳು ಹೇಳಿದ್ದಾರೆ.

೪೫. ವೈಕುಂಠವೆಂಬುದು ಒಂದು ವಿಷ್ಣುವಿನ ಉತ್ತಮೋತ್ತಮವಾದ ಲೋಕವಿರುವುದು. ಅದು ಕಾರಣರೂಪವಾದುದು. ಅದರ ಸುತ್ತಲೂ ನೀರಿನ ಕೋಟೆಯಿರುವುದು. ಅದು ಮಂಗಳಕರವಾದುದು. ಕೋಟಿಜನ ಅಗ್ನಿಯರಂತೆ ಬೆಳಗುತ್ತಿರುವುದು ಎಲ್ಲಾ ಧರ್ಮಗಳೂ ಅಲ್ಲಿರುವುವು. ನಾಶವಿಲ್ಲದ ಲೋಕವು.

೪೬. ಸುವಾಸನೆಯುಲ್ಲಿ ಪ್ರಸಿದ್ಧವಾದ ಮಂದಾರವೃಕ್ಷಗಳು ಬಹುವಾಗಿ ಅಲ್ಲಿರುವುವು. ಅನೇಕ ಪ್ರಕಾರವಾದ ಮಣಿಗಳಿಂದ ಕೂಡಿದ ಕೋಟಿಸಂಖ್ಯೆಯುಳ್ಳ ವಿಮಾನಗಳು ಅಲ್ಲಿರುವುವು.

ಯದುಕ್ತಂ ಪರಮಂ ಧಾಮ ತಾದೃಗ್ಲಕ್ಷಣಸಂಸ್ಥಿತಂ |
ತಸ್ಮಿನ್ ವೈಕುಂಠನಗರೇ ನಾನಾರತ್ನಸಮುಜ್ಜ್ವಲೇ || ೪೭ ||

ಮಧ್ಯೇ ದೇವವತೀ ನಾಮ ಪುರಂ ರಮ್ಯಮನುತ್ತಮಂ |
ಚತುರ್ದ್ವಾರಸಮಾಯುಕ್ತಂ ಹೇಮಪ್ರಾಕಾರತೋರಣಂ || ೪೮ ||

ಚಂಡಾದಿದ್ವಾರಪಾಲಾದ್ಯೈಃ ಕುಮುದಾದ್ಯೈಸ್ಸುರಕ್ಷಿತಂ |
ನಾನಾಮಣಿಮಯೈರ್ದಿವ್ಯೈಃ ಗೃಹಪಂಕ್ತಿಭಿರಾವೃತಂ || ೪೯ ||

ವಿತತಂ ಪಂಚಪಂಚಾಶದ್ಯೋಜನೈಶ್ಚ ಸಮನ್ತತಃ |
ಸಹಸ್ರಯೋಜನೈಸ್ತುಂಗಪ್ರಾಸಾದೈಃ ಕೋಟಿಭಿರ್ವೃತಂ || ೫೦ ||

ಆರೂಢಯೌವನೈರ್ದಿವ್ಯೈಃ ಪುಂಭಿಃ ಸ್ತ್ರೀಭಿಶ್ಚ ಶೋಭಿತಂ |
ಸ್ತ್ರಿಯಶ್ಚ ಪುರುಷಶ್ಚಾಸ್ಮಿನ್ ಸರ್ವಲಕ್ಷಣಶೋಭಿತಾಃ || ೫೧ ||

---

೪೭-೪೮ ಎಲ್ಲಾ ಲಕ್ಷಣಗಳಿಂದಲೂ ಕೂಡಿದ ಉತ್ತಮೋತ್ತಮ ಲೋಕವೆಂದು ಯಾವ ವೈಕುಂಠವನ್ನು ಹೇಳಿದ್ದೇವೆಯೋ ಅದು ನಾನಾರತ್ನಗಳಿಂದ ಪ್ರಕಾಶಿತವಾಗಿದೆ. ಆ ವೈಕುಂಠದ ಮಧ್ಯದಲ್ಲಿ ದೇವವತಿಯೆಂಬ ಪಟ್ಟಣವಿರುವುದು. ಅದು ಬಹು ಶ್ರೇಷ್ಠವಾದುದು ಅದಕ್ಕೆ ಸುತ್ತಲೂ ನಾಲ್ಕು ಕಡೆಗಳಲ್ಲಿಯೂ ಚಿನ್ನದ ಕೋಟೆಯು ಇರುವುದು. ಅದಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಬಾಗಿಲುಗಳಿವೆ. ಆ ಬಾಗಿಲುಗಳು ಚಿನ್ನದಿಂದ ಮಾಡಲ್ಪಟ್ಟಿವೆ.

೪೯. ಚಂಡನೇ ಮುಂತಾದ ದ್ವಾರಪಾಲಕರಿಂದಲೂ ಕುಮುದನೇ ಮುಂತಾದ ದ್ವಾರಪಾಲಾಧ್ಯಕ್ಷರಿಂದಲೂ ಕೂಡಿಕೊಂಡಿರುವುದು. ಅನೇಕ ಬಗೆಯಾದ ಮಣಿಗಳಿಂದ ಕೂಡಿರುವ ಮನೆಗಳ ಸಾಲಿನಿಂದ ಕೂಡಿಕೊಂಡಿರುವುದು.

೫೦. ಆ ಪಟ್ಟಣವು ಐವತ್ತೈದು ಯೋಜನದಗಲವೂ ಸಾವಿರ ಯೋಜನಗಳ ಎತ್ತರವೂ ಇರುವ ಕೋಟ್ಯಂತರ ಮಹಡಿ ಮನೆಗಳಿಂದ ಕೂಡಿರುವುದು.

೫೧. ಆಗ ತಾನೆ ಯೌವನವು ಬರುತ್ತಿರುವ ಹೆಂಗಸರಿಂದಲೂ ಗಂಡಸರಿಂದಲೂ ಶೋಭಿತವಾಗಿದೆ. ಇಲ್ಲಿರುವ ಹೆಂಗಸರು ಗಂಡಸರು ಎಲ್ಲರೂ ಕೂಡ ಎಲ್ಲಾ ಲಕ್ಷಣಗಳಿಂದಲೂ ಕೂಡಿದ್ದಾರೆ.

**ಸಮರೂಪಾಶ್ಚ ಶ್ರೀವಿಷ್ಣೋಃ ಸರ್ವಾಲಂಕಾರಭೂಷಿತಾಃ |**
**ದಿವ್ಯಸ್ರಗ್ವಸ್ತ್ರಸಂಛನ್ನಾ ದಿವ್ಯಚಂದನಭೂಷಿತಾಃ || ೫೨ ||**

**ಮೋದಂತೇ ತತ್ರ ದೇವೇಶಿ ಭಕ್ತ್ಯಾಹ್ಲಾದಮನೋರಮೈಃ |**
**ಮಂತ್ರಾಷ್ಟಾಕ್ಷರಸಂಸಿದ್ಧಾ ಭಕ್ತ್ಯಾ ಷೋಡಶರೂಪಯಾ || ೫೩ ||**

**ವೃತಾಸ್ತತ್ಪದಮಾವಿಶ್ಯ ಮೋದಂತೇ ಮನಸೇಪ್ಸಿತಂ |**
**ಗತ್ವಾಸ್ಮಿನ್ನ ನಿವರ್ತಂತೇ ವಿಷ್ಣುನಾ ಸಹ ಸಂಸ್ಥಿತಾಃ || ೫೪ ||**

**ಅವಿಚ್ಛಿನ್ನಾತ್ಮನಾ ತೇಷಾಂ ವಿಷ್ಣುನಾ ಸಂಗತಿಶ್ಶುಭಾ |**
**ತತ್ಸಮಾನಸುಖಂ ನಿತ್ಯಂ ಪ್ರಾಪ್ನುವಂತಿ ಮನೀಷಿಣಃ || ೫೫ ||**

**ಯತ್ರ ಯತ್ರ ಹರೇರ್ಲೋಕಾನಾವಿಶ್ಯ ಶುಭಚೇತಸಃ |**
**ನಾಪ್ನುವಂತಿ ಪುನಃ ಸರ್ಗಂ ಸ್ವರ್ಗಸ್ಥಾ ಇವ ಜಂತವಃ || ೫೬ ||**

---

೫೨. ಅವರೆಲ್ಲರೂ ವಿಷ್ಣುವಿಗೆ ಸಮವಾದ ರೂಪವನ್ನು ಹೊಂದಿರುವರು. ಎಲ್ಲಾ ಅಲಂಕಾರಗಳನ್ನೂ ಹಾಕಿಕೊಂಡಿರುವರು. ಉತ್ತಮವಾದ ಬಟ್ಟೆಗಳನ್ನೂ ಮಾಲೆಗಳನ್ನೂ ಧರಿಸಿಕೊಂಡಿರುವರು.

೫೩. ಅಲ್ಲಿರುವವರು ಭಕ್ತಿ ಆಹ್ಲಾದಗಳಿಂದ ಕೂಡಿರುವರು. ಅಷ್ಟಾಕ್ಷರೀ ಮಂತ್ರವನ್ನು ಜಪಿಸುತ್ತ ಷೋಡಶೋಪಚಾರ ಪೂಜೆಗಳನ್ನು ಮಾಡುವರು.

೫೪. ಆ ಸ್ವಾಮಿಯ ಸ್ಥಳದ ಸುತ್ತಲೂ ಇವರೆಲ್ಲರೂ ಇರುವವರು. ಅಲ್ಲಿ ತಮಗೆ ಇಷ್ಟಬಂದಂತೆ ಸುಖಿಸುವರು. ಅಲ್ಲಿಗೆ ಹೋದವರು ಮತ್ತೆ ಹಿಂತಿರುಗುವುದಿಲ್ಲ. ವಿಷ್ಣುವಿನೊಡನೆಯೇ ಇರುತ್ತಾರೆ.

೫೫. ಸ್ವಲ್ಪವೂ ಎಡೆಬಿಡದೆ ಇರುವ ಆತ್ಮರೂಪನಾದ ವಿಷ್ಣುವಿನೊಡನೆ ಅವರು ಯಾವಾಗಲೂ ಇರುವರು. ಅವರೆಲ್ಲರೂ ಆ ವಿಷ್ಣುವಿನ ಸೌಖ್ಯದ ಸಮಾನವಾದ ಸೌಖ್ಯವನ್ನು ಹೊಂದುವರು.

೫೬. ಒಳ್ಳೆಯ ಮನಸ್ಸಿನಿಂದ ಕೂಡಿದ ಈ ಮನುಷ್ಯರು ಹರಿಯ ಲೋಕವನ್ನು ಎಲ್ಲೆಲ್ಲಿ ಹೊಂದುವರೋ ಅವೆಲ್ಲದರಲ್ಲಿಯೂ ಕೂಡ ಸ್ವರ್ಗಕ್ಕೆ ಹೋದವರು ಮತ್ತೆ ಹುಟ್ಟುವಂತೆ ಹುಟ್ಟುವುದಿಲ್ಲ.

**ಯಥಾ ಸೌಮಿತ್ರಿಭರತೌ ಯಥಾ ಸಂಕರ್ಷಣಾದಯಃ |**
**ತಥಾ ತೇಪಿ ಚ ಜಾಯಂತೇ ಸತ್ಯಲೋಕಾದ್ಯದೃಚ್ಛಯಾ || ೫೭ ||**

**ಪುನಸ್ತೇನೈವ ಯಾಸ್ಯಂತಿ ತತ್ಪದಂ ಶಾಶ್ವತಂ ಪರಂ ।**
**ನ ಕರ್ಮಬಂಧನಂ ಜನ್ಮ ವೈಷ್ಣವಾನಾಂ ಚ ವಿದ್ಯತೇ || ೫೮ ||**

**ವಿಷ್ಣೋರನುಚರತ್ವಂ ಹಿ ಮೋಕ್ಷಮಾಹುರ್ಮನೀಷಿಣಃ |**
**ತದ್ದಾಸ್ಯಮಮರೇಶಸ್ಯ ಬಂಧನಂ ಪರಿಕೀರ್ತಿತಂ || ೫೯ ||**

**ಸರ್ವಬಂಧನನಿರ್ಮುಕ್ತಾ ಹರಿದಾಸಾ ನಿರಾಮಯಾಃ |**
**ಆಬ್ರಹ್ಮಭುವನಾಲ್ಲೋಕಾಃ ಪುನರಾವೃತ್ತಿಲಕ್ಷಣಾಃ || ೬೦ ||**

---

೫೭. ಆ ಭಕ್ತರೆಲ್ಲರೂ ರಾಮನ ಜೊತೆಯಲ್ಲಿ ಭರತ ಲಕ್ಷ್ಮಣರಂತೆಯೂ ಶ್ರೀಕೃಷ್ಣನ ಜೊತೆಯಲ್ಲಿ ಸಂಕರ್ಷಣಾದಿಗಳಂತೆಯೂ ಸತ್ಯ ಲೋಕದಿಂದ ಬಂದು ತಮ್ಮ ಇಷ್ಟಬಂದಂತೆ ಹುಟ್ಟುತ್ತಾರೆ.

೫೮. ಮತ್ತೆ ಆ ಸ್ವಾಮಿಯೊಡನೆಯೇ ಆ ಶಾಶ್ವತವಾದ ವೈಷ್ಣವ ಸ್ಥಾನವನ್ನು ಹೊಂದುತ್ತಾರೆ. ವೈಷ್ಣವರಿಗೆ ಕರ್ಮದ ಬಂಧನದಿಂದ ಬರುವ ಜನ್ಮವು ಇಲ್ಲವೇ ಇಲ್ಲ.

೫೯. ವಿಷ್ಣುವನ್ನು ಅನುಸರಿಸಿಕೊಂಡಿರುವುದೇ ಮೋಕ್ಷವೆಂದು ಬಲ್ಲವರು ಹೇಳುತ್ತಾರೆ. ಇಂದ್ರನಿಗೆ ದಾಸನಾಗಿರುವಿಕೆಯನ್ನು ಬಂಧನವೆಂದೆನ್ನುತ್ತಾರೆ.

೬೦. ಹರಿದಾಸರು ಎಲ್ಲ ಬಂಧನಗಳಿಂದಲೂ ಮುಕ್ತರಾಗಿರುವರು. ಯಾವ ತೊಂದರೆಯೂ ಇರುವುದೇ ಇಲ್ಲ. ಬ್ರಹ್ಮಲೋಕ ಮೊದಲುಗೊಂಡು ಮಿಕ್ಕುವುಗಳೆಲ್ಲವೂ ಮತ್ತೆ ಜನ್ಮವನ್ನು ಕೊಡತಕ್ಕವು.

ಕರ್ಮಬಂಧಮಯಾ ದುಃಖಮಿತ್ರಾಸಖ್ಯಭಯಪ್ರದಾಃ ।
ಬಹ್ವಾಯಾಸಫಲಾ ದೇವಿ ಜನಿನಾಶಕಹೇತವಃ　　　　॥ ೬೧ ॥

ಸುಖಭೋಗಸ್ತು ಯನ್ಮ್ಯಾಣಾಂ ವಿಷಮಿಶ್ರಾಶನಂ ಯಥಾ ।
ಸ್ವರ್ಗಸಂಸ್ಥಾನ್ನರಾ ದೃಷ್ಟ್ವಾ ಕ್ಷೀಣೇ ಕರ್ಮಣಿ ದೇವತಾಃ　　　　॥ ೬೨ ॥

ಕುಪಿತಾಃ ಪಾತಯಂತ್ಯೇವ ಸಂಸೃತೌ ಕರ್ಮಬಂಧನೇ ।
ತಸ್ಮಾತ್ ಸ್ವರ್ಗಸುಖಂ ದೇವಿ ಬಹ್ವಾಯಾಸಮಸಾಧನಂ　　　　॥ ೬೩ ॥

ಅನಿತ್ಯಂ ಕುಟಿಲಂ ದುಃಖಮಿಶ್ರಂ ಯೋಗೀ ಪರಿತ್ಯಜೇತ್ ।
ಸತತಂ ಸಂಸ್ಮರೇದ್ವಿಷ್ಣುಂ ಸರ್ವದುಃಖೌಘನಾಶನಂ　　　　॥ ೬೪ ॥

---

೬೧. ಅದು ಕರ್ಮದ ಬಂಧವನ್ನು ಹೊಂದಿದೆ. ದುಃಖದಿಂದ ಕೂಡಿರುವ ಸ್ನೇಹಿತರನ್ನೂ ವೈರವನ್ನೂ ಭಯವನ್ನೂ ಕೊಡುವಂಥಾದ್ದು. ಬಹು ಆಯಾಸ ವನ್ನು ಕೊಡುತ್ತದೆ. ಹುಟ್ಟುವುದು, ಸಾಯುವುದು, ಇದಕ್ಕೆ ಕಾರಣವಾಗಿಯೂ ಇರುವುದು.

೬೨–೬೩. ಆದ್ದರಿಂದ ಸ್ವರ್ಗಸುಖವೆಂಬುದು ಮನುಷ್ಯರಿಗೆ ವಿಷಮಿಶ್ರ ವಾಗಿರುವ ಊಟದಂತಿರುವುದು. ದೇವತೆಗಳು ಸ್ವರ್ಗದಲ್ಲಿರುವ ಮನುಷ್ಯರನ್ನು ನೋಡಿಕೊಂಡಿದ್ದು ಅವರ ಪುಣ್ಯವು ನಾಶವಾಗುತ್ತಲೂ ಅವರ ಮೇಲೆ ಕೋಪಮಾಡುತ್ತ ಕರ್ಮಬಂಧನವಾದ ಈ ಸಂಸಾರದಲ್ಲಿ ಕೆಡಗುವರು. ಆದ್ದರಿಂದ ಈ ಸ್ವರ್ಗಸುಖವೆಂಬುದು ಬಹು ಕಷ್ಟದಿಂದ ಕೂಡಿರುವುದು. ಮತ್ತು ಅದು ಕ್ಲೇಶನಾಶಕ್ಕೆ ಸಾಧನವಾಗುವುದೂ ಇಲ್ಲ.

೬೪. ಯೋಗಿಯಾದವನು ಅನಿತ್ಯವಾದ, ಕಪಟದಿಂದ ಕೂಡಿರುವ, ದುಃಖವನ್ನು ಮಿಶ್ರಮಾಡಿಕೊಂಡಿರುವ, ಸ್ವರ್ಗಸುಖವನ್ನು ಬಿಟ್ಟು ಬಿಡಬೇಕು. ಎಲ್ಲಾ ದುಃಖಗಳನ್ನೂ ನಾಶಮಾಡುವ ಪಾಪನಾಶಕನಾದ ವಿಷ್ಣುವನ್ನು ಯಾವಾಗಲೂ ಸ್ಮರಿಸಬೇಕು.

ನಾಮೋಚ್ಚಾರಣಮಾತ್ರೇಣ ಪ್ರಾಪ್ನುವಂತಿ ಪರಂ ಪದಂ |
ತಸ್ಮಾತ್ತು ವೈಷ್ಣವಂ ಲೋಕಂ ಗೌರಿ ಸಂಪ್ರಾರ್ಥಯೇತ್ಸುಧೀಃ ॥ ೬೫ ॥

ಭಕ್ತ್ಯಾ ತ್ವನನ್ಯಯಾ ದೇವಂ ಭಜೇತ ಕರುಣಾಂಬುಧಿಂ |
ಸ ಸರ್ವಜ್ಞಾನಗುಣವಾನ್ ರಕ್ಷತ್ಯೇವ ನ ಸಂಶಯಃ ॥ ೬೬ ॥

ತಸ್ಮಾದಷ್ಟಾಕ್ಷರಂ ಮಂತ್ರಂ ಜಪ್ತ್ವಾ ಸುಖತರಂ ಶುಭಂ |
ಸಂಪ್ರಾಪ್ನೋತಿ ಪರಂ ಲೋಕಂ ವೈಷ್ಣವಂ ಸರ್ವಕಾಮದಂ ॥ ೬೭ ॥

ತಸ್ಮಿನ್ ಮಣಿಮಯಸ್ತಂಭೇ ಸಹಸ್ರಸೂರ್ಯರಶ್ಮಿಭಿಃ |
ವಿಮಾನೇ ಶುಶುಭೇ ದಿವ್ಯೇ ಸಂಸ್ಥಿತೋ ಭಗವಾನ್ ಹರಿಃ ॥ ೬೮ ॥

---

೬೫. ಈ ಜಗತ್ತಿಗೆಲ್ಲಾ ಸ್ವಾಮಿಯಾದ ನಾರಾಯಣನ ಹೆಸರನ್ನು ಉಚ್ಚಾರಮಾಡುವುದರಿಂದಲೇ ಪರಮ ಪದವಾದ ವೈಕುಠವು ಸಿಕ್ಕುವುದರಿಂದ ತಿಳಿವಳಿಕೆಯುಳ್ಳವನು ವೈಷ್ಣವ ಲೋಕವನ್ನು ಅಪೇಕ್ಷಿಸಿ ಅದಕ್ಕೆ ಹೋಗುವ ಪ್ರಯತ್ನವನ್ನು ಮಾಡಬೇಕು.

೬೬. ಕರುಣಾಕರನಾದ ನಾರಾಯಣನನ್ನು ಅತಿಶಯವಾದ ಭಕ್ತಿಯಿಂದ ಭಜಿಸಬೇಕು. ಆ ಸ್ವಾಮಿಯು ಎಲ್ಲಾ ಜ್ಞಾನವನ್ನೂ ಉಳ್ಳವನು. ನಮ್ಮನ್ನು ಕಾಪಾಡಿಯೇ ಕಾಪಾಡುತ್ತಾನೆ. ಸಂಶಯವಿಲ್ಲ.

೬೭. ಜಪಿಸಲು ಸುಖತರವೂ ಶುಭವೂ ಆದ ಅಷ್ಟಾಕ್ಷರಮಂತ್ರವನ್ನು ಜಪಿಸಿ ಇಷ್ಟಾರ್ಥಗಳನ್ನು ಕೊಡುವ ಪರಲೋಕವಾದ ವೈಕುಂಠವನ್ನು ಹೊಂದ ಬೇಕು.

೬೮. ಮಣಿಮಯವಾದ ಕಂಬಗಳಿರುವ, ಸಾವಿರಾರು ಸೂರ್ಯರ ಕಾಂತಿಯಿಂದ ಕೂಡಿರುವ, ದೊಡ್ಡಮನೆಯಲ್ಲಿರುವ, ಮಂಟಪದಲ್ಲಿ ಭಗವಂತನಾದ ಹರಿಯು ಕುಳಿತುಕೊಂಡು ಪ್ರಕಾಶಿಸುತ್ತಿರುವನು.

ತತ್ರ ಚಾಧಾರಶಕ್ತ್ಯಾದಿಧೃತೇ ಪೀಠೇ ಹಿರಣ್ಮಯೇ ।
ನಾನಾರತ್ನಮಯೇ ದಿವ್ಯೇ ನಾನಾವರ್ಣಸಮನ್ವಿತೇ ॥ ೬೯ ॥

ತಸ್ಮಿನ್ನಷ್ಟದಲೇ ಪದ್ಮೇ ಮಂತ್ರಾಕ್ಷರಪದೇ ಶುಭೇ ।
ಕರ್ಣಿಕಾಯಾಂ ಸುರಮ್ಯಾಯಾಂ ಲಕ್ಷ್ಮೀಬೀಜಶುಭಾಕ್ಷರೇ ॥ ೭೦ ॥

ತಸ್ಮಿನ್ ಬಾಲಾರ್ಕಸಾಹಸ್ರಕೋಟಿತುಲ್ಯಸಮಪ್ರಭಃ ।
ದಿವ್ಯೋ ನಾರಾಯಣಃ ಶ್ರೀಮಾನಾಸೀನಃ ಪಂಕಜಾಸನೇ ॥ ೭೧ ॥

ತಸ್ಯ ದಕ್ಷಿಣಪಾರ್ಶ್ವೇ ಚ ಜಗನ್ಮಾತಾ ಹಿರಣ್ಮಯೀ ॥
ಸರ್ವಲಕ್ಷಣಸಂಪನ್ನಾ ದಿವ್ಯಮಾಲಾವಿಭೂಷಣಾ ॥ ೭೨ ॥

ವಸುಪಾತ್ರಂ ಮಾತುಲಂಗಂ ಸ್ವರ್ಣಪದ್ಮಂ ಧೃತಂ ಕರೈಃ ।
ವಾಮತಃ ಪೃಥಿವೀ ದೇವೀ ನೀಲೋತ್ಪಲದಳದ್ಯುತಿಃ ॥ ೭೩ ॥

---

೬೯-೭೦. ಆ ಮಂಟಪದೊಳಗೆ ಒಂದು ಮಂಟಪವಿರುವುದು. ಅದರೊಳಗೆ ಒಂದು ಪೀಠವಿರುವುದು. ಅದನ್ನು ಆಧಾರಶಕ್ತಿಯೇ ಮೊದಲಾದ ಶಕ್ತಿಗಳು ಹೊತ್ತುಕೊಂಡಿರುವರು. ಬಗೆ ಬಗೆಯ ಬಣ್ಣಗಳು ಅದರಲ್ಲಿರುವುವು. ಅದು ಎಂಟುದಳಗಳಿಂದ ಕೂಡಿರುವುದು. ಮಂತ್ರಾಕ್ಷರಗಳಿಂದ ಅದು ಕೂಡಿರುವುದು. ಆ ಪೀಠದ ಕರ್ಣಿಕೆಯಲ್ಲಿ ಲಕ್ಷ್ಮಿಯ ಬೀಜಾಕ್ಷರದಲ್ಲಿ ಈತನು ಕುಳಿತಿರುವನು.

೭೧. ಆ ಸ್ವಾಮಿಯು ಉದಯಿಸುತ್ತಿರುವ ಸಾವಿರಕೋಟಿ ಸೂರ್ಯರಂತೆ ಕಾಂತಿಯುಳ್ಳವನಾಗಿ ಇದ್ದಾನೆ ದಿವ್ಯನಾಗಿರುವನು. ಶ್ರೀಮಂತನು. ಇಂತಹ ಇವನು ಆ ಕಮಲದಲ್ಲಿ ಕುಳಿತಿರುವನು.

೭೨-೭೩. ಆ ಸ್ವಾಮಿಯ ಬಲಭಾಗದಲ್ಲಿ ಜಗನ್ಮಾತೆಯಾದ ಚಿನ್ನದಂತೆ ಬಣ್ಣವುಳ್ಳ ಸಕಲವಿಧವಾದ ಲಕ್ಷಣಗಳಿಂದ ಕೂಡಿದ ಉತ್ತಮವಾದ ಭೂಷಣ ಗಳನ್ನು ತೊಟ್ಟಿರುವ ಲಕ್ಷ್ಮಿಯು ಇರುವಳು. ಆಕೆಯು ಕೈಗಳಲ್ಲಿ ಅಮೃತ ಕಲಶವನ್ನೂ ಮಾದಲಹಣ್ಣನ್ನೂ ಚಿನ್ನದ ಪದ್ಮಗಳನ್ನೂ ಹಿಡಿದಿರುವಳು. ಎಡಗಡೆಯಲ್ಲಿ ಭೂದೇವಿಯು ಇರುವಳು. ನೀಲೋತ್ಪಲದಂತೆ ಕಾಂತಿಯುಳ್ಳವಳು. ಬಗೆ ಬಗೆಯಾದ ಅಲಂಕಾರಗಳನ್ನು ಹೊಂದಿರುವಳು. ಒಳ್ಳೆಯ ವಿಚಿತ್ರವಾದ ಬಟ್ಟೆಗಳನ್ನುಟ್ಟಿರುವಳು.

ನಾನಾಲಂಕಾರಸಂಯುಕ್ತಾ ವಿಚಿತ್ರಾಂಬರಭೂಷಿತಾ ।
ಸಂಧೃತಂ ಚೋರ್ಧ್ವಬಾಹುಭ್ಯಾಂ ರಮ್ಯಂ ರಕ್ತೋತ್ಪಲದ್ವಯಂ ॥ ೭೪ ॥

ಇತರಾಭ್ಯಾಂ ಧೃತಂ ದೇವ್ಯಾ ಧಾನ್ಯಪಾತ್ರಯುಗಂ ತಥಾ ।
ಗೃಹೀತ್ವಾ ಚಾಮರಾರ್ ದಿವ್ಯಾರ್ ಶಕ್ತಯೋ ವಿಮಲಾದಯಃ ॥ ೭೫ ॥

ದಲಾಗ್ರೇಷು ಸಮಾಸೀನಾಃ ಸರ್ವಲಕ್ಷಣಶೋಭಿತಾಃ ।
ತಾಸಾಂ ಮಧ್ಯೆ ಸಮಾಸೀನೋ ಭಗವಾನಚ್ಯುತೋ ಹರಿಃ ॥ ೭೬ ॥

ಶಂಖಚಕ್ರಗದಾಪದ್ಮಪಾಣಿಭಿರ್ದಿವ್ಯಭೂಷಣೈಃ ।
ಕೇಯೂರಾಂಗದಹಾರಾದ್ಯೈರ್ಭೂಷಣೈರುಪಶೋಭಿತಃ ॥ ೭೭ ॥

ಪ್ರಾತರುದ್ಯತ್ಸಹಸ್ರಾಂಶುಕುಂಡಲಾಭ್ಯಾಂ ವಿರಾಜಿತಃ ।
ಪೂರ್ವೋಕ್ತೈಸ್ತ್ರಿದಶೈರ್ನಿತ್ಯೈಃ ಸೇವಿತಃ ಪರಮೇಶ್ವರಃ ॥ ೭೮ ॥

---

೭೪-೭೫. ಆ ಭೂದೇವಿಯು ಎರಡು ಕೈಗಳಲ್ಲಿ ಕೆಂಪು ಕಮಲಗಳನ್ನು ಹಿಡಿದುಕೊಂಡು ಆ ಕೈಗಳನ್ನು ಮೇಲಕ್ಕೆತ್ತಿಕೊಂಡಿರುವಳು. ಮತ್ತೆರಡು ಕೈಗಳಿಂದ ಧಾನ್ಯದ ಎರಡು ಪಾತ್ರೆಗಳನ್ನು ಹಿಡಿದುಕೊಂಡಿರುವಳು. ವಿಮಲಾದಿ ಶಕ್ತಿಗಳು ದಿವ್ಯವಾದ ಚಾಮರಗಳನ್ನು ಹಿಡಿದು ಆ ಪದ್ಮದ ದಳದ ತುದಿಯಲ್ಲಿ ಕುಳಿತಿರುವರು. ಎಲ್ಲಾ ಲಕ್ಷಣಗಳಿಂದಲೂ ಕೂಡಿರುವರು.

೭೬-೭೭. ಅವರುಗಳ ಮಧ್ಯದಲ್ಲಿ ಭಗವಂತನಾದ ಹರಿಯು ಕುಳಿತಿರುವನು. ಅವನು ಶಂಖ, ಚಕ್ರ, ಗದೆ, ಪದ್ಮ ಇವನ್ನು ಹಿಡಿದಿರುವನು. ದಿವ್ಯವಾದ ಒಡವೆಗಳನ್ನು ತೊಟ್ಟಿರುವನು. ಕೇಯೂರ ಅಂಗದ ಹಾರ ಮುಂತಾದ ಒಡವೆಗಳನ್ನು ಹಾಕಿಕೊಂಡಿರುವನು.

೭೮. ಬೆಳಗ್ಗೆ ಹುಟ್ಟುತ್ತಿರುವ ಸೂರ್ಯನಂತೆ ಪ್ರಕಾಶಿಸುತ್ತಿರುವ ಕರ್ಣಾಭರಣಗಳಿಂದ ಕೂಡಿರುವನು. ಹಿಂದೆ ಹೇಳಿದ ವಿಭವಗಳಿಂದ ಕೂಡಿದ ನಿತ್ಯರಾದ ದೇವತೆಗಳಿಂದ ಕೂಡಿಕೊಂಡು ಸೇವೆಯನ್ನು ತೆಗೆದುಕೊಳ್ಳುತ್ತಿರುವನು.

ಆಸ್ತೇ ವೈಕುಂಠನಗರೇ ನಿತ್ಯಂ ನಿತ್ಯೇ ಚ ಭೋಗವಾನ್ ।
ಶ್ರೀಮದಷ್ಟಾಕ್ಷರಂ ಮಂತ್ರಂ ಸಿದ್ಧಾನಾಂ ವೈ ಮನೀಷಿಣಾಂ ॥ ೭೯ ॥

ರಮ್ಯಂ ತದ್ವೈಷ್ಣವಂ ಲೋಕಂ ನೇತರೇಷಾಂ ಕಥಂಚನ ।
ಇತ್ಯೇವಂ ಪ್ರಥಮೋ ವ್ಯೂಹಃ ಕಥಿತಃ ತೇ ವರಾನನೇ ॥ ೮೦ ॥

ದ್ವಿತೀಯಂ ವೈಷ್ಣವಂ ಲೋಕಂ ಶೃಣು ವಕ್ಷ್ಯಾಮಿ ಸುವ್ರತೇ ।
ಯೋಽಯಂ ನಿತ್ಯ ಇತಿಖ್ಯಾತೋ ಲೋಕಾಗ್ರ್ಯೋ ವೈಷ್ಣವಃ ಸ್ಮೃತಃ ॥ ೮೧ ॥

ಸ ಲೋಕೋ ವಿಪುಲಃ ಪುಣ್ಯಃ ಶುದ್ಧ ಆತ್ಮಮಯಶ್ಶುಭಃ ।
ಮಧ್ಯಾಹ್ನಸೂರ್ಯಸಾಹಸ್ರಯುಗಪದ್ಭಾಸಿತಃ ಸದಾ ॥ ೮೨ ॥

ಕಲ್ಪಾಂತೇಽಪಿ ನ ಲೀಯೇತ ಸತ್ಯಲೋಕೋ ಮಹತ್ತರಃ ।
ಮಮ ಬ್ರಹ್ಮಾದಿದೇವಾನಾಂ ನ ದ್ರಷ್ಟುಮಪಿ ಶಕ್ಯತೇ ॥ ೮೩ ॥

---

೭೯-೮೦. ಇಂತಹ ನಿತ್ಯವಾಗಿರುವ ವೈಕುಂಠನಗರದಲ್ಲಿ ನಿತ್ಯಭೋಗವುಳ್ಳವನಾಗಿ ಆ ಸ್ವಾಮಿಯು ಇದ್ದುಕೊಂಡಿರುವನು. ಶ್ರೀಮದಷ್ಟಾಕ್ಷರ ಮಂತ್ರವನ್ನು ಜಪಿಸುವವರೂ ಸಿದ್ಧರೂ ಯೋಗಿಗಳೂ ಇಂತಹ ರಮ್ಯವಾದ ವೈಕುಂಠಲೋಕಕ್ಕೆ ಹೋಗುತ್ತಾರೆ. ಅವರಿಗೆ ಸುಲಭವು. ಮತ್ತಾರಿಗೂ ಸುಲಭವಲ್ಲ. ಇದು ಅಲ್ಲಿನ ಮೊದಲನೆಯ ವ್ಯೂಹವು. (ರಚನೆಯು.) ಇದನ್ನು ನಿನಗೆ ಹೇಳಿದ್ದೇನೆ.

೮೧-೮೨. ಎರಡನೆಯದಾದ ವೈಷ್ಣವ ಲೋಕವನ್ನು ಹೇಳುತ್ತೇನೆ. ಕೇಳು. ಅದೂ ಕೂಡ ನಿತ್ಯವಾದುದು. ಲೋಕಗಳಿಗೆಲ್ಲಾ ಮೊದಲನೆಯದು. ವೈಷ್ಣವ ಲೋಕವೆಂದು ಇದಕ್ಕೆ ಹೆಸರು. ಅದು ದೊಡ್ಡದಾಗಿರುವುದು. ಪುಣ್ಯಲೋಕವು. ಶುದ್ಧವಾದುದು. ಆತ್ಮರಮಯವಾದುದು. ಮಧ್ಯಾಹ್ನದ ಸಾವಿರ ಸೂರ್ಯರಂತೆ ಪ್ರಕಾಶಿಸುತ್ತಿರುವುದು.

೮೩. ಇದು ಸತ್ಯಲೋಕವು. ಮಹತ್ತರವಾದುದು. ಕಲ್ಪದ ಕೊನೆಯಲ್ಲಿಯೂ ನಾಶವಾಗುವುದಿಲ್ಲ. ನನ್ನಿಂದಾಗಲಿ ಬ್ರಹ್ಮನಿಂದಾಗಲಿ ನೋಡಲೂ ಕೂಡ ಆಗುವುದಿಲ್ಲ

ಸರ್ವಃ ಕಲ್ಪದ್ರುಮವನೈಃ ಪರಿಪೂರ್ಣಃ ಸಮನ್ತತಃ ।
ಸಾಧ್ವಂಬುಪರಿಪೂರ್ಣಾಭಿರ್ದೀರ್ಘಿಕಾಭಿಃ ಸಮನ್ವಿತಃ ॥ ೭೪ ॥

ಸ್ವರ್ಣರತ್ನಮಯೈರ್ದಿವ್ಯೈಃ ಪಂಕಜೈರುಪಶೋಭಿತಃ ।
ಜ್ವಲದಗ್ನಿನಿಭೈರ್ದಿವ್ಯೈರ್ಭೂಷಣೈಃ ಕೋಟಿಭಿರ್ವೃತಃ ॥ ೭೫ ॥

ನಿರಂತರಂ ಸಾಮಭಿಶ್ಚ ಕೂಜಿತೈಃ ಕೋಕಿಲಾದಿಭಿಃ ।
ಪೂರ್ಯಮಾಣೈರ್ಗಂಧವೃಕ್ಷೈಃ ಪುಷ್ಪಕೈರುಪಶೋಭಿತಃ ॥ ೭೬ ॥

ಊನಷೋಡಶವರ್ಷಾಬ್ದೈರ್ದಿವ್ಯನಾರೀನರೈರ್ವೃತಃ ।
ಸರ್ವಲಕ್ಷಣಶೋಭಾಢ್ಯೈರ್ದಿವ್ಯ ಕಲ್ಪವಿಭೂಷಣೈಃ ॥ ೭೭ ॥

ತತ್ರ ಪ್ರದೇಶೇ ರಮ್ಯೇಷು ದೇಶೇಷು ಕಮಲಾಪತಿಂ ।
ಮುದಿತೈಃ ಪತಿಭಿಸ್ಸಾರ್ಧಮರ್ಚಯಂತಿ ಸ್ಮ ಯೋಷಿತಃ ॥ ೭೮ ॥

---

೭೪-೭೫. ಆ ಪಟ್ಟಣದ ಎಲ್ಲಾ ಕಡೆಯಲ್ಲಿಯೂ ಕಲ್ಪವೃಕ್ಷದ ವನಗಳೇ ಇರುವುವು. ಒಳ್ಳೆಯದಾದ ನೀರಿನಿಂದ ಕೂಡಿರುವ ಕೊಳಗಳು ಅಲ್ಲಿ ಎಲ್ಲಾ ಕಡೆಯಲ್ಲಿಯೂ ಇವೆ. ಚಿನ್ನದ ಕಮಲಗಳು ಬಹು ರಮ್ಯವಾಗಿ ಅಲ್ಲಿ ಶೋಭಿಸುತ್ತಿರುವುವು. ಉರಿಯುತ್ತಿರುವ ಬೆಂಕಿಯಂತೆ ಪ್ರಕಾಶಮಾನವಾದ ಅನೇಕ ಭೂಷಣಗಳಿಂದ ಕೂಡಿದೆ.

೭೬. ಯಾವಾಗಲೂ ಕೋಗಿಲೆಗಳು ಸಾಮವೇದವನ್ನು ಹೇಳುತ್ತ ಕೂಗುತ್ತಿರುವವು. ವಾಸನೆಯುಳ್ಳ ಹೂಗಳುಳ್ಳ ಮರಗಳಿಂದ ಕೂಡಿಕೊಂಡು ರಮ್ಯವಾಗಿದೆ.

೭೭. ಎಲ್ಲಾ ಲಕ್ಷಣಗಳಿಂದಲೂ ಕೂಡಿರುವ ಉತ್ತಮವಾದ ಒಡವೆಗಳನ್ನು ಹಾಕಿಕೊಂಡಿರುವ ಹದಿನಾರು ವರ್ಷಗಳಿಗಿಂತ ಸ್ವಲ್ಪಕಡಿಮೆಯಾಗಿರುವ ದಿವ್ಯರಾದ ಅನೇಕಜನ ಹೆಂಗಸರು ಅಲ್ಲಿರುವರು.

೭೮. ಸಂತೋಷಗೊಂಡಿರುವ, ಗಂಡಂದಿರೊಡನೆ ಕೂಡಿದ, ನಾರಿಯರು ಆ ಜಾಗದಲ್ಲಿ ಕಮಲಾಪತಿಯಾದ ನಾರಾಯಣನನ್ನು ಪೂಜಿಸುತ್ತಿರುವನು.

ತತ್ಪ್ರಸಾದೋಪಲಬ್ಧಂ ವೈ ಸುಖಮಶ್ನಂತಿ ಸರ್ವದಾ ।
ಗಾಯಂತಿ ಪತಿಭಿಸ್ಸಾರ್ಧಂ ಕೃಷ್ಣಸ್ಯ ಚರಿತಂ ಮಹತ್ ॥ ೮೯ ॥

ಪದ್ಮೇಕ್ಷಣಾಃ ಪದ್ಮಹಸ್ತಾಃ ಪದ್ಮಯಾ ಸದೃಶಾಶ್ಶುಭಾಃ ।
ದಿವ್ಯಸ್ರಗ್ವಸನೋಪೇತಾಃ ಕ್ರೀಡಂತಿ ಸ್ಮ ಸುಯೋಷಿತಃ ॥ ೯೦ ॥

ಶಂಖಚಕ್ರಗದಾಪದ್ಮಧರಾಃ ಭೂಷಣಭೂಷಿತಾಃ ।
ಸ್ರಗ್ವಿಣಃ ಪೀತವಸನಾಃ ಪುರುಷಾಸ್ತತ್ರ ಸಂಸ್ಥಿತಾಃ ॥ ೯೧ ॥

ಅನ್ಯೋನ್ಯಸ್ಪರ್ಶನಾತ್ತತ್ರ ಸ್ತ್ರೀಪುಂಸೋಃ ಕ್ರೀಡಮಾನಯೋಃ ।
ತಾವತ್ತಾವತ್ಪ್ರವರ್ಧೇತ ಹರಿಭಕ್ತಿಸುಖಂ ರಸಂ ॥ ೯೨ ॥

---

೮೯. ಆ ಸ್ವಾಮಿಯ ಪ್ರಸಾದದಿಂದ ಹೊಂದಿದ ಸುಖವನ್ನು ಅವರು ಯಾವಾಗಲೂ ಅನುಭವಿಸುತ್ತಿರುವವರು. ಅವರು ಗಂಡಂದಿರೊಡನೆ ಆ ಸ್ವಾಮಿಯ ಚರಿತ್ರೆಯನ್ನು ಗಾನಮಾಡುತ್ತಿರುತ್ತಾರೆ.

೯೦. ಅಲ್ಲಿರುವ ಹೆಂಗಸರು ಪದ್ಮದಂತೆ ಕಣ್ಣುಳ್ಳವರು. ಪದ್ಮದಂತೆ ಕೈಯುಳ್ಳವರು. ಲಕ್ಷ್ಮಿಯಂತೆ ಸುಂದರಿಯರು. ಮಂಗಳಕರರು. ಉತ್ತಮ ವಾದ ಮಾಲೆಬಟ್ಟೆಗಳನ್ನು ಹಾಕಿಕೊಂಡಿರುವರು. ಇಂತಹ ಉತ್ತಮವಾದ ಹೆಂಗಸರು ಅಲ್ಲಿ ಕ್ರೀಡಿಸುತ್ತಿರುವರು.

೯೧. ಅಲ್ಲಿರುವ ಗಂಡಸರು ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿ ರುವರು. ಒಳ್ಳೆಯ ಒಡವೆಗಳನ್ನು ಹಾಕಿಕೊಂಡಿರುವರು. ಮಾಲೆಯನ್ನು ಹಾಕಿಕೊಂಡಿರುವರು. ಹೊಂಬಣ್ಣದ ಬಟ್ಟೆಯನ್ನು ಹೊದ್ದಿರುವರು.

೯೨. ಅಲ್ಲಿರುವ ಹೆಂಗಸರು ಗಂಡಸರು ಕ್ರೀಡಿಸುತ್ತ ಒಬ್ಬರಿಗೊಬ್ಬರು ಮುಟ್ಟಿದಾಗ ಆ ಮುಟ್ಟಿದಷ್ಟೂ ಹರಿಭಕ್ತಿರಸವು ಹೆಚ್ಚುವುದು. ಅದರಿಂದ ಅಧಿಕ ವಾದ ಸುಖವೂ ಉಂಟಾಗುವುದು.

ತನ್ಮಧ್ಯೇಽನ್ತಃಪುರಂ ರಮ್ಯಂ ವಾಸುದೇವಸ್ಯ ಶೋಭಿತಂ ।
ಚಂದನಾಗರುಕರ್ಪೂರಕುಂಕುಮಾಮೋದಸಂಯುತಂ ॥ ೯೩ ॥

ನಾನಾಪುಷ್ಪವಿತಾನಾಢ್ಯೈಃ ಸರ್ವತಃ ಸಮಲಂಕೃತಂ ।
ತನ್ಮಧ್ಯೇ ಕಲ್ಪವೃಕ್ಷಸ್ಯ ಛಾಯಾಯಾಂ ಕಮಲಾಸನೇ ॥ ೯೪ ॥

ವಿಚಿತ್ರಶ್ಲಕ್ಷ್ಣಪರ್ಯಂಕೇ ಶುಭಾಸ್ತರಣಸಂವೃತೇ ।
ದಿವ್ಯಗಂಧಸುಶೋಭಾಢ್ಯೈಃ ನಾನಾಪುಷ್ಪಪರಿಚ್ಛದೈಃ ॥ ೯೫ ॥

ತಸ್ಮಿನ್ಮನೋರಮೇ ದಿವ್ಯೇ ಸಮಾಸೀನಃ ಶ್ರಿಯಾ ಸಹ ।
ಈಶ್ವರ್ಯಾ ಸಹ ದೇವೇಶೋ ವಾಸುದೇವಃ ಸನಾತನಃ ॥ ೯೬ ॥

ಸುಧಾಂಶುಕೋಟಿಸಂಕಾಶೋ ದಿವ್ಯಾಭರಣಭೂಷಿತಃ ।
ಸುವರ್ಣಸುಭ್ರೂಯುಗಳಶ್ಲಕ್ಷ್ಣನಾಸಾಂಚಿತಾನನಃ ॥ ೯೭ ॥

---

೯೩–೯೮. ಆ ಊರಿನ ಮಧ್ಯದಲ್ಲಿ ವಾಸುದೇವನ ಅಂತಃಪುರವು ಇರುವುದು. ಅದು ಬಹುರಮ್ಯವಾಗಿರುವುದು. ಅಲಂಕೃತವಾಗಿರುವುದು. ಚಂದನ, ಗುರು, ಕರ್ಪೂರ, ಕುಂಕುಮಕೇಸರಿಗಳ ವಾಸನೆಯಿಂದ ಘಮಘಮಿಸುತ್ತಿರುವುದು. ಅನೇಕವಾದ ಹೂಗಳ ಮೇಲುಕಟ್ಟನ್ನು ಕಟ್ಟಿ ಅಲಂಕರಿಸಿರುವರು. ಅದರ ಮಧ್ಯದಲ್ಲಿ ಒಂದು ಕಲ್ಪವೃಕ್ಷವಿರುವುದು. ಅದರ ನೆರಳಿನಲ್ಲಿ ಕಮಲದ ಹೂವಿನಲ್ಲಿ ಚಿತ್ರಿತವಾದ ನುಣುಪಾದ ಒಳ್ಳೆಯ ಮಗ್ಗಿನ ಹಾಸಿಗೆಯನ್ನು ಹಾಸಿರುವ ಉತ್ತಮವಾದ ಗಂಧದಿಂದ ಕೂಡಿರುವ ಹೂಗಳನ್ನು ಹಾಕಿರುವ ಮನೋಹರವಾದ ಮಂಚದ ಮೇಲೆ ಲಕ್ಷ್ಮಿಯೊಡನೆ ಈ ನಾರಾಯಣನು ಕುಳಿತಿರುವನು. ದೇವದೇವನಾದ ಸನಾತನನಾದ ವಾಸುದೇವನು ಆ ಲಕ್ಷ್ಮಿಯೊಡನೆ ಕುಳಿತಿರುವನು. ಅವನು ಕೋಟಿ ಜನಚಂದ್ರರಂತೆ ಪ್ರಕಾಶಮಾನವಾಗಿ ದಿವ್ಯವಾದ ಆಭರಣಗಳನ್ನು ಧರಿಸಿರುವನು. ಚೆನ್ನಾಗಿರುವ ಬಣ್ಣವುಳ್ಳ ನುಣುಪಾಗಿರುವ ಎರಡು ಹುಬ್ಬುಗಳುಳ್ಳವನು. ನುಣುಪಾಗಿರುವ ಮೂಗುಳ್ಳವನು.

ಸ್ನಿಗ್ಧಾಯತಸುಲಾವಣ್ಯಕಪೋಲಾಭ್ಯಾಂ ವಿರಾಜಿತಃ |
ನೀಲಕುಂಚಿತಕೇಶಾಢ್ಯೋ ರಕ್ತಾಬ್ಜದಳಲೋಚನಃ ॥ ೯೮ ॥

ಮಂದಾರಕೇತಕೀಜಾತೀಕಬರೀಕೃತಕೇಶವಾನ್ |
ಸ್ನಿಗ್ಧಬಿಂಬಫಲಾಭೌಷ್ಠಃ ಸುಸ್ಮಿತಾನನಪಂಕಜಃ ॥ ೯೯ ॥

ಅನರ್ಘ್ಯಮೌಕ್ತಿಕಾಭಾಸದಂತಾವಳಿವಿರಾಜಿತಃ |
ಹರಿಚಂದನಲಿಪ್ತಾಂಗಃ ಕಸ್ತೂರೀತಿಲಕಾಂಕಿತಃ ॥ ೧೦೦ ॥

ಉನ್ನತಾಂಶುಭುಜೈರ್ದೀರ್ಘೈಶ್ಚತುರ್ಭಿರುಪಶೋಭಿತಃ |
ಜಪಾಕುಸುಮಸಂಕಾಶಕರಪಲ್ಲವಶೋಭಿತಃ ॥ ೧೦೧ ॥

ಸ್ಫುರತ್ಕೇಯೂರಕಟಕೈರಂಗುಲೀಯೈಶ್ಚ ಶೋಭಿತಃ |
ಶ್ರೀವತ್ಸಕೌಸ್ತುಭಾಭ್ಯಾಂ ಚ ಶೋಭಿತಃ ಪೃಥುವಕ್ಷಸಾ ॥ ೧೦೨ ॥

---

ನುಣುಪಾಗಿಯೂ ಅಗಲವಾಗಿಯೂ ಹೊಳಪಾಗಿಯೂ ಇರುವ ಕಪೋಲಗಳಿರುವುವು. ಕಪ್ಪಗೂ ಗುಂಗುರು ಗುಂಗುರಾಗಿಯೂ ಇರುವ ಕೂದಲುಗಳುಳ್ಳವನು. ಕೆಂದಾವರೆಯಂತೆ ಕಣ್ಣುಳ್ಳವನು.

೯೯–೧೦೧. ಪಾರಿಜಾತ, ತಾಳೆ, ಜಾಜಿ ಹೂಗಳನ್ನು ತುರುಬಿಗೆ ಮುಡಿದುಕೊಂಡಿರುವನು. ಚೆನ್ನಾಗಿರುವ ತೊಂಡೆಯ ಹಣ್ಣಿನಂತಿರುವ ತುಟಿಗಳುಳ್ಳವನು. ಮುಗುಳು ನಗೆಯಿಂದ ಕೂಡಿರುವನು. ಉತ್ತಮವಾದ ಮುತ್ತಿನಕಾಂತಿಯಂತೆ ಕಾಂತಿಯುಳ್ಳ ಹಲ್ಲುಗಳ ಸಾಲುಗಳಿರುವುವು. ಮೈಗೆಲ್ಲವೂ ಹರಿಚಂದನವನ್ನು ಬಳಿದುಕೊಂಡಿರುವನು. ಹಣೆಗೆ ಕಸ್ತೂರಿಯ ತಿಲಕವನ್ನಿಟ್ಟುಕೊಂಡಿರುವನು. ಎತ್ತರವಾಗಿರುವ ಕಾಂತಿಮತ್ತಾದ ನಾಲ್ಕು ಭುಜಗಳಿಂದ ಕೂಡಿಕೊಂಡಿರುವನು. ಕೆಂಪುದಾಸವಾಳದ ಹೂವಿನಂತಿರುವ ಕೈಗಳಿರುವುವು.

೧೦೨. ಕಾಂತಿಯಿಂದ ಕೂಡಿದ ಭುಜಕೀರ್ತಿಗಳನ್ನೂ, ಕೈಬಳೆಗಳನ್ನೂ, ಉಂಗುರಗಳನ್ನೂ ಹಾಕಿಕೊಂಡಿರುವನು. ಶ್ರೀವತ್ಸವೆಂಬ ಮಚ್ಚೆಯಿಂದಲೂ ಕೌಸ್ತುಭಮಣಿಯಿಂದಲೂ ಅವನ ಎದೆಯು ಪ್ರಕಾಶಿಸುತ್ತಿರುವುದು.

ಮುಕ್ತಾಮಯಸುಶೋಭಾಢ್ಯದಿವ್ಯಸ್ರಗ್ಭಿರಲಂಕೃತಃ ।
ಬಾಲಾರ್ಕಸದೃಶಜ್ಯೋತ್ಸ್ನಾಪೀತವಸ್ತ್ರೇಣ ವೇಷ್ಟಿತಃ ॥ ೧೦೩ ॥

ಮಾಣಿಕ್ಯನೂಪುರೋಪೇತಪದಪದ್ಮವಿರಾಜಿತಃ ।
ಅಕಲಂಕಿತಚಂದ್ರಾಭನಖಪಂಕ್ತಿವಿರಾಜಿತಃ ॥ ೧೦೪ ॥

ರಕ್ತೋತ್ಪಲನಿಭಶ್ಲಕ್ಷ್ಣಶುಭಾಂಘ್ರಿಯುಗಪಂಕಜಃ ।
ಪಾಂಚಜನ್ಯರಥಾಂಗಾಭ್ಯಾಂ ಬಾಹುಯುಗ್ಮೇ ವಿರಾಜಿತಃ ॥ ೧೦೫ ॥

ಇತರಾಭ್ಯಾಂ ಶ್ರಿಯೋಗಾತ್ರಮಾಶ್ಲಿಷ್ಯ ನಿಜವಕ್ಷಸಿ ।
ಸ್ಪೃಶದ್ವಿದ್ಯುಲ್ಲತಾಕ್ರಾನ್ತಾ ಸಿತಾಭ್ರಮಿವ ರಾಜತೇ ॥ ೧೦೬ ॥

ತಪ್ತಜಾಂಬೂನದಶ್ಲಕ್ಷ್ಣಶುಭಾಂಘ್ರಿಯುಗಪಂಕಜಃ ।
ಅತ್ರ ಕ್ರೀಡತಿ ದೇವೇಶೋ ವಾಸುದೇವಃ ಸನಾತನಃ ॥ ೧೦೭ ॥

---

೧೦೩-೧೦೪. ಮುತ್ತಿನಂತೆ ಇರುವ ಹೂಗಳಿಂದಲೂ, ಮುತ್ತುಗಳಿಂದಲೂ ಕೂಡಿರುವ ಹಾರದಿಂದಲೂ ಅಲಂಕೃತನಾಗಿದ್ದಾನೆ. ಬೆಳಗಿನ ಸೂರ್ಯನಂತೆಯೂ ಬೆಳದಿಂಗಳಿನ ಕಾಂತಿಯಂತೆಯೂ ಇರುವ ವಸ್ತ್ರಗಳನ್ನು ಹೊದ್ದಿರುವನು. ಮಾಣಿಕ್ಯದ ಮಣಿಗಳನ್ನು ಹಾಕಿರುವ ಕಾಲುಬಳೆಯನ್ನು ಕಾಲಿಗೆ ಹಾಕಿಕೊಂಡಿ ರುವನು. ಕಳಂಕವಿಲ್ಲದ ಪೂರ್ಣಚಂದ್ರನಂತೆ ಕಾಂತಿಯುಳ್ಳ ಉಗುರುಗಳಿಂದ ಪ್ರಕಾಶಿಸುತ್ತಿರುವನು.

೧೦೫. ಕೆಂದಾವರೆಯಂತೆ ಇರುವ, ನುಣುಪಾದ, ಕಾಂತಿಯಿಂದ ಕೂಡಿದ, ಪಾದಗಳಿಂದ ಕೂಡಿರುವನು. ಶಂಖಚಕ್ರಗಳನ್ನು ಹಿಡಿದಿರುವ ತೋಳು ಗಳಿಂದ ಕೂಡಿರುವನು.

೧೦೬. ಮತ್ತೆರಡು ತೋಳುಗಳಿಂದ ಲಕ್ಷ್ಮಿಯನ್ನು ಎದೆಗೆ ಸೇರಿಸಿಕೊಂಡು ಹಿಡಿದುಕೊಂಡಿರುವನು. ಇದನ್ನು ನೋಡಿದರೆ ಮಿಂಚು ಕಪ್ಪುಮೋಡವನ್ನು ಆಲಿಂಗಿಸಿಕೊಂಡಂತೆ ಕಾಣುತ್ತದೆ.

೧೦೭. ಅವನ ಪಾದಗಳು ಪುಟಕ್ಕೆ ಹಾಕಿದ ಚಿನ್ನದಂತೆ ಇರುತ್ತವೆ. ಇಂತಹ ಸನಾತನನಾದ ವಾಸುದೇವನು ಈ ಜಾಗದಲ್ಲಿ ಕ್ರೀಡಿಸುವನು.

ತಪ್ತಕಾಂಚನಸಂಕಾಶಾ ಸರ್ವಾಭರಣಭೂಷಿತಾ ।
ಸುಸ್ನಿಗ್ಧನೀಲಕುಟಿಲಾಲಕರಾಜಿವಿರಾಜಿತಾ || ೧೦೮ ||

ಮಂದಾರಪಾರಿಜಾತಾದಿದಿವ್ಯಪುಷ್ಪವಿರಾಜಿತಾ ।
ರತ್ನಾವತಂಸಶೋಭಾಢ್ಯಾ ಚಿಕುರಾಂತಾಳಿಸನ್ನಿಭಾ ॥ ೧೦೯ ॥

ಪೀನೋನ್ನತಸ್ತನಾಭ್ಯಾಂ ಚ ಪೀಡಂತೀ ಹರಿವಕ್ಷಸಿ ।
ಕೇಯೂರಾಂಗದಹಾರಾದ್ಯೈಃ ಭೂಷಣೈರುಪಶೋಭಿತಾ || ೧೧೦ ||

ಆರೂಢಯೌವನಾ ನಿತ್ಯಂ ಸರ್ವಲೋಕೈಕರಕ್ಷಣೀ ।
ತತ್ರ ಕ್ರೀಡತಿ ಲೋಕೇಶೀ ಪತ್ಯಾ ಸಹ ನಿರಂತರಾ ॥ ೧೧೧ ॥

---

೧೦೮. ಲಕ್ಷ್ಮಿಯು ಪುಟಕ್ಕೆ ಹಾಕಿದ ಚಿನ್ನದಂತೆ ಇರುವಳು. ಎಲ್ಲಾ ಬಗೆಯ ಒಡವೆಗಳನ್ನೂ ಹಾಕಿಕೊಂಡಿರುವಳು. ನುಣುಪಾಗಿಯೂ ವಕ್ರವಕ್ರವಾಗಿಯೂ ಇರುವ ಮುಂಗುರುಳಿನಿಂದ ಪ್ರಕಾಶಿಸುತ್ತಿರುವಳು.

೧೦೯. ಮಂದಾರ, ಪಾರಿಜಾತ ಮುಂತಾದ ದಿವ್ಯವಾದ ಹೂಗಳನ್ನು ಮುಡಿದುಕೊಂಡಿರುವಳು. ರತ್ನದ ಶಿರೋಭೂಷಣವುಳ್ಳವಳು. ದುಂಬಿಯಂತೆ ಕಪ್ಪಗಿರುವ ಮುಂಗುರುಳುಗಳು ಜೋಲಾಡುತ್ತಿರುವುವು.

೧೧೦. ದಪ್ಪವಾಗಿಯೂ ಮೇಲಕ್ಕೆ ಎದ್ದುಕೊಂಡೂ ಇರುವ ಸ್ತನಗಳನ್ನು ಹೊಂದಿ ಹರಿಯ ಎದೆಯನ್ನು ಅಮುಕಿರುವಳು. ಭುಜಕೀರ್ತಿ ಕಂಠಾಭರಣಗಳನ್ನೂ ಮತ್ತೆ ಅನೇಕ ಒಡವೆಗಳನ್ನೂ ಹಾಕಿಕೊಂಡಿರುವಳು.

೧೧೧. ಯಾವಾಗಲೂ ಯೌವನವು ಹೆಚ್ಚುತ್ತಲೇ ಇರುವುದು. ಆಕೆಯು ಎಲ್ಲಾ ಲೋಕವನ್ನೂ ಕಾಪಾಡತಕ್ಕವಳು. ಇಂತಹ ಹೆಂಡತಿಯು ಈ ವಿಷ್ಣುವಿನೊಡನೆ ಯಾವಾಗಲೂ ಕ್ರೀಡಿಸುತ್ತಿರುವಳು.

ಸ ಏವಂ ವಾಸುದೇವೋತ್ರ ಸರ್ವಭೂತಮನೋಹರಃ |
ಕ್ರೀಡತೇ ಸರ್ವಲೋಕೇಸ್ಮಿನ್ ಸರ್ವಕಾಮಪ್ರದೋ ನೃಣಾಂ ॥ ೧೧೨ ॥

ಅತ್ರಾಷ್ಟಶಕ್ತಯೋ ಲಕ್ಷ್ಮ್ಯಾಸ್ತನವಃ ಪರಿತಃ ಸ್ಥಿತಾಃ |
ರಮಾ ಚ ರುಕ್ಮಿಣೀ ಸೀತಾ ಪದ್ಮಾ ಪದ್ಮಾಲಯಾ ಶಿವಾ ॥ ೧೧೩ ॥

ಸುಲಕ್ಷಣಾ ಸುಶೀಲಾ ಚ ರತಿಕಾಮಪ್ರದಾ ತಥಾ |
ಶಂಖಚಕ್ರಗದಾಖಡ್ಗಶಾಂಗಾರ್ದ್ಯೈರ್ಹೇತಿಭಿಸ್ತಥಾ ॥ ೧೧೪ ॥

ಪರಿತಃ ಪುರುಷಾಕಾರೈಸ್ತಂ ಲೋಕಂ ಪರಿರಕ್ಷತಿ ।
ಏವಂ ದ್ವಿತೀಯೋ ವ್ಯೂಹಶ್ಚ ಸಂಪ್ರೋಕ್ತಃ ಶುಭದರ್ಶನೇ ॥ ೧೧೫ ॥

ಸಂಕ್ಷೇಪತೋ ಮಯಾ ಪ್ರೋಕ್ತಂ ನ ಶಕ್ಯಂ ವಿಸ್ತರೇಣ ಹಿ ।
ದ್ವಾದಶಾಕ್ಷರಮಂತ್ರಂ ವೈ ಯೇ ಜಪನ್ತಿ ಸುಖಾಹ್ವಯಂ ॥ ೧೧೬ ॥

---

೧೧೨. ಸರ್ವಪ್ರಾಣಿಗಳಿಗೂ ಮನೋಹರವಾದ ಆ ವಾಸುದೇವನು ಇಲ್ಲಿರುವನು. ಎಲ್ಲರಿಗೂ ಬೇಕಾದ ಇಷ್ಟಗಳನ್ನು ಪೂರ್ತಿಮಾಡುತ್ತ ಈ ಜಾಗದಲ್ಲಿ ಕ್ರೀಡಿಸುವನು.

೧೧೩-೧೧೫. ಪ್ರಸಿದ್ಧವಾದ ಅಷ್ಟಶಕ್ತಿಗಳು ಈ ಲಕ್ಷ್ಮಿಯ ದೇಹದ ಸುತ್ತಲೂ ಇರುವರು. ರಮೆ, ರುಕ್ಷ್ಮಿಣಿ, ಸೀತೆ, ಪದ್ಮೆ, ಪದ್ಮಾಲಯೆ, ಶಿವೆ, ಸುಲಕ್ಷಣೆ, ಸುಶೀಲೆ, ರತಿಕಾಮಪ್ರದೆ, ಇವರೆಲ್ಲರೂ ಅಲ್ಲಿರುವರು. ಶಂಖ, ಚಕ್ರ, ಗದೆ, ಖಡ್ಗ, ಶಾಂರ್ಗ, ಇವು ಪುರುಷಾಕಾರವನ್ನು ಹೊಂದಿ ಆ ಲೋಕವನ್ನು ಸುತ್ತಲೂ ಕಾಪಾಡುತ್ತಿರುವುವು. ಈ ರೀತಿಯಾಗಿ ಎರಡನೆಯ ವ್ಯೂಹವನ್ನು ನಿನಗೆ ವಿವರಿಸಿದ್ದೇನೆ.

೧೧೬. ಇದನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ವಿಸ್ತಾರವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಸುಖಮಂತ್ರವೆಂದು ಹೆಸರನ್ನು ಹೊಂದಿರುವ ದ್ವಾದಶಾಕ್ಷರ ಮಂತ್ರವನ್ನು ಜಪಿಸುವವರು ಶಾಶ್ವತವಾದ ಶುಭವಾದ ಅಕ್ಷಯವಾದ ಈ ಲೋಕವನ್ನು ಹೊಂದುತ್ತಾರೆ.

ತೇ ಪ್ರಾಪ್ನುವಂತಿ ಸತತಂ ಶಾತ್ವತಂ ಶುಭಮಕ್ಷಯಂ ।
ನ ವೇದಯಜ್ಞಾಧ್ಯಯನೈರ್ನ ವ್ರತೈರ್ನೋಪವಾಸನೈಃ ॥ ೧೧೭ ॥

ಪ್ರಾಪ್ಯತೇ ವೈಷ್ಣವೋ ಲೋಕೋ ವಿನಾ ದಾಸ್ಯೇನ ಕುತ್ರಚಿತ್ ।
ತಸ್ಮಾದ್ದಾಸ್ಯಂ ಹರೇರ್ಭಕ್ತಿಂ ಭಜೇತಾನನ್ಯಮಾನಸಃ ॥ ೧೧೮ ॥

ಪ್ರಾಪ್ನೋತಿ ಪರಮಾಂ ಸಿದ್ಧಿಂ ಕರ್ಮಬಂಧವಿಮೋಚನೀಂ ।
ಏವಂ ಸಂಪ್ರೋಚ್ಯತೇ ದೇವಿ ದ್ವಿತೀಯಂ ವ್ಯೂಹಮವ್ಯಯಂ ॥ ೧೧೯ ॥

ತೃತೀಯಂ ತು ಪರಂ ವ್ಯೂಹಂ ಶೃಣು ವಕ್ಷ್ಯಾಮಿ ಪಾರ್ವತಿ ।
ತೋಯಾಬ್ಧೇರುತ್ತರಂ ಕೂಲಂ ಶ್ವೇತದ್ವೀಪಮಿಹೋಚ್ಯತೇ ॥ ೧೨೦ ॥

ಸಂದರ್ಶನಾಯ ಯೋಗೀನಾಂ ಸನಕಾದಿಮಹಾತ್ಮನಾಂ ।
ಸನಕಶ್ಚ ಸನಂದಶ್ಚ ತೃತೀಯಶ್ಚ ಸನಾತನಃ ॥ ೧೨೧ ॥

---

೧೧೭-೧೧೮. ವೇದದಿಂದಾಗಲಿ, ವ್ರತದಿಂದಾಗಲಿ, ಉಪವಾಸದಿಂದಾಗಲಿ ಏನುಮಾಡಿದರೂ ಆ ವೈಷ್ಣವಲೋಕವು ಸಿಕ್ಕುವುದಿಲ್ಲ ದಾಸ್ಯವೊಂದರಿಂದಲೇ ಈ ವೈಷ್ಣವಲೋಕವು ಸಿಕ್ಕುವುದು. ಆದ್ದರಿಂದ ಮತ್ತೊಂದನ್ನು ಸ್ಮರಿಸದ ಮನಸ್ಸುಳ್ಳವನಾಗಿ ಹರಿಯಲ್ಲಿ ಭಕ್ತಿಯನ್ನು ಮಾಡುತ್ತ ಅವನಲ್ಲಿ ದಾಸ್ಯವನ್ನು ಮಾಡಬೇಕು.

೧೧೯. ಈ ರೀತಿಯಾಗಿರುವವನು ಕರ್ಮಬಂಧವನ್ನು ನಾಶಮಾಡುವ ಉತ್ತಮಸಿದ್ಧಿಯನ್ನು ಹೊಂದುತ್ತಾನೆ. ಹೀಗೆ ಎರಡನೆಯ ವ್ಯೂಹವು ಹೇಳಲ್ಪಟ್ಟಿದೆ. ಅದು ನಾಶರಹಿತವಾದುದು.

೧೨೦. ಎಲೈ ಪಾರ್ವತಿಯೆ! ಮೂರನೆಯ ವ್ಯೂಹದ ಲಕ್ಷಣವನ್ನು ಹೇಳುತ್ತೇನೆ. ಕೇಳು ಕ್ಷೀರಸಮುದ್ರದ ಉತ್ತರದ ದಡವನ್ನೇ ಶ್ವೇತದ್ವೀಪವೆಂದು ಹೇಳುತ್ತಾರೆ.

೧೨೧-೧೨೨. ಇಲ್ಲಿ ಮಹಾತ್ಮರಾದ ಸನಕಾದಿಯೋಗಿಗಳನ್ನು ನೋಡಬಹುದು. ಸನಕ, ಸನಂದ, ಸನಾತನ, ಸನತ್ಕುಮಾರ, ಸನತ್ಸುಜಾತ, ವೋಢಾ,

ಸನತ್ಕುಮಾರೋ ಜಾತಶ್ಚ ವೋಢುಃ ಪಂಚಶಿಖಸ್ತಥಾ ।
ಸಪ್ತೈತೇ ಬ್ರಹ್ಮಣಃ ಪುತ್ರಾಃ ಯೋಗಿನಃ ಸುಮಹೌಜಸಃ ॥ ೧೨೨ ॥

ವಿರಕ್ತಾಃ ಸರ್ವಭೋಗೇಷು ಶುದ್ಧಸತ್ವಗುಣಾಸ್ಸದಾ ।
ಭಗವದ್ದರ್ಶನೋದ್ಭೂತಸುಖೈಕರಸಸೇವಿನಃ ॥ ೧೨೩ ॥

ನರನಾರಾಯಣಾಭ್ಯಾಂ ಚ ಶ್ವೇತದ್ವಿಪೇ ವಸಂತಿ ತೇ ।
ತೇಷಾಂ ಸಂದರ್ಶನಾರ್ಥಾಯ ತತ್ರ ಸನ್ನಿಹಿತೋ ಹರಿಃ ॥ ೧೨೪ ॥

ಸುಧಾಂಶುಕೋಟಿಸಂಕಾಶೇ ನಾನಾರತ್ನಮಯೋಜ್ಜ್ವಲೇ ।
ಶ್ವೇತದ್ವೀಪೇ ಮಹಾಯೋಗಿಸೇವಿತೇ ಹೇಯವರ್ಜಿತೇ ॥ ೧೨೫ ॥

ತತ್ರೋದ್ಯಾನಾನಿ ರಮ್ಯಾಣಿ ಪಾರಿಜಾತಸಮಾನಿ ವೈ ।
ಸಂತಾನಕಲತಾಕೀರ್ಣೇ ಚಂದನದ್ರುಮಮಂಡಿತೇ ॥ ೧೨೬ ॥

---

ಪಂಚಶಿಖ ಎಂಬವರು ಏಳುಜನ ಯೋಗಿಗಳು. ಬ್ರಹ್ಮನ ಮಕ್ಕಳು. ಒಳ್ಳೆಯ ತೇಜಸ್ವಿಗಳು.

೧೨೩. ಅವರುಗಳು ಎಲ್ಲಾ ಸುಖಭೋಗಗಳಲ್ಲಿಯೂ ವೈರಾಗ್ಯವನ್ನು ಹೊಂದಿದ್ದಾರೆ. ಶುದ್ಧ ಸತ್ವಗುಣವೊಂದರಿಂದಲೇ ಕೂಡಿದ್ದಾರೆ. ಭಗವಂತನ ದರ್ಶನವೆಂಬ ಸುಖದಲ್ಲಿಯೇ ಆಸಕ್ತರಾಗಿ ಅದೊಂದನ್ನೇ ಸೇವಿಸುತ್ತಿರುವರು.

೧೨೪. ನರನಾರಾಯಣರೊಡನೆ ಅವರು ಆ ಶ್ವೇತದ್ವೀಪದಲ್ಲಿ ವಾಸವಾಗಿದ್ದಾರೆ. ಅವರಿಗೆ ದರ್ಶನ ಕೊಡುವುದಕ್ಕೋಸ್ಕರವೇ ಹರಿಯು ಅಲ್ಲಿ ಇದ್ದುಕೊಂಡಿರುವನು.

೧೨೫–೧೨೬. ಆ ಶ್ವೇತದ್ವೀಪವು ಅನೇಕ ಕೋಟಿ ಚಂದ್ರರಂತೆ ಪ್ರಕಾಶವಾಗಿರುವುದು. ಅನೇಕ ರತ್ನಗಳಿಂದ ಕೂಡಿರುವುದು. ಕೆಟ್ಟ ಪದಾರ್ಥಗಳು ಯಾವುವೂ ಇಲ್ಲ. ಮಹಾ ಯೋಗಿಗಳೇ ಅಲ್ಲಿ ಇದ್ದುಕೊಂಡಿರುವರು. ಈ ರೀತಿಯಿರುವ ಈ ದ್ವೀಪದಲ್ಲಿ ಅನೇಕ ರಮ್ಯವಾದ ಉದ್ಯಾನಗಳಿರುವುವು. ಅಲ್ಲಿರುವ ಮರಗಳೆಲ್ಲವೂ ಪಾರಿಜಾತ ಮರಕ್ಕೆ ಸಮಾನವಾದುವು. ಸಂತಾನಕಮರದ ಬಳ್ಳಿಗಳೇ ಎಲ್ಲಾ ಕಡೆಯಲ್ಲೂ ಹರಡಿಕೊಂಡಿವೆ. ಚಂದನದ ಮರಗಳು ಅನೇಕವಾಗಿವೆ.

**ಫುಲ್ಲಪದ್ಮೋತ್ಪಲೋಪೇತೇ ನಾನಾತೋಯಾಲಯೈರ್ಯುತೇ ।**
**ತನ್ಮಧ್ಯೇ ನಗರೀ ರಮ್ಯಾ ನಾಮ್ನಾ ಚೈರಾವತೀ ಶುಭಾ ॥ ೧೨೭ ॥**

**ನಾನಾರತ್ನಮಯೈರ್ದಿವ್ಯೈರ್ವಿಮಾನೈರುಪಶೋಭಿತಾ ।**
**ದಿವ್ಯಸ್ತ್ರೀಪುಂಭಿರಾಕ್ರಾನ್ತಾ ಬಹುಪ್ರಾಸಾದಸಂಕುಲಾ ॥ ೧೨೮ ॥**

**ತನ್ಮಧ್ಯೇಂತಃಪುರಂ ರಮ್ಯಂ ರತ್ನದ್ರುಮಸಮಾಕುಲಂ ।**
**ಬಾಲಸೂರ್ಯನಿಭೈಸ್ತುಂಗೈಃ ಪ್ರಾಸಾದೈರ್ಬಹುಭಿರ್ವೃತಂ ॥ ೧೨೯ ॥**

**ತನ್ಮಧ್ಯೇ ಮಂಡಪಂ ದಿವ್ಯಂ ಮಣಿಕಾಂಚನಶೋಭಿತಂ ।**
**ಚಂದನಾಗರುಕರ್ಪೂರಕುಂಕುಮಾಮೋದಶೋಭಿತಂ ॥ ೧೩೦ ॥**

---

ಅಲ್ಲಿರುವ ಕೊಳಗಳಲ್ಲಿ ಕಮಲಗಳು ಯಾವಾಗಲೂ ಅರಳಿಕೊಂಡಿರುತ್ತವೆ. ಕನ್ನೈದಿಲೆಗಳೂ ಬಹುವಾಗಿವೆ. ನೀರಿನ ಕೊಳಗಳು ಎಲ್ಲಾ ಕಡೆಯಲ್ಲೂ ಮನೋಹರವಾಗಿದ್ದುಕೊಂಡಿವೆ. ಇದರ ಮಧ್ಯದಲ್ಲಿ ಐರಾವತೀ ಎಂಬ ಮನೋಹರವಾದ ಒಂದು ಪಟ್ಟಣವಿದೆ.

೧೨೮-೧೨೯. ಆ ಪಟ್ಟಣದಲ್ಲಿ ಅನೇಕ ರತ್ನಖಚಿತವಾದ ದೊಡ್ಡ ದೊಡ್ಡ ಮನೆಗಳು ಇವೆ. ಅವುಗಳಲ್ಲಿ ಅನೇಕ ಮಹಡಿಗಳು ಇವೆ. ಅಲ್ಲಿ ಉತ್ತಮರಾದ ಹೆಂಗಸರು ಗಂಡಸರು ವಾಸಮಾಡಿಕೊಂಡಿದ್ದಾರೆ. ಅದರ ಮಧ್ಯದಲ್ಲಿ ಅಂತಃಪುರವೊಂದು ಬಹು ಮನೋಹರವಾಗಿದೆ. ರತ್ನದಿಂದ ಕೂಡಿರುವ ಮರಗಳೇ ಅಲ್ಲಿವೆ. ಬೆಳಗಿನ ಸೂರ್ಯನಂತಿರುವ ಎತ್ತರವಾದ ಅನೇಕವಾದ ಅರಮನೆಗಳು ತುಂಬಿವೆ.

೧೩೦-೧೩೧. ಅದರ ಮಧ್ಯದಲ್ಲಿ ಒಂದು ಮನೋಹರವಾದ ಮಂಟಪ ಇದೆ. ರತ್ನಗಳಿಂದಲೂ ಚಿನ್ನದಿಂದಲೂ ಕೂಡಿಕೊಂಡು ಪ್ರಕಾಶಿಸುತ್ತಿರುವುದು. ಚಂದನ, ಅಗುರು, ಕರ್ಪೂರ, ಕುಂಕುಮಕೇಸರಿಗಳ ಸುವಾಸನೆಯಿಂದ ಕೂಡಿದೆ.

ನಾನಾಸುಮನಶ್ಶ್ಯೋಭಾಢ್ಯೈರ್ವಿತಾನೈಸ್ಸಮಲಂಕೃತಂ |
ದಿವ್ಯಾಪ್ಸರಸ್ಸಮಾಕೀರ್ಣಂ ಸಾಮಗಾನೋಪಶೋಭಿತಂ ॥ ೧೩೧ ॥

ಮಧ್ಯೇ ಸಿಂಹಾಸನಂ ತತ್ರ ಸೂರ್ಯವೈಶ್ವಾನರಪ್ರಭಂ |
ತನ್ಮಧ್ಯೇಷ್ಟದಳಂ ಪದ್ಮಂ ಚಂದ್ರಬಿಂದಮಿವಾಪರಂ ॥ ೧೩೨ ॥

ತನ್ಮಧ್ಯೇ ಕರ್ಣಿಕಾಯಾಂ ತು ಸಮಾಸೀನೋ ಜನಾರ್ದನಃ |
ಶುದ್ಧ ಜಾಂಬೂನದಪ್ರಖ್ಯೋ ಮುಕ್ತಾಹಾರವಿಭೂಷಿತಃ ॥ ೧೩೩ ॥

ಶಂಖಚಕ್ರಗದಾಪದ್ಮಯುಕ್ತಹಸ್ತ ಚತುಷ್ಟಯಃ |
ಹಾರಕೇಯೂರಕಟಕೈರಂಗುಲೀಯೈಶ್ಚ ಭೂಷಿತಃ ॥ ೧೩೪ ॥

ಸುವರ್ಣಪಂಕಜಪ್ರಖ್ಯಪದಯುಗ್ಮವಿರಾಜಿತಃ |
ಸಂತಾನಕನಿಭೈಶ್ಶುಭ್ರೈರ್ನಖಪಂಕ್ತಿವಿರಾಜಿತಃ ॥ ೧೩೫ ॥

---

ಅನೇಕ ಬಗೆಯಾದ ಹೂವಿನಿಂದ ಕೂಡಿದ ಮೇಲ್ಕಟ್ಟುಗಳು ಅಲ್ಲಿವೆ. ಉತ್ತಮರಾದ ಅಪ್ಸರ ಸ್ತ್ರೀಯರು ಅಲ್ಲಿರುವರು. ಅಲ್ಲಿ ಯಾವಾಗಲೂ ಸಾಮಗಾನವು ನಡೆಯುತ್ತಿರುವುದು.

೧೩೨-೧೩೩. ಆ ಮಂಡಪದ ಮಧ್ಯದಲ್ಲಿ ಅಗ್ನಿ ಸೂರ್ಯರಂತೆ ಬೆಳಗುವ ಒಂದು ಸಿಂಹಾಸನವಿರುವುದು. ಅದರ ಮಧ್ಯದಲ್ಲಿ ಎಂಟುದಳಗಳುಳ್ಳ ಒಂದು ಪದ್ಮವಿರುವುದು. ಆ ಪದ್ಮವು ಚಂದ್ರಬಿಂಬದಂತೆ ಇರುವುದು. ಅದರ ಮಧ್ಯದಲ್ಲಿರುವ ಕರ್ಣಿಕೆಯಲ್ಲಿ ಜನಾರ್ದನನು ಕುಳಿತಿರುವನು. ಅವನು ಪುಟಕ್ಕೆ ಹಾಕಿದ ಚಿನ್ನದ ಬಣ್ಣಕ್ಕಿರುವನು. ಅನೇಕ ಮುತ್ತಿನ ಹಾರಗಳನ್ನು ಹಾಕಿಕೊಂಡಿರುವನು.

೧೩೪-೧೩೫. ಅದನ್ನು ಶಂಖ, ಚಕ್ರ, ಗದೆ, ಪದ್ಮಗಳನ್ನು ನಾಲ್ಕುಕೈಗಳಲ್ಲಿಯೂ ಹಿಡಿದುಕೊಂಡಿರುವನು. ಹಾರ, ಕೇಯೂರ, ಕಟಕ ಉಂಗುರಗಳನ್ನು ಹಾಕಿಕೊಂಡಿರುವನು. ಚಿನ್ನದ ಕಮಲದಂತಿರುವ ಪಾದಗಳನ್ನು ಹೊಂದಿರುವನು. ಸಂತಾನಕದ ಹೂವಿನಂತೆ ಬೆಳ್ಳಗಿರುವ ಉಗುರುಗಳಿಂದ ಪ್ರಕಾಶಿಸುತ್ತಿರುವನು.

ಷೋಡಶಾಬ್ದವಯೋರೂಪಯೌವನೇನ ವಿರಾಜಿತಃ ।
ವಿಶಾಲಭಾಲದೇಶೇ ತು ಕುಂಕುಮೇನ ಸುಗಂಧಿನಾ ॥ ೧೩೬ ॥

ರಚಿತೇನೋರ್ಧ್ವಪುಂಡ್ರೇಣ ಸೀಮಂತೇನಾಪಿ ಶೋಭಿತಃ ।
ಮಥಿತಾಮೃತಫೇನಾಭಶುಕ್ಲವಸ್ತ್ರೇಣವೇಷ್ಟಿತಃ ॥ ೧೩೭ ॥

ಮುಕ್ತಾಮಯಾಭ್ಯಾಂ ಶುಭ್ರಾಭ್ಯಾಂ ಕುಂಡಲಾಭ್ಯಾಂ ವಿರಾಜಿತಃ ।
ಪದ್ಮಾಸನಸಮಾಸೀನೋ ಜಗನ್ಮೋಹನವಿಗ್ರಹಃ ॥ ೧೩೮ ॥

ವಾಮಾಂಕೇ ಸಂಸ್ಥಿತಾ ದೇವೀ ತಸ್ಯ ದಿವ್ಯಸ್ವರೂಪಿಣೀ ।
ತಸ್ಯೈವ ಸದೃಶೀ ಲಕ್ಷ್ಮೀಃ ಶೀಲಸುಷ್ಠುಗುಣಾದಿಭಿಃ ॥ ೧೩೯ ॥

ಪದ್ಮಕಿಂಜಲ್ಕಸಂಕಾಶಾ ಯೌವನಾರಂಭಸೇವಿತಾ ।
ಸರ್ವಲಕ್ಷಣಸಂಪನ್ನಾ ತಪ್ತಕಾಂಚನಭೂಷಣಾ ॥ ೧೪೦ ॥

---

೧೩೬–೧೩೭. ಅವನು ಹದಿನಾರು ವರ್ಷದ ವಯಸ್ಸುಳ್ಳ ಯೌವನದಿಂದ ಪ್ರಕಾಶಿಸುತ್ತಿರುವನು. ಒಳ್ಳೆಯ ಸುವಾಸನೆಯಾಗಿರುವ ಕುಂಕುಮಕೇಸರಿಯಲ್ಲಿ ತಿಲಕವನ್ನು ಅಗಲವಾದ ಹಣೆಯಲ್ಲಿ ಇಟ್ಟುಕೊಂಡಿರುವನು. ಅದು ಮಧ್ಯಭಾಗದಲ್ಲಿ ಸರಿಯಾಗಿ ಪ್ರಕಾಶಿಸುತ್ತಿರುವುದು. ಆಗತಾನೆ ಕಡೆದಿರುವ ಅಮೃತದ ನೊರೆಯಂತಿರುವ ಬಿಳಿಯ ವಸ್ತ್ರವನ್ನು ಧರಿಸಿರುವನು.

೧೩೮. ಮುತ್ತಿನ ಕರ್ಣಕುಂಡಲಗಳನ್ನು ಧರಿಸಿರುವನು. ಪದ್ಮಾಸನವನ್ನು ಹಾಕಿ ಕುಳಿತಿರುವನು. ಆ ವಿಗ್ರಹವು ಜಗತ್ತಿಗೇ ಮೋಹಕರವಾಗಿರುವುದು.

೧೩೯. ದಿವ್ಯವಾದ ಆಕಾರವನ್ನು ಹೊಂದಿರುವ, ಒಳ್ಳೆಯಗುಣಶೀಲಗಳುಳ್ಳ, ಎಲ್ಲಾ ವಿಷಯದಲ್ಲಿಯೂ ಆ ಸ್ವಾಮಿಗೆ ಸರಿಯಾಗಿರುವ ಲಕ್ಷ್ಮಿಯು ಆ ಸ್ವಾಮಿಯ ಎಡಗಡೆಯಲ್ಲಿ ಕುಳಿತಿರುವಳು.

೧೪೦ ಆಕೆಯು ಪದ್ಮದ ಹೂವಿನೊಳಗಿನ ರೇಣುಗಳಂತೆ ಬಣ್ಣವುಳ್ಳವಳಾಗಿರುವಳು. ಯೌವನವು ಆಗತಾನೆ ಆರಂಭವಾದಂತೆ ಇರುವುದು. ಎಲ್ಲಾ ಲಕ್ಷಣಗಳೂ ಆಕೆಯಲ್ಲಿವೆ. ಪುಟಕ್ಕೆ ಹಾಕಿದ ಚಿನ್ನದಿಂದ ಮಾಡಿರುವ ಒಡವೆಗಳನ್ನು ಹಾಕಿಕೊಂಡಿರುವಳು.

ದಿವ್ಯಸ್ರಗ್ವಸನೋಪೇತಾ ನೀಲಕುಂಚಿತಶೀರ್ಷಜಾ ।
ಚತುರ್ಭುಜೈರ್ವಿರಾಜಂತೀ ಕೇಯೂರಾಂಗದಭೂಷಿತಾ ॥ ೧೪೧ ॥

ಮುಕ್ತಾಹಾರೈರ್ವಿರಾಜಂತೀ ಮಂದಾರಾಂಚಿತಶೀರ್ಷಜಾ ।
ಶ್ಲಕ್ಷ್ಣನಾಸಾ ಲಸದ್ದಂತಾ ವಿವಿಕ್ತೋಜ್ವಲಕುಂಡಲಾ ॥ ೧೪೨ ॥

ಕಸ್ತೂರೀತಿಲಕೋಪೇತಾ ನಾಸಾಗ್ರಾಂಚಿತಮೌಕ್ತಿಕಾ ।
ಸ್ವರ್ಣಕುಂಭಸಮುಪ್ರೇಕ್ಷ್ಯಪೀನೋನ್ನತಪಯೋಧರಾ ॥ ೧೪೩ ॥

ದಿವ್ಯಕುಂಕುಮಲಿಪ್ತಾಂಗೀ ಪದ್ಮಮಾಲೋಪಶೋಭಿತಾ ।
ವಸುಪಾತ್ರಂ ಮಾತುಲಿಂಗಂ ದರ್ಪಣಂ ಹೇಮಪಂಕಜಂ ॥ ೧೪೪ ॥

ಕರಪದ್ಮಧೃತಾ ದೇವೀ ಚೇತಸಾಭೀಷ್ಟದಾಯಿನೀ ।
ತಸ್ಯೈವ ಸದೃಶಾಸ್ತತ್ರ ಶಕ್ತಯಃ ಪರಿತೋ ಹರೇಃ ॥ ೧೪೫ ॥

---

೧೪೧–೧೪೨. ಒಳ್ಳೆಯ ಮಾಲೆಗಳನ್ನೂ ಬಟ್ಟೆಗಳನ್ನೂ ಹಾಕಿಕೊಂಡಿರುವಳು. ಕಪ್ಪಗೆ ಗುಂಗುರಾಗಿರುವ ಕೂದಲುಳ್ಳವಳು. ನಾಲ್ಕುತೋಳುಗಳಿವೆ. ಅವುಗಳಿಗೆ ಭುಜಕೀರ್ತಿಯನ್ನೂ ಹಾಕಿಕೊಂಡಿರುವಳು. ಕತ್ತಿನಲ್ಲಿ ಮುತ್ತುಗಳ ಹಾರವು ಪ್ರಕಾಶಿಸುತ್ತಿರುವುದು. ತಲೆಗೆ ಮಂದಾರದ ಹೂವನ್ನು ಮುಡಿದು ಕೊಂಡಿರುವಳು. ಮೂಗು ನೂಣುಪಾಗಿರುವುದು. ಹಲ್ಲುಗಳು ಪ್ರಕಾಶಿಸು ತ್ತಿರುವುವು. ಪ್ರಕಾಶಮಾನವಾದ ಓಲೆಗಳನ್ನು ಹಾಕಿಕೊಂಡಿರುವಳು.

೧೪೩–೧೪೫. ಹಣೆಗೆ ಕಸ್ತೂರಿಯ ತಿಲಕವನ್ನು ಹಚ್ಚಿಕೊಂಡಿರುವಳು. ಮೂಗಿಗೆ ಮೂಗುತಿಯನ್ನು ಹಾಕಿಕೊಂಡಿರುವಳು. ಚಿನ್ನದ ಬಿಂದಿಗೆಗಳಂತಿರುವ ಸ್ತನಗಳನ್ನು ಹೊಂದಿರುವಳು ಮೈಗೆಲ್ಲಾ ಕುಂಕುಮ ಕೇಸರಿಯನ್ನು ಬಳಿದು ಕೊಂಡಿರುವಳು. ಪದ್ಮದ ಮಾಲೆಯನ್ನು ಹಾಕಿಕೊಂಡಿರುವಳು. ಅಮೃತದ ಪಾತ್ರೆ, ಮಾದಲಹಣ್ಣು ಕನ್ನಡಿ ಚಿನ್ನದ ಕಮಲಗಳನ್ನು ಒಂದೊಂದು ಕೈಯ್ಯಲ್ಲೂ ಹಿಡಿದುಕೊಂಡಿರುವಳು. ನೆನಸಿಕೊಂಡದ್ದನ್ನೆಲ್ಲಾ ಕೊಡತಕ್ಕವಳು. ಆ ಲಕ್ಷ್ಮಿಗೆ ಸಮಾನವಾದ ಶಕ್ತಿಗಳೇ ಆ ಹರಿಯ ಸುತ್ತಲೂ ಇರುವರು.

ಈಶಾವಾಸ್ಯಾ ಮಹಾದೇವಿ ಜಾಹ್ನವೀ ಕಮಲಾಲಯಾ ।
ಸಾವಿತ್ರೀ ಸರ್ವಗಾ ಪದ್ಮಾ ಶಕ್ತಯಃ ಪರಿಕೀರ್ತಿತಾಃ ॥ ೧೪೬ ॥

ಶ್ರದ್ಧಾ ಮೇಧಾ ಧೃತಿಃ ಪ್ರಜ್ಞಾ ಧಾರಣಾ ಶಾನ್ತಿರೇವ ಚ ।
ಶ್ರುತಿಃ ಸ್ಮೃತಿರ್ಮತಿರ್ವನ್ಯಾ ವೃದ್ಧಿರ್ವೃಷ್ಟಿರ್ಮನೀಷಿಣೀ ॥ ೧೪೭ ॥

ದಾಸ್ಯಸ್ತ್ವೇತಾಃ ಶ್ರಿಯಃ ಪ್ರೋಕ್ತಾಃ ಸರ್ವಕೈಂಕರ್ಯಕಾರಿಕಾಃ
ಅನಂತವೈನತೇಯಾದಿದೇವತಾ ನಿತ್ಯಕಿಂಕರಾಃ ॥ ೧೪೮ ॥

ಸಾಧ್ಯಾ ಮರುದ್ಗಣಾಶ್ಚಾತ್ರ ವಸಂತೇ ನಿತ್ಯದೇವತಾಃ ।
ಪ್ರಾಸಾದೇಷು ವಿಮಾನೇಷು ವನೇಷು ನಗರೇಷು ಚ ॥ ೧೪೯ ॥

ತತ್ಪ್ರಸಾದೋಪಲಬ್ಧೇಷು ಭೋಗೇಷ್ವತ್ರಾನುರಂಜಿತಾಃ ।
ಕ್ರೀಡಂತಿ ಸತತಂ ನಿತ್ಯಂ ಹೇಯನಿಷ್ಫಲವರ್ಜಿತಾಃ ॥ ೧೫೦ ॥

---

೧೪೬. ಈಶಾವಾಸ್ಯ, ಮಹಾದೇವೀ, ಜಾಹ್ನವೀ, ಕಮಲಾಲಯೆ, ಸಾವಿತ್ರಿ, ಸರ್ವಗೆ, ಪದ್ಮೆ ಇವು ಆ ಶಕ್ತಿಯ ಹೆಸರುಗಳು.

೧೪೭–೧೪೮. ಶ್ರದ್ಧೆ, ಮೇಧೆ, ಧೃತಿ, ಪ್ರಜ್ಞೆ, ಧಾರಣೆ, ಶಾನ್ತಿ, ಸ್ಮೃತಿ, ಮತಿ, ವನ್ಯೆ, ವೃದ್ಧಿ, ವೃಷ್ಟಿ, ಮನೀಷಿಣೀ ಇವರೆಲ್ಲರೂ ಆ ಲಕ್ಷ್ಮೀದೇವಿಗೆ ದಾಸಿಯರು ಏನನ್ನು ಬೇಕಾದರೂ ಮಾಡಿಕೊಡುತ್ತಾರೆ. ಅನಂತ, ವೈನತೇಯ ಇವರು ಅಲ್ಲಿಯ ದೇವತೆಗಳು. ಅವರೂ ಆ ಸ್ವಾಮಿಗೆ ನಿತ್ಯದಲ್ಲಿಯೂ ಕಿಂಕರರು.

೧೪೯–೧೫೦. ಸಾಧ್ಯರು, ಮರುದ್ಗಣಗಳು ಇವರು ಅಲ್ಲಿಯ ದೇವತೆಗಳು. ಇವರು ಪ್ರಾಸಾದಗಳಲ್ಲಿಯೂ ವಿಮಾನಗಳಲ್ಲಿಯೂ ವನಗಳಲ್ಲಿಯೂ ನಗರಗಳಲ್ಲಿಯೂ ಆ ಸ್ವಾಮಿಯ ಪ್ರಸಾದದಿಂದ ಸಿಕ್ಕಿರುವ ಭೋಗಗಳನ್ನು ಅನುಭಸುತ್ತ ಅದರಿಂದ ಸಂತೋಷಪಡುತ್ತಿರುವರು. ಅವರು ಕೆಟ್ಟದಾದ ಅಥವಾ ಫಲವಿಲ್ಲದ ಕೆಲಸಗಳನ್ನು ಮಾಡುವುದೇ ಇಲ್ಲ.

ಯೇ ವಿಷ್ಣುಮಂತ್ರಜಪ್ತಾರಃ ಸತತಂ ಶ್ರದ್ಧಯಾನ್ವಿತಾಃ |
ಯೇ ದ್ವಾದಶೀವ್ರತೇ ಯುಕ್ತಾಸ್ತತ್ಪದಂ ಯಾನ್ತಿ ತೇವ್ಯಯಂ || ೧೫೧ ||

ನ ವೇದೈರ್ನ ಚ ದಾನೈಶ್ಚ ನ ಯಜ್ಞೈರ್ನ ವ್ರತೈರಪಿ |
ಪ್ರಾಪ್ತುಂ ಚ ಶಕ್ಯೋ ಗಿರಿಜೇ ವಿಷ್ಣುಲೋಕಃ ಸನಾತನಃ || ೧೫೨ ||

ಭಕ್ತ್ಯಾ ತ್ವನನ್ಯಯಾ ಪ್ರಾಪ್ತುಂ ಶಕ್ಯಂ ವಿಷ್ಣುಪದಂ ನೃಣಾಂ |
ತಸ್ಮಾತ್ಸಂಪೂಜಯೇನ್ನಿತ್ಯಂ ಭಕ್ತ್ಯಾ ದೇವಂ ಜನಾರ್ದನಂ || ೧೫೩ ||

ಕೀರ್ತನಂ ನಾಮಮಾತ್ರಂ ಚ ಧ್ಯಾಯನ್ಮಂತ್ರಂ ಜಪೇತ್ಸದಾ |
ಜುಹುಯಾತ್ತರ್ಪಯೇದ್ಭಕ್ತ್ಯಾ ಸರ್ವಗಂ ಸರ್ವಕಾಮದಂ | || ೧೫೪ ||

---

೧೫೧. ಶ್ರದ್ಧೆಯಿಂದ ಕೂಡಿಕೊಂಡು ಯಾವಾಗಲೂ ವಿಷ್ಣುವಿನ ಮಂತ್ರವನ್ನೇ ಜಪಿಸುವವರೂ ದ್ವಾದಶೀ ವ್ರತದಲ್ಲಿ ಆಸಕ್ತರಾದವರೂ ಈ ಅವ್ಯಯವಾದ ಜಾಗವನ್ನು ಹೊಂದುತ್ತಾರೆ.

೧೫೨. ಈ ವಿಷ್ಣುಲೋಕವನ್ನು ವೇದಾಧ್ಯಯನದಿಂದಲಾಗಲೀ ದಾನ ಮಾಡುವುದರಿಂದಾಗಲೀ, ಹೊಂದುವುದಕ್ಕಾಗುವುದಿಲ್ಲ.

೧೫೩. ಈ ವಿಷ್ಣುಪದವನ್ನು ಅತಿಶಯವಾದ ಭಕ್ತಿಯೊಂದರಿಂದಲೇ ಹೊಂದಲು ಸಾಧ್ಯವು. ಆದ್ದರಿಂದ ನಿತ್ಯವೂ ಅತಿಶಯವಾದ ಭಕ್ತಿಯಿಂದ ಜನಾರ್ದನನನ್ನು ಪೂಜಿಸಬೇಕು.

೧೫೪. ಆ ಸ್ವಾಮಿಯ ಹೆಸರನ್ನು ಯಾವಾಗಲೂ ಕೀರ್ತನೆ ಮಾಡುತ್ತಿರಬೇಕು. ಅವನ ಮಂತ್ರವನ್ನು ಯಾವಾಗಲೂ ಜಪಿಸುತ್ತಿರಬೇಕು. ಅವನ ಮಂತ್ರದಿಂದಲೇ ಹೋಮ ಮಾಡುತ್ತಿರಬೇಕು. ಅವನ ಮಂತ್ರವನ್ನು ಹೇಳಿಕೊಂಡು ತರ್ಪಣವನ್ನು ಭಕ್ತಿಯಿಂದ ಕೊಡಬೇಕು. ಅವನು ಎಲ್ಲಾ ಕಡೆಯಲ್ಲಿಯೂ ಇರತಕ್ಕವನು. ಎಲ್ಲವನ್ನೂ ಕೊಡುವವನು.

ಏವಮುಕ್ತಸ್ತೃತೀಯಸ್ತು ವ್ಯೂಹಸ್ತು ಪರಮಾತ್ಮನಃ |
ಸ್ವರೂಪಂ ತವ ಸುಶ್ರೋಣಿ ಯಥಾ ಪ್ರೋಕ್ತಂ ಪುರಾತನೈಃ || ೧೫೫ ||

ಅತಃ ಪರಂ ಪ್ರವಕ್ಷ್ಯಾಮಿ ಚತುರ್ಥಂ ವ್ಯೂಹಮುತ್ತಮಂ |
ದಿವೌಕಸಾಂ ರಕ್ಷಣಾರ್ಥಂ ದುಗ್ಧಾಬ್ಧೌ ಪರಮೇಶ್ವರಃ || ೧೫೬ ||

ಸುಧಾಂಶುಕೋಟಿಸಂಕಾಶೇ ಸಹಸ್ರಾಸ್ಯೇನ ಶೋಭಿತೇ |
ಪುರಂದರಸಯೂಥ್ಯೈಸ್ತು ಚ್ಛಾದಿತೇ ದುಗ್ಧವಾರಿಧೌ || ೧೫೭ ||

ತಸ್ಮಿನ್ನನಂತಪರ್ಯಂಕೇ ಶೇತೇಸೌ ವಿಸ್ತೃತೇ ಶುಭೇ ।
ದಿವ್ಯಾಸನಸಮಾಸೀನಃ ಪದ್ಮನಾಭೋಚ್ಯುತೋ ಹರಿಃ || ೧೫೮ ||

ನೀಲಜೀಮೂತಸಂಕಾಶಃ ಪದ್ಮಪತ್ರಾಯತೇಕ್ಷಣಃ |
ವಿವಸ್ವತ್ಕೋಟಿಸಂಕಾಶಕಿರೀಟೇನ ವಿರಾಜಿತಃ || ೧೫೯ ||

ನಾನಾರತ್ನೋಜ್ಜ್ವಲದ್ದಿವ್ಯಕುಂಡಲಾಭ್ಯಾಂ ವಿರಾಜಿತಃ |
ಬಾಲಾರ್ಕಸದೃಶಜ್ಯೋತ್ಸ್ನಾ ಪೀತವಸ್ತ್ರೇಣ ವೇಷ್ಟಿತಃ || ೧೬೦ ||

---

೧೫೫. ಎಲೈ ಗಿರಿಜೆಯೆ ! ಹಿಂದಿನವರು ಹೇಳಿರುವಂತೆ ಈ ಮೂರನೆಯ ವ್ಯೂಹದ ಸ್ವರೂಪವನ್ನು ನಿನಗೆ ವಿವರಿಸಿ ಹೇಳಿದ್ದೇನೆ.

೧೫೬–೧೫೮. ಆ ಕ್ಷೀರಸಮುದ್ರದಲ್ಲಿ ಆದಿಶೇಷನು ಮಲಗಿರುವನು. ಅವನೇ ಆ ಸ್ವಾಮಿಗೆ ಮಂಚವು. ಆ ಮಂಚವನ್ನು ಅನೇಕಜನ ಇಂದ್ರರು ಸುತ್ತಲೂ ಮುತ್ತಿಕೊಂಡಿರುವರು. ಆ ಶೇಷನೆಂಬ ಮಂಚದಮೇಲೆ ಒಂದು ಅಗಲವಾದ ಆಸನದಲ್ಲಿ ಆ ಪದ್ಮನಾಭನು ಮಲಗಿರುವನು.

೧೫೯–೧೬೦. ಕಪ್ಪಗಿರುವ ಮೇಘದಂತೆ ಬಣ್ಣವನ್ನು ಹೊಂದಿದ್ದಾನೆ. ಪದ್ಮದ ದಳದಂತೆ ಇರುವ ಕಣ್ಣುಗಳಿವೆ. ಕೋಟಿಜನ ಸೂರ್ಯರಂತೆ ಬೆಳಗುವ ಕಿರೀಟದಿಂದ ಕೂಡಿಕೊಂಡಿರುವನು. ಅನೇಕ ಬಗೆಯ ರತ್ನಗಳಿಂದ ಪ್ರಕಾಶಿಸುವ ಕರ್ಣಾಭರಣಗಳನ್ನು ಹಾಕಿಕೊಂಡಿರುವನು. ಪ್ರಾತಃಕಾಲದ ಸೂರ್ಯನ ಬೆಳಕೂ ಚಂದ್ರಿಕೆಯೂ ಸೇರಿರುವಂತಿರುವ ಹೊಂಬಣ್ಣದ ಬಟ್ಟೆಯನ್ನು ಹೊದ್ದಿರುವನು.

ಸ್ಫುರದ್ರಕ್ತಾರವಿಂದಾಭಹಸ್ತಾಂಘ್ರಿತಳಶೋಭಿತಃ ।
ಹಾರಕೇಯೂರಕಟಕೈರಂಗುಳೀಯೈಃ ವಿರಾಜಿತಃ ॥ ೧೬೧ ॥

ಶಂಖಚಕ್ರಗದಾಶಾಂರ್ಗಖಡ್ಗಹಸ್ತೈರ್ವಿಭೂಷಿತಃ ।
ಸುಪುಷ್ಪಫಲಶಾಖಾಢ್ಯಕಲ್ಪವೃಕ್ಷೈರ್ವಿರಾಜಿತಃ ॥ ೧೬೨ ॥

ವಿಶ್ವಸ್ಯ ಜನ್ಮಮರಣನಾಭಿಪಂಕೇಜಶೋಭಿತಃ ।
ಹರಿಚಂದನಲಿಪ್ತಾಂಗಃ ಸರ್ವಾಭರಣಭೂಷಿತಃ ॥ ೧೬೩ ॥

ಮಂದಾರಪಾರಿಜಾತಾದಿದಿವ್ಯಪುಷ್ಪೈರ್ಮನೋರಮೈಃ ।
ಸುಸ್ನಿಗ್ಧನೀಲಕುಟಿಲಕಬರೀಕೃತಕೇಶವಾನ್ ॥ ೧೬೪ ॥

ಶ್ಲಕ್ಷ್ಣೋನ್ನತಸುನಾಸಾಂಸಜಾನುಯುಗ್ಮವಿರಾಜಿತಃ ।
ಮಣಿವಿದ್ರುಮಶಂಖಾಢ್ಯನೂಪುರಾಂಘ್ರಿವಿರಾಜಿತಃ ॥ ೧೬೫ ॥

---

೧೬೧–೧೬೨. ಪ್ರಕಾಶಮಾನವಾದ ಕೆಂದಾವರೆಯಂತಿರುವ ಹಸ್ತಗಳಿಂದಲೂ ಪಾದಗಳಿಂದಲೂ ಕೂಡಿರುವನು. ಹಾರ ಕೇಯೂರ ಕಟಕ ಅಂಗುಳೀಯಕಗಳನ್ನು ಧರಿಸಿರುವನು. ಶಂಖ, ಚಕ್ರ, ಗದೆ, ಶಾಂರ್ಗಗಳನ್ನು ಕೈಯ್ಯಲ್ಲಿ ಹಿಡಿದಿರುವನು. ಹೂವು ಹಣ್ಣು ಅನೇಕವಾಗಿರುವ ಕಲ್ಪವೃಕ್ಷವು ಅವನ ಬಳಿಯಲ್ಲಿರುವುದು.

೧೬೩-೧೬೪. ಪ್ರಪಂಚದ ಹುಟ್ಟುವಿಕೆ ಮತ್ತು ಸಾಯುವಿಕೆಗೆ ಕಾರಣವಾದ ಹೊಕ್ಕುಳಿನ ಕಮಲದಿಂದ ಕೂಡಿರುವನು. ಹರಿಚಂದನವನ್ನು ಮೈಗೆಲ್ಲಾ ಪೂಸಿಕೊಂಡಿರುವನು. ಎಲ್ಲಾ ಆಭರಗಳನ್ನೂ ಹಾಕಿಕೊಂಡಿರುವನು. ಮಂದಾರ ಪಾರಿಜಾತವೇ ಮುಂತಾದ ಮರಗಳ ಚೆನ್ನಾಗಿರುವ ಹೂಗಳಿಂದ ತನ್ನ ನುಣುಪೂ ಕಪ್ಪೂ ಗುಂಗುರು ಗುಂಗುರೂ ಆಗಿರುವ ಕೂದಲಿನಿಂದ ಕಟ್ಟಿರುವ ಹೆರಳನ್ನು ಅಲಂಕರಿಸಿಕೊಂಡಿರುವನು.

೧೬೫. ನುಣುಪಾಗಿಯೂ ಮೇಲಕ್ಕೆ ಎದ್ದುಕೊಂಡೂ ಇರುವ ಮೂಗು, ಭುಜ, ಮಂಡಿಗಳುಳ್ಳವನು. ಮಣಿಗಳು, ಹವಳಗಳು, ಶಂಖಗಳು ಇವನ್ನು ಹಾಕಿಕೊಂಡಿರುವ ಕಾಲುಬಳೆಯನ್ನು ಕಾಲಿಗೆ ಹಾಕಿಕೊಂಡಿರುವನು.

**ಅಕಲಂಕಿತಚಂದ್ರಾಭನಖಪಂಕ್ತಿವಿರಾಜಿತಃ ।**
**ಅಶೋಕಪುಷ್ಪಸಂಕಾಶರಕ್ತೋಷ್ಠಮುಖಪಂಕಜಃ ॥ ೧೬೬ ॥**

**ಅನರ್ಘ್ಯಮೌಕ್ತಿಕಾಭಾಸದಂತಪಂಕ್ತಿವಿರಾಜಿತಃ ।**
**ಸಂಪೂರ್ಣಚಂದ್ರಪ್ರತಿಮಸ್ಮಿತವಕ್ತ್ರಸುಶೋಭಿತಃ ॥ ೧೬೭ ॥**

**ಆರೂಢಯೌವನಃ ಶ್ರೀಮಾನ್ ಕೋಮಲಾವಯವೋಜ್ಜ್ವಲಃ ।**
**ಶರಣ್ಯಸ್ಸರ್ವಲೋಕಾನಾಂ ಸರ್ವಲೋಕೇ ಫಲಪ್ರದಃ ॥ ೧೬೮ ॥**

**ಸದೃಶೀ ತಸ್ಯ ದೇವೀ ತು ರೂಪಶೀಲಗುಣಾದಿಭಿಃ ।**
**ತಪ್ತಕಾಂಚನಸಂಕಾಶಾ ತಪ್ತಕಾಂಚನಭೂಷಣಾ ॥ ೧೬೯ ॥**

**ತರುಣೀ ರೂಪಲಾವಣ್ಯಕಾಂತಿಶೀಲಗುಣಾನ್ವಿತಾ ।**
**ದುಗ್ಧಾಬ್ಧಿಫೇನಸಂಕಾಶಶುದ್ಧವಸ್ತ್ರೇಣ ವೇಷ್ಟಿತಾ ॥ ೧೭೦ ॥**

---

೧೬೬. ಕಳಂಕವಿಲ್ಲದ ಚಂದ್ರನಂತಿರುವ ಉಗುರುಗಳುಳ್ಳವನು. ಅಶೋಕದ ಹೂವಿನಂತೆ ಕೆಂಪಗಿರುವ ತುಟಿಗಳುಳ್ಳ ಮುಖವುಳ್ಳವನು.

೧೬೭. ಉತ್ತಮವಾದ ಮುತ್ತುಗಳ ಕಾಂತಿಯಂತೆ ಕಾಂತಿಯುಳ್ಳ ಹಲ್ಲಿನ ಸಾಲುಗಳಿವೆ ಪೂರ್ಣಚಂದ್ರನಂತಿರುವ ಮುಗುಳುನಗೆಯುಳ್ಳ ಮುಖದಿಂದ ಕೂಡಿಕೊಂಡಿರುವನು.

೧೬೮. ಆ ಸ್ವಾಮಿಗೆ ಯೌವನವು ಉಕ್ಕುತ್ತಿರುವುದು. ಅವಯವಗಳು ಮನೋಹರವಾಗಿಯೂ ಪ್ರಕಾಶಮಾನವಾಗಿಯೂ ಇರುವುವು. ಎಲ್ಲರಿಗೂ ರಕ್ಷಕನಾಗಿರುವನು. ಎಲ್ಲರಿಗೂ ಫಲವನ್ನು ಕೊಡುವನು.

೧೬೯–೧೭೦. ಆ ಸ್ವಾಮಿಗೆ ರೂಪಶೀಲಗುಣಗಳಿಂದ ಸಮನಾದ ಹೆಂಡತಿಯೊಬ್ಬಳಿರುವಳು. ಪುಟಕ್ಕೆ ಹಾಕಿದ ಚಿನ್ನದಂತೆ ಅವಳ ಬಣ್ಣವಿರುವುದು. ಉತ್ತಮವಾದ ಚಿನ್ನದ ಒಡವೆಗಳನ್ನು ತೊಟ್ಟಿರುವಳು. ಒಳ್ಳೆಯ ತಾರುಣ್ಯವನ್ನು ಹೊಂದಿರುವಳು. ಒಳ್ಳೆಯ ರೂಪ, ಲಾವಣ್ಯ, ಕಾಂತಿ, ಶೀಲ, ಗುಣಗಳನ್ನು ಹೊಂದಿರುವಳು. ಕ್ಷೀರಸಮುದ್ರದ ನೊರೆಯಂತಿರುವ ಬಿಳಿಯ ಬಟ್ಟೆಯನ್ನು ಉಟ್ಟಿರುವಳು.

ಮಂದಾರಕೇತಕೀಜಾತೀಪುಷ್ಪಾಂಚಿತಶಿರೋರುಹಾ |
ಕಸ್ತೂರೀತಿಲಕೋಪೇತಾ ರತ್ನಸೀಮಂತಶೋಭಿತಾ || ೧೭೧ ||

ನಾನಾವರ್ಣಸುಶೋಭಾಢ್ಯಾ ಕರ್ಣಭೂಷಣಭೂಷಿತಾ |
ಪ್ರವಾಳಸದೃಶಜ್ಯೋತ್ಸ್ನಾರಕ್ತಾಧರಸುವಿಸ್ಮಿತಾ || ೧೭೨ ||

ಮತ್ತಭೃಂಗೋಪಮೈಃ ಸ್ನಿಗ್ಧೈರಲಕೈಸ್ಸುವಿರಾಜಿತಾ |
ತನುಮಧ್ಯಾ ವಿಶಾಲಾಕ್ಷೀ ಪೀನೋನ್ನತಪಯೋಧರಾ || ೧೭೩ ||

ಚತುರ್ಹಸ್ತೈರ್ವಿರಾಜಂತೀ ಸರ್ವಾಭರಣಭೂಷಿತಾ |
ಉದ್ಬಾಹುಭ್ಯಾಂ ಧೃತಾ ದೇವೀ ಹೇಮಪದ್ಮಯುಗಂ ಶುಭಂ || ೧೭೪ ||

ಇತರಾಭ್ಯಾಂ ಸಮಾಶ್ಲಿಷ್ಯ ಭರ್ತಾರಂ ನಿಬಿಡಂ ಸ್ಥಿತಾ |
ಆಲೋಕಯಂತೀ ಸತತಂ ತ್ರಿದಶಾನ್ ಸ್ವಕಟಾಕ್ಷಕೈಃ || ೧೭೫ ||

---

೧೭೧-೧೭೨. ಮಂದಾರ, ತಾಳೆ, ಜಾಜಿ, ಹೂವುಗಳನ್ನು ತಲೆಗೆ ಮುಡಿದುಕೊಂಡಿರುವಳು. ಕಸ್ತೂರಿಯ ತಿಲಕವನ್ನು ಇಟ್ಟುಕೊಂಡಿರುವಳು. ಬೈತಲೆಗೆ ರತ್ನವನ್ನು ಅಳವಡಿಸಿಕೊಂಡಿರುವಳು. ಒಳ್ಳೆಯ ಕಾಂತಿಯುಳ್ಳವಳು. ಒಳ್ಳೆಯ ಕಾಂತಿಯಿಂದ ಕೂಡಿದ ಓಲೆಗಳನ್ನು ಹಾಕಿಕೊಂಡಿರುವಳು. ಹವಳದಂತೆ ಇರುವ ತುಟಿಗಳನ್ನು ಹೊಂದಿರುವಳು. ಬೆಳದಿಂಗಳಿನಂತಿರುವ ಮುಗುಳುನಗೆಯಿಂದ ಕೂಡಿರುವಳು.

೧೭೩-೧೭೪. ಮದಿಸಿದ ದುಂಬಿಗಳಂತೆ ಕಪ್ಪಗಿರುವ ಮತ್ತು ನುಣುಪಾಗಿರುವ ಮುಂಗುರುಳನ್ನು ಹೊಂದಿರುವಳು. ನಡುವು ಸಣ್ಣನಾಗಿರುವುದು. ಕಣ್ಣುಗಳು ವಿಶಾಲವಾಗಿರುವುವು. ಸ್ತನಗಳು ದಪ್ಪವಾಗಿಯೂ ಎತ್ತರವಾಗಿಯೂ ಇರುವುವು. ನಾಲ್ಕು ಕೈಗಳಿರುವುವು. ಎಲ್ಲಾ ಬಗೆಯಾದ ಒಡವೆಗಳನ್ನೂ ತೊಟ್ಟಿರುವಳು. ಎರಡು ಕೈಗಳಲ್ಲಿ ಚಿನ್ನದ ಕಮಲವನ್ನು ಹಿಡಿದುಕೊಂಡು ಆ ಕೈಗಳನ್ನು ಮೇಲಕ್ಕೆ ಎತ್ತಿಕೊಂಡಿರುವಳು.

೧೭೫. ಮತ್ತೆರಡು ಕೈಗಳಿಂದ ಗಂಡನನ್ನು ಬಿಗಿಯಾಗಿ ಅಪ್ಪಿಕೊಂಡಿರುವಳು. ಸಮೀಪದಲ್ಲಿರುವ ದೇವತೆಗಳನ್ನು ಕಡೆಗಣ್ಣಿನಿಂದ ಯಾವಾಗಲೂ ನೋಡುತ್ತಿರುವಳು.

ನಿರೀಕ್ಷಿತಾಸ್ತಯಾ ದೇವ್ಯಾ ಧನ್ಯಾಸ್ತೇ ಸತತಂ ಶಿವೇ ।
ತದಾ ದೇವಾ ವಿಮಾನಸ್ಥಾಃ ಸಿದ್ಧಚಾರಣಕಿನ್ನರಾಃ ॥ ೧೭೬ ॥

ಗಾಯಂತಿ ಸತತಂ ದೇವೀಮಾನಂದಾಶ್ರುಪರಿಪ್ಲುತಾಃ ।
ದೈತೇಯೈರ್ವಧ್ಯಮಾನೈಸ್ತು ಬ್ರಹ್ಮರುದ್ರಾದಿಭಿಃ ಸುರೈಃ ॥ ೧೭೭ ॥

ಸಂಸ್ತೂಯಮಾನಸ್ತತ್ರೇಶೋ ದೇವಾನಾಮಭಯಂ ದದೌ ।
ದೇವಾನಾಮಭಯಂ ದತ್ವಾ ಸರ್ವದೇವೇಶ್ವರೋ ಹರಿಃ ॥ ೧೭೮ ॥

ರಾಕ್ಷಸಾನ್ ಹನ್ತುಮಾರೇಭೇ ಜಗತ್ಸಂರಕ್ಷಣಾಯ ವೈ ।
ಏವಂ ಚತುರ್ಥಂ ವ್ಯೂಹಂ ತು ಹರೇಃ ಪ್ರೋಕ್ತಂ ತವಾನಘೇ ॥ ೧೭೯ ॥

---

೧೭೬-೧೭೭ ಆಕೆಯು ನೋಡಿದರೆ ಆ ದೇವತೆಗಳೆಲ್ಲರೂ ಯಾವಾಗಲೂ ಧನ್ಯರಾಗುತ್ತಾರೆ. ಆಗ ಆ ದೇವತೆಗಳೂ ಸಿದ್ಧರೂ ಚಾರಣರೂ ಕಿನ್ನರರೂ ವಿಮಾನದಲ್ಲಿದ್ದುಕೊಂಡು ಆ ಸ್ವಾಮಿಯನ್ನು ಹೋಗಳುತ್ತ ಗಾನಮಾಡುತ್ತಿರುತ್ತಾರೆ. ಆಗ ಆನಂದದಿಂದ ಕಣ್ಣೀರು ಸುರಿಯುತ್ತಿರುವುದು. ದೈತ್ಯರಿಂದ ಹೊಡೆತವನ್ನು ತಿಂದ ಬ್ರಹ್ಮ ರುದ್ರ ಮುಂತಾದ ದೇವತೆಗಳಿಂದ ಹೊಗಳಲ್ಪಟ್ಟ ಈ ಸ್ವಾಮಿಯು ಅವರಿಗೆ ವರವನ್ನು ಕೊಡುವನು.

೧೭೮-೧೭೯. ಆ ಸರ್ವದೇವೇಶ್ವರನಾದ ಹರಿಯು ದೇವತೆಗಳಿಗೆ ಅಭಯವನ್ನು ಕೊಟ್ಟು ದೇವತೆಗಳ ಸೌಖ್ಯಕ್ಕೋಸ್ಕರವೂ ಜಗತ್ತನ್ನು ಕಾಪಾಡುವುದಕ್ಕೋಸ್ಕರವೂ ರಾಕ್ಷಸರನ್ನು ಕೊಲ್ಲುವನು. ಈ ರೀತಿಯಾಗಿ ಹರಿಯ ನಾಲ್ಕನೆಯ ವ್ಯೂಹವನ್ನು ವರ್ಣಿಸಿರುವೆನು.

**ಕಿಮನ್ಯಚ್ಛ್ರೋತುಕಾಮಾಸಿ ತದ್ಬ್ರವೀಮಿ ವರಾನನೇ ।**
**ಧನ್ಯಾಸಿ ಕೃತಕೃತ್ಯಾಸಿ ಭಕ್ತಾಸಿ ಪುರುಷೋತ್ತಮೇ ॥ ೧೮೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ವಿಷ್ಣುವ್ಯೂಹ ಭೇದವರ್ಣನಂ ನಾಮ ಸಪ್ತಪಂಚಾಶದಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೧೮೦. ಎಲೈ ದೇವಿಯೆ ! ನೀನು ಮತ್ತೇನನ್ನು ಕೇಳಬೇಕೆಂದಿದ್ದೀಯೆ ? ಹೇಳು. ಅದೆಲ್ಲವನ್ನೂ ಹೇಳುತ್ತೇನೆ. ನೀನು ಆ ಪುರುಷೋತ್ತಮನಲ್ಲಿ ಭಕ್ತಳಾಗಿರುವುದರಿಂದ ಧನ್ಯಳೂ ಕೃತ ಕೃತ್ಯಳೂ ಆಗಿದ್ದೀಯೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡ ಉಮಾಮಹೇಶ್ವರ ಸಂವಾದದಲ್ಲಿ ವಿಷ್ಣುವ್ಯೂಹ ಭೇದವರ್ಣನವೆಂಬ ಇನ್ನೂರ ಐವತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಷ್ಟಪಂಚಾಶದಧಿಕದ್ವಿಶತತಮೋಽಧ್ಯಾಯಃ ||



|| ಪಾರ್ವತ್ಯುವಾಚ ||

**ಭಗವನ್ ಯತ್ರ ದೇವೇಶೋ ರಾಕ್ಷಸಾನ್ ಮಧುಸೂದನಃ |**
**ಜಘಾನ ಕೇನ ರೂಪೇಣ ಯಥಾವದ್ವಕ್ತುಮರ್ಹಸಿ || ೧ ||**

**ವೈಭವಂ ಚ ಸ್ಥಿತೀಯಸ್ಯ ಮತ್ಸ್ಯಕೂರ್ಮಾದಿರೂಪಕಂ |**
**ವಿಸ್ತರೇಣ ಸಮಾಖ್ಯಾಹಿ ಮಮ ಪ್ರೀತ್ಯಾ ಮಹೇಶ್ವರ || ೨ ||**

---

### ಇನ್ನೂರ ಐವತ್ತೆಂಟನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು–ಎಲೈ ಸ್ವಾಮಿಯೆ ! ಆ ಮಧುಸೂದನನು ಎಲ್ಲೆಲ್ಲಿ ಯಾವ ಯಾವ ಅವತಾರವನ್ನು ಹೊಂದಿ ಯಾವ ಯಾವ ರಾಕ್ಷಸರನ್ನು ಕೊಂದನು? ಎಂಬುದನ್ನು ಕ್ರಮವಾಗಿ ಹೇಳು.

೨. ಆ ಸನಾತನನಾದ ಸ್ವಾಮಿಯು ಮತ್ಸ್ಯ, ಕೂರ್ಮ ಮುಂತಾದ ಅವತಾರಗಳ ವೈಭವವನ್ನು ನನ್ನ ಮೇಲೆ ಇರುವ ಪ್ರೀತಿಯಿಂದ ವಿಸ್ತಾರವಾಗಿ ಹೇಳು.

|| ಶ್ರೀ ಮಹಾದೇವ ಉವಾಚ ||

ಶೃಣು ದೇವಿ ಪ್ರವಕ್ಷ್ಯಾಮಿ ವೈಭವಂ ಸ್ವಸ್ಥಮಾನಸಾ ।
ಮತ್ಸ್ಯಕೂರ್ಮಾದಿ ಯದ್ರೂಪಮವತಾರಾತ್ಮಕಂ ಹರೇಃ || ೩ ||

ದೀಪಾದುತ್ಪಾದ್ಯತೇ ದೀಪೋ ಯಥಾ ತದ್ವದ್ಭವಿಷ್ಯತಿ ।
ಪರಾವಸ್ಥಾಃ ಪರೇಶಸ್ಯ ವ್ಯೂಹಾಶ್ಚ ವಿಭವಾದಯಃ || ೪ ||

ಉಕ್ತಾ ದೇವಾವತಾರಾಸ್ತು ವಿಷ್ಣ್ವಾಕಾರಾದಿಕಾಶ್ಶುಭಾಃ ।
ಅರ್ಚಾವತಾರಾ ದೇವಸ್ಯ ವೈಭವಾಃ ಪರಮಾತ್ಮನಃ || ೫ ||

ಪ್ರಜಾಪತೀನ್ ಸೃಜದ್ಬ್ರಹ್ಮಾ ಸಸಮ್ರಾಟ್ ಪರಮೋತ್ಸವಃ ।
ಭೃಗುಂ ಮರೀಚಿಮತ್ರಿಂ ಚ ದಕ್ಷಂ ಕರ್ದಮಮೇವ ಚ || ೬ ||

ಪುಲಸ್ತ್ಯಂ ಪುಲಹಂ ಚೈವಾಂಗಿರಸಂ ತು ತಥಾ ಕ್ರತುಂ ।
ನವ ಪ್ರಜಾನಾಂ ಪತಯಃ ಇಮೇ ಪ್ರೋಕ್ತಾ ಯಥಾಕ್ರಮಂ || ೭ ||

---

೩. ಶ್ರೀ ಮಹಾದೇವನು ಹೇಳಿದನು–ಎಲೈ ದೇವಿಯೆ! ಸಮಾಧಾನವಾದ ಮನಸ್ಸಿನಿಂದ ಕೇಳು. ಆ ಸ್ವಾಮಿಯ ಮತ್ಸ್ಯ, ಕೂರ್ಮ ಮೊದಲಾದ ಅವತಾರಗಳ ವಿಷಯವನ್ನು ಹೇಳುತ್ತೇನೆ.

೪. ಅವತಾರಗಳೆಲ್ಲವೂ ದೀಪದಿಂದ ದೀಪವನ್ನು ಹಚ್ಚುವಂತೆ ಆಗಿರುತ್ತವೆ. ಆ ದೇವನ ಉತ್ತಮವಾದ ಅವಸ್ಥೆಗಳನ್ನೂ ಅವನ ವ್ಯೂಹಗಳನ್ನೂ ಅವನ ವಿಭವಗಳನ್ನೂ ಹೇಳಿದೆನು.

೫. ಆ ವಿಷ್ಣುವಿನ ದೇವಾವತಾರಗಳನ್ನೂ ಅರ್ಚಾವತಾರಗಳನ್ನೂ ಅವನ ವೈಭವಗಳನ್ನೂ ಹೇಳುತ್ತೇನೆ. ಕೇಳು.

೬–೭. ಆ ವಿಷ್ಣುವಿನಿಂದ ಉತ್ಪನ್ನನಾದ ಬ್ರಹ್ಮನು ಭೃಗು, ಮರೀಚಿ, ಅತ್ರಿ, ದಕ್ಷ, ಕರ್ದಮ, ಪುಲಸ್ತ್ಯ, ಪುಲಹ, ಅಂಗಿರಸ, ಕ್ರತು, ಎಂಬ ಒಂಭತ್ತು ಜನ ಪ್ರಜೆಗಳಿಗೆ ಒಡೆಯರಾದವರನ್ನು ಸೃಷ್ಟಿಸಿದನು.

ಮರೀಚಿರ್ಭಗವಾಂಸ್ತತ್ರ ಜನಯಾಮಾಸ ಕಶ್ಯಪಂ ।
ಕಶ್ಯಪಸ್ಯಾಭವನ್ ಜಾಯಾಶ್ಚತಸ್ರಃ ಶುಭದರ್ಶನೇ ॥ ೮ ॥

ಅದಿತಿಶ್ಚ ದಿತಿಶ್ಚೈವ ಕದ್ರೂಶ್ಚ ವಿನತಾ ತಥಾ ।
ಅದಿತಿರ್ಜನಯಾಮಾಸ ದೇವಾಂಸ್ತು ಶುಭದರ್ಶನಾನ್ ॥ ೯ ॥

ದಿತಿಶ್ಚ ರಾಕ್ಷಸಾನ್ ಪುತ್ರಾನ್ ತಾಮಸಾನ್ ಸುಮಹಾಸುರಾನ್ ।
ಶಂಬೂಕಸ್ತು ಹಯಗ್ರೀವೋ ಹಿರಣ್ಯಾಕ್ಷೋ ಮಹಾಬಲಃ ॥ ೧೦ ॥

ಹಿರಣ್ಯಕಶಿಪುರ್ಜಂಭೋ ಮಯಾದ್ಯಾಃ ಸುಮಹಾತಪಾಃ ।
ಮಕರಸ್ತು ಮಹಾವೀರ್ಯೋ ಬ್ರಹ್ಮಲೋಕಮುಪಾಗತಃ ॥ ೧೧ ॥

ಬ್ರಹ್ಮಾಣಂ ಮೋಹಯಿತ್ವಾಸೌ ವೇದಾನ್ ಜಗ್ರಾಹ ವೀರ್ಯವಾನ್ ।
ಗ್ರಸಿತ್ವಾ ತು ಶ್ರುತೀಃ ಸೋಥ ಪ್ರವಿವೇಶ ಮಹಾರ್ಣವಂ ॥ ೧೨ ॥

---

೮. ಆ ಮರೀಚಿಗೆ ಕಶ್ಯಪನೆಂಬ ಮಗನಾದನು. ಆ ಕಶ್ಯಪನಿಗೆ ಅದಿತಿ, ದಿತಿ, ಕದ್ರೂ, ವಿನತೆ ಎಂಬದಾಗಿ ನಾಲ್ಕುಜನ ಹೆಂಡತಿಯರಾದರು.

೯-೧೦. ಅದಿತಿಗೆ ಉತ್ತಮೋತ್ತಮರೂ, ಮಂಗಳಕರರೂ ಆದ ದೇವತೆಗಳು ಮಕ್ಕಳಾದರು. ದಿತಿಗೆ ತಾಮಸಗುಣವುಳ್ಳವರೂ, ಮಹಾಬಲಿಷ್ಠರೂ ಆದ ರಾಕ್ಷಸರು ಮಕ್ಕಳಾದರು. ಅವರಲ್ಲಿ ಶಂಬೂಕ, ಹಯಗ್ರೀವ, ಹಿರಣ್ಯಾಕ್ಷ ಇವರು ಬಹು ಬಲಿಷ್ಠರಾದವರು. ಹಿರಣ್ಯಕಶಿಪು, ಜಂಭ, ಮಯ, ಇವರು ಮಹಾತಪಸ್ವಿಗಳು. ಮತ್ತು ಬಲಿಷ್ಠರೂ ಆಗಿದ್ದರು.

೧೧-೧೨. ಮಕರನೆಂಬುವನು ಬಹು ಬಲಿಷ್ಠನು. ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಬ್ರಹ್ಮನನ್ನು ಮೋಹಗೊಳಿಸಿ ವೇದಗಳೆಲ್ಲವನ್ನೂ ತೆಗೆದುಕೊಂಡು ಅದನ್ನು ನುಂಗಿಬಿಟ್ಟು ದೊಡ್ಡ ಸಮುದ್ರದೊಳಕ್ಕೆ ಹೊಕ್ಕನು.

ತತೋಽಭವಜ್ಜಗಚ್ಛೂನ್ಯಮಭವದ್ವರ್ಣಸಂಕರಃ ।
ನಾಧೀತಂ ನ ವಷಟ್ಕಾರಂ ವರ್ಣಾಶ್ರಮವಿವರ್ಜಿತಂ ॥ ೧೩ ॥

ತತಃ ಪ್ರಜಾಪತಿರ್ದೇವಃ ಸರ್ವದೇವಗಣೈರ್ಯುತಃ ।
ಗತ್ವಾ ದುಗ್ಧಾಂಬುಧಿಂ ದೇವಂ ತುಷ್ಟಾವ ಶರಣಂ ಗತಃ ॥ ೧೪ ॥

॥ ಬ್ರಹ್ಮೋವಾಚ ॥

ಪ್ರಸೀದ ದೇವ ಮೇ ನಾಥ ನಾಗಪರ್ಯಂಕಸಂಸ್ಥಿತ ।
ಸರ್ವೇಶ ಸರ್ವ ಸರ್ವಾತ್ಮ ಸರ್ವದೇವಮಯಾಚ್ಯುತ ॥ ೧೫ ॥

ಆದ್ಯಂ ಜಗತ್ತರೋರ್ಬೀಜಂ ಮಧ್ಯೇ ಸಂವರ್ಧನೋದಕಂ ।
ಅಂತೇ ಚ ಪಶುನಾಥಸ್ತ್ವಂ ಸ್ವೇಚ್ಛಾಚಾರಸ್ತ್ವಮೇವ ಚ ॥ ೧೬ ॥

---

೧೩. ಅನಂತರ ಪ್ರಪಂಚವೆಲ್ಲವೂ ಶೂನ್ಯವಾಯಿತು. ಎಲ್ಲೆಲ್ಲಿಯೂ ವರ್ಣಸಾಂಕರ್ಯವುಂಟಾಯಿತು. ಅಧ್ಯಯನವಾಗಲಿ, ವಷಟ್ಕಾರವಾಗಲಿ ಒಂದೂ ನಡೆಯದಂತಾಗಿ ವರ್ಣಾಶ್ರಮಗಳೇ ಇಲ್ಲವಾಯಿತು.

೧೪. ಅನಂತರ ಆ ಸ್ವಾಮಿಯಾದ ಬ್ರಹ್ಮನು ಎಲ್ಲಾ ದೇವತೆಗಳನ್ನೂ ಕರೆದುಕೊಂಡು ಕ್ಷೀರಸಮುದ್ರಕ್ಕೆ ಹೋಗಿ ಆ ಸ್ವಾಮಿಯನ್ನು ಶರಣು ಹೊಂದಿ ಸ್ತುತಿಸಿದನು.

೧೫. ಬ್ರಹ್ಮನು ಹೇಳಿದನು–ದೇವದೇವನೆ! ನಾಗಪರ್ಯಂಕದಲ್ಲಿರುವವನೆ! ಸರ್ವೇಶನೆ! ಸರ್ವಾತ್ಮನೆ! ಸರ್ವದೇವಮಯನೆ! ಅಚ್ಯುತನೆ! ನನಗೆ ಪ್ರಸನ್ನನಾಗು.

೧೬. ನೀನು ಜಗತ್ತು ಎಂಬ ಮರಕ್ಕೆ ಮೊದಲು ಬೀಜರೂಪವಾಗಿ ಹುಟ್ಟಿಸುತ್ತೀಯೆ. ಅನಂತರ ಅದಕ್ಕೆ ನೀರನ್ನು ಹಾಕಿ ಬೆಳೆಸುತ್ತೀಯೆ. ಕೊನೆಯಲ್ಲಿ ಅದೆಲ್ಲವನ್ನೂ ನಾಶಮಾಡುತ್ತೀಯೆ. ನೀನು ಸ್ವತಂತ್ರನು. ನಿನಗೆ ಇಷ್ಟಬಂದಂತೆ ಮಾಡಬಲ್ಲೆ.

ತ್ವಮೇವ ದಧಸೇ ರೂಪಂ ಜಗತ್ಸರ್ವಂ ಸನಾತನಂ ।
ತ್ವಮವ್ಯಕ್ತೋ ಹಿ ಭೂತಾದಿಃ ಪ್ರಧಾನಪುರುಷೋತ್ತಮಃ ॥ ೧೭ ॥

ತ್ವಮಾದಿಮಧ್ಯಾನ್ತವಪುಃ ಜಗತಃ ಪರಮೇಶ್ವರಃ ।
ತ್ವಮೇವ ಸರ್ವಲೋಕಾನಾಮಾಶ್ರಯಃ ಪುರುಷೋತ್ತಮಃ ॥ ೧೮ ॥

ಭೂತಾದಿಸ್ತ್ವಂ ಮಹದ್ಭೂತಂ ಭೂತಸಂಹಾರಕಾರಣಂ ।
ತ್ವಮಹಂಕಾರಮಾಶ್ರಿತ್ಯ ಗುಣತ್ರೈವಿಧ್ಯಮಾಪ್ತವಾನ್ ॥ ೧೯ ॥

ತ್ವಮಾದಿಭೂತಶ್ಚಾನ್ತಸ್ತ್ವಂ ತ್ವಂ ವಾಯುಃ ಸರ್ವಗೋ ಮಹಾನ್ ।
ತ್ವಮಾದಿಸ್ತ್ವಮನಾದಿಶ್ಚ ತ್ವಮಗ್ನಿಸ್ತೇಜಸಾಂ ನಿಧಿಃ ॥ ೨೦ ॥

ತ್ವಮಾಪಸ್ಸರ್ವಜಗತಾಂ ಜೀವನಃ ಪರಮೇಶ್ವರಃ ।
ತ್ವಂ ಭೂಮಿರ್ಜಗದಾಧಾರೋ ಭೂಧರಸ್ತ್ವಂ ಮಹಾಮತೇ ॥ ೨೧ ॥

---

೧೭. ನೀನೇ ಈ ಜಗತ್ತಿನ ರೂಪವನ್ನು ಹೊಂದುತ್ತೀಯೆ. ಸನಾತನನು. ನೀನು ಅವ್ಯಕ್ತನು. ಭೂತಗಳಿಗೆಲ್ಲಾ ಮೊದಲನೆಯವನು. ಪ್ರಧಾನ ಪುರುಷರಲ್ಲಿ ಉತ್ತಮನು.

೧೮. ಎಲೈ ಸ್ವಾಮಿಯೆ! ಪ್ರಪಂಚಕ್ಕೆ ನೀನೇನೇ ಆದಿಯುವನೂ ಮಧ್ಯದವನೂ ಕೊನೆಯವನೂ ಆಗಿದ್ದೀಯೆ. ನೀನೇ ಎಲ್ಲಾ ಲೋಕಗಳಿಗೂ ಆಶ್ರಯನು. ಪುರುಷೋತ್ತಮನು.

೧೯. ನೀನು ಭೂತಗಳಿಗೆ ಆದಿಯು. ಮಹಾಭೂತವು. ಆ ಭೂತಗಳನ್ನು ಸಂಹರಿಸುವುದಕ್ಕೆ ಕಾರಣನು. ನೀನೇ ಅಹಂಕಾರವನ್ನು ಹೊಂದಿ ಸತ್ವ, ರಜಸ್ತಮೋಗುಣಗಳಿಂದ ಮೂರು ಬಗೆಯಾದ ದೇಹಿಯಾದೆ.

೨೦-೨೧. ನೀನೇ ಮೊದಲನೆಯ ಭೂತವು. ನೀನೇನೇ ಕೊನೆಯ ಭೂತವೂ ಆಗಿದ್ದೀಯೆ. ನೀನೇ ಎಲ್ಲಾ ಕಡೆಯಲ್ಲಿಯೂ ಸಂಚರಿಸುವ ವಾಯುವು. ನೀನೇ ಪ್ರಪಂಚಕ್ಕೆ ಆದಿಯು. ನಿನಗೆ ಆದಿಯುವರು ಯಾರೂ ಇಲ್ಲ. ನೀನೇ ಅಗ್ನಿಯು. ನೀನೇ ತೇಜಸ್ಸಿಗೆಲ್ಲಾ ನಿಧಿಯು. ನೀನೇ ಜಗತ್ತಿಗೆಲ್ಲಾ

ಸರಿತಸ್ಸಾಗರಸ್ತ್ವಂ ವೈ ಸರ್ವಸ್ಯಾದಿಸ್ತ್ವಮೇವ ಚ ।
ದೇವರ್ಷಿಸ್ಸರ್ವಭೂತಾನಿ ತ್ವಮೇವ ಪುರುಷೋತ್ತಮಃ ॥ ೨೨ ॥

ತ್ವಯೈವ ಪ್ರೇರಿತಾ ಲೋಕಾಶ್ಚೇಷ್ಟನ್ತೇ ಸಾಧ್ವಸಾಧುಷು ।
ದೈತ್ಯೇನಾಪಹೃತಾ ವೇದಾಃ ಪ್ರವಿಷ್ಟೇನ ಮಹಾರ್ಣವಂ ॥ ೨೩ ॥

ವೇದಾಧಾರಮಿದಂ ಸರ್ವಂ ಜಗತ್ ಸ್ಥಾವರಜಂಗಮಂ ।
ವೇದಾಶ್ಚೈವ ಹಿ ಸರ್ವೇಷಾಂ ಧರ್ಮಾಣಾಂ ಪರಿತಃ ಸ್ಥಿತಿಃ ॥ ೨೪ ॥

ವೇದೈಶ್ಚ ಸರ್ವದೇವಾನಾಂ ನಿತ್ಯತೃಪ್ತಿರ್ಭವಿಷ್ಯತಿ ।
ತಸ್ಮಾದ್ವೇದಾನ್ ಸಮಾನೇತುಂ ತ್ವಮೇವಾರ್ಹಸಿ ಕೇಶವ ॥ ೨೫ ॥

---

ಜೀವನಾಧಾರಕವಾದ ನೀರು. ನೀನೇ ಪರಮೇಶ್ವರನು. ನೀನೇ ಜಗದಾಧಾರವಾದ ಭೂಮಿಯು. ನೀನೇ ಭೂಮಿಯನ್ನು ಧರಿಸುವವನು. ನೀನೇ ನದಿಯು. ನೀನೇ ಸಮುದ್ರನು. ನೀನು ಎಲ್ಲದಕ್ಕೂ ಆದಿಭೂತನು. ನೀನೇ ದೇವರ್ಷಿಯು. ನೀನೇ ಸರ್ವಭೂತಗಳು. ನೀನೇ ಪುರುಷೋತ್ತಮನು.

೨೩. ನಿನ್ನ ಪ್ರೇರಣೆಯಿಂದಲೇ ಈ ಪ್ರಾಣಿಗಳೆಲ್ಲ ಪ್ರೇರಿತವಾಗಿ ಒಳ್ಳೆಯದು ಕೆಟ್ಟದ್ದು ಇವುಗಳಲ್ಲಿ ಪ್ರವರ್ತಿಸುತ್ತವೆ. ದೈತ್ಯನು ವೇದಗಳನ್ನು ಕದ್ದುಕೊಂಡು ಸಮುದ್ರದೊಳಹೊಕ್ಕಿರುವನು.

೨೪–೨೫. ಈ ಪ್ರಪಂಚವು ವೇದವನ್ನೇ ಆಧಾರವಾಗಿ ಉಳ್ಳದ್ದು. ವೇದಗಳಿಂದಲೇ ಎಲ್ಲಾ ಧರ್ಮಗಳೂ ನಿಂತಿರುವುವು. ವೇದಗಳಿಂದಲೇ ಎಲ್ಲಾ ದೇವತೆಗಳಿಗೂ ತೃಪ್ತಿಯು ಉಂಟಾಗುತ್ತಿರುವುದು. ಆದ್ದರಿಂದ ಎಲೈ ಕೇಶವನೆ! ವೇದವನ್ನು ತರಲು ನೀನೇ ಯೋಗ್ಯನು. ಆದ್ದರಿಂದ ಅದನ್ನು ತಂದುಕೊಡು.

॥ ಶ್ರೀ ಮಹಾದೇವ ಉವಾಚ ॥

ಏವಮುಕ್ತೋ ಹೃಷೀಕೇಶೋ ಬ್ರಹ್ಮಣಾ ಪರಮೇಶ್ವರಃ ।
ಮತ್ಸ್ಯರೂಪಂ ಸಮಾಸ್ಥಾಯ ಪ್ರವಿವೇಶ ಮಹೋದಧಿಂ ॥ ೨೬ ॥

ತಂ ದೈತ್ಯಂ ಸುಮಹಾಘೋರಂ ಮಾಕರಂ ರೂಪಮಾಸ್ಥಿತಂ ।
ತುಂಡಾಗ್ರೇಣ ವಿದ್ಯಾರ್ಯೈನಂ ಜಘಾನಾಮರಪೂಜಿತಃ ॥ ೨೭ ॥

ತಂ ಹತ್ವಾ ಸರ್ವವೇದಾಂಶ್ಚ ಸಾಂಗೋಪಾಂಗಸಮನ್ವಿತಾನ್ ।
ಗೃಹೀತ್ವಾ ಪ್ರದದೌ ತಸ್ಮೈ ಬ್ರಹ್ಮಣೇ ಸ ಮಹಾದ್ಯುತಿಃ ॥ ೨೮ ॥

ಅನ್ಯೋನ್ಯಮಾಶ್ರಿತಾ ವೇದಾ ಗ್ರಸಿತಾಸ್ತೇನ ರಕ್ಷಸಾ ।
ವ್ಯಸ್ತಾ ಭಗವತಾ ತೇನ ವ್ಯಾಸರೂಪೇಣ ಧೀಮತಾ ॥ ೨೯ ॥

ಪೃಥಗ್ಭೂತಾಭರ್ವನ್ ವೇದಾ ವ್ಯಾಸೇನೈವ ಮಹಾತ್ಮನಾ ।
ಏವಂ ಮತ್ಸ್ಯಾವತಾರೇಣ ರಕ್ಷಿತಾಃ ಸರ್ವದೇವತಾಃ ॥ ೩೦ ॥

---

೨೬. ಶ್ರೀ ಮಹಾದೇವನು ಹೇಳಿದನು-ಬ್ರಹ್ಮನು ಹೀಗೆ ಹೇಳುತ್ತಲೂ ಆ ಪರಮೇಶ್ವರನಾದ ವಿಷ್ಣುವು ಮೀನಿನ ಆಕಾರವನ್ನು ಹೊಂದಿ ಆ ಮಹಾ ಸಮುದ್ರವನ್ನು ಹೊಕ್ಕನು.

೨೭. ಆ ಸಮುದ್ರದಲ್ಲಿ ಮೊಸಳೆಯ ರೂಪವನ್ನು ಹೊಂದಿದ್ದ ಆ ರಾಕ್ಷಸನನ್ನು ಮೀನಿನ ಅವತಾರದಲ್ಲಿ ಸ್ವಾಮಿಯು ಮೂಗಿನ ತುದಿಯಿಂದಲೇ ಕೊಂದನು.

೨೮. ಆ ರಾಕ್ಷಸನನ್ನು ಕೊಂದು ಅಂಗ ಉಪಾಂಗಗಳಿಂದ ಕೂಡಿದ ಎಲ್ಲಾ ವೇದಗಳನ್ನೂ ತಂದು ಆ ಬ್ರಹ್ಮನಿಗೆ ಕೊಟ್ಟನು.

೨೯. ವೇದಗಳೆಲ್ಲವೂ ಆ ರಾಕ್ಷಸನು ನುಂಗಿದ್ದುದರಿಂದ ಅವನ ಹೊಟ್ಟೆಯಲ್ಲಿ ಸೇರಿ ಕಲೆತುಹೋಗಿರಲು ಅವನ್ನು ಆ ಭಗವಂತನೇ ವ್ಯಾಸರ ಅವತಾರವನ್ನು ಹೊಂದಿ ವಿಭಾಗಮಾಡಿದನು.

೩೦. ಆಗ ಆ ವ್ಯಾಸನಿಂದ ವೇದಗಳು ಬೇರ್ಪಡಿಸಲ್ಪಟ್ಟು ಬೇರೆಬೇರೆಯಾಗಿ ಪ್ರಕಾಶಿಸಿದುವು. ಈ ರೀತಿಯಾಗಿ ಆ ಸ್ವಾಮಿಯು ಮತ್ಸ್ಯವತಾರದಲ್ಲಿ ಎಲ್ಲಾ ಪ್ರಜೆಗಳನ್ನೂ ಕಾಪಾಡಿದನು.

ಶ್ರುತಿಪ್ರದಾನೇನ ಜಗತ್ತ್ರಯಂ ತದಾ
ಕೃತ್ವಾ ನಿರಾತಂಕಮವಾಪ್ಯ ಧರ್ಮಂ ।
ಸಂಸ್ತೂಯಮಾನಸ್ಸುರಸಿದ್ಧಸಂಘೈಃ
ಅನ್ತರ್ದಧೇ ಯೋಗಿಭಿರರ್ಚಿತಾಂಘ್ರಿಃ ॥ ೩೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಮತ್ಸ್ಯಾವತಾರ ಕಥನಂ ನಾಮ ಅಷ್ಟಪಂಚಾಶದಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೩೧. ವೇದವನ್ನು ತಂದು ಲೋಕಗಳಿಗೆ ಕೊಟ್ಟುದರಿಂದ ಮೂರು ಲೋಕವನ್ನೂ ಆತಂಕವಿಲ್ಲದಂತೆ ಮಾಡಿ ಧರ್ಮವನ್ನು ಸ್ಥಾಪಿಸಿ ಸುರರು ಸಿದ್ಧರು ಇವರುಗಳಿಂದ ಪೂಜೆಯನ್ನು ಹೊಂದಿ ಹೊಗಳಿಸಿಕೊಂಡನು.

ಇಂತು ಶ್ರೀ ಪದ್ಮಮಹಾಪುರಾಣ ಉತ್ತರಖಂಡ ಉಮಾಮಹೇಶ್ವರ ಸಂವಾದದಲ್ಲಿ ಮತ್ಸ್ಯಾವತಾರ ಕಥನ ಎಂಬ ಇನ್ನೂರ ಐವತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಊನಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ||



**|| ರುದ್ರ ಉವಾಚ ||**

**ಯತ್ಕೌರ್ಮಂ ವೈಭವಂ ವಿಷ್ಣೋಃ ಸರ್ವಲೋಕನಮಸ್ಕೃತಂ |**
**ತದ್ವಕ್ಷ್ಯಾಮಿ ಪ್ರಿಯೇ ಸಮ್ಯಕ್ ಶೃಣುಷ್ವೈಕಾಗ್ರಚೇತಸಾ || ೧ ||**

**ಅತ್ರಿಪುತ್ರೋ ಮಹಾತೇಜಾ ದುರ್ವಾಸಾ ಇತಿ ವಿಶ್ರುತಃ |**
**ಪ್ರಚಂಡಃ ಸರ್ವಲೋಕಾನಾಂ ಕ್ಷೋಭಕಾರೀ ಮಹಾತಪಾಃ || ೨ ||**

**ಸ ಯಯೌ ಹಿಮವತ್ಪೃಷ್ಠೇ ಬ್ರಹ್ಮರ್ಷಿಸ್ತಪಸೋ ನಿಧಿಃ |**
**ಉಷಿತಸ್ತತ್ರ ವರ್ಷಂ ತು ಕಿನ್ನರೀಭಿಃ ಸ ಪೂಜಿತಃ || ೩ ||**

---

### ಇನ್ನೂರ ಐವತ್ತೊಂಭತ್ತನೆಯ ಅಧ್ಯಾಯವು



೧. ರುದ್ರನು ಹೇಳಿದನು-ಎಲೈ ಪ್ರಿಯಳೆ! ವಿಷ್ಣುವಿನ ಸರ್ವಲೋಕ ನಮಸ್ಕೃತವಾದ ಕೂರ್ಮಾವತಾರದ ವೈಭವವನ್ನು ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು.

೨. ದುರ್ವಾಸನೆಂಬ ಒಬ್ಬ ಮಹರ್ಷಿಯಿರುವನು. ಅವನು ಅತ್ರಿಋಷಿಯ ಮಗನು. ಬಹುವಾದ ಗಟ್ಟಿಗನು. ಎಲ್ಲ ಲೋಕಗಳಿಗೂ ಕ್ಷೋಭವನ್ನು ಮಾಡ ಬೇಕೆಂಬ ಇಚ್ಛೆಯುಳ್ಳವನು. ಮಹಾ ತಪಸ್ವಿಯು.

೩. ಆ ತಪೋನಿಧಿಯಾದ ದೂರ್ವಾಸನು ಹಿಮವಂತನ ತಪ್ಪಲಿಗೆ ಹೋಗಿ ಕಿನ್ನರಿಯರಿಂದ ಪೂಜಿಸಲ್ಪಡುತ್ತಾ ಒಂದು ವರ್ಷಕಾಲ ವಾಸಮಾಡಿ ಕೊಂಡಿದ್ದನು.

**ಮಹೇಂದ್ರಂ ದ್ರಷ್ಟುಕಾಮೋಽಯಂ ಸ್ವರ್ಲೋಕಂ ಪ್ರಯಯೌ ಮುನಿಃ ।**
**ತಸ್ಮಿನ್ ಕಾಲೇ ಮಹಾತೇಜಾ ಗಜಾರೂಢಂ ಸುರೇಶ್ವರಂ ॥ ೪ ॥**

**ದದರ್ಶ ಸರ್ವದೇವೈಸ್ತಂ ಪೂಜ್ಯಮಾನಂ ಶಚೀಪತಿಂ ।**
**ತಂ ದೃಷ್ಟ್ವಾ ಸ ಪ್ರಹೃಷ್ಟಾತ್ಮಾ ದುರ್ವಾಸಾಶ್ಚ ಮಹಾತಪಾಃ ॥ ೫ ॥**

**ಪಾರಿಜಾತಸ್ರಜಂ ತಸ್ಮೈ ಪ್ರದದೌ ವಿನಯಾನ್ವಿತಃ ।**
**ಆದಾಯ ದೇವತಾಧೀಶಸ್ತಾಂ ಸ್ರಜಂ ಗಜಮೂರ್ಧನಿ ॥ ೬ ॥**

**ವಿನ್ಯಸ್ಯ ತತ್ರ ದೇವೇಶಃ ಪ್ರಯಯೌ ನಂದನಂ ಪ್ರತಿ ।**
**ಕರೇಣಾದಾಯ ತಾಂ ಮಾಲಾಂ ಮದೋದ್ರಿಕ್ತಸ್ತತೋ ಗಜಃ ॥ ೭ ॥**

**ಪೀಡಯಿತ್ವಾಥ ಚಿಕ್ಷೇಪ ಸಂಛಿನ್ನಾಂ ಧರಣೀತಲೇ ।**
**ತತಃ ಕ್ರುದ್ಧೋ ಮಹಾತೇಜಾ ದುರ್ವಾಸಾ ರಕ್ತಲೋಚನಃ ॥**
**ಪ್ರಶಪ್ತವಾನ್ ಮಹೇಂದ್ರಂ ತಂ ಸಂತಪ್ತಃ ಕ್ರೋಧವಹ್ನಿನಾ ॥ ೮ ॥**

---

೪-೮. ಅವನು ಒಂದುಬಾರಿ ದೇವೇಂದ್ರನನ್ನು ನೋಡಲು ಅಪೇಕ್ಷೆಯುಳ್ಳವನಾಗಿ ಸ್ವರ್ಗಲೋಕಕ್ಕೆ ಹೋದನು. ಈತನು ಹೋದಾಗ ಆ ಇಂದ್ರನು ಆನೆಯ ಮೇಲೆ ಕುಳಿತುಕೊಂಡು ಬರುತ್ತಿದ್ದನು. ಎಲ್ಲಾ ದೇವತೆಗಳೂ ಅವನನ್ನು ಗೌರವಿಸುತ್ತಿದ್ದರು. ಇಂತಹ ದೇವೇಂದ್ರನನ್ನು ದೂರ್ವಾಸ ಋಷಿಯು ನೋಡಿದನು. ಮಹಾತಪಸ್ವಿಯಾದ ಈ ದೂರ್ವಾಸ ಋಷಿಗೆ ಆ ದೇವೇಂದ್ರನನ್ನು ನೋಡಿ ಬಹುವಾದ ಸಂತೋಷವುಂಟಾಯಿತು. ಕೈಯ್ಯಲ್ಲಿದ್ದ ಪಾರಿಜಾತದ ಹೂಮಾಲೆಯನ್ನು ಆತನಿಗೆ ಕೊಟ್ಟನು. ದೇವತಾಧೀಶನಾದ ಈ ಇಂದ್ರನೇ ಆ ಮಾಲೆಯನ್ನು ತೆಗೆದುಕೊಂಡು ಆನೆಯ ಕುಂಭಸ್ಥಳದಲ್ಲಿಟ್ಟುಕೊಂಡು ನಂದನವನಕ್ಕೆ ಹೋದನು. ಮದದಿಂದ ಕೂಡಿದ ಆ ಆನೆಯು ಆ ಮಾಲೆಯನ್ನು ಸೊಂಡಿಲಿನಿಂದ ತೆಗೆದುಕೊಂಡು ಚೆನ್ನಾಗಿ ಹೊಸಗಿ ಚೂರುಚೂರು ಮಾಡಿ ನೆಲದಮೇಲೆ ಬಿಸಾಡಿತು. ಆಗ ದೂರ್ವಾಸನು ಕಣ್ಣನ್ನು ಕೆಂಪಗೆ ಮಾಡಿಕೊಂಡು ಕೋಪಾಗ್ನಿಯಿಂದ ದಹಿಸುತ್ತಾ ಇಂದ್ರನನ್ನು ಶಪಿಸಿದನು.

॥ ದೂರ್ವಾಸ ಉವಾಚ ॥

ತ್ರೈಲೋಕ್ಯೈಕಶ್ರಿಯಾ ಯುಕ್ತೋ ಯಸ್ಮಾನ್ಮಾಮವಮನ್ಯಸೇ ।
ತಸ್ಮಾತ್ತ್ರೈಲೋಕ್ಯಶ್ರೀರ್ನಷ್ಟಾ ಭವತ್ವೇವ ನ ಸಂಶಯಃ ॥ ೯ ॥

॥ ರುದ್ರ ಉವಾಚ ॥

ಇತಿ ಶಪ್ತಸ್ತತಃ ಶಕ್ರೋ ಜಗಾಮ ಸ್ವಪುರಂ ಪುನಃ ।
ತತಃ ಶ್ರೀಃ ಜಗತಾಂ ಧಾತ್ರೀ ಕ್ಷಣಾದಂತರ್ದಧೇ ಸ್ವಯಂ ॥ ೧೦ ॥

ಅಂತರ್ಧಾನಂ ಗತಾ ಲಕ್ಷ್ಮೀಃ ತದಾ ನಷ್ಟಂ ಜಗತ್ತ್ರಯಂ ।
ಯದಪಾಂಗಾಶ್ರಿತಂ ಸರ್ವಂ ಜಗತ್ ಸ್ಥಾವರಜಂಗಮಂ ॥ ೧೧ ॥

ತಸ್ಯಾ ಮನ್ತರ್ಧಾನವತ್ಯಾಂ ಸರ್ವಂ ನಷ್ಟತರಂ ಭವೇತ್ ।
ಬ್ರಹ್ಮಾದಿತ್ರಿದಶಾಸ್ಸರ್ವೇ ಗಂಧರ್ವಾ ಯಕ್ಷಕಿನ್ನರಾಃ ॥ ೧೨ ॥

---

೯. ದೂರ್ವಾಸನು ಹೇಳಿದನು-ಎಲೈ ಇಂದ್ರನೆ! ನೀನು ಮೂರು ಲೋಕದ ಸಂಪತ್ತಿನಿಂದಲೂ ಗರ್ವಿತವಾಗಿ ನನ್ನನ್ನು ನಿರ್ಲಕ್ಷಿಸಿ ಅವಮಾನಪಡಿಸಿದ್ದೀಯೆ. ಆದ್ದರಿಂದ ನಿನ್ನ ಆ ಮೂರು ಲೋಕದ ಸಂಪತ್ತೂ ನಾಶವಾಗಲಿ. ಇದರಲ್ಲಿ ಸಂಶಯವಿಲ್ಲ.

೧೦. ರುದ್ರನು ಹೇಳಿದನು-ಹೀಗೆ ಶಾಪವನ್ನು ಹೊಂದಿದ ಇಂದ್ರನು ಹಿಂದಿರುಗಿ ಮನೆಗೆ ಹೊರಟುಹೋದನು, ಅನಂತರ ಜಗದ್ಧಾತ್ರಿಯಾದ ಲಕ್ಷ್ಮಿಯು ಕ್ಷಣಕಾಲದಲ್ಲಿಯೇ ಅದೃಶ್ಯಳಾದಳು.

೧೧. ಒಡನೆಯೇ ಲಕ್ಷ್ಮಿಯು ಅದೃಶ್ಯಳಾಗಲು ಆ ಲಕ್ಷ್ಮಿಯ ಕಡೆಗಣ್ಣಿನ ನೋಟದಿಂದಲೇ ಬದುಕುತ್ತಿರುವ ಸ್ಥಾವರ ಜಂಗಮಾತ್ಮಕವಾದ ಈ ಜಗತ್ತು ನಾಶವಾಗಿ ಹೋಯಿತು. (ಲಕ್ಷ್ಮಿಯಿಲ್ಲದ್ದರಿಂದ ಕಷ್ಟಕ್ಕೆ ಈಡಾಯಿತು.)

೧೨-೧೪. ಆ ಲಕ್ಷ್ಮಿಯು ಹೊರಟುಹೋದರೆ ಎಲ್ಲವೂ ನಾಶವಾಗಿ ಹೋಗುತ್ತವೆ. ಬ್ರಹ್ಮನೇ ಮುಂತಾದ ದೇವತೆಗಳು, ಗಂಧರ್ವರು, ಯಕ್ಷರು,

ದೈತ್ಯಾಶ್ಚ ದಾನವಾ ನಾಗಾ ಮನುಷ್ಯಾ ರಾಕ್ಷಸಾಸ್ತಥಾ ।
ಪಶವಃ ಪಕ್ಷಿಣಃ ಕೀಟಾಃ ಸರ್ವೇ ಸ್ಥಾವರಜಂಗಮಾಃ ॥ ೧೩ ॥

ತಯಾ ಲಕ್ಷ್ಮ್ಯಾ ಜಗನ್ಮಾತ್ರಾ ತೇ ಸರ್ವೇ ನಾವಲೋಕಿತಾಃ ।
ದಾರಿದ್ರ್ಯೇಣೈವ ನಿಹತಾಃ ತೇ ಸರ್ವೇ ದುಃಖಭಾಗಿನಃ ॥ ೧೪ ॥

ಕ್ಷುತ್ಪಿಪಾಸಾನ್ವಿತಾಸ್ಸರ್ವೇ ಚುಕ್ರುಶುರ್ವೈ ನಿರಂತರಂ ।
ನ ವವೃಷುಃ ಜಲಧರಾಃ ಸರ್ವೇ ಶುಷ್ಕಾಃ ಜಲಾಶಯಾಃ ॥ ೧೫ ॥

ಸರ್ವೇ ತೇ ಪಾದಪಾಶ್ಶುಷ್ಕಾ ಫಲಪುಷ್ಪವಿವರ್ಜಿತಾಃ ।
ತದಾ ದೇವಾಸ್ಸಗಂಧರ್ವಾಃ ದೈತ್ಯದಾನವರಾಕ್ಷಸಾಃ ॥ ೧೬ ॥

ಕ್ಷುತ್ಪಿಪಾಸಾರ್ದಿತಾ ಜಗ್ಮುಃ ಬ್ರಹ್ಮಾಣಮಮಿತೌಜಸಂ ।
ಊಚುಸ್ತಂ ದೇವದೇವೇಶಮಬ್ಜಯೋನಿಂ ಪಿತಾಮಹಂ ॥ ೧೭ ॥

---

ಕಿನ್ನರರು, ದೈತ್ಯರು, ದಾನವರು, ಮನುಷ್ಯರು, ರಾಕ್ಷಸರು, ಪಶುಗಳು, ಪಕ್ಷಿಗಳು, ಕೀಟಗಳು, ಒಟ್ಟಿನಲ್ಲಿ ಸ್ಥಾವರಜಂಗಮಗಳೆಲ್ಲವೂ ಕೂಡ ಆ ಜಗನ್ಮಾತೆಯಾದ ಲಕ್ಷ್ಮಿಯ ದೃಷ್ಟಿಗೆ ಬೀಳದಾದುವು. ಇದರಿಂದ ದಾರಿದ್ರ್ಯವು ಹೆಚ್ಚಿ ದುಃಖಪಡುತ್ತ ಹಾಳಾಗುತ್ತಾ ಬಂದುವು.

೧೫. ಹಸಿವು ಬಾಯಾರಿಕೆಗಳಿಂದ ತೊಂದರೆಪಡುತ್ತ ಎಲ್ಲವೂ ಯಾವಾಗಲೂ ದುಃಖಪಡುತ್ತಿದ್ದುವು. ಮೋಡಗಳು ಮಳೆಯನ್ನು ಸುಯ್ಯಿಸಲಿಲ್ಲ. ಎಲ್ಲೆಲ್ಲಿಯೂ ಕೆರೆಕಟ್ಟೆಗಳೆಲ್ಲವೂ ನೀರಿಲ್ಲದೆ ಬತ್ತಿಹೋದುವು.

೧೬-೧೭. ಎಲ್ಲಾ ಮರಗಳೂ ಹಣ್ಣು ಹೂಗಳನ್ನು ಬಿಡದೆ ಒಣಗಿದುವು. ಆಗ ದೇವದಾನವ ಗಂಧರ್ವ ರಾಕ್ಷಸರೇ ಮುಂತಾದವರು ಹಸಿವು ಬಾಯಾರಿಕೆಗಳಿಂದ ಕೂಡಿದವರಾಗಿ ಬ್ರಹ್ಮನ ಬಳಿಗೆ ಹೋದರು. ಕಮಲಜನೂ ಪಿತಾಮಹನೂ ಆದ ಆ ಬ್ರಹ್ಮನನ್ನು ಕುರಿತು ಇಂತೆಂದರು.

|| ದೇವಾ ಊಚುಃ ||

ಭಗವನ್ ಕ್ಷುತ್ಪಿಪಾಸಾಭ್ಯಾಂ ಪೀಡಿತಂ ಹಿ ಜಗತ್ತ್ರಯಂ ।
ನ ಹುತಂ ನ ವಷಟ್ಕಾರಃ ಸರ್ವಧರ್ಮವಿವರ್ಜಿತಂ || ೧೮ ||

ಕ್ಷುತ್ಪಿಪಾಸಾರ್ದಿತಾಸ್ಸರ್ವೇ ದೇವದಾನವಮಾನವಾಃ ।
ತ್ರಾತಾರಂ ಸರ್ವಲೋಕೇಶಂ ಭವಂತಂ ಶರಣಂ ಗತಾಃ ॥
ತ್ರಾತುಮರ್ಹಸಿ ದೇವೇಶ ಕ್ಷುತ್ಪಿಪಾಸಾರ್ದಿತಾನ್ ಜನಾನ್ || ೧೯ ||

|| ರುದ್ರ ಉವಾಚ ||

ಇತಿ ತೇಷಾಂ ವಚಶ್ಶ್ರುತ್ವಾ ಸರ್ವಲೋಕಪಿತಾಮಹಃ ।
ಉವಾಚ ಪರಮಪ್ರೀತಸ್ತಾನ್ ಸರ್ವಾನ್ ಪ್ರತಿ ಮಾನದಃ || ೨೦ ||

॥ ಬ್ರಹ್ಮೋವಾಚ ॥

ಶೃಣುಧ್ವಂ ದೇವತಾಸ್ಸರ್ವೇ ದೈತ್ಯಗಂಧರ್ವಮಾನವಾಃ ।
ಮಹೇಂದ್ರಸ್ಯಾಪಚಾರೇಣ ಸರ್ವಮೇತದುಪಸ್ಥಿತಂ || ೨೧ ||

---

೧೮. ದೇವತೆಗಳು ಹೇಳಿದರು–ಎಲೈ ಸ್ವಾಮಿಯೆ! ಮೂರು ಲೋಕವೂ ಕೂಡ ಹಸಿವು ಬಾಯಾರಿಕೆಗಳಿಂದ ತೊಂದರೆಪಡುತ್ತಿರುವುದು. ಹೋಮಮಾಡುತ್ತಲಿಲ್ಲ. ವಷಟ್ಕಾರಗಳಿಲ್ಲ. ಧರ್ಮಗಳೊಂದೂ ನಡೆಯುತ್ತಲೇ ಇಲ್ಲ.

೧೯. ದೇವ ದಾನವ ಮಾನವರೆಲ್ಲರೂ ಹಸಿವು ಬಾಯಾರಿಕೆಗಳಿಂದ ತೊಂದರೆಪಡುತ್ತಿದ್ದಾರೆ. ಆದ್ದರಿಂದ ಪ್ರಪಂಚಕ್ಕೆಲ್ಲವೂ ರಕ್ಷಕನಾದ ನಿನ್ನ ಬಳಿಗೆ ಬಂದಿದ್ದೇವೆ. ಹಸಿವು ಬಾಯಾರಿಕೆಯಿಂದ ಬಳಲುತ್ತಿರುವ ಈ ನಮ್ಮನ್ನು ಕಾಪಾಡು.

೨೦. ರುದ್ರನು ಹೇಳಿದನು-ಲೋಕಪಿತಾಮಹನಾದ ಆ ಬ್ರಹ್ಮನು ಅವರ ಮಾತುಗಳನ್ನು ಕೇಳಿ ಸಂತೋಷಗೊಂಡು ಅವರೆಲ್ಲರನ್ನೂ ಕುರಿತು ಇಂತೆಂದು ಹೇಳಿದನು.

೨೧. ಬ್ರಹ್ಮನು ಹೇಳಿದನು-ದೇವತೆಗಳೂ, ದೈತ್ಯರೂ, ಗಂಧರ್ವರೂ, ಮಾನವರೂ ಎಲ್ಲರೂ ಕೇಳಿರಿ. ಮಹೇಂದ್ರನ ಅಪಚಾರದಿಂದ ಇವೆಲ್ಲವೂ ಕೂಡ ಬಂದಿದೆ.

ಸಮುದ್ಭೂತಮಿದಂ ಘೋರಂ ಜಗತ್ಸಂವರ್ತಕಂ ಮಹತ್ |
ದುರ್ವಾಸಸಂ ಮಹಾತ್ಮಾನಮನಯತ್ಕ್ರೋಧಮಾತ್ಮವಾನ್ ॥ ೨೨ ॥

ತಸ್ಮಾತ್ಕ್ರುದ್ಧೇನ ತೇನೇದಂ ನಷ್ಟಂ ಲೋಕತ್ರಯಂ ಸುರಾಃ |
ಅಸೌ ರೋಷಪರೀತಾತ್ಮಾ ಕ್ರೋಧೇನ ಕಲುಷೀಕೃತಃ || ೨೩ ||

ಜಗತ್ತ್ರಯಸ್ಯ ಶ್ರೀರ್ನಷ್ಟಾ ಭವತ್ವಿತ್ಯಾಹ ದುರ್ಮತಿಃ |
ತಚ್ಛಾಪಾಜ್ಜಗತಾಂ ಧಾತ್ರೀ ಲಕ್ಷ್ಮೀರ್ನಾರಾಯಣಪ್ರಿಯಾ || ೨೪ ||

ಅನ್ತರ್ಧಾನಂ ಗತಾ ದೇವೀ ಜಗನ್ಮಾತಾ ಮಹೇಶ್ವರೀ ।
ಯದಪಾಂಗೇಕ್ಷಿತಾ ಲೋಕಾ ಭವಂತಿ ಸುಖಿನಸ್ತಥಾ || ೨೫ ||

ನಾಲೋಕಿತಾ ಜಗನ್ಮಾತ್ರಾ ದುಃಖಭಾಗಿನ ಏವ ಹಿ |
ತಸ್ಮಾತ್ಸರ್ವೇ ವಯಂ ಗತ್ವಾ ದುಗ್ಧಾಬ್ಧೌ ಸ್ಥಿತಮುತ್ತಮಂ || ೨೬ ||

ತತ್ರ ನಾರಾಯಣಂ ದೇವಮರ್ಚಯಾಮಃ ಸನಾತನಂ |
ತಸ್ಮಿನ್ ಪ್ರಸನ್ನೇ ದೇವೇಶೇ ಶಿವಮೇತದ್ಭವೇಜ್ಜಗತ್ ॥ ೨೭ ॥

---

೨೨. ಅದರಿಂದಲೇ ಜಗತ್ತನ್ನೇ ನಾಶಮಾಡುವ ಈ ಘೋರ ವಿಪತ್ತು ಬಂದಿತು. ಆ ಇಂದ್ರನು ಮಹಾತ್ಮನಾದ ದೂರ್ವಾಸನನ್ನು ಕೋಪ ಹೊಂದುವಂತೆ ಮಾಡಿದನು. ಕೋಪಗೊಂಡ ಅವನು ಈ ಪ್ರಪಂಚಗಳೆಲ್ಲವನ್ನೂ ಹಾಳು ಮಾಡಿದನು.

೨೩–೨೭. ಆ ದೂರ್ವಾಸನಿಗೆ ಬಹುವಾಗಿ ಕೋಪಬಂದುದರಿಂದ ಮೂರು ಲೋಕದ ಸಂಪತ್ತೂ ನಾಶವಾಗಲೆಂದು ಶಪಿಸಿದನು. ಆ ಶಾಪದ ದೆಸೆಯಿಂದ ನಾರಾಯಣನನ್ನು ಆಶ್ರಯಿಸಿಕೊಂಡಿದ್ದ ಆ ಲಕ್ಷ್ಮಿಯು ಜಗತ್ತಿನ ಭಾರವನ್ನು ಬಿಟ್ಟು ಪೋಷಣೆಯನ್ನು ತೊರೆದು ಹೊರಟುಹೋದಳು. ಯಾವ ಲಕ್ಷ್ಮಿಯು ಕಡೆಗಣ್ಣಿನ ನೋಟದಿಂದಲೇ ಲೋಕಗಳೆಲ್ಲವೂ ಸುಖಿಗಳಾಗುತ್ತವೆಯೋ ಆಕೆಯು ನೋಡದಿದ್ದ ಮೇಲೆ ಅವೆಲ್ಲವೂ ದುಃಖಿಗಳೇ ಸರಿ. ಆದ್ದರಿಂದ ನಾವೆಲ್ಲರೂ ಕ್ಷೀರ ಸಮುದ್ರಕ್ಕೆ ಹೋಗಿ ಅಲ್ಲಿರುವ ನಾರಾಯಣನನ್ನು ಸ್ತುತಿಸಿ ಪೂಜಿಸೋಣ. ಅವನು ನಮಗೆಲ್ಲಾ ಅನುಕೂಲವನ್ನು ಮಾಡಿಕೊಡುವನು.

|| ರುದ್ರ ಉವಾಚ ||

ಇತಿ ನಿಶ್ಚಿತ್ಯ ಮನಸಾ ಬ್ರಹ್ಮಾ ದೇವಗಣೈರ್ವೃತಃ ।
ಭೃಗ್ವಾದಿಮುನಿಭಿಸ್ಸಾರ್ಧಂ ಪ್ರಯಯೌ ಕ್ಷೀರಸಾಗರಂ || ೨೮ ||

ಕ್ಷೀರಾಬ್ಧೇರುತ್ತರತಟೇ ಬ್ರಹ್ಮರುದ್ರಾದಿದೇವತಾಃ ।
ವಿಷ್ಣುಂ ಸಮರ್ಚಯಾಮಾಸುಃ ಪೌರುಷೇಣ ವಿಧಾನತಃ || ೨೯ ||

ಜಪನ್ನಷ್ಟಾಕ್ಷರಂ ಮಂತ್ರಂ ಪೌರುಷಂ ಸೂಕ್ತಮೇವ ಚ ।
ಧ್ಯಾಯನ್ತೋಽನನ್ಯಮನಸೋ ಜುಹುವುಃ ಪರಮೇಶ್ವರಂ || ೩೦ ||

ತುಷ್ಟುವುಸ್ತ್ತವನೈರ್ದಿವ್ಯೈರ್ನಮಶ್ಚಕ್ರುರ್ವಿಧಾನತಃ ।
ತತಃ ಪ್ರಸನ್ನೋ ಭಗವಾನ್ ಸರ್ವೇಷಾಂ ಚ ದಿವೌಕಸಾಂ || ೩೧ ||

ತೇಷಾಂ ಸಂದರ್ಶನೇ ತಸ್ಥೌ ಸ್ತೂಯಮಾನೋ ಮಹರ್ಷಿಭಿಃ ।
ವೈನತೇಯಂ ಸಮಾರುಹ್ಯ ಸರ್ವದೇವಮಯಂ ವಿಭುಂ || ೩೨ ||

---

೨೮. ರುದ್ರನು ಹೇಳಿದನು—ಬ್ರಹ್ಮನು ಈ ರೀತಿಯಾಗಿ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ದೇವತೆಗಳೇ ಮುಂತಾದವರೊಡನೆಯೂ ಭೃಗುವೇ ಮುಂತಾದ ಋಷಿಗಳೊಡನೆಯೂ ಆ ಕ್ಷೀರಸಾಗರಕ್ಕೆ ಹೋದನು.

೨೯. ಆ ಕ್ಷೀರಸಾಗರದ ಉತ್ತರ ದಡದಲ್ಲಿ ಬ್ರಹ್ಮ, ರುದ್ರ ಮುಂತಾದ ದೇವತೆಗಳು ವಿಷ್ಣುವನ್ನು ಪುರುಷಸೂಕ್ತವಿಧಾನದಿಂದ ಪೂಜಿಸಿದರು.

೩೦-೩೧. ಅಷ್ಟಾಕ್ಷರ ಮಂತ್ರವನ್ನು ಜಪಿಸುತ್ತಲೂ ಪುರುಷಸೂಕ್ತವನ್ನು ಹೇಳುತ್ತಲೂ ಏಕಚಿತ್ತದಿಂದ ಭಗವಂತನನ್ನು ಧ್ಯಾನಿಸುತ್ತಾ ಅಂತೆಯೇ ಸ್ತುತಿಸಿದರು. ಶಾಸ್ತ್ರವಿಧಾನದಿಂದ ನಮಸ್ಕರಿಸಿದರು. ಅನಂತರ ಆ ಸ್ವಾಮಿಯು ಎಲ್ಲರ ವಿಷಯದಲ್ಲಿಯೂ ಪ್ರಸನ್ನನಾದನು.

೩೨. ಒಡನೆಯೇ ವಿಷ್ಣುವು ಸರ್ವದೇವತಾತ್ಮಕನಾದ ಗರುಡನ ಮೇಲೆ ಕುಳಿತುಕೊಂಡು ಆ ಮಹರ್ಷಿಗಳಿಂದ ಹೊಗಳಿಸಿಕೊಳ್ಳುತ್ತ ಅಲ್ಲಿದ್ದವರಿಗೆಲ್ಲಾ ದರ್ಶನವನ್ನು ಕೊಟ್ಟನು.

ತಂ ದೃಷ್ಟ್ವಾ ಜಗತಾಮೀಶಂ ಶಂಖಚಕ್ರಗದಾಧರಂ ।
ಪೀತವಸ್ತ್ರಂ ಚತುರ್ಬಾಹುಂ ಪುಂಡರೀಕನಿಭೇಕ್ಷಣಂ ॥ ೩೩ ॥

ಶ್ರೀವತ್ಸಕೌಸ್ತುಭೋರಸ್ಕಂ ವನಮಾಲಾವಿಭೂಷಿತಂ ।
ಕಿರೀಟಹಾರಕೇಯೂರನೂಪುರೈರುಪಶೋಭಿತಂ ॥ ೩೪ ॥

ತುಷ್ಟುವುರ್ಜಯಶಬ್ದೇನ ನಮಶ್ಚಕ್ರುರ್ನಿರಂತರಂ ।
ತತಃ ಪ್ರೋವಾಚ ಭಗವಾನ್ ಕೃಪಯಾ ಸರ್ವದೇವತಾಃ ॥ ೩೫ ॥

ವರದೋಽಸ್ಮಿ ವರಂ ದೇವಾ ವೃಣೀಧ್ವಮಿತಿ ಚಾಚ್ಯುತಃ ।
ಇತಿ ಶ್ರುತ್ವಾ ತು ತೇ ಸರ್ವೇ ದೇವಾ ಬ್ರಹ್ಮಪುರೋಗಮಾಃ ।
ಊಚುಃ ಪ್ರಾಂಜಲಯೋ ದೇವಮಿದಂ ವಚನಮೀಶ್ವರಂ ॥ ೩೬ ॥

॥ ದೇವಾ ಊಚುಃ ॥

ಭಗವನ್ಮುನಿಶಾಪೇನ ಸಂಪದ್ಧೀನಂ ಜಗತ್ತ್ರಯಂ ।
ಕ್ಷುತ್ಪಿಪಾಸಾರ್ದಿತಂ ಸರ್ವಂ ಸದೇವಾಸುರಮಾನುಷಂ ॥ ೩೭ ॥

---

೩೩-೩೬. ಶಂಖಚಕ್ರಗದಾಧರನಾದ, ಜಗದೀಶ್ವರನಾದ, ಹೊಂಬಣ್ಣದ ಬಟ್ಟೆಯನ್ನುಟ್ಟಿರುವ, ನಾಲ್ಕು ತೋಳುಗಳುಳ್ಳ, ಪುಂಡರೀಕದಂತೆ ಕಣ್ಣುಳ್ಳ, ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆಯುಳ್ಳ, ವನಮಾಲೆಯನ್ನು ಧರಿಸಿರುವ, ಕಿರೀಟ, ಹಾರ, ಕೇಯೂರ, ನೂಪುರಗಳನ್ನು ಧರಿಸಿರುವ, ಆ ಸ್ವಾಮಿಗೆ ಜಯಜಯಶಬ್ದ ಮಾಡುತ್ತ ಅನೇಕಬಾರಿ ನಮಸ್ಕರಿಸಿದರು. ಆಗ ಆ ಸ್ವಾಮಿಯು ಕೃಪೆಯಿಂದ ಎಲೈ ದೇವತೆಗಳಿರಾ! ವರವನ್ನು ಕೊಡುತ್ತೇನೆ. ಬೇಕಾದುದನ್ನು ಕೇಳಿಕೊಳ್ಳಿರಿ. ಎಂದನು. ಇದನ್ನು ಕೇಳಿ ಬ್ರಹ್ಮನೇ ಮುಂತಾದ ದೇವತೆಗಳು ಕೈಮುಗಿದು ಕೊಂಡು ಆ ಸ್ವಾಮಿಯನ್ನು ಕುರಿತು ಇಂತೆಂದು ಕೇಳಿದರು.

೩೭. ದೇವತೆಗಳು ಹೇಳಿದರು-ಎಲೈ ಸ್ವಾಮಿಯೆ! ದೂರ್ವಾಸಮುನಿಯ ಶಾಪದಿಂದ ಮೂರು ಲೋಕದಲ್ಲಿಯೂ ಸಂಪತ್ತೇ ಇಲ್ಲವು. ದೇವತೆಗಳು ಅಸುರರು ಮನುಷ್ಯರೇ ಮುಂತಾದ ಎಲ್ಲಾ ಪ್ರಾಣಿಗಳೂ ಕೂಡ ಹಸಿವು ಬಾಯಾರಿಕೆ ಗಳಿಂದ ತೊಂದರೆಪಡುತ್ತಿದ್ದಾರೆ.

ತಸ್ಮಾದ್ಭವಂತಂ ಶರಣಂ ಯಾತಾಃ ಸ್ಮ ಪುರುಷೋತ್ತಮ ।
ತ್ರಾಹಿ ಸರ್ವಮಿಮಂ ಲೋಕಂ ನಾನ್ಯಃ ಶಕ್ತೋ ಭವೇತ್ಕ್ವಚಿತ್ ॥ ೩೮ ॥

॥ ರುದ್ರ ಉವಾಚ ॥

ಇತ್ಯುಕ್ತೋ ದೈವತೈಸ್ಸರ್ವೈರಚ್ಯುತಃ ಪರಮೇಶ್ವರಃ ।
ವಿಚಾರ್ಯೈತದುವಾಚೈತಾನ್ ದೇವಾನ್ ಬ್ರಹ್ಮಪುರೋಗಮಾನ್ ॥ ೩೯ ॥

॥ ಶ್ರೀ ಭಗವಾನುವಾಚ ॥

ಅತ್ರಿಸೂನೋರ್ಮುನೇಶ್ಶಾಪಾದನ್ತರ್ಧಾನಂ ಗತಾ ರಮಾ ।
ಕಟಾಕ್ಷದರ್ಶನಾತ್ತಸ್ಯಾ ಜಗದೈಶ್ವರ್ಯಸಂಯುತಂ ॥ ೪೦ ॥

ತಸ್ಮಾದ್ಯೂಯಂ ಸುರಾಸ್ಸರ್ವೇ ಶಿವಬ್ರಹ್ಮಪುರೋಗಮಾಃ ।
ಉತ್ಪಾಟ್ಯ ಮಂದರಂ ಶೈಲಂ ನಿಧಾಯ ಕ್ಷೀರಸಾಗರೇ ॥ ೪೧ ॥

---

೩೮. ಎಲೈ ಪುರುಷೋತ್ತಮನೆ! ಆದ್ದರಿಂದ ನಿನ್ನನ್ನು ಶರಣುಹೊಕ್ಕಿದ್ದೇವೆ. ದಯಮಾಡಿ ಈ ಲೋಕಗಳನ್ನು ಕಾಪಾಡು. ನಿನ್ನನ್ನು ಬಿಟ್ಟರೆ ಬೇರೆ ಯಾರೂ ಕಾಪಾಡುವವರಿಲ್ಲ.

೩೯. ರುದ್ರನು ಹೇಳಿದನು–ದೇವತೆಗಳೆಲ್ಲರೂ ಹೀಗೆಂದು ಹೇಳಲು ಸರ್ವೇಶ್ವರನಾದ ಆ ಅಚ್ಯುತನು ಎಲ್ಲವನ್ನೂ ಯೋಚಿಸಿ ಬ್ರಹ್ಮನೇ ಮುಂತಾದವರನ್ನು ಕುರಿತು ಇಂತೆಂದನು.

೪೦. ಶ್ರೀಭಗವಂತನು ಹೇಳಿದನು-ಅತ್ರಿಋಷಿಯ ಮಗನಾದ ದೂರ್ವಾಸನ ಶಾಪದಿಂದ ಲಕ್ಷ್ಮಿಯು ಕಾಣದಂತೆ ಹೊರಟುಹೋಗಿದ್ದಾಳೆ. ಅವಳು ಬಂದು ನೋಡಿದರೆ ಈ ಪ್ರಪಂಚವೆಲ್ಲವೂ ಐಶ್ವರ್ಯದಿಂದ ಕೂಡಿಕೊಳ್ಳುವುದು.

೪೧-೪೨. ಆದಕಾರಣ ಬ್ರಹ್ಮರುದ್ರ ದೇವತೆಗಳೇ ಮುಂತಾದ ನೀವೆಲ್ಲರೂ ಮಂದರಪರ್ವತವನ್ನು ಕಿತ್ತು ಕ್ಷೀರಸಮುದ್ರದಲ್ಲಿ ಹಾಕಿರಿ. ಆ ಮಂದರಪರ್ವತವನ್ನು

ಮಂಥಾನಂ ಮಂದರಂ ಕೃತ್ವಾ ಸರ್ಪರಾಜೇನ ವೇಷ್ಟಿತಂ ।
ಕುರುಧ್ವಂ ಮಂಥನಂ ದೇವಾ ದೈತ್ಯಗಂಧರ್ವದಾನವೈಃ ॥ ೪೨ ॥

ಉತ್ಪದ್ಯತೇ ಚ ಸಾ ಲಕ್ಷ್ಮೀರ್ಜಗತ್ಸಂರಕ್ಷಣಾಯ ವೈ ।
ತಯಾ ದೃಷ್ಟಾ ಮಹಾಭಾಗಾ ಭವಿಷ್ಯಥ ನ ಸಂಶಯಃ ॥ ೪೩ ॥

ಧಾರಯಾಮ್ಯಹಮೇವಾದ್ರಿಂ ಕೂರ್ಮರೂಪೇಣ ಸಂವೃತಃ ।
ಮಮ ಶಕ್ತ್ಯಾ ಸುರಾನ್ ಸರ್ವಾನ್ ಪ್ರವಿಶ್ಯ ಚ ಬಲೀಯಸಃ ॥ ೪೪ ॥

॥ ರುದ್ರ ಉವಾಚ ॥

ಇತ್ಯುಕ್ತಾ ದೇವತಾಸ್ಸರ್ವಾ ಹರಿಣಾ ಕಮಲೇಕ್ಷಣೇ ।
ಸಾಧು ಸಾಧ್ವಿತಿ ದೇವೇಶಮೂಚುರ್ಬ್ರಹ್ಮಪುರೋಗಮಾಃ ॥ ೪೫ ॥

---

ಕಡೆಗೋಲನ್ನಾಗಿ ಮಾಡಿಕೊಂಡು ಸರ್ಪರಾಜನಾದ ವಾಸುಕಿಯನ್ನು ಕಡೆಯುವ ಹಗ್ಗವನ್ನಾಗಿ ಮಾಡಿಕೊಂಡು ನೀವೆಲ್ಲರೂ ಸೇರಿಕೊಂಡು ಆ ಸಮುದ್ರವನ್ನು ಕಡೆಯಿರಿ.

೪೩. ಆಗ ಆ ಲಕ್ಷ್ಮಿಯು ಜಗತ್ತನ್ನು ರಕ್ಷಿಸಲು ಹುಟ್ಟುವಳು. ಅವಳಿಂದ ಪ್ರಪಂಚವು ನೋಡಲ್ಪಟ್ಟು ಸುಖವನ್ನು ಹೊಂದುತ್ತವೆ.

೪೪. ನಾನೂ ಕೂಡ ನನ್ನ ಬಲದಿಂದ ದೇವತೆಗಳೆಲ್ಲರಲ್ಲಿಯೂ ಪ್ರವೇಶಿಸುತ್ತೇನೆ. ಮತ್ತು ಕೂರ್ಮ (ಆಮೆ) ದ ರೂಪಿನಿಂದ ಆ ಮಂದರವನ್ನು ಧರಿಸುತ್ತೇನೆ.

೪೫. ರುದ್ರನು ಹೇಳಿದನು-ಎಲೈ ಪಾರ್ವತಿಯೆ! ಆ ಹರಿಯು ಹೀಗೆಂದು ಹೇಳಲು ಬ್ರಹ್ಮನೇ ಮುಂತಾದ ದೇವತೆಗಳೆಲ್ಲರೂ ಸಾಧು ಸಾಧು ಎಂಬುದಾಗಿ ಆ ಸ್ವಾಮಿಯನ್ನು ಹೊಗಳಿದರು.

**ಸಂಸ್ತೂಯಮಾನೋ ಭಗವಾನಚ್ಯುತಃ ಸುರಸತ್ತಮೈಃ |**
**ಅಂತರ್ದಧೇ ತತಃ ಶ್ರೀಮಾನ್ ಸರ್ವಲೋಕನಮಸ್ಕೃತಃ ||**
**ಸರ್ವಾಧಾರಸ್ಸರ್ವದೇವಃ ಸರ್ವತ್ರ ಸಮದರ್ಶನಃ || ೪೬ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ದೂರ್ವಾಸಸಃ ಶಾಪಕಥನಂ ನಾಮ ಊನಷಷ್ಟ್ಯಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೪೬. ಭಗವಂತನೂ ಸರ್ವಾಧಾರನೂ ಎಲ್ಲರನ್ನೂ ಒಂದೇ ಬಗೆಯಾಗಿ ನೋಡುವವನೂ ಆದ ಆ ಅಚ್ಯುತನು ಆ ದೇವತೆಗಳಿಂದ ಹೊಗಳಿಸಿಕೊಂಡು ಹೊರಟುಹೋದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡ ಉಮಾಮಹೇಶ್ವರ ಸಂವಾದದಲ್ಲಿ ದೂರ್ವಾಸನ ಶಾಪಕಥನವೆಂಬ ಇನ್ನೂರ ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ||



**|| ಶಂಕರ ಉವಾಚ ||**

**ತತಸ್ಸುರಗಣಾಸ್ಸರ್ವೇ ದಾನವಾದ್ಯಾ ಮಹಾಬಲಾಃ |**
**ಉತ್ಪಾಟ್ಯ ಮಂದರಂ ಶೈಲಂ ಚಿಕ್ಷಿಪುಃ ಪಯಸಾಂ ನಿಧೌ || ೧ ||**

**ತತೋ ನಾರಾಯಣಃ ಶ್ರೀಮಾನ್ ಭಗವಾನ್ ಭೂತಭಾವನಃ |**
**ಕೂರ್ಮರೂಪೇಣ ತಂ ಶೈಲಂ ದಧಾರಾಮಿತವಿಕ್ರಮಃ || ೨ ||**

**ಅನಾದಿಮಧ್ಯಾಂತವಪುಃ ವಿಶ್ವರೂಪಸ್ಸನಾತನಃ |**
**ಅಧಾರಯದ್ಗಿರಿವರಂ ಸ ಪೃಷ್ಠೇ ಜಗದೀಶ್ವರಃ || ೩ ||**

---

### ಇನ್ನೂರ ಅರವತ್ತನೆಯ ಅಧ್ಯಾಯವು



೧. ಶಂಕರನು ಹೇಳಿದನು–ಅನಂತರ ಆ ಮಹಾಬಲಿಷ್ಠರಾದ ದೇವತೆಗಳು ಮಂದರ ಪರ್ವತವನ್ನು ಕಿತ್ತು ಆ ಕ್ಷೀರಸಮುದ್ರದೊಳಗೆ ಹಾಕಿದರು.

೨. ಅನಂತರ ಹಿಂದು ಮುಂದನ್ನು ಬಲ್ಲ ನಾರಾಯಣನು ಆಮೆಯ ರೂಪವನ್ನು ಹೊಂದಿ ತನ್ನ ಪರಾಕ್ರಮದಿಂದ ಆ ಪರ್ವತವನ್ನು ಎತ್ತಿ ಹಿಡಿದನು.

೩–೪. ಎಲ್ಲಾ ಕಡೆಯಲ್ಲಿಯೂ ದೇಹವುಳ್ಳ ವಿಶ್ವರೂಪನೂ ಸನಾತನನೂ ಆದ ಆ ಸ್ವಾಮಿಯು ಕೂರ್ಮರೂಪದಿಂದ ತನ್ನ ಬೆನ್ನಿನಮೇಲೆ ಆ ಬೆಟ್ಟವನ್ನು

ತಥೈಕೇನ ಭುಜೇನೈವ ಶಿಖರಂ ಸರ್ವಗೋಽವ್ಯಯಃ ।
ತತೋ ದೇವಾಸುರಾಃ ಸರ್ವೇ ಮಮಂಥುಃ ಕ್ಷೀರಸಾಗರಂ ॥ ೪ ॥

ಸರ್ಪರಾಜೇನ ಸಂವೇಷ್ಟ್ಯ ಮಂಥಾನಂ ಮಂದರಾಚಲಂ ।
ಮಥ್ಯಮಾನೇಥ ದುಗ್ಧಾಬ್ಧೌ ದೈವತೈಸ್ಸುಮಹಾಬಲೈಃ ॥ ೫ ॥

ಉತ್ಪಾದನಾರ್ಥಂ ಲಕ್ಷ್ಮ್ಯಾಶ್ಚ ಸರ್ವ ಏತೇ ಮಹರ್ಷಯಃ ।
ಉಪೋಷ್ಯ ನಿಯಮಂ ಕೃತ್ವಾ ಜೇಪುಃ ಶ್ರೀಸೂಕ್ತಮೇವ ಚ ॥ ೬ ॥

ಸಹಸ್ರನಾಮಪಠನಂ ಚಕ್ರುರ್ದಿವ್ಯಾ ದ್ವಿಜೋತ್ತಮಾಃ ।
ಏಕಾದಶ್ಯಾಂ ತು ಶುದ್ಧಾಯಾಂ ಮಥ್ಯಮಾನೇ ಮಹಾಂಬುಧೌ ॥ ೭ ॥

ಉಪೋಷ್ಯ ಋಷಯಸ್ಸರ್ವೇ ಜೇಪುಃ ಶ್ರೀಮಂತ್ರಮುತ್ತಮಂ ।
ಕಾಂಕ್ಷಮಾಣಾಃ ಶ್ರಿಯೋ ಜನ್ಮ ಲಕ್ಷ್ಮೀನಾರಾಯಣಂ ಹರಿಂ ॥ ೮ ॥

---

ಹೊತ್ತುಕೊಂಡು ಒಂದು ಕೈಯಿಂದ ಬೆಟ್ಟದ ಶಿಖರವನ್ನು ಆ ಬೆಟ್ಟವು ಅತ್ತಿತ್ತ ಬೀಳದಂತೆ ಹಿಡಿದುಕೊಂಡನು. ಅನಂತರ ದೇವತೆಗಳೂ ಅಸುರರೂ ಆ ಬೆಟ್ಟವನ್ನು ಹಾಕಿ ಕಡೆಯಲು ಮೊದಲು ಮಾಡಿದರು.

೫-೬. ಮಂದರ ಪರ್ವತವನ್ನು ಕಡೆಗೋಲನ್ನಾಗಿ ಮಾಡಿಕೊಂಡು ಸರ್ಪರಾಜನಾದ ವಾಸುಕಿಯನ್ನು ಅದಕ್ಕೆ ಕಟ್ಟಿ ಮಹಾಬಲಿಷ್ಠರಾದ ದೇವತೆಗಳೆಲ್ಲರೂ ಆ ಕ್ಷೀರಸಮುದ್ರವನ್ನು ಕಡೆದರು. ಆ ಲಕ್ಷ್ಮಿಯು ಹುಟ್ಟುವುದಕ್ಕೋಸ್ಕರವಾಗಿ ಎಲ್ಲಾ ಮಹರ್ಷಿಗಳೂ ಉಪವಾಸವಿದ್ದುಕೊಂಡು ನಿಯಮದಿಂದ ಶ್ರೀಸೂಕ್ತವನ್ನು ಜಪಿಸುತ್ತಿದ್ದರು.

೭-೧೦. ಬ್ರಾಹ್ಮಣರೆಲ್ಲರೂ ದಿವ್ಯವಾದ ಸಹಸ್ರನಾಮವನ್ನು ಪಠಿಸುತ್ತಿದ್ದರು. ಶುದ್ಧ ಏಕಾದಶಿಯ ದಿವಸ ಆ ಸಮುದ್ರವನ್ನು ಕಡೆಯುತ್ತಿದ್ದಾಗ ಋಷಿಗಳೆಲ್ಲರೂ ಉಪವಾಸವಿದ್ದು ಲಕ್ಷ್ಮಿಯು ಹುಟ್ಟಬೇಕೆಂಬ ಇಷ್ಟದಿಂದ

ಧ್ಯಾತ್ವಾ ಸಮರ್ಚಯಾಮಾಸುಃ ದ್ವಿಜಾಗ್ರ್ಯಾ ಮುನಿಸತ್ತಮಾಃ ।
ತತಸ್ತಸ್ಮಿನ್ ಮುಹೂರ್ತೇ ತು ಮಥ್ಯಮಾನೇ ಮಹಾಂಬುಧೌ ॥ ೯ ॥

ಉದಭೂತ್ಪ್ರಥಮಂ ತತ್ರ ಕಾಲಕೂಟಂ ಮಹಾವಿಷಂ ।
ಮಹಾಪಿಂಡಂ ಮಹಾಘೋರಂ ಸಂವರ್ತಾಗ್ನಿಸಮಪ್ರಭಂ ॥ ೧೦ ॥

ದೃಷ್ಟ್ವಾ ಪ್ರದುದ್ರುವುಃ ಸರ್ವೇ ಭಯಾರ್ತಾ ದೇವದಾನವಾಃ ।
ತತಸ್ತಾನ್ ವಿದ್ರುತಾನ್ ದೃಷ್ಟ್ವಾ ಭಯಾರ್ತಾನ್ ಸುರಸತ್ತಮಾನ್ ॥೧೧॥

ತಾನ್ನಿವರ್ತ್ಯಾಬ್ರವಂ ವಾಕ್ಯಮಹಂ ತತ್ರ ಶುಭೇಕ್ಷಣೇ ।
ಭೋ ಭೋ ದೇವಗಣಾಸ್ಸರ್ವೇ ನ ಭೇತವ್ಯಂ ವಿಷಂ ಪ್ರತಿ ॥ ೧೨ ॥

ಅಹಮಾಹಾರಯಿಷ್ಯಾಮಿ ಕಾಲಕೂಟಂ ಮಹಾವಿಷಂ ।
ಇತ್ಯುಕ್ತಾಸ್ತೇ ಮಯಾ ಸರ್ವೇ ದೇವಾ ಇಂದ್ರಪುರೋಗಮಾಃ ॥ ೧೩ ॥

---

ಲಕ್ಷ್ಮೀನಾರಾಯಣನನ್ನು ಧ್ಯಾನಿಸುತ್ತಾ ಅವನನ್ನು ಪೂಜಿಸುತ್ತಿದ್ದರು. ಅವರೆಲ್ಲರೂ ಆ ಸಮುದ್ರವನ್ನು ಕಡೆಯುತ್ತಿರಲು ಆ ಮುಹೂರ್ತದಲ್ಲಿಯೇ ದೊಡ್ಡ ಪಿಂಡದ ಆಕಾರವಾಗಿರುವ ಘೋರವಾದ ಪ್ರಳಯಕಾಲದ ಅಗ್ನಿಗೆ ಸಮವಾದ ಕಾಲಕೂಟ ವಿಷವು ಮೊದಲು ಹುಟ್ಟಿತು.

೧೧. ಅದನ್ನು ನೋಡಿ ದೇವದಾನವರಿಗೆಲ್ಲರಿಗೂ ಬಹುವಾಗಿ ಹೆದರಿಕೆ ಯುಂಟಾಗಲು ಅವರು ಅಲ್ಲಿ ನಿಲ್ಲಲಾರದೆ ಭಯದಿಂದ ಓಡುತ್ತಿದ್ದರು.

೧೨-೧೬. ದೇವದಾನವರೆಲ್ಲರೂ ಭಯಪಟ್ಟು ಓಡುತ್ತಿರುವುದನ್ನು ನೋಡಿ ಅವರನ್ನು ತಡೆದು ಈ ರೀತಿಯಾದ ಮಾತನ್ನು ಹೇಳಿದೆನು. ಎಲೈ ದೇವತೆಗಳಿರಾ! ಆ ವಿಷವನ್ನು ನೋಡಿ ಹೆದರಬೇಡಿ. ಹೆದರಬೇಡಿ. ನಾನು ಆ ಕಾಲಕೂಟ ವಿಷವನ್ನು ತೆಗೆದುಕೊಳ್ಳುತ್ತೇನೆ. ನಾನು ಹೀಗೆಂದು ಹೇಳುತ್ತಲೂ ಇಂದ್ರನೇ

ಸಾಧು ಸಾಧ್ವಿತಿ ವಾಕ್ಯೈರ್ಮಾಂ ತುಷ್ಟುವುಃ ಪ್ರಣತಾ ಭೃಶಂ ।
ತದ್ದೃಷ್ಟ್ವಾ ಮೇಘಸಂಕಾಶಂ ಪ್ರಾದುರ್ಭೂತಂ ಮಹಾವಿಷಂ ॥ ೧೪ ॥

ಧ್ಯಾತ್ವಾ ನಾರಾಯಣಂ ದೇವಂ ಹೃದಯೇ ಗರುಡಧ್ವಜಂ ।
ಉದಯಾದಿತ್ಯಸಂಕಾಶಂ ಶಂಖಚಕ್ರಗದಾಧರಂ ॥ ೧೫ ॥

ಶ್ರೀಭೂಮಿಸಹಿತಂ ದೇವಂ ತಪ್ತಕಾಂಚನಕುಂಡಲಂ ।
ಏಕಾಗ್ರಮನಸಾ ಧ್ಯಾತ್ವಾ ಸರ್ವದುಃಖಹರಂ ಪ್ರಭುಂ ॥ ೧೬ ॥

ನಾಮತ್ರಯಂ ಮಹಾಮಂತ್ರಂ ಜಪನ್ ಭಕ್ತ್ಯಾ ಸಮನ್ವಿತಃ ।
ತದ್ವಿಷಂ ಪೀತವಾನ್ ಘೋರಮಾದ್ಯಂ ಸರ್ವಭಯಂಕರಂ ॥ ೧೭ ॥

ನಾಮತ್ರಯಪ್ರಭಾವಾಚ್ಚ ವಿಷ್ಣೋಃ ಸರ್ವಗತಸ್ಯ ವೈ ।
ವಿಷಂ ತದಭವಜ್ಜೀರ್ಣಂ ಲೋಕಸಂಹಾರಕಾರಕಂ ॥ ೧೮ ॥

---

ಮುಂತಾದ ದೇವತೆಗಳು ಸಾಧು ಸಾಧು ಎಂಬುದಾಗಿ ಹೇಳುತ್ತಾ ನನ್ನನ್ನು ಹೊಗಳುತ್ತಾ ನಮಸ್ಕರಿಸಿದರು. ಕಾಲ ಮೇಘದಂತೆ ಹುಟ್ಟಿದ ಆ ಮಹಾವಿಷವನ್ನು ನೋಡಿ ಗರುಡಧ್ವಜನೂ ಪ್ರಾತಃಕಾಲದ ಸೂರ್ಯನಿಗೆ ಸದೃಶನೂ ಶಂಖಚಕ್ರ ಗದಾಧರನೂ ಶ್ರೀದೇವಿ ಭೂಮಿದೇವಿಯರಿಂದ ಕೂಡಿದವನೂ ಪುಟಕ್ಕೆ ಹಾಕಿದ ಚಿನ್ನದಂತಿರುವವನೂ ಸಮಸ್ತ ದುಃಖನಾಶಕನೂ ಆದ ಶ್ರೀಮನ್ನಾರಾಯಣನನ್ನು ಒಂದೇ ಮನಸ್ಸಿನಿಂದ ಧ್ಯಾನಿಸುತ್ತಿದ್ದೆನು.

೧೭. ಅಚ್ಯುತ, ಅನಂತ, ಗೋವಿಂದ ಎಂಬ ಮೂರು ಮಹಾ ನಾಮಗಳನ್ನು ಭಕ್ತಿಯಿಂದ ಜಪಿಸುತ್ತಾ ಸರ್ವಭಯಂಕರವಾಗಿ ಮೊದಲುಬಂದ ಆ ಕಾಲಕೂಟ ವಿಷವನ್ನು ಕುಡಿದೆನು.

೧೮. ಎಲ್ಲಾ ಕಡೆಯಲ್ಲಿಯೂ ಇರುವ ಆ ವಿಷ್ಣುವಿನ ನಾಮತ್ರಯದ ಪ್ರಭಾವದಿಂದ ಲೋಕ ಸಂಹಾರಕಾರಕವಾದ ಆ ಕಾಲಕೂಟ ವಿಷವು ಜೀರ್ಣವಾಗಿ ಹೋಯಿತು.

ಅಚ್ಯುತಾನಂತ ಗೋವಿಂದ ಇತಿ ನಾಮತ್ರಯಂ ಹರೇಃ ।
ಯೋ ಜಪೇತ್ಪ್ರಯತೋ ಭಕ್ತ್ಯಾ ಪ್ರಣವಾದ್ಯಂ ನಮೋನ್ತಕಂ ॥ ೧೯ ॥

ತಸ್ಯ ಮೃತ್ಯುಭಯಂ ನಾಸ್ತಿ ವಿಷರೋಗಾಗ್ನಿಜಂ ಮಹತ್ ।
ನಾಮತ್ರಯಂ ಮಹಾಮಂತ್ರಂ ಜಪೇದ್ಯಃ ಪ್ರಯತಾತ್ಮವಾನ್ ॥ ೨೦ ॥

ಕಾಲಮೃತ್ಯುಭಯಂ ಚಾಪಿ ತಸ್ಯ ನಾಸ್ತಿ ಕಿಮನ್ಯತಃ ।
ಇತಿನಾಮತ್ರಯೇಣೈವ ಪೀತಂ ದೇವಿ ಮಯಾ ವಿಷಂ ॥ ೨೧ ॥

ತತಃ ಪ್ರಹೃಷ್ಟಾಸ್ತ್ರಿದಶಾಃ ತುಷ್ಟುವುರ್ಮಾಂ ಸುವಿಸ್ಮಿತಾಃ ।
ಮಾಂ ಪ್ರಣಮ್ಯ ಪುನರ್ದೇವಾಃ ಮಮಂಥುಃ ಕ್ಷೀರಸಾಗರಂ ॥ ೨೨ ॥

ತಸ್ಮಿನ್ ಪ್ರಮಥ್ಯಮಾನೇ ತು ಮಯಾ ದೇವೈಶ್ಚ ಭಾಮಿನಿ ।
ಜ್ಯೇಷ್ಠಾ ದೇವೀ ಸಮುತ್ಪನ್ನಾ ರಕ್ತಸ್ರಗ್ವಾಸಸಾವೃತಾ ॥ ೨೩ ॥

---

೧೯-೨೨. ಅಚ್ಯುತ, ಅನಂತ, ಗೋವಿಂದ ಎಂಬ ಹರಿಯ ಮೂರು ನಾಮಗಳನ್ನು ಯಾವನು ಭಕ್ತಿಯಿಂದ ಆದಿಗೆ ಓಂಕಾರವನ್ನೂ ಕೊನೆಗೆ ನಮಃ ಕಾರವನ್ನೂ ಸೇರಿಸಿಕೊಂಡು ಜಪಿಸುವನೋ ಅವನಿಗೆ ವಿಷದಿಂದಾಗಲಿ ಅಗ್ನಿಯಿಂದಾಗಲೀ ಮೃತ್ಯುವಿನಿಂದಾಗಲೀ ಭಯವೆಂಬುದೇ ಇಲ್ಲವು. ಈ ನಾಮತ್ರಯವನ್ನು ಯಾವನು ಪ್ರಯತ್ನಪಟ್ಟು ಏಕಮನಸ್ಸಿನಿಂದ ಜಪಿಸುವನೋ ಅವನಿಗೆ ಕಾಲಮೃತ್ಯುವಿನಿಂದಲೇ ಭಯವಿಲ್ಲವೆಂದಮೇಲೆ ಇನ್ನಾವುದರಿಂದ ಭಯವಾದೀತು ? ಹೀಗೆ ಆ ವಿಷ್ಣುವಿನ ಮೂರು ಹೆಸರುಗಳನ್ನು ಹೇಳಿಕೊಂಡೇ ನಾನು ಆ ವಿಷವನ್ನು ಕುಡಿದೆನು. ಅನಂತರ ದೇವತೆಗಳೆಲ್ಲರೂ ಸಂತೋಷ ಗೊಂಡು ಆಶ್ಚರ್ಯಪಡುತ್ತಾ ನನ್ನನ್ನು ಸ್ತುತಿಸಿ ನನಗೆ ನಮಸ್ಕರಿಸಿ ಮತ್ತೆ ಕ್ಷೀರಸಮುದ್ರವನ್ನು ಕಡೆಯಲುಪಕ್ರಮಿಸಿದರು.

೨೩. ಎಲೈ ಪಾರ್ವತಿಯೆ ! ನಾನು ದೇವತೆಗಳನ್ನು ಸೇರಿಕೊಂಡು ಅವರೊಡನೆ ಮತ್ತೆ ಸಮುದ್ರವನ್ನು ಕಡೆಯುತ್ತಿರಲು ಕೆಂಪಿನ ಹೂಮಾಲೆ ಕೆಂಪಿನ ಬಟ್ಟೆಗಳನ್ನು ಧರಿಸಿಕೊಂಡ ಜ್ಯೇಷ್ಠಾ ದೇವಿಯು ಹುಟ್ಟಿದಳು.

ಉತ್ಪನ್ನಾ ಸಾಬ್ರವೀದ್ದೇವಾನ್ ಕಿಂಕರ್ತವ್ಯಂ ಮಯೇತಿ ವೈ ।
ತಾಮಬ್ರುವನ್ ತಥಾ ದೇವೀಂ ಸರ್ವದೇವಾಗಣಾ ಭೃಶಂ　　　॥ ೨೪ ॥

॥ ದೇವಾ ಊಚುಃ ॥

ಯೇಷಾಂ ಗೃಹಾನ್ತರೇ ನಿತ್ಯಂ ಕಲಹಃ ಸಂಪ್ರವರ್ತತೇ ।
ತತ್ರೇ ಸ್ಥಾನಂ ಪ್ರಯಚ್ಛಾಮೋ ವಸ ತತ್ರಾಶುಭಾನ್ವಿತಾ　　　॥ ೨೫ ॥

ಯಸ್ಯ ಗೇಹೇ ಕಪಾಲಾಸ್ಥಿ ಭಸ್ಮಕೇಶಾದಿಚಿಹ್ನಿತಂ ।
ಪರುಷಂ ಭಾಷಣಂ ನಿತ್ಯಂ ವದಂತ್ಯನೃತವಾದಿನಃ　　　॥ ೨೬ ॥

ಸಂಧ್ಯಾಕಾಲೇ ತು ಯೇ ಪಾಪಾಃ ಸ್ವಪಂತಿ ಮಲಚೇತಸಃ ।
ತೇಷಾಂ ವೇಶ್ಮನಿ ಸಂತಿಷ್ಠ ದುಃಖದಾರಿದ್ರ್ಯದಾಯಿನೀ　　　॥ ೨೭ ॥

---

೨೪. ಹುಟ್ಟಿದೊಡನೆಯೇ ಆಕೆಯು ನಾನು ಏನು ಮಾಡಬೇಕು ? ಎಂದು ಕೇಳಿದಳು. ಆಗ ದೇವತೆಗಳೆಲ್ಲರೂ ಸೇರಿ ಆಕೆಗೆ ಇಂತೆಂದು ಹೇಳಿದರು.

೨೫. ದೇವತೆಗಳು ಹೇಳಿದರು–ಯಾರ ಮನೆಯಲ್ಲಿ ನಿತ್ಯವೂ ಜಗಳ ನಡೆಯುತ್ತಿರುತ್ತದೆಯೋ ಆ ಜಾಗವನ್ನು ನಿನಗೆ ಕೊಡುತ್ತೇವೆ. ಅಲ್ಲಿ ಸಕಲ ಅಶುಭಗಳನ್ನೂ ಹೊಂದಿಕೊಂಡು ನೀನು ಸುಖದಿಂದಿರು.

೨೬. ಯಾವನ ಮನೆಯಲ್ಲಿ ಕಪಾಲದ ಮೂಳೆಗಳಾಗಲಿ, ಕೂದಲುಗಳಾಗಲಿ ಬೂದಿಯಾಗಲಿ ಬಿದ್ದಿರುತ್ತವೆಯೋ ಯಾರ ಮನೆಯಲ್ಲಿ ಯಾವಾಗಲೂ ಕಠಿಣವಾದ ಮಾತುಗಳೇ ನಡೆಯುತ್ತಿರುತ್ತವೆಯೋ ಯಾರ ಮನೆಯಲ್ಲಿ ಯಾವಾಗಲೂ ಸುಳ್ಳೇ ಬಳಕೆಯಾಗಿರುವುದೋ ಆ ಮನೆಯಲ್ಲಿ ನೀನು ಇದ್ದುಕೊಂಡಿರು.

೨೭. ಸಂಧ್ಯಾಕಾಲಗಳಲ್ಲಿ ಸೋಮಾರಿಗಳಾಗಿ ಯಾರು ಮಲಗಿಕೊಂಡಿರುವರೋ ಆವರ ಮನೆಯಲ್ಲಿ ಅವರಿಗೆ ದುಃಖವನ್ನೂ ದಾರಿದ್ರ್ಯವನ್ನೂ ಕೊಟ್ಟುಕೊಂಡಿರು.

ಕಪಾಲಕೇಶಭಸ್ಮಾಸ್ಥಿತುಷಾಂಗಾರಾಣಿ ಯತ್ರ ತು ।
ತತ್ರ ತೇ ಸತತಂ ಸ್ಥಾನಂ ಭವಿಷ್ಯತಿ ನ ಸಂಶಯಃ ॥ ೨೮ ॥

ಯಸ್ಯ ವೇಶ್ಮ ಕಪಾಲಾಸ್ಥಿಭಸ್ಮಕೇಶಾದಿಚಿಹ್ನಿತಂ ।
ತದ್ಭಜಸ್ವಾಶುಭೇ ನಿತ್ಯಂ ಕಲಿನಾ ಸಹ ನಿತ್ಯಶಃ ॥ ೨೯ ॥

ಅಕೃತ್ವಾ ಪದಯೋಃಶೌಚಂ ಯಸ್ತ್ವಾಚಾಮತಿ ದುರ್ಮತಿಃ ।
ತಂ ಭಜಸ್ವ ಮಹಾದೇವಿ ಕಲುಷೇಣ ಭೃಶಂ ವೃತಂ ॥ ೩೦ ॥

ತುಷಾಂಗಾರಕಪಾಲಾಶ್ಮವಾಲುಕಾವಸ್ತ್ರಚರ್ಮಭಿಃ ।
ದಂತಧಾವನಕರ್ತಾರೋ ಭವಿಷ್ಯಂತಿ ನರಾಧಮಾಃ ॥ ೩೧ ॥

ಕ್ರಮಸ್ವ ಕಲಿನಾ ದೇವಿ ತೇಷಾಂ ವೇಶ್ಮಸು ನಿತ್ಯಶಃ ।
ತಿಲಪಿಷ್ಟಂ ಕಳಂಜಂ ಚ ಕಲಿಂಗಂ ಶಿಗ್ರುಗೃಂಜನಂ ॥ ೩೨ ॥

---

೨೮. ಕಪಾಲ, ಕೂದಲು, ಬೂದಿ, ಹೊಟ್ಟು, ಇದ್ದಲು ಇವು ಯಾರ ಮನೆಯಲ್ಲಿ ಯಾವಾಗಲೂ ಬಿದ್ದಿರುತ್ತದೆಯೋ ಅಲ್ಲಿ ನಿನಗೆ ಸ್ಥಾನವು. ಸಂಶಯವಿಲ್ಲ.

೨೯. ಯಾವನ ಮನೆಯಲ್ಲಿ ಕಪಾಲದ ಮೂಳೆ ಭಸ್ಮ ಕೇಶಗಳು ತುಂಬಿವೆಯೋ ಆ ಜಾಗದಲ್ಲಿ ನೀನು ಕಲಿಯೊಡನೆ ಯಾವಾಗಲೂ ಇದ್ದು ಕೊಂಡಿರು.

೩೦. ಕಾಲುಗಳನ್ನು ತೊಳೆದುಕೊಳ್ಳದೆ ಯಾವನು ಆಚಮನ ಮಾಡುತ್ತಾನೆಯೋ ಅವನನ್ನು ನಿನ್ನ ಸಕಲ ಅಶುಭಗಳಿಂದಲೂ ಹೊಂದು.

೩೧-೩೩. ಹೊಟ್ಟು, ಇದ್ದಲು, ಕಪಾಲ, ಮೂಳೆ, ಮರಳು, ಬಟ್ಟೆ, ಚರ್ಮ, ಇವುಗಳನ್ನು ಯಾವ ರೀತಿಯ ಸಾಧನದಿಂದಲಾದರೂ ಹಲ್ಲನ್ನು ಉಜ್ಜಲು ಉಪಯೋಗಿಸಿದರೆ ಅವರ ಮನೆಯಲ್ಲಿ ನೀನು ಯಾವಾಗಲೂ ಕಲಿಯೊಡನೆ ಕೂಡಿಕೊಂಡು ಸುಖಿಸುತ್ತಾ ಇರು. ಚಿಗುಳಿ, ಈರುಳ್ಳಿ, ಕಾಲಿಂಗನಗೆಡ್ಡೆ, ನುಗ್ಗೆ,

ಛತ್ರಾಕಂ ವಿಡ್ವರಾಹಂ ಚ ಬಿಲ್ವಂ ಕೋಶಾತಕೀಫಲಂ ।
ಅಲಾಬುಂ ಚ ಪಲಾಂಡುಂ ಚ ಯೇ ಖಾದನ್ತಿ ನರಾಧಮಾಃ ॥
ತೇಷಾಂ ಗೇಹೇ ತವ ಸ್ಥಾನಂ ದೇವಿ ದಾರಿದ್ರ್ಯದೇ ಸದಾ ॥ ೩೩ ॥

॥ ರುದ್ರ ಉವಾಚ ॥

ಇತ್ಯಾದಿಶ್ಯ ಸ್ಸುರಾಸ್ಸರ್ವೇ ತಾಂ ಜ್ಯೇಷ್ಠಾಂ ಕಲಿವಲ್ಲಭಾಂ ।
ಪುನಶ್ಚ ಮಂಥನಂ ಚಕ್ರುಃ ಕ್ಷೀರಾಬ್ಧೇಃ ಸುಸಮಾಹಿತಾಃ ॥ ೩೪ ॥

ತತಶ್ಚ ವಾರುಣೀ ದೇವೀ ಸಮುತ್ಪನ್ನಾ ಶುಭಾನನೇ ।
ಅನಂತೋ ನಾಗರಾಜೋಽಥ ತಾಂ ಜಗ್ರಾಹ ಸುಲೋಚನಾಂ ॥ ೩೫ ॥

ತತಸ್ತತ್ರ ಸಮುತ್ಪನ್ನಾ ಸರ್ವಾಭರಣಭೂಷಿತಾ ।
ವೈನತೇಯಸ್ಯ ಭಾರ್ಯಾಽಭೂತ್ಸರ್ವಲಕ್ಷಣಶೋಭಿತಾ ॥ ೩೬ ॥

ತತೋಽಪ್ಸರೋಗಣಾ ದಿವ್ಯಾ ಗಂಧರ್ವಾಶ್ಚ ಮಹೌಜಸಃ ।
ಜಜ್ಞಿರೇ ರೂಪಸಂಪನ್ನಾಃ ಸೋಮಸೂರ್ಯಾಗ್ನಿವರ್ಚಸಃ ॥ ೩೭ ॥

---

ಬೆಳ್ಳುಳ್ಳಿ, ಅಣಬೆ, ಹಂದಿಗೆಡ್ಡೆ, ಬಿಲ್ವ, ಹೀರೇಕಾಯಿ, ಸೋರೇಕಾಯಿ, ಕೆಂಪೀರುಳ್ಳಿ, ಇವನ್ನು ಯಾರು ತಿನ್ನುವರೋ .ಅವರಿಗೆ ದಾರಿದ್ರ್ಯವನ್ನು ಕೊಟ್ಟುಕೊಂಡು ಅವರ ಮನೆಯಲ್ಲಿರು.

೩೪. ರುದ್ರನು ಹೇಳಿದನು–ಆ ದರಿದ್ರಲಕ್ಷ್ಮಿಗೆ ದೇವತೆಗಳು ಹೀಗೆಂದು ಹೇಳಿ ಮತ್ತೆ ಸರಿಯಾಗಿ ನಿಂತುಕೊಂಡು ಸಮುದ್ರವನ್ನು ಕಡೆಯಲು ಉಪಕ್ರಮಿಸಿದರು.

೩೫. ಅನಂತರ ವಾರುಣೀ ದೇವಿಯು ಹುಟ್ಟಿದಳು. ಆಕೆಯನ್ನು ನಾಗ ರಾಜನಾದ ಅನಂತನು ಪರಿಗ್ರಹಿಸಿದನು.

೩೬. ಅನಂತರ ಸರ್ವಾಭರಣಭೂಷಿತಳಾಗಿ ಮತ್ತೊಬ್ಬಳು ಹುಟ್ಟಿದಳು. ಅವಳು ಗರುಡನ ಹೆಂಡತಿಯಾದಳು.

೩೭. ಆಮೇಲೆ ಅಪ್ಸರಸ್ತ್ರೀಯರೂ ಗಂಧರ್ವರೂ ಹುಟ್ಟಿದರು. ಅವರು ಚಂದ್ರ ಸೂರ್ಯರಂತೆ ತೇಜಸ್ಸನ್ನು ಹೊಂದಿದ್ದರು.

ಐರಾವತಸ್ತತೋ ಜಜ್ಞೇ ತಥೈವೋಚ್ಚೈಶ್ರವಾ ಹಯಃ ।
ಧನ್ವಂತರಿಃ ಪಾರಿಜಾತಃ ಸುರಭಿಃ ಸರ್ವಕಾಮಧುಕ್ ॥ ೩೮ ॥

ಏತಾನ್ ಸರ್ವಾನ್ ಸಹಸ್ರಾಕ್ಷೋ ಜಗ್ರಾಹ ಪ್ರೀತಮಾನಸಃ ।
ತತಃ ಪ್ರಭಾತಸಮಯೇ ದ್ವಾದಶ್ಯಾಮುದಿತೇ ರವೌ ॥ ೩೯ ॥

ಮಥ್ಯಮಾನೇ ಪುನಸ್ತಸ್ಮಿನ್ ದೇವೈರಿಂದ್ರಪುರೋಗಮೈಃ ।
ತತಃ ಪ್ರಹೃಷ್ಟವದನೈಃ ಸ್ತೂಯಮಾನಾ ಮಹರ್ಷಿಭಿಃ ॥ ೪೦ ॥

ಉತ್ಪನ್ನಾ ಶ್ರೀರ್ಮಹಾಲಕ್ಷ್ಮೀಃ ಸರ್ವಲೋಕೇಶ್ವರೀ ಶುಭಾ ।
ಬಾಲಾರ್ಕಕೋಟಿಸಂಕಾಶಾ ಕನಕಾಂಗದಭೂಷಿತಾ ॥ ೪೧ ॥

ಹೇಮಾಂಬುಜಸಮಾಸೀನಾ ಸರ್ವಲಕ್ಷಣಶೋಭಿತಾ ।
ಪದ್ಮಪತ್ರವಿಶಾಲಾಕ್ಷೀ ನೀಲಕುಂಚಿತಮೂರ್ಧಜಾ ॥ ೪೨ ॥

---

೩೮. ಅನಂತರ ಐರಾವತವೂ, ಉಚ್ಚೈಶ್ರವಸ್ಸೆಂಬ ಕುದುರೆಯೂ, ಧನ್ವಂತರಿ, ಪಾರಿಜಾತ, ಕಾಮಧೇನು ಇವುಗಳೂ ಹುಟ್ಟಿದುವು.

೩೯–೪೧. ಇವೆಲ್ಲವನ್ನೂ ಕೂಡ ಸಹಸ್ರಾಕ್ಷನಾದ ಇಂದ್ರನು ಸಂತೋಷ ದಿಂದ ತೆಗೆದುಕೊಂಡನು ಅನಂತರ ಮಾರನೆಯದಿನ ದ್ವಾದಶಿಯು ಬರಲು ಸೂರ್ಯೋದಯವಾಗುತ್ತಾ ಬಂದಿತು. ಆಗ ದೇವದಾನವರೆಲ್ಲರೂ ಸೇರಿ ಆ ಸಮುದ್ರ ವನ್ನು ಕಡೆಯಲುಪಕ್ರಮಿಸಿದರು. ಅನಂತರ ಮಹರ್ಷಿಗಳು ಸಂತೋಷದಿಂದ ಸ್ತುತಿಸುತ್ತಿರಲು ಸರ್ವಲೋಕೇಶ್ವರಿಯೂ ಮಂಗಳಕರಳೂ ಆದ ಲಕ್ಷ್ಮಿಯು ಹುಟ್ಟಿದಳು.

೪೨–೪೩. ಅವಳು ಚಿನ್ನದ ಕಮಲದಲ್ಲಿ ಕುಳಿತಿದ್ದಳು. ಎಲ್ಲಾ ಲಕ್ಷಣಗಳೂ ಇದ್ದುವು ಕಪ್ಪಾಗಿಯೂ ಗುಂಗುರುಗುಂಗುರಾಗಿಯೂ ಕೂದಲುಗಳಿದ್ದುವು.

ದಿವ್ಯಚಂದನಲಿಪ್ತಾಂಗೀ ದಿವ್ಯಪುಷ್ಪೈರಲಂಕೃತಾ ।
ನಾನಾರತ್ನಮಯೈರ್ದಿವ್ಯೈಃ ಸರ್ವೈರಾಭರಣೈರ್ಯುತಾ || ೪೩ ||

ತನುಮಧ್ಯಾ ಜಗದ್ಧಾತ್ರೀ ಪೀನೋನ್ನತಪಯೋಧರಾ ।
ಚತುರ್ಹಸ್ತಾ ವಿಶಾಲಾಕ್ಷೀ ಪೂರ್ಣೇಂದುಸದೃಶಾನನಾ || ೪೪ ||

ವಸುಪಾತ್ರಂ ಮಾತುಲಿಂಗಂ ಸ್ವರ್ಣಪದ್ಮಯುಗಂ ಶುಭಂ ।
ಬಿಭ್ರಾಣಾ ಹಸ್ತಕಮಲೈಃ ಸರ್ವಾಭರಣಭೂಷಿತೈಃ || ೪೫ ||

ಅಮ್ಲಾನಪಂಕಜಾಂ ಮಾಲಾಂ ಧಾರಯಂತೀ ಹ್ಯುರಸ್ಥಲೇ ।
ದದೃಶುಸ್ತಾಂ ಮಹಾದೇವೀಂ ಸರ್ವಲೋಕಹಿತೈಷಿಣೀಂ || ೪೬ ||

ಈಶ್ವರೀಂ ಸರ್ವಭೂತಾನಾಂ ಮಾತರಂ ಪದ್ಮಮಾಲಿನೀಂ ।
ನಾರಾಯಣೀಂ ಜಗದ್ಧಾತ್ರೀಂ ನಾರಾಯಣಹೃದಾಲಯಾಂ || ೪೭ ||

---

ದಿವ್ಯವಾದ ಚಂದನವನ್ನು ಪೂಸಿಕೊಂಡಿದ್ದಳು. ದಿವ್ಯವಾದ ಹೂವನ್ನು ಮುಡಿದು ಕೊಂಡಿದ್ದಳು. ಬಗೆಬಗೆಯಾದ ರತ್ನಗಳಿಂದ ಕೂಡಿದ ಆಭರಣಗಳನ್ನು ಧರಿಸಿದ್ದಳು.

೪೪-೪೫. ಚಿಕ್ಕದಾಗಿ ನಡುವಿದ್ದಿತು. ಜಗತ್ತನ್ನು ಕಾಪಾಡತಕ್ಕವಳು ದೊಡ್ಡದಾಗಿಯೂ ಎತ್ತರವಾಗಿಯೂ ಇರುವ ಸ್ತನಗಳಿದ್ದುವು. ನಾಲ್ಕು ತೋಳು ಗಳಿದ್ದುವು ಪೂರ್ಣಚಂದ್ರನಂತೆ ಮುಖವಿದ್ದಿತು. ಅಮೃತಪಾತ್ರೆ, ಮಾದಲದ ಹಣ್ಣು, ಎರಡು ಚಿನ್ನದ ಪದ್ಮಗಳು, ಇವನ್ನು ನಾಲ್ಕು ಕೈಗಳಲ್ಲಿಯೂ ಒಂದೊಂದರಲ್ಲಿ ಒಂದೊಂದನ್ನು ಧರಿಸಿದ್ದಳು. ಎಲ್ಲಾ ಒಡವೆಯನ್ನೂ ಧರಿಸಿದ್ದಳು.

೪೬. ಬಾಡದಿರುವ ಕಮಲದ ಮಾಲೆಯನ್ನು ಎದೆಯಮೇಲೆ ಬರುವಂತೆ ಹಾಕಿದ್ದಳು. ಇಂತಹ ಸರ್ವಲೋಕಕ್ಕೂ ಹಿತವನ್ನು ಕೋರುವ ಶ್ರೀಯನ್ನು ಎಲ್ಲರೂ ನೋಡಿದರು.

೪೭-೪೮. ಎಲ್ಲಾ ಪ್ರಾಣಿಗಳಿಗೂ ಒಡೆಯಳಾದ, ಎಲ್ಲರಿಗೂ ತಾಯಿಯಾದ, ಪದ್ಮದ ಮಾಲೆಯನ್ನು ಧರಿಸಿರುವ, ನಾರಾಯಣಿಯಾದ, ಜಗತ್ತನ್ನು ಕಾಪಾಡುವ, ನಾರಾಯಣನ ಹೃದಯವೇ ಮನೆಯಾಗಿ ಉಳ್ಳ,

ತಾಂ ವಿಲೋಕ್ಯ ಮಹಾಲಕ್ಷ್ಮೀಂ ಪ್ರಹೃಷ್ಟಾಃ ಸರ್ವದೇವತಾಃ ।
ಅವಾದಯನ್ತ ಪಟಹಾನ್ ದಿವಿ ದೇವಗಣಾ ಭೃಶಂ || ೪೮ ||

ವವೃಷುಃ ಪುಷ್ಪವರ್ಷಾಣಿ ವನದೇವ್ಯೋ ನಿರಂತರಂ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ || ೪೯ ||

ವವುಃ ಪುಣ್ಯಾಃ ಶಿವಾಃ ವಾತಾಃ ಸುಪ್ರಭೋಭೂದ್ದಿವಾಕರಃ ।
ಜಜ್ವಲುಶ್ಚಾಗ್ನಯಃ ಶಾನ್ತಾಃ ಪ್ರಸನ್ನಾಶ್ಚ ತತೋ ದಿಶಃ || ೫೦ ||

ಅನಂತರಂ ಶೀತರಶ್ಮಿರುದಭೂತ್ಕ್ಷೀರಸಾಗರೇ ।
ಸುಧಾಮಯೂಖವಾನ್ ಸೋಮೋ ಮಾತುರ್ಭ್ರಾತಾ ಸುಖಾವಹಃ ||೫೧||

ನಕ್ಷತ್ರಾಧಿಪತಿಶ್ಚಾಭೂಚ್ಚಂದ್ರೋ ವೈ ಲೋಕಮಾತುಲಃ ।
ತತೋ ಜಾಯಾ ಹರೇಃ ಪುಣ್ಯಾ ತುಲಸೀ ಲೋಕಪಾವನೀ || ೫೨ ||

---

ಆ ಮಹಾಲಕ್ಷ್ಮಿಯನ್ನು ನೋಡಿ ಎಲ್ಲಾ ದೇವತೆಗಳೂ ಸಂತೋಷಗೊಂಡರು. ಅಂತರಿಕ್ಷದಲ್ಲಿ ದೇವಗಣಗಳು ವಾದ್ಯವನ್ನು ಬಾರಿಸಿದರು.

೪೯. ವನದೇವತೆಗಳು ಎಡೆಬಿಡದಂತೆ ಪುಷ್ಪವೃಷ್ಟಿಯನ್ನು ಸುರಿಸಿದರು. ಗಂಧರ್ವರು ಹಾಡಿದರು. ಅಪ್ಸರರು ಕುಣಿದರು.

೫೦. ಗಾಳಿಯು ಶುಭವಾಗಿ ಬೀಸಿತು. ಸೂರ್ಯನು ಚನ್ನಾಗಿಯೂ ಶಾಂತನಾಗಿಯೂ ಬೆಳಗಿದನು. ಅಗ್ನಿಯು ಶಾಂತನಾಗಿ ಪ್ರಕಾಶಿಸಿದನು. ಹತ್ತು ದಿಕ್ಕುಗಳೂ ಪ್ರಸನ್ನವಾಗಿದ್ದುವು.

೫೧. ಇವಳು ಹುಟ್ಟಿದಮೇಲೆ ಆ ಕ್ಷೀರಸಮುದ್ರದಲ್ಲಿ ಚಂದ್ರನು ಹುಟ್ಟಿದನು. ಆ ಚಂದ್ರನು ಅಮೃತಕಿರಣವುಳ್ಳವನಾಗಿದ್ದನು ಆ ತಾಯಿಯಾದ ಲಕ್ಷ್ಮಿಗೆ ಸಹೋದರನು. ಸುಖವನ್ನುಂಟುಮಾಡುವವನು.

೫೨-೫೪. ಆ ಚಂದ್ರನು ನಕ್ಷತ್ರಗಳಿಗೆ ಅಧಿಪತಿಯಾದನು. ಚಂದ್ರನು ಲೋಕಕ್ಕೇ ಸೋದರಮಾವನಾದನು. ಅನಂತರ ಹರಿಗೆ ಹೆಂಡತಿಯಾದ

ಸಮುತ್ಪನ್ನಾ ಜಗದ್ಧಾತ್ರೀ ಪೂಜಾರ್ಥಂ ಶಾಂರ್ಗಿಣೋ ಹರೇಃ ।
ತತಃ ಪ್ರಹೃಷ್ಟಮನಸಃ ಸರ್ವ ದೇವಾ ದಿವೌಕಸಃ　　|| ೫೩ ||

ತಂ ಶೈಲಂ ಪೂರ್ವವತ್ ಸ್ಥಾಪ್ಯ ಪರಿಪೂರ್ಣಮನೋರಥಾಃ |
ಸಮೇತ್ಯ ಮಾತರಂ ಸರ್ವೇ ಶಿವಬ್ರಹ್ಮಪುರೋಗಮಾಃ　　|| ೫೪ ||

ಸ್ತುತ್ವಾ ನಾಮಸಹಸ್ರೇಣ ಜೇಪುಃ ಶ್ರೀಸೂಕ್ತಸಂಹಿತಾಃ ।
ತತಃ ಪ್ರಸನ್ನಾ ಸಾ ದೇವೀ ಸರ್ವಾನ್ ದೇವಾನುವಾಚ ಹ　　|| ೫೫ ||

|| ಶ್ರೀರುವಾಚ ||

ವರಂ ವೃಣೀಷ್ವ ಭದ್ರಂ ವೋ ವರದಾಹಂ ಸುರೋತ್ತಮಾಃ　　|| ೫೬ ||

|| ರುದ್ರ ಉವಾಚ ||

ಊಚುಃ ಪ್ರಾಂಜಲಯೋ ದೇವಾಃ ಶ್ರಿಯಂ ನಮ್ರಾತ್ಮ
ಮೂರ್ತಯಃ ।　|| ೫೭ ||

---

ಲೋಕಪಾವನಿಯಾದ ತುಲಸಿಯು ಲೋಕದ ಪೂಜೆಗೋಸ್ಕರ ಹುಟ್ಟಿದಳು. ಅನಂತರ ಶಿವ ಬ್ರಹ್ಮ ಮೊದಲಾದ ದೇವತೆಗಳು ಆ ಬೆಟ್ಟವನ್ನು ಮೊದಲಿನಂತೆ ಸಮುದ್ರದಲ್ಲಿಟ್ಟು ಕೃತಾರ್ಥರಾಗಿ ಸಂತೋಷಪಡುತ್ತಾ ಆ ತಾಯಿಯಾದ ಲಕ್ಷ್ಮಿಯ ಬಳಿಗೆ ಬಂದರು.

೫೫. ಬಂದು ಶ್ರೀ ಸೂಕ್ತವನ್ನು ಜಪಿಸುತ್ತಾ ಸಹಸ್ರನಾಮದಿಂದ ಸ್ತುತಿಸಿದರು. ಅನಂತರ ಆ ದೇವಿಯು ಪ್ರಸನ್ನಳಾಗಿ ದೇವತೆಗಳನ್ನು ಕುರಿತು ಇಂತೆಂದಳು.

೫೬. ಶ್ರೀಯು ಹೇಳಿದಳು–ಎಲೈ ದೇವತೆಗಳಿರಾ ! ನಿಮಗೆ ಮಂಗಳವಾಗಲಿ. ವರವನ್ನು ಕೇಳಿಕೊಳ್ಳಿರಿ. ಕೊಡುತ್ತೇನೆ.

೫೭. ರುದ್ರನು ಹೇಳಿದನು–ದೇವತೆಗಳೆಲ್ಲರೂ ಆಕೆಗೆ ನಮಸ್ಕರಿಸಿ ನಮ್ರತೆಯಿಂದ ಕೈಮುಗಿದುಕೊಂಡು ಇಂತೆಂದರು.

|| ದೇವಾ ಊಚುಃ ||

ಪ್ರಸೀದ ಕಮಲೇ ದೇವಿ ಸರ್ವಲೋಕೇಶ್ವರಪ್ರಿಯೇ |
ವಿಷ್ಣೋರ್ವಕ್ಷಸ್ಥಲೇ ದೇವಿ ಭವ ನಿತ್ಯಾನಪಾಯಿನೀ || ೫೮ ||

ತ್ರೈಲೋಕ್ಯಂ ನ ತ್ವಯಾ ದೇವಿ ತ್ಯಾಜ್ಯಂ ಹಿ ಪಠವೋ ವರಃ |
ಯದಪಾಂಗಾಶ್ರಿತಂ ಸರ್ವಂ ಜಗತ್ ಸ್ಥಾವರಜಂಗಮಂ || ೫೯ ||

ತ್ವಯಾ ವಿಲೋಕಿತಾಃ ಸರ್ವೇ ಪ್ರಭವನ್ತಿ ದಿವೌಕಸಃ ।
ಮಾತಾ ರುದ್ರಾದಿದೇವಾನಾಮೈಶ್ವರ್ಯಂ ತ್ವತ್ಕಟಾಕ್ಷತಃ ॥
ಏತದಿಚ್ಛಾಮಹೇ ದೇವಿ ಜಗನ್ಮಾತರ್ನಮೋಽಸ್ತು ತೇ || ೬೦ ||

|| ರುದ್ರ ಉವಾಚ ||

ಇತ್ಯುಕ್ತಾ ದೈವತೈಸ್ಸರ್ವೈರ್ಲೋಕಮಾತಾ ಮಹೇಶ್ವರೀ |
ಏವಮಸ್ತ್ವಿತಿ ತಾನ್ ದೇವಾನ್ ಪ್ರಾಹ ನಾರಾಯಣಪ್ರಿಯಾ || ೬೧ ||

---

೫೮. ದೇವತೆಗಳು ಹೇಳಿದರು-ಎಲೈ ಕಮಲಾದೇವಿಯೆ! ಪ್ರಸನ್ನಳಾಗು. ವಿಷ್ಣುವಿನ ಹೃದಯದಲ್ಲಿ ನೆಲಸಿರುವ ದೇವಿಯೆ! ಪ್ರಸನ್ನಳಾಗು. ಎಲ್ಲಾ ಲೋಕಕ್ಕೂ ಪ್ರೀತಿಪಾತ್ರಳಾದವಳೇ ! ಪ್ರಸನ್ನಳಾಗು. ಆ ವಿಷ್ಣುವನ್ನು ಬಿಡದಂತೆ ಯಾವಾಗಲೂ ಅವನಲ್ಲಿದ್ದುಕೊಂಡು ನಮ್ಮನ್ನು ಕೈಬಿಡದಿರು.

೫೯–೬೦. ಎಲೈ ದೇವಿಯೇ ! ಮೂರು ಲೋಕಗಳನ್ನೂ ನೀನು ಬಿಡಲೇ ಕೂಡದು. ಅದೇ ನೀನು ನಮಗೆ ಕೊಡಬೇಕಾದ ವರವು. ಚರಾಚರ ವಸ್ತುಗಳಲ್ಲಿ ಯಾವುದನ್ನು ನೀನು ಕಡೆಗಣ್ಣಿನಿಂದಾದರೂ ನೋಡುವೆಯೋ ಅವೆಲ್ಲವೂ ಸ್ವರ್ಗದಲ್ಲಿ ಸುಖಿಸುತ್ತವೆ. ನೀನು ರುದ್ರನೇ ಮುಂತಾದವರಿಗೂ ತಾಯಿಯು. ಅವರಿಗೆ ಬರುವ ಆ ಐಶ್ವರ್ಯವೂ ಕೂಡ ನಿನ್ನ ಕಟಾಕ್ಷದಿಂದಲೇ ಬರುತ್ತದೆ. ಇದೇ ನಮಗೆ ಬೇಕಾದ ವರವು. ಎಲೈ ಲೋಕಮಾತೆಯೇ! ನಿನಗೆ ನಮಸ್ಕಾರವು.

೬೧. ರುದ್ರನು ಹೇಳಿದನು–ಆ ಲೋಕಮಾತೆಯಾದ ಲಕ್ಷ್ಮಿಗೆ ದೇವತೆಗಳು ಇಂತೆಂದು ಹೇಳಲು ನಾರಾಯಣ ಪ್ರಿಯೆಯಾದ ಲಕ್ಷ್ಮಿಯು ಹಾಗೇ ಆಗಲೆಂದು ಆ ದೇವತೆಗಳಿಗೆ ಹೇಳಿದಳು.

ತತೋ ನಾರಾಯಣಃ ಶ್ರೀಶಃ ಶಂಖಚಕ್ರಗದಾಧರಃ |
ತತ್ರೈವಾವಿರಭೂದ್ಬ್ರಹ್ಮಾ ಪೂರ್ವವತ್ ಕ್ಷೀರಸಾಗರೇ ॥ ೬೨ ॥

ತತಃ ಪ್ರತುಷ್ಟುವುರ್ದೇವಾಃ ನಮಸ್ಕೃತ್ವಾ ಜನಾರ್ದನಂ |
ಊಚುಃ ಪ್ರಾಂಜಲಯಃ ಸರ್ವೇ ಪ್ರಹೃಷ್ಟವದನಾಶ್ಶುಭಾಂ ॥ ೬೩ ॥

ಗೃಹಾಣ ದೇವೀಂ ಸರ್ವೇಶ ಮಹಿಷೀಂ ತವ ವಲ್ಲಭಾಂ |
ಜಗತ್ಸಂರಕ್ಷಣಾರ್ಥಾಯ ಲಕ್ಷ್ಮೀಮನಪಗಾಮಿನೀಂ ॥ ೬೪ ॥

॥ ರುದ್ರ ಉವಾಚ ॥

ಇತ್ಯುಕ್ತ್ವಾ ಮುನಿಭಿಸ್ಸಾರ್ಧಂ ದೇವಾ ಬ್ರಹ್ಮಪುರೋಗಮಾಃ |
ನಾನಾರತ್ನಮಯೇ ದಿವ್ಯೇ ಪೀಠೇ ಬಾಲಾರ್ಕಸನ್ನಿಭೇ ॥ ೬೫ ॥

ನಿವೇಶ್ಯ ದೇವೀಂ ದೇವಂ ಚ ಆನಂದಾಶ್ರುಪರಿಪ್ಲುತಾಃ |
ದಿವ್ಯಾಂಬರೈರ್ದಿವ್ಯಮಾಲ್ಯೈರ್ನಾನಾರತ್ನವಿಭೂಷಿತೈಃ ॥ ೬೬ ॥

---

೬೨. ಅನಂತರ ಶಂಖ, ಚಕ್ರ, ಗದಾಧರನಾದ ನಾರಾಯಣನು ಇವರು ಹೀಗೆ ಹೊಗಳುತ್ತಿರುವಾಗಲೇ ಕ್ಷೀರಸಾಗರದಿಂದ ಮೇಲಕ್ಕೆ ಬಂದನು.

೬೩. ಆಗ ದೇವತೆಗಳೆಲ್ಲರೂ ಆ ಜನಾರ್ದನನಿಗೆ ನಮಸ್ಕರಿಸಿ ಸ್ತುತಿಸಿದರು. ಮತ್ತು ಸಂತೋಷದಿಂದ ಕೈಮುಗಿದುಕೊಂಡು ಇಂತೆಂದರು.

೬೪. ದೇವತೆಗಳು ಹೇಳಿದರು–ಎಲೈ ದೇವೇಶನೇ ! ನಿನಗೆ ಪ್ರೀತಿಪಾತ್ರಳಾದ ಹೆಂಡತಿಯಾದ ಲಕ್ಷ್ಮಿಯನ್ನು ತೆಗೆದುಕೋ ! ಮತ್ತೊಬ್ಬರನ್ನು ಹೊಂದದಿರುವ ಈಕೆಯನ್ನು ನೀನು ಕರೆದುಕೊಂಡು ಜಗತ್ತನ್ನು ರಕ್ಷಿಸು.

೬೫-೬೬. ರುದ್ರನು ಹೇಳಿದನು– ಆಗ ದೇವಾಸುರರೂ ಮುನಿಗಳೂ ಎಲ್ಲರೂ ಕೂಡ ಬಂದು ಬಾಲ ಸೂರ್ಯನಂತೆ ಪ್ರಕಾಶಮಾನವಾದ ದಿವ್ಯ ಪೀಠದಲ್ಲಿ ಆ ನಾರಾಯಣನನ್ನೂ ಲಕ್ಷ್ಮಿಯನ್ನೂ ಕುಳ್ಳಿರಿಸಿ, ಆನಂದದಿಂದ ಕಣ್ಣೀರು ಸುರಿಸುತ್ತಾ, ಉತ್ತಮವಾದ ಬಟ್ಟೆಗಳಿಂದಲೂ, ಉತ್ತಮವಾದ ಮಾಲೆಗಳಿಂದಲೂ, ಬಗೆಬಗೆಯ ರತ್ನಗಳಿಂದಲೂ, ಒಡವೆಗಳಿಂದಲೂ, ಲಕ್ಷ್ಮಿಯೊಡನೆ ಕೂತಿರುವ

ಲಕ್ಷ್ಮ್ಯಾ ಸಹ ಸಮಾಸೀನಮರ್ಚಯಾಮಾಸುರಚ್ಯುತಂ ।
ಗಂಧೈರ್ಧೂಪೈಶ್ಚ ದೀಪೈಶ್ಚ ನೈವೇದ್ಯೈಶ್ಚ ಸುಧಾಮಯೈಃ ॥
ಅಪ್ರಾಕೃತೈಃ ಫಲೈರ್ದಿವ್ಯೈರರ್ಚಯಾಮಾಸುರೀಶ್ವರೀಂ ॥ ೬೭ ॥

ಅಮೃತಾದುತ್ಥಿತಾ ದೇವೀ ತುಲಸೀ ಕೋಮಲಾ ಶುಭಾ ।
ತಯಾ ಶ್ರೀಪಾದಯುಗಳಮರ್ಚಯಾಮಾಸುರಂಜಸಾ ॥ ೬೮ ॥

ಪ್ರದಕ್ಷಿಣತ್ರಯಂ ಕೃತ್ವಾ ನಮಸ್ಕೃತ್ವಾ ಮುಹುರ್ಮುಹುಃ ।
ತುಷ್ಟುವುಸ್ಸ್ತವನೈರ್ದಿವ್ಯೈರ್ಹರ್ಷಪೂರ್ಣಾಶ್ರುವಿಕ್ಲಬಾಃ ॥ ೬೯ ॥

ತತಃ ಪ್ರಸನ್ನೋ ಭಗವಾನ್ ಸರ್ವದೇವೇಶ್ವರೋ ಹರಿಃ ।
ಅಭೀಷ್ಟಾನ್ ಪ್ರದದೌ ತೇಭ್ಯೋ ವರಾನ್ ದೇವ್ಯಾ ಸಹ ಪ್ರಭುಃ ॥ ೭೦ ॥

---

ಅವನನ್ನು ಪೂಜಿಸಿದರು. ಗಂಧ ಧೂಪ ದೀಪಗಳಿಂದಲೂ ಅಮೃತಕ್ಕೆ ಸಮವಾದ ನೈವೇದ್ಯದಿಂದಲೂ ಉತ್ತಮೋತ್ತಮವಾದ ಫಲಗಳಿಂದಲೂ ಆ ಲಕ್ಷ್ಮಿಯನ್ನು ಪೂಜಿಸಿದರು.

೬೮. ಆ ತುಳಸೀದೇವಿಯು ಅಮೃತ ಸಮುದ್ರದಿಂದ ಹುಟ್ಟಿದಳು. ಮಂಗಳಕರಳು. ಆ ತುಳಸಿಯಿಂದ ಆ ಲಕ್ಷ್ಮಿಯ ಪಾದಯುಗ್ಮವನ್ನು ಪೂಜಿಸಿದರು.

೬೯. ಮೂರುಬಾರಿ ಪ್ರದಕ್ಷಿಣೆಗಳನ್ನು ಮಾಡಿ ಅನೇಕಬಾರಿ ನಮಸ್ಕಾರಗಳನ್ನು ಮಾಡಿ ಸಂತೋಷದಿಂದ ಕಣ್ಣೀರನ್ನು ಸುರಿಸುತ್ತಾ ಬಗೆಬಗೆಯ ಸ್ತೋತ್ರಗಳಿಂದ ಸ್ತುತಿಸಿದರು.

೭೦. ಆಗ ಸರ್ವೇಶ್ವರನಾದ ಹರಿಯು ಪ್ರಸನ್ನನಾಗಿ ಆ ದೇವತೆಗಳಿಗೆ ತಾನೂ ತನ್ನ ಹೆಂಡತಿಯೂ ಬೇಕಾದ ವರಗಳನ್ನು ಕೊಟ್ಟರು.

ತಪಸ್ಸು ಹೃಷ್ಟಾಸ್ಸುರಮಾನುಷಾದ್ಯಾ |
ಲಕ್ಷ್ಮೀಕಟಾಕ್ಷಾರ್ಪಿತದೃಷ್ಟಿಪೂತಾಃ ||
ಪ್ರಭೂತಧಾನ್ಯಾರ್ಥಯುತಾ ನಿರಂತರಂ |
ಸುಖಂ ಪರಂ ಪ್ರಾಪುರನಾಮಯಾ ಭೃಶಂ　　|| ೭೧ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಲಕ್ಷ್ಮ್ಯುತ್ಪತ್ತಿ ವರ್ಣನಂ ನಾಮ ಷಷ್ಟ್ಯಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೧. ಆಮೇಲೆ ಲಕ್ಷ್ಮಿಯ ಕಟಾಕ್ಷದಿಂದ ನೋಡಲ್ಪಟ್ಟ ದೇವ ದಾನವ ಮನುಷ್ಯರು ಸಂತೋಷಗೊಂಡರು. ಬಹುವಾದ ಧನವನ್ನು ಧಾನ್ಯವನ್ನೂ ಯಾವಾಗಲೂ ಹೊಂದುತ್ತಾ ಸುಖವನ್ನೂ ಆರೋಗ್ಯವನ್ನೂ ಹೊಂದಿದರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಲಕ್ಷ್ಮಿಯ ಹುಟ್ಟುವಿಕೆಯ ವರ್ಣನ ಎಂಬ ಇನ್ನೂರ ಅರವತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ||



|| ಶಂಕರ ಉವಾಚ ||

ತತಃ ಪ್ರೋವಾಚ ಭಗವಾನ್ ಸರ್ವಾಂಶ್ಚೈವ ಮಹಾಮುನೀನ್ |
ದೇವ್ಯಾ ಸಹ ಪ್ರಹೃಷ್ಟಾತ್ಮಾ ಸರ್ವಲೋಕಹಿತಾಯ ವೈ || ೧ ||

|| ಶ್ರೀಭಗವಾನುವಾಚ ||

ಶೃಣುಧ್ವಂ ಮುನಯಸ್ಸರ್ವೇ ದೇವತಾಶ್ಚ ಮಹಾಬಲಾಃ |
ಏಕಾದಶೀಮಹಾಪುಣ್ಯಾ ಸರ್ವೋಪದ್ರವನಾಶಿನೀ || ೨ ||

ಲಕ್ಷ್ಮೀಸಂದರ್ಶನಾರ್ಥಾಯ ಭವದ್ಭಿಸ್ಸಮುಪೋಷಿತಾ |
ತಸ್ಮಾತ್ತು ಸರ್ವದಾ ಪುಣ್ಯಾ ದ್ವಾದಶೀ ಮಮ ವಲ್ಲಭಾ || ೩ ||

---

## ಇನ್ನೂರ ಅರವತ್ತೊಂದನೆಯ ಅಧ್ಯಾಯವು



೧. ಶಂಕರನು ಹೇಳಿದನು–ಆಗ ಭಗವಂತನಾದ ವಿಷ್ಣುವು ಎಲ್ಲ ಋಷಿಗಳನ್ನು ಕುರಿತು ದೇವಿಯೊಡನೆ ಸಂತೋಷದಿಂದಿರುವಾಗ ಲೋಕಹಿತಕ್ಕೋಸ್ಕರ ಇಂತೆಂದು ಹೇಳಿದನು.

೨-೩. ಭಗವಂತನು ಹೇಳಿದನು– ಮಹಾಬಲಿಷ್ಠರಾದ ದೇವತೆಗಳಿರಾ ! ಮುನಿಗಳಿರಾ ! ಕೇಳಿರಿ ಲಕ್ಷ್ಮಿಯನ್ನು ನೋಡುವುದಕ್ಕೋಸ್ಕರ ನೀವು ಉಪವಾಸ ಮಾಡಿದುದರಿಂದ ಏಕಾದಶಿಯು ಬಹು ಪುಣ್ಯಕರವಾದುದು. ಮತ್ತು ಎಲ್ಲಾ ತೊಂದರೆಗಳನ್ನೂ ನಾಶಮಾಡುತ್ತದೆ. ಅದಕ್ಕಿಂತಲೂ ಕೂಡ ದ್ವಾದಶಿಯು ನನಗೆ ಬಹಳ ಪ್ರೀತಿಕರವಾದುದು. ಪುಣ್ಯಪ್ರದವಾದುದು.

ಅದ್ಯಪ್ರಭೃತಿ ಯೇ ಲೋಕಾ ಉಷಿತಾಃ ಪೂರ್ವವಾಸರೇ ।
ದ್ವಾದಶ್ಯಾಮುದಿತೇ ಭಾನೌ ಶ್ರದ್ಧಯಾ ಪರಯಾ ಯುತಾಃ ॥ ೪ ॥

ಯೇ ಪೂಜಯಂತಿ ಮಾಂ ಭಕ್ತ್ಯಾ ತುಲಸ್ಯಾ ಚ ಶ್ರಿಯಾ ಸಹ ।
ಸರ್ವೇ ತೇ ಬಂಧನಿರ್ಮುಕ್ತಾಃ ಪ್ರಾಪ್ನುವಂತಿ ಪದಂ ಮಮ ॥ ೫ ॥

ನಾರ್ಚಯಂತಿ ಚ ಯೇ ವೈ ಮಾಂ ದ್ವಾದಶ್ಯಾಂ ಪುರುಷೋತ್ತಮಂ ।
ತೇ ಭೃಶಂ ಪಾಪಕರ್ಮಾಣೋ ಮಮ ಮಾಯಾವಿಮೋಹಿತಾಃ ॥ ೬ ॥

ಯೇ ನಾರ್ಚಯಂತಿ ಪಾಪಿಷ್ಠಾಃ ನರಾ ನರಕಗಾಮಿನಃ ।
ತಾನ್ ಪಾಪಾನ್ ವಿಷಯೈರ್ಬಧ್ವಾ ಮಮ ಪೂಜಾಪರಾಙ್ಮುಖಾನ್ ।
ಕ್ಷಿಪತ್ಯಜಸ್ರಂ ಸಂಸಾರೇ ಮಾಯಾ ಮಮ ದುರತ್ಯಯಾ ॥ ೭ ॥

---

೪–೫. ಈಗಿನಿಂದ ಮೊದಲುಗೊಂಡು ಲೋಕದಲ್ಲಿ ಯಾವ ಜನರು ಏಕಾದಶಿಯದಿನ ಉಪವಾಸವಿದ್ದು ದ್ವಾದಶಿಯದಿನ ಸೂರ್ಯೋದಯವಾದ ಮೇಲೆ ಬಹುವಾದ ಶ್ರದ್ಧೆಯಿಂದ ಲಕ್ಷ್ಮಿಯನ್ನೂ ನನ್ನನ್ನೂ ಕೂಡ ತುಲಸಿಯೊಡನೆ ಕೂರಿಸಿ ಪೂಜಿಸುತ್ತಾರೆಯೋ ಅವರಿಗೆ ಬಂಧನಗಳೆಲ್ಲವೂ ಹೋಗುತ್ತವೆ. ಮತ್ತು ಮುಕ್ತಿಯನ್ನು ಹೊಂದುತ್ತಾರೆ.

೬. ಆ ದ್ವಾದಶಿಯದಿನ ಯಾರು ಪುರುಷೋತ್ತಮನನ್ನು ಪೂಜಿಸುವುದಿಲ್ಲವೋ ಅವರು ಬಹು ಪಾಪಿಗಳು. ನನ್ನ ಮಾಯೆಗೆ ಒಳಗಾದವರು.

೭. ಯಾರು ನನ್ನನ್ನು ಆ ದ್ವಾದಶಿಯದಿನ ಪೂಜಿಸುವುದಿಲ್ಲವೋ ಅಂತಹವರು ನರಕಕ್ಕೆ ಹೋಗುತ್ತಾರೆ. ನನ್ನ ಪೂಜೆಯನ್ನು ಮಾಡದಿರುವವರು ವಿಷಯಗಳೆಂಬ ಹಗ್ಗಗಳಿಂದ ಕಟ್ಟಲ್ಪಟ್ಟು ಯಾವಾಗಲೂ ಸಂಸಾರದಲ್ಲಿಯೇ ಬಿದ್ದಿರುತ್ತಾರೆ.

|| ರುದ್ರ ಉವಾಚ ||

ಏವಮುಕ್ತ್ವಾ ಸ ಭಗವಾನ್ ಪರಮಾತ್ಮಾ ಸನಾತನಃ ।
ಸಂಸ್ತೂಯಮಾನೋ ಮುನಿಭಿಃ ಪ್ರಯಯೌ ಕಮಲಾಲಯಂ ॥ ೮ ॥

ಕ್ಷೀರಾಬ್ಧೌ ಶೇಷಪರ್ಯಂಕೇ ವಿಮಾನೇ ಸೂರ್ಯಸನ್ನಿಭೇ ।
ದೇವ್ಯಾ ಸಹ ವಿಶಾಲಾಕ್ಷ್ಯಾ ರಮಯಾ ಪರಮೇಶ್ವರಃ ॥ ೯ ॥

ದರ್ಶನಾರ್ಥಂ ಸುರಾಣಾಂ ವೈ ತತ್ರ ಸನ್ನಿಹಿತೋಽಭವತ್ ।
ತತಸ್ಸುರಗಣಾಸ್ಸರ್ವೇ ಕೂರ್ಮರೂಪಂ ಸನಾತನಂ ॥ ೧೦ ॥

ಭಕ್ತ್ಯಾ ಸಂಪೂಜಯಿತ್ವಾಥ ತುಷ್ಟುವುರ್ಹೃಷ್ಟಮಾನಸಾಃ ।
ತತಃ ಪ್ರಸನ್ನೋ ಭಗವಾನ್ ಕೂರ್ಮರೂಪೀ ಜನಾರ್ದನಃ ॥ ೧೧ ॥

॥ ಶ್ರೀ ಭಗವಾನುವಾಚ ॥

ವರಂ ವೃಣೀಧ್ವಂ ದೇವೇಶಾ ಯದ್ವೋ ಮನಸಿ ವರ್ತತೇ ॥ ೧೨ ॥

---

೮. ರುದ್ರನು ಹೇಳಿದನು–ಸನಾತನನಾದ ಆ ಸ್ವಾಮಿಯು ಅವರಿಗೆ ಹೀಗೆಂದು ಹೇಳಿ ಮುನಿಗಳಿಂದ ಹೊಗಳಿಸಿಕೊಳ್ಳುತ್ತ ಲಕ್ಷ್ಮಿಯ ಮನೆಯಾದ ಸಮುದ್ರಕ್ಕೆ ಹೊರಟುಹೋದನು.

೯-೧೧. ಆ ಸಮುದ್ರದಲ್ಲಿ ಸೂರ್ಯನಂತೆ ಬೆಳಗುತ್ತಿರುವ ಶೇಷನೆಂಬ ಹಾಸಿಗೆಯಲ್ಲಿ ಆ ದೇವಿಯಾದ ಲಕ್ಷ್ಮಿಯೊಡನೆ ದೇವತೆಗಳಿಗೆ ದರ್ಶನವನ್ನು ಕೊಡುವುದಕ್ಕೋಸ್ಕರ ಅಲ್ಲಿ ನಿಂತನು. ಅನಂತರ ದೇವತೆಗಳೆಲ್ಲರೂ ಕೂರ್ಮ (ಆಮೆಯ)ರೂಪವನ್ನು ಭಕ್ತಿಯಿಂದಲೂ ಸಂತೋಷದಿಂದಲೂ ಸ್ತುತಿಸಿದರು. ಅನಂತರ ಕೂರ್ಮರೂಪಿಯಾದ ಆ ಜನಾರ್ದನನು ಅವರಿಗೆ ಪ್ರಸನ್ನನಾದನು.

೧೨. ಶ್ರೀ ಭಗವಂತನು ಹೇಳಿದನು–ಎಲೈ ದೇವತೆಗಳಿರ! ನಿಮ್ಮ ಮನಸ್ಸಿನಲ್ಲಿರುವ ವರವನ್ನು ಕೇಳಿಕೊಳ್ಳಿರಿ.

|| ರುದ್ರ ಉವಾಚ ||

ತತೋ ದೇವಗಣಾಃ ಸರ್ವೇ ಕೂರ್ಮರೂಪಂ ಜನಾರ್ದನಂ |
ಊಚುಃ ಪ್ರಾಂಜಲಯಃ ಸರ್ವೇ ಹರ್ಷನಿರ್ಭರಮಾನಸಾಃ || ೧೩ ||

|| ದೇವಾ ಊಚುಃ ||

ಶೇಷಸ್ಯ ದಿಗ್ಗಜಾನಾಂ ಚ ಸಹಾಯಾರ್ಥಂ ಮಹಾಬಲ |
ಧರ್ತುಮರ್ಹಸಿ ದೇವೇಶ ಸಪ್ತದ್ವೀಪವತೀಂ ಮಹೀಂ || ೧೪ ||

|| ರುದ್ರ ಉವಾಚ ||

ಏವಮಸ್ತ್ವಿತಿ ಹೃಷ್ಟಾತ್ಮಾ ಭಗವಾನ್ ಲೋಕಭಾವನಃ |
ಧಾರಯಾಮಾಸ ಧರಣೀಂ ಸಪ್ತದ್ವೀಪಸಮಾವೃತಾಂ || ೧೫ ||

ತತೋ ದೇವಾಃ ಸಗಂಧರ್ವಾ ದೈತ್ಯದಾನವಮಾನುಷಾಃ |
ಮಹರ್ಷಿಭಿರನುಜ್ಞಾತಾಃ ಸ್ವಲೋಕಾನ್ ಪ್ರತಿಪೇದಿರೇ || ೧೬ ||

---

೧೩. ರುದ್ರನು ಹೇಳಿದನು–ಅನಂತರ ದೇವತೆಗಳು ಕೂರ್ಮರೂಪನಾದ ಜನಾರ್ದನನನ್ನು ಸಂತೋಷದಿಂದ ಕೈಮುಗಿದುಕೊಂಡು ಇಂತೆಂದು ಕೇಳಿಕೊಂಡರು.

೧೪. ದೇವತೆಗಳು ಹೇಳಿದರು-ಎಲೈ ಮಹಾಬಲಿಷ್ಠನಾದ ಸ್ವಾಮಿಯೆ ! ಶೇಷ ದಿಗ್ಗಜಗಳಿಗೆ ಸಹಾಯಕನಾಗಿ ಈ ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ಹೊತ್ತುಕೊಂಡಿರು.

೧೫. ರುದ್ರನು ಹೇಳಿದನು–ಲೋಕಕರ್ತನಾದ ಆ ಭಗವಂತನು ಹಾಗೆಯೇ ಆಗಲೆಂದು ಸಂತೋಷದಿಂದ ಆ ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ಧರಿಸಿದನು.

೧೬. ಅನಂತರ ದೇವ ದಾನವ ಗಂಧರ್ವ ಮನುಷ್ಯರು ಮಹರ್ಷಿಗಳೂ ಸ್ವಾಮಿಯ ಒಪ್ಪಿಗೆಯನ್ನು ಪಡೆದು ಅವರವರ ಜಾಗಕ್ಕೆ ಹೊರಟುಹೋದರು.

ತದಾಪ್ರಭೃತಿ ತೇ ಸರ್ವೇ ದೇವಾ ಬ್ರಹ್ಮಪುರೋಗಮಾಃ ।
ಸಿದ್ಧಾ ಯೇ ಮಾನುಷಾಶ್ಚೈವ ಯೋಗಿನೋ ಮುನಿಸತ್ತಮಾಃ ॥ ೧೭ ॥

ವಿಷ್ಣೋರಾಜ್ಞಾಂ ಪುರಸ್ಕೃತ್ಯ ಭಕ್ತ್ಯಾ ಪರಮಯಾ ಯುತಾಃ ।
ಏಕಾದಶ್ಯಾಮುಪೋಷ್ಯಾಥ ಭಕ್ತ್ಯಾ ಚೈವ ಜನಾರ್ದನಂ ॥ ೧೮ ॥

ದ್ವಾದಶ್ಯಾಮರ್ಚನಂ ಚಕ್ರುಃ ವಿಧಿನಾ ವರವರ್ಣಿನಿ ।
ಏತತ್ತೇ ಸರ್ವಮಾಖ್ಯಾತಂ ದೇವ್ಯಾ ಜನ್ಮ ವರಾನನೇ ॥
ಕೌರ್ಮಂ ಚ ವೈಭವಂ ವಿಷ್ಣೋಃ ಕಿಮನ್ಯಚ್ಛ್ರೋತುಮಿಚ್ಛಸಿ ॥ ೧೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಏಕಾದಶ್ಯುಪವಾಸ ಕಥನಂ ನಾಮ ಏಕಷಷ್ಟ್ಯಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೧೭–೧೮. ಅದು ಮೊದಲುಗೊಂಡು ಬ್ರಹ್ಮನೇ ಮುಂತಾದ ದೇವತೆಗಳೂ ಸಿದ್ಧರೂ ಮನುಷ್ಯರೂ ಯೋಗಿಗಳೂ ಮುನಿಗಳೂ ಆ ವಿಷ್ಣುವಿನ ಅಪ್ಪಣೆಯಂತೆ ಬಹುವಾದ ಭಕ್ತಿಯಿಂದ ಏಕಾದಶಿಯದಿವಸ ಉಪವಾಸವಿದ್ದು ದ್ವಾದಶಿಯದಿನ ಕ್ರಮವಾಗಿ ಆ ಸ್ವಾಮಿಯನ್ನು ಪೂಜಿಸಿದರು.

೧೯. ಎಲೈ ಪಾರ್ವತಿಯೆ! ಲಕ್ಷ್ಮಿಯ ಜನ್ಮವನ್ನೂ ಕೂರ್ಮಾವತಾರದ ವೈಭವವನ್ನೂ ಹೇಳಿದ್ದೇನೆ. ಮತ್ತೇನು ಬೇಕು? ಕೇಳು. ಹೇಳುತ್ತೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಏಕಾದಶಿಯ ಉಪವಾಸ ಕಥನವೆಂಬ ಇನ್ನೂರ ಅರವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಿಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ॥



॥ ಪಾರ್ವತ್ಯುವಾಚ ॥

ಭಗವನ್ ಶ್ರೋತುಮಿಚ್ಛಾಮಿ ದ್ವಾದಶ್ಯಾಶ್ಚ ವಿಧಾನಕಂ ।
ವಿಷ್ಣೋಃ ಪೂಜಾವಿಧಾನಂ ಚ ಕರ್ತವ್ಯಂ ತತ್ರ ವೈ ಪ್ರಭೋ ॥ ೧ ॥

ಏಕಾದಶ್ಯಾಃ ಪ್ರಭಾವಂ ಚ ಸರ್ವಪಾಪಹರಂ ನೃಣಾಂ ।
ಆಚಕ್ಷ್ವ ವಿಸ್ತರೇಣೈವ ಮಯಿ ಪ್ರೀತ್ಯಾ ಮಹೇಶ್ವರ ॥ ೨ ॥

॥ ಮಹಾದೇವ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ದ್ವಾದಶ್ಯಾಶ್ಚ ವಿಧಾನಕಂ ।
ತಸ್ಯಾಸ್ಸ್ಮರಣಮಾತ್ರೇಣ ಸಂತುಷ್ಟಸ್ಯಾಜ್ಜನಾರ್ದನಃ ॥ ೩ ॥

---

## ಇನ್ನೂರ ಅರವತ್ತೆರಡನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು–ಎಲೈ ಸ್ವಾಮಿಯೆ! ದ್ವಾದಶಿಯ ವಿಧಾನವನ್ನೂ ಆ ದ್ವಾದಶಿಯಲ್ಲಿ ವಿಷ್ಣುವನ್ನು ಪೂಜೆಮಾಡುವ ವಿಧಾನವನ್ನೂ ತಿಳಿಸು.

೨. ಜನರ ಪಾಪವನ್ನು ನಾಶಮಾಡುವ ಏಕಾದಶಿಯ ವಿಧಾನವನ್ನೂ ಮತ್ತು ಅದರ ಪ್ರಭಾವವನ್ನೂ ನನ್ನಲ್ಲಿ ಪ್ರೀತಿಯಿಟ್ಟು ವಿಸ್ತಾರವಾಗಿ ಹೇಳು.

೩. ಎಲೈ ದೇವಿಯೆ! ಆ ದ್ವಾದಶಿಯ ವಿಧಿಯನ್ನು ಹೇಳುತ್ತೇನೆ. ಕೇಳು. ಅದನ್ನು ಸ್ಮರಿಸಿಕೊಂಡರೇನೇ ಜನಾರ್ದನನು ಸಂತೋಷಗೊಳ್ಳುತ್ತಾನೆ.

ಏಕಾದಶ್ಯಾಂ ತು ಪ್ರಾಪ್ತಾಯಾಂ ಸಮುಪೋಷ್ಯೇಹ ಮಾನವಾಃ ।
ಸರ್ವಪಾಪವಿನಿರ್ಮುಕ್ತಾ ಯಾಂತಿ ವಿಷ್ಣೋಃ ಪರಂ ಪದಂ ॥ ೪ ॥

ಸಪ್ತಜನ್ಮಾರ್ಜಿತಂ ಪಾಪಂ ಜ್ಞಾನತೋಽಜ್ಞಾನತಃ ಕೃತಂ ।
ಕ್ಷಣಾದೇವ ಲಯಂ ಯಾತಿ ದ್ವಾದಶ್ಯಾಂ ಹರಿಪೂಜನಾತ್ ॥ ೫ ॥

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹತಿ ಷೋಡಶೀಂ ॥ ೬ ॥

ಧರ್ಮದಾ ಹ್ಯರ್ಥದಾ ಚೈವ ಕಾಮದಾ ಮೋಕ್ಷದಾ ಕಿಲ ।
ಸರ್ವಕಾಮದುಘಾ ನೃಣಾಂ ದ್ವಾದಶೀ ವರವರ್ಣಿನಿ ॥ ೭ ॥

ಏಕಾದಶೀಸಮಂ ಕಿಂಚಿತ್ ಪಾಪತ್ರಾಣಂ ನ ವಿದ್ಯತೇ ।
ಏಕಾದಶೀಸಮಂ ಕಿಂಚಿದ್ವ್ರತಂ ನಾಸ್ತಿ ಶುಭೇಕ್ಷಣೇ ॥ ೮ ॥

---

೪. ಏಕಾದಶಿಯ ದಿವಸ ಮನುಷ್ಯನು ಉಪವಾಸಮಾಡಿದರೆ ಎಲ್ಲಾ ಪಾಪಗಳನ್ನೂ ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ.

೫. ಬುದ್ಧಿಗೆ ತಿಳಿದಾಗಲಿ, ತಿಳಿಯದಾಗಲಿ ಮಾಡಿದ ಏಳು ಜನ್ಮಗಳ ಪಾಪಗಳೂ ಕೂಡ ದ್ವಾದಶಿಯ ದಿನ ಹರಿಪೂಜೆಯನ್ನು ಮಾಡಿದರೆ ಹೋಗುತ್ತವೆ.

೬. ಸಾವಿರ ಅಶ್ವಮೇಧಯಾಗಗಳಾಗಲಿ, ನೂರು ವಾಜಪೇಯಯಾಗಗಳಾಗಲಿ ಈ ಏಕಾದಶಿಯ ಉಪವಾಸದ ಹದಿನಾರನೆಯ ಒಂದು ಭಾಗವನ್ನೂ ಹೋಲುವುದಿಲ್ಲ.

೭. ಈ ಉತ್ತಮವಾದ ದ್ವಾದಶಿಯು ಧರ್ಮ, ಅರ್ಥ, ಕಾಮ ಮೋಕ್ಷಗಳನ್ನು ಕೊಡುತ್ತದೆ. ಒಟ್ಟಿನಲ್ಲಿ ಎಲ್ಲಾ ಕಾಮಗಳನ್ನೂ ಕೊಡುತ್ತದೆ.

೮. ಪಾಪದಿಂದ ಪಾರುಗಾಣಿಸುವುದು ಏಕಾದಶಿಗೆ ಸಮವಾದುದು ಮತ್ತೊಂದಿಲ್ಲ. ಏಕಾದಶಿಗೆ ಸಮವಾದ ವ್ರತವು ಮತ್ತೊಂದಿಲ್ಲ.

ಏಕಾದಶೀಂ ಪರಿತ್ಯಜ್ಯ ಯೋಽನ್ಯತ್ ವ್ರತಮಾಚರೇತ್ ।
ಸ ಕರಸ್ಥಂ ಮಹಾರಾಜ್ಯಂ ತ್ಯಕ್ತ್ವಾ ಭೈಕ್ಷಂ ತು ಯಾಚತೇ ॥ ೯ ॥

ಏಕಾದಶೇಂದ್ರಿಯೈಃ ಪಾಪಂ ಯತ್ಕೃತಂ ಭವತಿ ಪ್ರಿಯೇ ।
ಏಕಾದಶ್ಯುಪವಾಸೇನ ತತ್ಸರ್ವಂ ವಿಲಯಂ ವ್ರಜೇತ್ ॥ ೧೦ ॥

ರಟಂತೀಹ ಪುರಾಣಾನಿ ಭೂಯೋ ಭೂಯೋ ವರಾನನೇ ।
ನ ಭೋಕ್ತವ್ಯಂ ನ ಭೋಕ್ತವ್ಯಂ ಸಂಪ್ರಾಪ್ತೇ ಹರಿವಾಸರೇ ॥ ೧೧ ॥

ಭುಂಕ್ಷ್ವ ಭುಂಕ್ಷ್ವೇತಿ ನ ಬ್ರೂಯತ್ ಸಂಪ್ರಾಪ್ತೇ ಹರಿವಾಸರೇ ।
ಅಭಕ್ಷ್ಯಂ ಸರ್ವದಾ ಪ್ರೋಕ್ತಂ ಕಿಂ ಪುನಃ ಶುಕ್ಲಕೃಷ್ಣಯೋಃ ॥ ೧೨ ॥

ವರ್ಣಾನಾಮಾಶ್ರಮಾಣಾಂ ಚ ಸ್ತ್ರೀಣಾಂ ಚ ವರವರ್ಣಿನಿ ।
ಏಕಾದಶ್ಯುಪವಾಸಸ್ತು ಕರ್ತವ್ಯೋ ನಾತ್ರ ಸಂಶಯಃ ॥ ೧೩ ॥

---

೯. ಏಕಾದಶಿಯ ವ್ರತವನ್ನು ಬಿಟ್ಟು ಯಾವನು ಬೇರೆ ವ್ರತವನ್ನು ಮಾಡುತ್ತಾನೆಯೋ ಅವನು ಕೈಯ್ಯಲ್ಲಿರುವ ಮಹಾರಾಜ್ಯವನ್ನು ಬಿಟ್ಟು ಬಿಕ್ಷಕ್ಕೆ ಹೋದಂತೆ ಆಗುತ್ತಾನೆ.

೧೦. ಕರ್ಮೇಂದ್ರಿಯಗಳೈದು. ಜ್ಞಾನೇಂದ್ರಿಯಗಳೈದು. ಮನಸ್ಸೂ ಸೇರಿ ಹನ್ನೊಂದು ಇಂದ್ರಿಯಗಳು. ಇವುಗಳಿಂದ ಮಾಡಿದ ಪಾಪಗಳು ಈ ಏಕಾದಶಿಯ ಉಪವಾಸದಿಂದ ಹೋಗುತ್ತದೆ.

೧೧. ಹರಿವಾಸರವು ಬಂದಾಗ ಊಟಮಾಡಬೇಡ. ಊಟಮಾಡಬೇಡ. ಎಂಬುದಾಗಿ ಪುರಾಣಗಳೆಲ್ಲವೂ ಸಾರಿ ಹೇಳುತ್ತಿವೆ.

೧೨. ಊಟಮಾಡು ಊಟಮಾಡು. ಎಂಬುದಾಗಿ ಹರಿವಾಸರದ ದಿವಸ ಹೇಳಬಾರದು. ಸಾಧಾರಣದಿನಗಳಲ್ಲಿಯೇ ಊಟಮಾಡು ಎಂದು ಹೇಳುವುದು ಅಯುಕ್ತವಾಗಿರುವುದು. ಹೀಗಿರುವಲ್ಲಿ ಶುಕ್ಲ ಕೃಷ್ಣ ಏಕಾದಶಿಗಳಲ್ಲಿ ಹಾಗೆ ಹೇಳಬೇಡವೆಂದು ಹೇಳತಕ್ಕದ್ದೇನಿರುತ್ತದೆ !

೧೩. ಎಲ್ಲಾ ವರ್ಣದವರೂ ಎಲ್ಲಾ ಆಶ್ರಮದವರೂ, ಹೆಂಗಸರೂ, ಶೂದ್ರರೂ ಕೂಡ ಏಕಾದಶಿಯ ದಿವಸ ಉಪವಾಸ ಮಾಡಬೇಕು. ಸಂಶಯವಿಲ್ಲ.

ಏಕಾದಶ್ಯಾಂ ತು ಪ್ರಾಪ್ತಾಯಾಂ ಮಾತಾಪಿತ್ರೋರ್ಮೃತೇಽಹನಿ ।
ದ್ವಾದಶ್ಯಾಂ ತು ಪ್ರದಾತವ್ಯಂ ನೋಪವಾಸದಿನೇ ಕ್ವಚಿತ್ ॥ ೧೪ ॥

ಗರ್ಹಿತಾನ್ನಂ ನ ಚಾಶ್ನಂತಿ ಪಿತರಶ್ಚ ದಿವೌಕಸಃ ।
ಏಕಾದಶ್ಯಾಂ ನ ಭೋಕ್ತವ್ಯಂ ಸುರಾಂ ವಾ ನ ಪಿಬೇತ್ ಕ್ವಚಿತ್ ॥ ೧೫ ॥

ಬ್ರಾಹ್ಮಣ್ಯಂ ನೈವ ಹನ್ಯಾತ್ತು ಸಮಮೇತತ್ತ್ರಯಂ ಸ್ಮೃತಂ ।
ತಸ್ಮಾದೇಕಾದಶೀಂ ಶುದ್ಧಾಮುಪವಾಸಂ ಸಮಾಚರೇತ್ ॥ ೧೬ ॥

ದಶಮೀಮಿಶ್ರಿತಾಂ ತಾಂ ತು ಪ್ರಯತ್ನೇನ ವಿವರ್ಜಯೇತ್ ।
ಅರುಣೋದಯವೇಲಾಯಾಂ ದಶಮೀಮಿಶ್ರಿತಾ ಭವೇತ್ ॥ ೧೭ ॥

---

೧೪. ತಾಯಿತಂದೆಗಳ ಶ್ರಾದ್ಧದ ದಿನದಲ್ಲಿ ಏಕಾದಶಿಯು ಬಂದರೆ ಆ ಶ್ರಾದ್ಧವನ್ನು ದ್ವಾದಶಿಯ ದಿನ ಮಾಡಬೇಕು. ಉಪವಾಸದ ದಿನದಲ್ಲಿ ಮಾಡಲೇ ಬಾರದು.

೧೫–೧೬. ಪಿತೃಗಳೂ, ದೇವತೆಗಳೂ, ನಿಂದಿತವಾದ ಅನ್ನವನ್ನು ತಿನ್ನುವುದಿಲ್ಲ. ಏಕಾದಶಿಯ ದಿನ ಊಟಮಾಡಕೂಡದು. ಹೆಂಡವನ್ನು ಕುಡಿಯಲೇ ಕೂಡದು. ಎಷ್ಟು ಕಷ್ಟಬಂದರೂ ಬ್ರಾಹ್ಮಣ್ಯವನ್ನು ಹಾಳುಮಾಡಿಕೊಳ್ಳ ಕೂಡದು. ಈ ಮೂರೂ ಒಂದೇರೀತಿಯಾದುವು. ಎಂದರೆ ಏಕಾದಶಿಯ ದಿನ ಊಟಮಾಡುವುದು, ಹೆಂಡ ಕುಡಿಯುವುದು, ಬ್ರಾಹ್ಮಣ್ಯವನ್ನು ಹಾಳುಮಾಡಿ ಕೊಳ್ಳುವುದೂ ಈ ಮೂರೂ ಒಂದೇ. ಆದ್ದರಿಂದ ಏಕಾದಶಿಯ ದಿವಸ ಶುದ್ಧವಾಗಿ ಉಪವಾಸವಿರಬೇಕೇ ಹೊರತು ಏನನ್ನೂ ತಿನ್ನಬಾರದು.

೧೭. ದಶಮಿಯಿಂದ ಯುಕ್ತವಾದ ಏಕಾದಶಿಯನ್ನು ಆಚರಿಸಲೇ ಬಾರದು. ಅರುಣೋದಯವೇಳೆಯಲ್ಲಿ ದಶಮಿಯಿದ್ದು ಅನಂತರ ಆ ದಿನವೆಲ್ಲವೂ ಏಕಾದಶಿಯಿದ್ದರೂ ಆ ಏಕಾದಶಿಯನ್ನು ಆಚರಿಸದೆ ಮಾರನೆಯ ದಿನದ ದ್ವಾದಶಿಯ ದಿವಸ ಶುದ್ಧವಾದ ಉಪವಾಸವನ್ನು ಯಾವುದನ್ನೂ ವಿಮರ್ಶಿಸದೆ ಮಾಡಬೇಕು.

ತಾಂ ತ್ಯಕ್ತ್ವಾ ದ್ವಾದಶೀಂ ಶುದ್ಧಾಮುಪೋಷೇದವಿಚಾರಯನ್ ।
ಕಲಾಯಾಂ ವಿದ್ಯಮಾನಾಯಾಂ ಸೂರ್ಯಸ್ಯೋದಯನಂ ಪ್ರತಿ ॥ ೧೮ ॥

ತ್ರಯೋದಶ್ಯಾಂ ತಥಾ ದೇವಿ ದ್ವಾದಶೀ ಪರಿವಿದ್ಯತೇ ।
ತಥಾ ಚ ದ್ವಾದಶೀ ಶುದ್ಧಾ ಹ್ಯುಪವಾಸೇ ವಿಧೀಯತೇ ॥ ೧೯ ॥

ಅರುಣೋದಯವೇಲಾಯಾಂ ಕೃತ್ಯಂ ಸರ್ವಂ ಸಮಾಚರೇತ್ ।
ಕಲಾಯಾಮಪಿ ದ್ವಾದಶ್ಯಾಂ ಪಾರಣಂ ತತ್ರ ಚೋದಿತಂ ॥ ೨೦ ॥

ಶುದ್ಧಾಮೇಕಾದಶೀಂ ಚಾಪಿ ತ್ಯಜೇದತ್ರ ನ ಸಂಶಯಃ ।
ಕಲಾಪ್ಯೇಕಾದಶೀ ಯತ್ರ ದ್ವಾದಶ್ಯಾಮುದಿತೇ ರವೌ ॥ ೨೧ ॥

ಸರ್ವಾಮೇಕಾದಶೀಂ ತ್ಯಕ್ತ್ವಾ ತತ್ರೈವೋಪವಸೇದ್ದ್ವಿಜಃ ।
ಏವಂ ವಿಧಿಂ ವಿನಿಶ್ಚಿತ್ಯ ಸಮುಪೋಷ್ಯಂ ಹರೇರ್ದಿನಂ ॥ ೨೨ ॥

---

೧೮–೧೯. ಏಕಾದಶಿಯ ದಿವಸ ಸೂರ್ಯೋದಯದ ವೇಳೆಗೆ ಮುಂಚೆ ಒಂದು ಕಲೆಯಷ್ಟು ದಶಮಿಯಿದ್ದು ಮಾರನೆಯ ದಿನ ಏಕಾದಶಿಯು ಇಲ್ಲದೆ ದ್ವಾದಶಿಯೂ ಅದರ ಮೇಲೆ ತ್ರಯೋದಶಿಯೂ ಬಂದಿದ್ದರೂ ಆ ದ್ವಾದಶಿಯ ದಿವಸವೇ ಉಪವಾಸಮಾಡಬೇಕು. ಆ ದ್ವಾದಶಿಯು ತ್ರಯೋದಶಿಯಿಂದ ಕೂಡಿದ್ದರೂ ಉಪವಾಸಕ್ಕೆ ಅದೇ ಯೋಗ್ಯವಾದುದು.

೨೦. ಮೊದಲಿನ ದಿವಸ ಏಕಾದಶಿಯಿದ್ದು ಮಾರನೆಯ ದಿನ ದ್ವಾದಶಿ ಯಿದ್ದು ಅದರ ಮಾರನೆಯ ದಿನ ಅರುಣೋದಯದಲ್ಲಿಯೂ ಆ ದ್ವಾದಶಿಯು ಒಂದು ಕಲೆಯಾದರೂ ಇದ್ದರೆ ಆ ಅರುಣೋದಯದ ವೇಳೆಯಲ್ಲಿ ದ್ವಾದಶಿಯ ಕೆಲಸಗಳನ್ನು ಮುಗಿಸಿಕೊಂಡು ಆಗಲೇ ಪಾರಣೆಯನ್ನು ಮಾಡಿಕೊಳ್ಳಬೇಕು.

೨೧-೨೨. ಒಂದು ದಿನವೆಲ್ಲವೂ ಏಕಾದಶಿಯಿದ್ದು ಅದು ದಶಮಿಯ ವೇಧೆಯನ್ನು ಹೊಂದಿಲ್ಲದಿದ್ದ ಮಾರನೆಯದಿನ ಸೂರ್ಯೋದಯವಾದ ಮೇಲೆಯೂ ಏಕಾದಶಿಯು ಒಂದು ಕಲೆಯಾದರೂ ಇದ್ದರೆ ಆ ದಿನವೆಲ್ಲ ಇರುವ ದ್ವಾದಶಿಯ ದಿನವೇ ಉಪವಾಸಮಾಡಬೇಕು. ಹಿಂದಿನ ಏಕಾದಶಿಯು ಶುದ್ಧವಾಗಿ ಆ ದಿನ ವೆಲ್ಲ ಇದ್ದರೂ ಆ ದಿನ ಉಪವಾಸವಿರಬಾರದು. ಈ ರೀತಿಯಾಗಿ ನಿಶ್ಚಯ ಮಾಡಿಕೊಂಡು ಏಕಾದಶಿಯ ದಿನ ಉಪವಾಸಮಾಡಬೇಕು.

ಸಾಯಮಾದ್ಯಂತಯೋರಹ್ನೋಃ ಸಾಯಂ ಪ್ರಾತಸ್ತು ಮಧ್ಯಮೇ ।
ತತ್ರೋಪವಾಸಂ ಕುರ್ವೀತ ತ್ಯಕ್ತ್ವಾ ಭುಕ್ತಿಚತುಷ್ಟಯಂ ॥ ೨೩ ॥

ದಶಮ್ಯಾಮೇಕಭುಕ್ತಸ್ತು ನಾರೀಸಂಗವಿವರ್ಜಿತಃ ।
ಅವನೀತಲ್ಪಶಾಯೀ ಚ ಪರೇಽಹನಿ ವಸೇಚ್ಛುಚಿಃ ॥ ೨೪ ॥

ಧಾತ್ರೀಫಲಾನುಲಿಪ್ತಾಂಗಃ ಸ್ನಾನಂ ಸಂಧ್ಯಾಂ ಸಮಾಚರೇತ್ ।
ಉಪವಾಸಪರೋ ಭೂತ್ವಾ ರಾತ್ರೌ ಸಂಪೂಜಯೇದ್ಧರಿಂ ॥ ೨೫ ॥

ಪಾಷಂಡಿನಂ ವಿಕರ್ಮಸ್ಥಂ ಪತಿತಂ ಶ್ವಪಚಂ ತಥಾ ।
ನಾವಲೋಕೇನ್ನ ಸಂಭಾಷೇನ್ನ ಸ್ಪೃಶೇತ್ತತ್ರ ವೈಷ್ಣವಃ ॥ ೨೬ ॥

---

೨೩. ಉಪವಾಸಮಾಡಬೇಕಾದ ದಿವಸದ ಹಿಂದಿನ ದಿವಸ ರಾತ್ರಿಯಲ್ಲಿ ಊಟಮಾಡಬಾರದು. ಉಪವಾಸದ ದಿನ ಬೆಳಿಗ್ಗೆ ಸಾಯಂಕಾಲಗಳಲ್ಲಿ ಊಟ ಮಾಡಬಾರದು. ಪಾರಣೆಯ ದಿನ ರಾತ್ರಿಯಲ್ಲಿ ಊಟಮಾಡಬಾರದು. ಎಂದರೆ ಒಂದು ಏಕಾದಶಿಯ ಉಪವಾಸವೆಂದರೆ ನಾಲ್ಕು ಊಟಗಳನ್ನು ಬಿಡಬೇಕು. ಒಂದುದಿನಕ್ಕೆ ಎರಡೇ ಊಟವೆಂಬ ಶಾಸ್ತ್ರವನ್ನು ಮರೆಯಬಾರದು.

೨೪–೨೫ ದಶಮಿಯ ದಿನ ಬೆಳಗಿನ ಊಟವನ್ನು ಮಾಡಿ ರಾತ್ರಿ ಊಟವನ್ನು ಮಾಡದಿರಬೇಕು. ಸ್ತ್ರೀಸಂಗವನ್ನು ಮಾಡಬಾರದು. ನೆಲದ ಮೇಲೆ ಮಲಗಿರಬೇಕು. ಮಾರನೆಯ ದಿನ ಶುಚಿಯಾಗಿರಬೇಕು. ನೆಲ್ಲಿಯಕಾಯನ್ನು ಜಜ್ಜಿ ಮೈಗೆಲ್ಲಾ ತಿಕ್ಕಿಕೊಂಡು ಸ್ನಾನವನ್ನು ಮಾಡಬೇಕು. ಸಂಧ್ಯಾವಂದನೆಯನ್ನು ಮಾಡಬೇಕು. ಉಪವಾಸಮಾಡಿಕೊಂಡಿದ್ದು ಏಕಾದಶಿಯ ದಿನ ರಾತ್ರಿಯಲ್ಲಿ ಹರಿಯನ್ನು ಪೂಜಿಸಬೇಕು.

೨೬. ಪಾಷಂಡಿ, ತನ್ನ ಕರ್ಮವನ್ನೇ ತಾನು ಮಾಡದೆ ಇರತಕ್ಕವನು, ಜಾತಿಗೆಟ್ಟವನು, ಅಂತ್ಯಜ, ಇವರೊಡನೆ ಮಾತನಾಡಬಾರದು. ಇವರನ್ನು ಮುಟ್ಟಬಾರದು. ನೋಡಲೇ ಕೂಡದು. ವಿಷ್ಣುಭಕ್ತನಾದವನು ಹೀಗಿರಬೇಕು.

ಅವೈಷ್ಣವಸ್ತು ಯೋ ವಿಪ್ರಃ ಸ ಪಾಷಂಡಃ ಪ್ರಕೀರ್ತಿತಃ ।
ಶಿಖೋಪವೀತತ್ಯಾಗೀ ಚ ವಿಕರ್ಮಸ್ಥ ಇತೀರಿತಃ ॥ ೨೭ ॥

ಮಹಾಪಾಪೋಪಪಾಪಾಭ್ಯಾಂ ಯುಕ್ತಃ ಪತಿತ ಉಚ್ಯತೇ ।
ಅಂತ್ಯಜಃ ಶ್ವಪಚಃ ಪ್ರೋಕ್ತೋ ವೇದೈಸ್ತತ್ರ ಸುನಿರ್ಣಯಃ ॥ ೨೮ ॥

ರಾತ್ರೌ ಸಂಪೂಜ್ಯ ದೇವೇಶಂ ಜಾಗರಂ ಚ ಸಮಾಚರೇತ್
ಗಂಧಪುಷ್ಪೈಸ್ತಥಾ ದೀಪೈರ್ವಸ್ತ್ರೈರಾಭರಣೈಶ್ಶುಭೈಃ ।
ಜಪೈಸ್ತೋತ್ರೈರ್ನಮಸ್ಕಾರೈಃ ಪೂಜಯೇನ್ನಿಶಿ ಭಕ್ತಿತಃ ॥ ೨೯ ॥

ತತಃ ಪ್ರಭಾತಸಮಯೇ ತುಳಸೀಮಿಶ್ರಿತೈರ್ಜಲೈಃ ॥ ೩೦ ॥

ಸ್ನಾತ್ವಾ ಸಮ್ಯಗ್ವಿಧಾನೇನ ಸಂತರ್ಪ್ಯ ಪಿತೃದೇವತಾಃ
ಪೂಜಯೇಜ್ಜಗತಾಮೀಶಂ ಲಕ್ಷ್ಮ್ಯಾ ಸಹ ಜನಾರ್ದನಂ ॥ ೩೧ ॥

---

೨೭. ವಿಷ್ಣುಭಕ್ತನಲ್ಲದ ಬ್ರಾಹ್ಮಣನು ಪಾಷಂಡಿ ಎನ್ನಿಸಿಕೊಳ್ಳುತ್ತಾನೆ. ಜುಟ್ಟು, ಜನಿವಾರಗಳನ್ನು ತೆಗೆದಿರುವವನು ವಿಕರ್ಮಸ್ಥನೆಂದೆನಿಸಿಕೊಳ್ಳುತ್ತಾನೆ.

೨೮ ಮಹಾಪಾಪ, ಉಪಪಾಪಗಳಿಂದ ಕೂಡಿದವನನ್ನು ಪತಿತನೆಂದು ಹೇಳುತ್ತಾರೆ. ಅಂತ್ಯಜನು ಶ್ವಪಚನೆಂದು ಎನ್ನಿಸಿಕೊಳ್ಳುತ್ತಾನೆ. ಎಂದು ವೇದ ದಲ್ಲಿಯೇ ಹೇಳಿದೆ.

೨೯. ಏಕಾದಶಿಯ ದಿವಸ ರಾತ್ರಿಯಲ್ಲಿ ಸ್ವಾಮಿಯನ್ನು ಪೂಜೆಮಾಡಿ ಜಾಗರಣೆಯನ್ನು ಮಾಡಬೇಕು. ಪೂಜೆಮಾಡುವಾಗ ಗಂಧ, ಹೂವು, ಧೂಪ, ದೀಪ, ವಸ್ತ್ರ, ಆಭರಣಗಳಿಂದ ಪೂಜಿಸಬೇಕು. ಆ ಸ್ವಾಮಿಯ ಮಂತ್ರವನ್ನು ಜಪಿಸಬೇಕು. ಸ್ತೋತ್ರಗಳನ್ನು ಹೇಳಿಕೊಂಡು ಸ್ತುತಿಸಬೇಕು. ನಮಸ್ಕಾರ ಗಳನ್ನು ಮಾಡುತ್ತಿರಬೇಕು. ಈ ರೀತಿಯಾಗಿ ಪೂಜಿಸಬೇಕು.

೩೦. ದ್ವಾದಶಿಯ ದಿನ ಬೆಳಗ್ಗೆ ತುಳಸಿಯನ್ನು ಹಾಕಿರುವ ನೀರಿನಿಂದ ಸ್ನಾನವನ್ನು ಶಾಸ್ತ್ರದಲ್ಲಿ ಹೇಳಿರುವಂತೆ ಮಾಡಬೇಕು. ಅನಂತರ ಪಿತೃಗಳಿಗೂ ದೇವತೆಗಳಿಗೂ ತರ್ಪಣವನ್ನು ಕೊಡಬೇಕು.

೩೧–೩೨. ಅನಂತರ ಶುದ್ಧವಸ್ತ್ರವನ್ನು ಧರಿಸಿಕೊಂಡು ಸಂಧ್ಯಾವಂದನೆ ಗಳನ್ನು ಮಾಡಿಕೊಂಡು ಚಿಗುರಾಗಿರುವ ತುಲಸಿಯ ದಳದಿಂದಲೂ ಸುವಾಸನೆ

**ಕೋಮಲ್ಯೈಸ್ತುಲಸೀಪತ್ರೈಃ ಪುಷ್ಪೈಶ್ಚೈವ ಸುಗಂಧಿಭಿಃ ।**
**ದೀಪಾನ್ನೀರಾಜಯೇತ್ತತ್ರ ಶತಮಷ್ಟೋತ್ತರಂ ತತಃ || ೩೨ ||**

**ಶತಪತ್ರಕೃತಾಂ ಮಾಲಾಂ ತಾಭ್ಯಾಂ ಸಮ್ಯಙ್ನಿವೇದಯೇತ್ ॥**
**ಧೂಪಂ ದೀಪಂ ಚ ನೈವೇದ್ಯಂ ತಾಂಬೂಲಂ ಚ ನಿವೇದಯೇತ್ ॥ ೩೩ ||**

**ಶರ್ಕರಾಸಹಿತಂ ದಿವ್ಯಂ ಪಾಯಸಾನ್ನಂ ಸಮರ್ಪಯೇತ್ ।**
**ಕರ್ಪೂರೇಣ ಚ ಸಯುಕ್ತಂ ತಾಂಬೂಲಂ ಚ ನಿವೇದಯೇತ್ ॥ ೩೪ ||**

**ಪ್ರದಕ್ಷಿಣಂ ನಮಸ್ಕಾರಂ ಕೃತ್ವಾ ಭಕ್ತ್ಯಾ ಸಮನ್ವಿತಃ ||**
**ಆಜ್ಯೇನ ಜುಹುಯಾದ್ವಹ್ನೌ ಶತಮಷ್ಟೋತ್ತರಂ ತಥಾ || ೩೫ ||**

**ಪ್ರತ್ಯೃಚಂ ಪುರುಷಸೂಕ್ತೇನ ಶ್ರೀಸೂಕ್ತೇನ ಚ ಪಾಯಸಂ ।**
**ಬ್ರಾಹ್ಮಣಾನ್ ಭೋಜಯೇದ್ಭಕ್ತ್ಯಾ ಸ್ವಯಂ ಭುಂಜೀತ ವಾಗ್ಯತಃ || ೩೬ ||**

---

ಇರುವ ಹೂಗಳಿಂದಲೂ, ಆ ಲಕ್ಷ್ಮಿಯೊಡಗೂಡಿದ ಸ್ವಾಮಿಯನ್ನು ಪೂಜಿಸಬೇಕು. ಅನಂತರ ನೂರೆಂಟು ದೀಪಗಳನ್ನು ಬೆಳಗಬೇಕು.

೩೩. ಕಮಲದ ಮಾಲೆಯನ್ನು ಆ ಲಕ್ಷ್ಮೀನಾರಾಯಣರಿಗೆ ಸಮರ್ಪಿಸಬೇಕು. ಅನಂತರ ಧೂಪ, ದೀಪ, ನೈವೇದ್ಯ, ತಾಂಬೂಲಗಳನ್ನು ನಿವೇದಿಸಬೇಕು.

೩೪. ಸಕ್ಕರೆಯನ್ನೂ ಹಾಲನ್ನೂ ಹಾಕಿದ ಪಾಯಸವನ್ನೂ ಅನ್ನವನ್ನೂ ನಿವೇದಿಸಬೇಕು. ಪಚ್ಚಕರ್ಪೂರದಿಂದ ಕೂಡಿದ ತಾಂಬೂಲವನ್ನು ನಿವೇದಿಸಬೇಕು.

೩೫. ಭಕ್ತಿಯಿಂದ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ ನೂರೆಂಟುಬಾರಿ ತುಪ್ಪದಿಂದ ಅಗ್ನಿಯಲ್ಲಿ ಹೋಮ ಮಾಡಬೇಕು.

೩೬. ಪುರುಷಸೂಕ್ತದ ಒಂದೊಂದು ಋಕ್ಕನ್ನೂ ಹೇಳುತ್ತ ತುಪ್ಪವನ್ನೂ ಶ್ರೀಸೂಕ್ತವನ್ನು ಹೇಳುತ್ತಾ ಪಾಯಸವನ್ನೂ ನೂರೆಂಟುಬಾರಿ ಹೋಮಮಾಡಬೇಕು. ಅನಂತರ ಬ್ರಾಹ್ಮಣರನ್ನು ಬೋಜನಮಾಡಿಸಬೇಕು ಅನಂತರ ತಾನು ನಿಯಮದಿಂದ ಊಟಮಾಡಬೇಕು.

ಪುರಾಣಾದಿಪ್ರಸಾಕೇನ ಕ್ಷಪಯೇತ್ತದ್ದಿನಂ ಮಹತ್ |
ಕ್ಷಿತಿಶಾಯೀ ಬ್ರಹ್ಮಚಾರೀ ತಸ್ಯಾಮೇವ ನಿಶಿ ಸ್ವಪೇತ್ || ೩೭ ||

ಏವಂ ಸಂಪೂಜ್ಯಮಾನಸ್ಸಃ ದ್ವಾದಶ್ಯಾಂ ಕಮಲಾಪತಿಃ |
ಕ್ಷಣಾತ್ಪ್ರಸನ್ನೋ ಭಗವಾನ್ ಸರ್ವಾಭೀಷ್ಟಪ್ರದೋ ಧ್ರುವಂ || ೩೮ ||

ಇತ್ಯೇತತ್ಕಥಿತಂ ದೇವಿ ದ್ವಾದಶೀವ್ರತಮುತ್ತಮಂ |
ಕಿಮನ್ಯಚ್ಛ್ರೋತುಕಾಮಾಸಿ ತದ್ವಕ್ತವ್ಯಂ ಬ್ರವೀಮ್ಯಹಂ || ೩೯ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ದ್ವಾದಶೀ ಮಾಹಾತ್ಮ್ಯ ಕಥನಂ ನಾಮ ದ್ವಿಷಷ್ಟ್ಯಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೩೭. ಆ ದಿನವೆಲ್ಲವೂ ಪುರಾಣಗಳನ್ನು ಹೇಳುತ್ತ ಕೇಳುತ್ತ ಆ ದಿನವನ್ನು ಕಳೆಯಬೇಕು. ಆ ರಾತ್ರಿಯಲ್ಲೆಲ್ಲಾ ನೆಲದಮೇಲೆಯೇ ಮಲಗಬೇಕು. ಬ್ರಹ್ಮ ಚಾರಿಯಾಗಿರಬೇಕು. ಈ ರೀತಿಯಾಗಿ ಆ ರಾತ್ರಿ ಮಲಗಿರಬೇಕು.

೩೮. ದ್ವಾದಶಿಯ ದಿನ ಈ ರೀತಿಯಾಗಿ ಪೂಜೆಮಾಡಿದರೆ ಆ ಕಮಲಾ ಪತಿಯಾದ ವಿಷ್ಣುವು ಒಂದು ಕ್ಷಣಕಾಲದಲ್ಲಿಯೇ ಪ್ರಸನ್ನನಾಗಿ ಬೇಕಾದುದನ್ನು ಕೊಡುವನು.

೩೯. ಈ ದ್ವಾದಶೀವ್ರತವನ್ನು ನಿನಗೆ ಹೇಳಿದ್ದೇನೆ. ಇದು ಉತ್ತಮ ವಾದುದು. ಇನ್ನೇನನ್ನು ಕೇಳಬೇಕೆಂದಿದ್ದೀಯೆ? ಕೇಳು. ಹೇಳುತ್ತೇನೆ.

ಇಂತು ಶ್ರೀ ಪದ್ಮ ಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ದ್ವಾದಶೀ ಮಹಿಮೆಯ ಕಥನವೆಂಬ ಇನ್ನೂರ ಅರವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಿಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ಪಾರ್ವತ್ಯುವಾಚ ॥

**ಪಾಷಂಡಾನಾಂ ಚ ಸಂವಾದಂ ವರ್ಜಯೇದಿತಿ ಯತ್ತ್ವಯಾ ।**
**ಉಕ್ತಂ ಮಹೇಶ ಭಗವನ್ ಶ್ವಪಚಾದತಿಗರ್ಹಿತಂ ॥**
**ತೇ ಕಿದೃಶಾಃ ಸಮಾಖ್ಯಾತಾಃ ಕೈರ್ಲಿಂಗೈಶ್ಚಿಹ್ನಿತಾ ಭುವಿ ॥ ೧ ॥**

॥ ರುದ್ರ ಉವಾಚ ॥

**ಯೇಽನ್ಯಂ ದೇವಂ ಪರತ್ವೇನ ವದಂತ್ಯಜ್ಞಾನಮೋಹಿತಾಃ ।**
**ನಾರಾಯಣಾಜ್ಜಗನ್ನಾಥಾತ್ತೇ ವೈ ಪಾಷಂಡಿನಸ್ತಥಾ ॥ ೨ ॥**

---

## ಇನ್ನೂರ ಅರವತ್ತಮೂರನೆಯ ಅಧ್ಯಾಯವು



೧. ಶ್ರೀಪಾರ್ವತಿಯು ಹೇಳಿದಳು—ಪಾಷಂಡರೊಡನೆ ಮಾತನಾಡಕೂಡ ದೆಂದು ನೀನು ಹೇಳಿದೆಯಷ್ಟೆ ! ಮತ್ತು ಶ್ವಪಚರೊಡನೆಯೂ ಮಾತನಾಡಬಾರ ದೆಂದೂ ಹೇಳಿದೆಯಷ್ಟೆ ! ಅವರು ಹೇಗಿರುವರು ? ಅವರ ಲಕ್ಷಣಗಳೇನು ? ಅವ ರನ್ನು ಯಾವ ಗುರುತಿನಿಂದ ತಿಳಿಯಬೇಕು ?

೨. ರುದ್ರನು ಹೇಳಿದನು—ಯಾರು ವಿಷ್ಣುವಿಗಿಂತಲೂ ಬೇರೆಯಾದ ದೇವರನ್ನು ತಿಳುವಳಿಕೆಯಿಲ್ಲದೆಯೋ ಅಜ್ಞಾನದಿಂದಲೋ ಮೋಹದಿಂದಲೋ ಉತ್ತಮೋತ್ತಮನೆಂದು ಹೇಳುತ್ತಾರೆಯೋ ಅವರೆಲ್ಲರೂ ಪಾಷಂಡಿಗಳು.

ಕಪಾಲಭಸ್ಮಾಸ್ಥಿಧರಾ ಯೇ ಹ್ಯವೈದಿಕಲಿಂಗಿನಃ ||
ಋತೇ ವನಸ್ಥಾಶ್ರಮಾಚ್ಚ ಜಟಾವಲ್ಕಲಧಾರಿಣಃ || ೩ ||

ಅವೈದಿಕಕ್ರಿಯೋಪೇತಾಸ್ತೇ ವೈ ಪಾಷಂಡಿನಸ್ತಥಾ |
ಶಂಖಚಕ್ರೋರ್ಧ್ವಪುಂಡ್ರಾದಿಚಿಹ್ನೈಃ ಪ್ರಿಯತಮೈರ್ಹರೇಃ || ೪ ||

ರಹಿತಾ ಯೇ ದ್ವಿಜಾ ದೇವಿ ತೇ ವೈ ಪಾಷಂಡಿನಸ್ಸ್ಮೃತಾಃ |
ಶ್ರುತಿಸ್ಮೃತ್ಯುದಿತಾಚಾರಂ ಯಸ್ತು ನಾಚರತಿ ದ್ವಿಜಃ || ೫ ||

ಸ ಪಾಷಂಡೀತಿ ವಿಜ್ಞೇಯಃ ಸರ್ವಲೋಕೇಷು ಗರ್ಹಿತಃ |
ವಿನಾ ವೈ ಭಗವತ್ಪ್ರೀತ್ಯಾ ತೇ ವೈ ಪಾಷಂಡಿನಃ ಸ್ಮೃತಾಃ || ೬ ||

ಸಮಸ್ತಯಜ್ಞಭೋಕ್ತಾರಂ ವಿಷ್ಣುಂ ಬ್ರಹ್ಮಣ್ಯದೈವತಂ |
ಉದ್ದಿಶ್ಯ ದೇವತಾ ಏವ ಜುಹೋತಿ ಚ ದದಾತಿ ಚ || ೭ ||

---

೩. ಕಪಾಲ, ಭಸ್ಮ, ಮೂಳೆಗಳನ್ನು ಧರಿಸಿರುವವರೂ, ವೇದದಲ್ಲಿ ಹೇಳಿಲ್ಲದವುಗಳನ್ನು ಧರಿಸುವವರೂ, ವಾನಪ್ರಸ್ಥಾಶ್ರಮವನ್ನು ಹೊಂದಿಲ್ಲದೆ ಇದ್ದರೂ ಜಟೆ, ನಾರುಬಟ್ಟೆಗಳನ್ನು ಧರಿಸಿರುವವರೂ, ವೇದೋಕ್ತವಲ್ಲದ, ಕ್ರಿಯೆಗಳನ್ನು ಮಾಡುವವರೂ, ಪಾಷಂಡಿಗಳು ಎಂದೆನಿಸಿಕೊಳ್ಳುತ್ತಾರೆ.

೪. ಹರಿಗೆ ಪ್ರಿಯವಾದ ಶಂಖ, ಚಕ್ರ, ಊರ್ಧ್ವಪುಂಡ್ರ ಮುಂತಾದ ಚಿಹ್ನೆಗಳನ್ನು ಹಾಕಿಕೊಳ್ಳದವರು ಪಾಷಂಡಿಗಳೆಂದೆನಿಸಿಕೊಳ್ಳುತ್ತಾರೆ.

೫–೬. ಯಾವ ಬ್ರಾಹ್ಮಣನು ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಆಚಾರಗಳನ್ನು ಆಚರಿಸುವುದಿಲ್ಲವೋ ಅವನು ಪಾಷಂಡಿಯು. ಎಲ್ಲರಲ್ಲಿಯೂ ನಿಂದಿತನು. ಭಗವತ್ಪ್ರೀತಿಯನ್ನು ಮಾಡದೆ ಯಾರು ಇರುವರೋ ಅವರು ಪಾಷಂಡಿಗಳು.

೭–೮. ಎಲ್ಲಾ ಯಜ್ಞಗಳಲ್ಲಿಯೂ ಹವಿಸ್ಸನ್ನು ತಿನ್ನುವ ಉತ್ತಮೋತ್ತಮ ಬ್ರಹ್ಮಸ್ವರೂಪದೇವರಾದ ವಿಷ್ಣುವನ್ನೇ ಕುರಿತು ದೇವತೆಗಳೂ ಕೂಡ ಹೋಮ ಮಾಡುತ್ತಾರೆ. ಮತ್ತು ದಾನಮಾಡುತ್ತಾರೆ. ಅಂತಹ ಸ್ವಾಮಿಯನ್ನು ಬಿಟ್ಟು

ಸ ಪಾಷಂಡೀತಿ ವಿಜ್ಞೇಯಃ ಸ್ವತಂತ್ರಶ್ಚಾಪಿ ಕರ್ಮಸು ।
ಸ್ವಾತಂತ್ರ್ಯಾತ್ಕುರುತೇ ಯಸ್ತು ಕರ್ಮ ವೇದೋದಿತಂ ಮಹತ್ ॥ ೮ ॥

ಯಸ್ತು ನಾರಾಯಣಂ ದೇವಂ ಬ್ರಹ್ಮರುದ್ರಾದಿದೈವತೈಃ ॥
ಸಮತ್ವೇನೈವ ವೀಕ್ಷೇತ ಸ ಪಾಷಂಡೀ ಭವೇತ್ಸದಾ ॥ ೯ ॥

ಅವಸ್ಥಾತ್ರಿತಯೇ ಯಸ್ತು ಮನೋವಾಕ್ಕಾಯಕರ್ಮಭಿಃ ।
ವಾಸುದೇವಂ ನ ಜಾನಾತಿ ಸ ಪಾಷಂಡೀ ಭವೇದ್ದ್ವಿಜಃ ॥ ೧೦ ॥

ಕಿಮತ್ರ ಬಹುನೋಕ್ತೇನ ಬ್ರಾಹ್ಮಣಾ ಯೇಽಪ್ಯವೈಷ್ಣವಾಃ ।
ನ ಸ್ಪ್ರಷ್ಟವ್ಯಾ ನ ವಕ್ತವ್ಯಾ ನ ದ್ರಷ್ಟವ್ಯಾ ಕದಾಚನ ॥ ೧೧ ॥

॥ ವಸಿಷ್ಠ ಉವಾಚ ॥

ಏವಂ ಶ್ರುತ್ವಾ ಚ ಸಾ ದೇವೀ ಶಂಕರೇಣಾಭಿಭಾಷಿತಂ ।
ವಿಸ್ಮಯಂ ಪರಮಂ ಗತ್ವಾ ಪುನಃ ಪ್ರೋವಾಚ ಭಾಮಿನೀ ॥ ೧೨ ॥

---

ಯಾವನು ಬೇರೆಯ ದೇವತೆಗಳಿಗೆ ಹೋಮಮಾಡುವನೋ ಮತ್ತು ದಾನಮಾಡುವನೋ ಅವನು ಪಾಷಂಡಿಯು. (ಸ್ವಾತಂತ್ರ್ಯವೆಂದರೆ, ವೇದದಲ್ಲಿ ಹೇಳಿರುವ ಉತ್ತಮೋತ್ತಮವಾದ ಕರ್ಮಗಳಲ್ಲಿ ಸ್ವತಂತ್ರವನ್ನು ವಹಿಸಿ ನನ್ನದು ಎಂದು ಹೇಳಿ ಮಾಡುವಿಕೆ.)

೯. ಯಾವನು ವಿಷ್ಣುವನ್ನು ಬ್ರಹ್ಮರುದ್ರರೇ ಮುಂತಾದ ದೇವತೆಗಳಿಗೆ ಸಮನೆಂದು ತಿಳಿಯುವನೋ ಅವನು ಪಾಷಂಡಿಯು.

೧೦. ಬಾಲ್ಯ, ಯೌವನ, ಕೌಮಾರ, ವಾರ್ಧಿಕ್ಯವೆಂಬ ಅವಸ್ಥೆಗಳಲ್ಲಿ ಒಂದರಲ್ಲಿಯಾದರೂ, ಮನೋವಾಕ್ಕಾಯಕರ್ಮಗಳಿಂದ ಒಂದರಿಂದಲಾದರೂ ವಾಸುದೇವನನ್ನು ಯಾವನು ನೆನೆಯುವುದಿಲ್ಲವೋ ಅವನು ಪಾಷಂಡಿಯು.

೧೧. ಬಹಳ ಹೇಳಿದುದರಿಂದ ಪ್ರಯೋಜನವೇನು? ಯಾರು ವೈಷ್ಣವರಲ್ಲವೋ ಅವರನ್ನು ಮುಟ್ಟಬಾರದು. ಮಾತನಾಡಿಸಬಾರದು. ನೋಡಬಾರದು.

೧೨. ವಸಿಷ್ಠನು ಹೇಳಿದನು—ಆ ಪಾರ್ವತಿಯು ಶಂಕರನು ಹೇಳಿದ ಈ ಮಾತನ್ನು ಕೇಳಿ ಬಹುವಾಗಿ ಆಶ್ಚರ್ಯಪಟ್ಟು ಮತ್ತೆ ಇಂತೆಂದಳು.

॥ ಪಾರ್ವತ್ಯುವಾಚ ॥

ಭಗವನ್ ಪರಮಂ ಗುಹ್ಯಂ ಪೃಚ್ಛಾಮಿ ಸುರಸತ್ತಮ ।
ಮಯಿ ಪ್ರೀತ್ಯಾ ಸಮಾಚಕ್ಷ್ವ ಸಂಶಯೋ ವರ್ತತೇ ಭೃಶಂ ॥ ೧೩ ॥

ಕಪಾಲಭಸ್ಮಚರ್ಮಾಸ್ಥಿಧಾರಣಂ ಶ್ರುತಿಗರ್ಹಿತಂ ।
ತತ್ತ್ವಯಾ ಧಾರ್ಯತೇ ದೇವ ಗರ್ಹಿತಂ ಕೇನ ಹೇತುನಾ ॥ ೧೪ ॥

ಸ್ತ್ರೀಚಾಪಲ್ಯೇನ ದೇವೇಶ ಪೃಚ್ಛಾಮಿ ತ್ವಾಂ ಮಹಾಮತೇ ।
ಮಹಾನುಭಾವಾತ್ಕಥಿತಂ ನ ಕರ್ತವ್ಯಂ ಮಹೇಶ್ವರ ॥ ೧೫ ॥

ತ್ವಯೇತಿ ನ ಪುರಾ ಪ್ರೋಕ್ತಂ ವಿಸ್ತರೇಣ ಮಹಾಪ್ರಭೋ ।
ಅಕರ್ತವ್ಯಮಿತಿ ಪ್ರಶ್ನಂ ಕ್ಷಂತುಮರ್ಹಸಿ ಮೇ ಪ್ರಭೋ ॥ ೧೬ ॥

---

೧೩. ಪಾರ್ವತಿಯು ಹೇಳಿದಳು—ಎಲೈ ದೇವಶ್ರೇಷ್ಠನಾದ ಭಗವಂತನೆ! ನಿನ್ನನ್ನು ಗುಟ್ಟಾದ ವಿಷಯವನ್ನು ಕೇಳಬೇಕೆಂದಿದ್ದೇನೆ. ನನ್ನಲ್ಲಿರುವ ವಿಶ್ವಾಸದಿಂದ ಹೇಳು. ನನಗೆ ಬಹುವಾದ ಸಂಶಯವಿದೆ.

೧೪. ಎಲೈ ಶಿವನೆ! ಕಪಾಲ, ಭಸ್ಮ, ಚರ್ಮ, ಅಸ್ಥಿ ಇವುಗಳ ಧಾರಣೆಯು ವೇದವಿರುದ್ಧವು. ಎಂದು ನೀನೇ ಹೇಳಿದೆ. ಆ ನಿಂದಿತವಾದುದನ್ನೂ ಕೂಡ ನೀನು ಧರಿಸಲು ಕಾರಣವೇನು ?

೧೫. ಎಲೈ ಮಹಾಮತಿಯಾದ ದೇವನೆ! ಹೆಂಗಸಿನ ಚಾಪಲ್ಯದಿಂದ ಕೇಳುತ್ತಿದ್ದೇನೆ. ನೀನು ಬಹು ದೊಡ್ಡ ಮನಸ್ಸಿನವನಾದುದರಿಂದ ನಿಷಿದ್ಧವಾದುವು ಎಲ್ಲವನ್ನೂ ಮುಚ್ಚುಮರೆಯಿಲ್ಲದೆ ಹೇಳಿದ್ದೀಯೆ.

೧೬. ನೀನೂ ಕೂಡ ಆ ವಿಷ್ಣುವಿಗೆ ಭಕ್ತನಾದುದರಿಂದ ಅವನ್ನು ಧರಿಸಕೂಡದು. ಇದನ್ನು ಯಾವಾಗಲೂ ನೀನು ಸರಿಯಾಗಿ ಹೇಳಿಯೇ ಇಲ್ಲ. ನೀನು ಹೀಗೆ ಮಾಡಕೂಡದೆಂದು ನಾನು ಕೇಳಿದ ಪ್ರಶ್ನೆಯನ್ನು ಕ್ಷಮಿಸು. ನೀನು ಪ್ರಭುವಾಗಿದ್ದೀಯೆ.

॥ ವಸಿಷ್ಠ ಉವಾಚ ॥

ಇತಿ ದೇವ್ಯಾ ಹರಃ ಪೃಷ್ಟೋ ರಹಸ್ಯೇ ಜನವರ್ಜಿತೇ ।
ಉವಾಚ ಪರಮಂ ಗುಹ್ಯಂ ಯದ್ಯದಾಚರಿತಂ ಸ್ವಕಂ ॥ ೧೭ ॥

॥ ಶ್ರೀ ರುದ್ರ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ಯದ್ಗುಹ್ಯಂ ಪರಮಾದ್ಭುತಂ ।
ನ ವಕ್ತವ್ಯಂ ತ್ವಯಾ ದೇವಿ ಜನೇಷು ಕಥಿತಂ ಮಯಾ ॥ ೧೮ ॥

ಅಪೃಥಕ್ತ್ವಾಚ್ಛರೀರಸ್ಯ ವಕ್ಷ್ಯಾಮಿ ತವ ಸುವ್ರತೇ ।
ನಮುಚ್ಯಾದ್ಯಾ ಮಹಾದೈತ್ಯಾಃ ಪುರಾ ಸ್ವಾಯಂಭುವೇಂತರೇ ॥ ೧೯ ॥

ಮಹಾಬಲಾ ಮಹಾವೀರ್ಯಾ ಮಹಾವೀರಾ ಮಹೌಜಸಃ ।
ಸರ್ವೇ ವಿಷ್ಣುರತಾಃ ಶುದ್ಧಾಃ ಸರ್ವಪಾಪವಿವರ್ಜಿತಾಃ ॥ ೨೦ ॥

---

೧೭. ವಸಿಷ್ಠನು ಹೇಳಿದನು—ಪಾರ್ವತಿಯು ಯಾರೂ ಇಲ್ಲದಿರುವಾಗ ಗುಟ್ಟಾಗಿ ಇಂತೆಂದು ಹರನನ್ನು ಪ್ರಶ್ನಿಸಲು ಅವನು ತನ್ನ ಅಚರಣೆಯ ಗುಟ್ಟೆಲ್ಲವನ್ನೂ ಆಕೆಗೆ ಹೇಳಿದನು.

೧೮. ಶ್ರೀರುದ್ರನು ಹೇಳಿದನು—ಎಲೈ ದೇವಿಯೆ! ಬಹುವಾಗಿ ಆಶ್ಚರ್ಯವೂ ರಹಸ್ಯವೂ ಆದ ಈ ವಿಷಯವನ್ನು ಹೇಳುತ್ತೇನೆ. ನಾನು ಹೇಳುವುದನ್ನು ನೀನು ಯಾರೊಡನೆಯೂ ಹೇಳಕೂಡದು.

೧೯–೨೦. ಎಲೈ ಪಾರ್ವತಿಯೆ! ನೀನು ನನ್ನ ಶರೀರದ ಅರ್ಧಾಂಗಿಯಾದುದರಿಂದ ಹೇಳುತ್ತೇನೆ. ಹಿಂದೆ ಸ್ವಾಯಂಭುವ ಮನ್ವಂತರದಲ್ಲಿ ನಮುಚಿಯೇ ಮುಂತಾದ ದೈತ್ಯರಿದ್ದರು. ಅವರು ಬಹು ಬಲಿಷ್ಠರು. ವೀರ್ಯವಂತರು. ವೀರರು. ಆತ್ಮಶಕ್ತಿಯುಳ್ಳವರು. ವಿಷ್ಣುವಿನಲ್ಲಿಯೇ ಅಸಕ್ತರಾಗಿ ಶುದ್ಧರಾಗಿದ್ದರು. ಪಾಪಲೇಶವೂ ಅವರಲ್ಲಿರಲೇ ಇಲ್ಲ.

ತ್ರಯೀಧರ್ಮಯುತಾಸ್ಸರ್ವೇ ಭಗ್ನಾ ಇಂದ್ರಪುರೋಗಮಾಃ ।
ವಿಷ್ಣೋಸ್ಸಮೀಪಮಾಗಮ್ಯ ಭಯಾರ್ತಾಶ್ಶರಣಂ ಗತಾಃ　　|| ೨೧ ||

|| ದೇವಾ ಊಚುಃ ||

ಅಜೇಯಾನ್ ಸರ್ವದೇವಾನಾಂ ತಪೋನಿರ್ಧೂತಕಲ್ಮಷಾನ್ ।
ತ್ವಮೇವೈತಾನ್ ಮಹಾದೈತ್ಯಾನ್ ಜೇತುಮರ್ಹಸಿ ಕೇಶವ　　|| ೨೨ ||

|| ಮಹಾದೇವ ಉವಾಚ ||

ಇತ್ಯಾಕರ್ಣ್ಯ ಹರಿರ್ವಾಕ್ಯಂ ದೇವಾನಾಂ ಚ ಭಯಾನಕಂ ।
ತಾನವಧ್ಯಾನ್ವಿದಿತ್ವಾಥ ಮಾಮಾಹಪುರುಷೋತ್ತಮಃ　　|| ೨೩ ||

|| ಶ್ರೀ ಭಗವಾನುವಾಚ ||

ತ್ವಂ ಹಿ ರುದ್ರ ಮಹಾಬಾಹೋ ಮೋಹನಾರ್ಥೇ ಸುರದ್ವಿಷಾಂ ।
ಪಾಷಂಡಾಚರಣಂ ಧಮ ಂ ಕುರುಷ್ವ ಸುರಸತ್ತಮ　　|| ೨೪ ||

---

೨೧ ಎಲ್ಲರೂ ವೇದದಲ್ಲಿ ನಿಪುಣರು. ಇಂತಹವರು ಇಂದ್ರಾದಿದೇವತೆಗಳನ್ನು ಸೋಲಿಸಿದರು. ಆಗ ಆ ದೇವತೆಗಳೆಲ್ಲರೂ ಭಯಗೊಂಡು ವಿಷ್ಣುವಿನ ಬಳಿಗೆ ಬಂದು ಶರಣಾಗತರಾದರು.

೨೨. ದೇವತೆಗಳು ಹೇಳಿದರು–ಎಲೈ ಕೇಶವನೇ ! ಈ ನಮೂಚಿಯೇ ಮುಂತಾದ ದೈತ್ಯರು ದೇವತೆಗಳಿಗೆ ಅಜೇಯರು. ತಪಸ್ಸಿನಿಂದ ಪಾಪಗಳೆಲ್ಲವನ್ನೂ ಕಳೆದುಕೊಂಡಿರುವರು. ಆದ್ದರಿಂದ ಆ ದೈತ್ಯರನ್ನು ಕೊಲ್ಲಲು ನೀನೇ ಶಕ್ತನು.

೨೩. ಮಹಾದೇವನು ಹೇಳಿದನು–ಹರಿಯು ದೇವತೆಗಳು ಹೇಳಿದ ಭಯಂಕರವಾದ ಈ ಮಾತನ್ನು ಕೇಳಿ ಆ ದೈತ್ಯರು ಅವಧ್ಯರು. ಎಂಬುದನ್ನು ಗೊತ್ತುಮಾಡಿಕೊಂಡು ಆ ಪುರುಷೋತ್ತಮನು ನನ್ನನ್ನು ಕುರಿತು ಇಂತೆಂದನು.

೨೪. ಶ್ರೀ ಭಗವಂತನು ಹೇಳಿದನು–ಎಲೈ ರುದ್ರನೇ ! ನೀನು ಆ ದೇವತೆಗಳನ್ನು ವಂಚಿಸಲು ಪಾಷಂಡಿಗಳ ವೇಷವನ್ನು ಹಾಕಿಕೊ. ಅದರಂತೆಯೇ ನಡೆಯುತ್ತಾ ಬಾ.

ತಾಮಸಾನಿ ಪುರಾಣಾನಿ ಕಥಯಸ್ವ ಚ ತಾರ್ ಪ್ರತಿ |
ಮೋಹನಾನಿ ಚ ಶಾಸ್ತ್ರಾಣಿ ಕುರುಷ್ವ ಚ ಮಹಾಮತೇ || ೨೫ ||

ಮಯಿ ಭಕ್ತಾಶ್ಚ ಯೇ ವಿಪ್ರಾ ಭವಿಷ್ಯಂತಿ ಮಹರ್ಷಯಃ ।
ತ್ವಚ್ಛಕ್ತ್ಯಾ ತಾರ್ ಸಮಾದಿಶ್ಯ ಕಥಯಸ್ವ ಚ ತಾಮಸಾರ್ || ೨೬ ||

ಕಾಣಾದಂ ಗೌತಮಂ ಶಕ್ತಿಮುಪಮನ್ಯುಂ ಚ ಜೈಮಿನಿಂ |
ಕಪಿಲಂ ಚೈವ ದುರ್ವಾಸಂ ಮೃಕಂಡುಂ ಚ ಬೃಹಸ್ಪತಿಂ || ೨೭ ||

ಭಾರ್ಗವಂ ಜಮದಗ್ನಿಂ ಚ ದಶೈತಾರ್ ತಾಮಸಾನೃಷೀನ್ |
ಭಾವಶಕ್ತ್ಯಾ ಸಮಾವಿಶ್ಯ ಕುರುಷ್ವ ಜಗತೋ ಹಿತಂ || ೨೮ ||

ತ್ವಚ್ಛಕ್ತ್ಯಾ ಸನ್ನಿವಿಷ್ಟಾಸ್ತೇ ತಮಸೋದ್ರಿಕ್ತಯಾ ಭೃಶಂ |
ತಾಮಸಾಸ್ತೇ ಭವಿಷ್ಯಂತಿ ಕ್ಷಣಾದೇವ ನ ಸಂಶಯಃ || ೨೯ ||

---

೨೫. ಆ ದೈತ್ಯರಿಗೆ ತಾಮಸಗುಣವೇ ಪ್ರಧಾನವಾಗಿರುವ ಪುರಾಣಗಳನ್ನು ಹೇಳು. ಮೋಹಕವಾದ ಶಾಸ್ತ್ರಗಳನ್ನು ಉಪದೇಶಿಸು.

೨೬. ನನ್ನಲ್ಲಿ ಭಕ್ತರಾಗಿರುವ ಮಹರ್ಷಿಗಳಾದ ಬ್ರಾಹ್ಮಣರನ್ನು ನಿನ್ನ ಶಕ್ತಿಯಿಂದ ಅವರಿಗೆ ಅಪ್ಪಣೆಮಾಡಿ ಅವರಿಗೆ ಈ ತಾಮಸ ಪುರಾಣಗಳನ್ನು ಹೇಳು.

೨೭-೨೮. ಕಾಣಾದ, ಗೌತಮ, ಶಕ್ತಿ, ಉಪಮನ್ಯು, ಜೈಮಿನಿ, ದೂರ್ವಾಸ, ಮೃಕಂಡು, ಬೃಹಸ್ಪತಿ, ಭಾರ್ಗವನಾದ ಜಮದಗ್ನಿ, ಈ ಹತ್ತುಜನ ತಾಮಸರಾದ ಋಷಿಗಳನ್ನು ನಿನ್ನ ಭಾವಶಕ್ತಿಯಿಂದ ಆಕ್ರಮಿಸಿ ಅವರ ಮೂಲಕವಾಗಿ ಜಗತ್ತಿಗೆ ಹಿತವನ್ನು ಮಾಡು.

೨೯. ತಮೋಗುಣವೇ ಬಹುವಾದ ಆ ನಿನ್ನ ಶಕ್ತಿಯಿಂದ ಕೂಡಿಕೊಂಡ ಅವರು ಒಂದು ಕ್ಷಣಕಾಲದಲ್ಲಿಯೇ ಬಹುವಾದ ತಾಮಸಗುಣವುಳ್ಳವರಾಗುತ್ತಾರೆ.

ಕಥಯಿಷ್ಯಂತಿ ತೇ ವಿಪ್ರಾಸ್ತಾಮಸಾನಿ ಜಗತ್ತ್ರಯೇ ।
ಪುರಾಣಾನಿ ಚ ಶಾಸ್ತ್ರಾಣಿ ತ್ವಯಾ ಸತ್ಯೇನ ವೇದಿತಾಃ ॥ ೩೦ ॥

ಕಪಾಲಚರ್ಮಭಸ್ಮಾಸ್ಥಿಚಿಹ್ನಾನ್ಯಪಿ ಹಿ ಸರ್ವಶಃ ।
ತ್ವಮೇವ ಧೃತ್ವಾ ಲೋಕಾನ್ ವೈ ಮೋಹಯಸ್ವ ಜಗತ್ತ್ರಯೇ ॥ ೩೧ ॥

ತಥಾ ಪಾಶುಪತಂ ಶಾಸ್ತ್ರಂ ತ್ವಮೇವ ಕುರು ಸುವ್ರತ ।
ಕಂಕಾಲಶೈವಪಾಷಂಡಮಹಾಶೈವಾದಿಭೇದತಃ ॥ ೩೨ ॥

ಅವಲಕ್ಷ್ಯ ಮತಂ ಸಮ್ಯಗ್ವೇದಬಾಹ್ಯಂ ದ್ವಿಜಾಧಮಾಃ ।
ಭಸ್ಮಾಸ್ಥಿಧಾರಿಣಃ ಸರ್ವೇ ಭವಿಷ್ಯಂತಿ ನ ಸಂಶಯಃ ॥ ೩೩ ॥

ತ್ವಾಂ ಪರತ್ವೇನ ವಕ್ಷ್ಯಂತಿ ಸರ್ವಶಾಸ್ತ್ರೇಷು ತಾಮಸಾಃ ।
ತೇಷಾಂ ಮತಮಧಿಷ್ಠಾಯ ಸರ್ವೇ ದೈತ್ಯಾಃ ಸನಾತನಾಃ ॥ ೩೪ ॥

---

೩೦. ಅವರೆಲ್ಲರೂ ತಾಮಸವಾದ ವಿಷಯಗಳನ್ನೇ ಎಲ್ಲಾ ಕಡೆಯಲ್ಲಿಯೂ ಹೇಳುತ್ತಾರೆ. ಅವರು ಪುರಾಣಗಳನ್ನೂ ಶಾಸ್ತ್ರಗಳನ್ನೂ ತಾಮಸವಾದುವುಗಳನ್ನೇ ಹೇಳುತ್ತಾರೆ.

೩೧. ಕಪಾಲ, ಚರ್ಮ, ಭಸ್ಮ, ಅಸ್ಥಿಗಳನ್ನೇ ಎಲ್ಲರಲ್ಲಿಯೂ ಚಿಹ್ನೆಯನ್ನು ಇಟ್ಟು ಅದರಂತೆ ನೀನೂ ಧರಿಸಿ ಮೂರು ಲೋಕವನ್ನೂ ಮೋಹಗೊಳಿಸು.

೩೨-೩೩. ಎಲೈ ಪಶುಪತಿಯೇ! ನೀನೇ ಆ ಪಾಶುಪತ ಶಾಸ್ತ್ರವನ್ನು ರಚಿಸು. ಅದರಲ್ಲಿ ಕಂಕಾಲ, ಶೈವ, ಪಾಷಂಡ, ಮಹಾಶೈವ ಇವೇ ಮೊದಲಾದ ಭೇದಗಳಿರಲಿ. ಯೋಗ್ಯದ್ವಿಜರು ವೇದಬಾಹ್ಯವಾದ ಆ ಮತವನ್ನು ಅನುಸರಿಸಿಕೊಂಡು ಭಸ್ಮ, ಅಸ್ಥಿ ಮುಂತಾದುವನ್ನು ಧರಿಸಿಕೊಳ್ಳುತ್ತಾರೆ. ಸಂಶಯವಿಲ್ಲ.

೩೪. ಆಗ ಆ ತಾಮಸ ಗುಣದವರು ನಿನ್ನನ್ನೇ ಪರರೂಪನನ್ನಾಗಿ ಎಲ್ಲಾ ಶಾಸ್ತ್ರಗಳಲ್ಲಿಯೂ ಹೇಳುತ್ತಾರೆ. ಅವರ ಮತವನ್ನು ಅನುಸರಿಸಿಕೊಂಡು ಎಲ್ಲಾ ದೈತ್ಯರೂ ನಿನ್ನನ್ನು ಸನಾತನನೆಂದು ಹೇಳುತ್ತಾರೆ.

ಭವೇಯುಸ್ತೇ ಮದ್ವಿಮುಖಾಃ ಕ್ಷಣಾದೇವ ನ ಸಂಶಯಃ ।
ಅಹಮಪ್ಯವತಾರೇಷು ತ್ವಾಂ ಚ ರುದ್ರ ಮಹಾಬಲ ॥ ೩೫ ॥

ತಾಮಸಾನಾಂ ಮೋಹನಾರ್ಥಂ ಪೂಜಯಾಮಿ ಯುಗೇ ಯುಗೇ ।
ಮತಮೇತದವಷ್ಟಭ್ಯ ಪತಂತ್ಯೇವ ನ ಸಂಶಯಃ ॥ ೩೬ ॥

॥ ಮಹಾದೇವ ಉವಾಚ ॥

ತಚ್ಛ್ರುತ್ವಾಹಂ ಯಥೋಕ್ತಂ ತು ವಾಸುದೇವೇನ ಭಾಮಿನಿ ।
ಸಮುದ್ವಿಗ್ನಮನಾ ದೀನೋ ಬಭೂವಾತ್ರ ವರಾನನೇ ॥ ೩೭ ॥

ನಮಸ್ಕೃತ್ವಾಥ ತಂ ದೇವಮಬ್ರವಂ ಪರಮೇಶ್ವರಂ ।
ತ್ವಯೋದಿತಮಿದಂ ದೇವ ಕರೋಮಿ ಯದಿ ಭೂತಲೇ ॥ ೩೮ ॥

ತಸ್ಮಾನ್ನಾಶೋ ಹಿ ಮೇ ನಾಥ ಭವಿಷ್ಯತಿ ನ ಸಂಶಯಃ ।
ನ ಶಕ್ಯಂ ಹಿ ಮಯಾ ಕರ್ತುಮೇತತ್ಕೃತ್ಯಂ ಹರೇಽಧುನಾ ॥ ೩೯ ॥

---

೩೫–೩೬. ಆಗ ಧೀರರಾದ ದೈತ್ಯರೂ ಕೂಡ ಕ್ಷಣಕಾಲದಲ್ಲಿಯೇ ನನ್ನನ್ನು ಪೂಜಿಸದೆ ನನ್ನಿಂದ ವಿಮುಖರಾಗುವರು. ನಾನೂ ಕೂಡ ಅವತಾರಗಳನ್ನು ಮಾಡಿದಾಗ ನಿನ್ನನ್ನು ಪೂಜಿಸುತ್ತೇನೆ. ಆ ತಾಮಸರಾದ ರಾಕ್ಷಸರನ್ನು ಮೋಹಗೊಳಿಸಲು ಯುಗಯುಗಗಳಲ್ಲಿಯೂ ಪೂಜಿಸುತ್ತೇನೆ. ಈ ಮತವನ್ನು ಅನುಸರಿಸಿಕೊಂಡು ಎಲ್ಲರೂ ನಾಶವಾಗುತ್ತಾರೆ. ಸಂಶಯವಿಲ್ಲ

೩೭. ಮಹಾದೇವನು ಹೇಳಿದನು-ಎಲೈ ಪಾರ್ವತಿಯೇ! ಆ ವಾಸುದೇವನು ಇಂತೆಂದು ಹೇಳಲು ಆ ರೀತಿಯಾದ ವಿಷಯವನ್ನು ಕೇಳಿ ನಾನು ಮನಸ್ಸಿನಲ್ಲಿ ಖೇದಗೊಂಡು ದೀನನಾಗಿ ಆದೆನು.

೩೮-೩೯. ಆಗ ಆ ವಿಷ್ಣುವಿಗೆ ನಾನು ನಮಸ್ಕರಿಸಿ ಇಂತೆಂದೆನು. ಎಲೈ ದೇವನೆ! ನೀನು ಹೇಳಿದುದನ್ನು ನಾನು ಭೂಲೋಕದಲ್ಲಿ ಮಾಡಿದರೆ ಆದರಿಂದ ವೇದೋಕ್ತ ಧರ್ಮಗಳು ನಾಶವಾಗುವುವು. ಸಂಶಯವಿಲ್ಲ. ಆದ್ದರಿಂದ ನನ್ನಿಂದ ಅದು ಆಚರಿಸಲು ಸಾಧ್ಯವಿಲ್ಲ. ಅದು ಕೆಟ್ಟಕೆಲಸ.

ತ್ವದಾಜ್ಞಾಪಿ ಚ ನೋಲ್ಲಂಘ್ಯಾ ಏತದ್ದುಃಖತರಂ ಮಹತ್ ।
ಏವಮುಕ್ತಸ್ತತೋ ದೇವಿ ಸಮಾಶ್ವಾಸ್ಯ ಚ ಮಾಂ ಪುನಃ ॥ ೪೦ ॥

ಆತ್ಮಾನಾಶಾಯ ತೇ ನಾತ್ರ ಭವಂತ್ವಿತ್ಯಾಹ ಮಾಂ ಹರಿಃ ।
ದೇವತಾನಾಂ ಹಿತಾರ್ಥಾಯ ಕುರುಷ್ವ ವಚನಂ ಮಮ ॥ ೪೧ ॥

ತವಾಪ್ಯುಜ್ಜೀವನೋಪಾಯಂ ಕಥಯಾಮಿ ಸುರೋತ್ತಮ ।
ನಿತ್ಯಂ ಜಪ ಮಹಾಬಾಹೋ ಮಮ ನಾಮಸಹಸ್ರಕಂ ॥ ೪೨ ॥

ಹೃದಯೇ ಮಾಂ ಸಮಾಧ್ಯಾಯ ಜಪ ಮಂತ್ರಂ ಮಮಾವ್ಯಯಂ ।
ಷಡಕ್ಷರಂ ಮಹಾಮಂತ್ರಂ ತಾರಕಂ ಬ್ರಹ್ಮ ಉಚ್ಯತೇ ॥ ೪೩ ॥

ಯೇ ಭಜಂತಿ ಹಿ ಮಾಂ ಭಕ್ತ್ಯಾ ತೇಷಾಂ ಮುಕ್ತಿರ್ನ ಸಂಶಯಃ ।
ಇಂದೀವರದಳಶ್ಯಾಮಂ ಪದ್ಮಪತ್ರವಿಲೋಚನಂ ॥ ೪೪ ॥

---

೪೦–೪೧. ಆದರೆ ನಿನ್ನ ಅಪ್ಪಣೆಯನ್ನು ನಾನು ಮೀರಕೂಡದು. ಇದು ನನಗೆ ಬಲು ದುಃಖವನ್ನುಂಟುಮಾಡುತ್ತದೆ. ಎಂದೆನು. ಎಲೈ ದೇವಿಯೆ ! ನಾನು ಹೀಗೆನ್ನಲು ಆಗ ಆ ಸ್ವಾಮಿಯು ನನ್ನನ್ನು ಸಮಾಧಾನಪಡಿಸಿ ಆ ತಾಮಸ ಗುಣಗಳು ನಿನ್ನ ಆತ್ಮವನ್ನು ನಾಶಮಾಡದಿರಲಿ. ಎಂಬುದಾಗಿ ಹೇಳಿದನು. ಮತ್ತು ದೇವತೆಗಳ ಹಿತಕ್ಕೋಸ್ಕರ ಇದನ್ನು ನೀನು ಮಾಡಲೇಬೇಕು. ಎಂದೂ ಹೇಳಿದನು.

೪೨–೪೩. ಎಲೈ ಮಹಾದೇವನೆ ! ನೀನು ಉದ್ಧಾರವಾಗುವ ಬಗೆಯನ್ನು ಹೇಳುತ್ತೇನೆ. ನೀನು ಯಾವಾಗಲೂ ನನ್ನ ಸಹಸ್ರನಾಮವನ್ನು ಜಪಿಸು. ನನ್ನನ್ನು ಯಾವಾಗಲೂ ಹೃದಯದಲ್ಲಿ ಧ್ಯಾನಿಸುತ್ತಾ ಅವ್ಯಯವಾದ ಆ ಆರು ಅಕ್ಷರಗಳುಳ್ಳ ಮಂತ್ರವನ್ನು ಜಪಿಸು. ಆ ಮಂತ್ರವೇ ತಾರಕಬ್ರಹ್ಮಮಂತ್ರ ಎಂದೆನಿಸಿಕೊಳ್ಳುತ್ತದೆ.

೪೪. ಇಂದೀವರದ ದಳದಂತೆ ನೀಲವರ್ಣವುಳ್ಳ, ಪದ್ಮದಂತೆ ಕಣ್ಣುಗಳುಳ್ಳ ನನ್ನನ್ನು ಯಾರು ಭಜಿಸುತ್ತಾರೆಯೋ ಅವರಿಗೆ ಮುಕ್ತಿ ಬರುತ್ತದೆ. ಸಂಶಯವಿಲ್ಲ.

ಶಂಖಾರಿಶಾಂರ್ಗೇಷುಧರಂ ಸರ್ವಾಭರಣಭೂಷಿತಂ |
ಪೀತವಸ್ತ್ರಂ ಚತುರ್ಬಾಹುಂ ಜಾನಕೀಪ್ರಿಯವಲ್ಲಭಂ || ೪೫ ||

ಶ್ರೀರಾಮಾಯ ನಮ ಇತ್ಯೇವಮುಚ್ಚಾರ್ಯ ಮಂತ್ರಮುತ್ತಮಂ |
ಸರ್ವದುಃಖಹರಂ ಹ್ಯೇತತ್ಪಾಪಿನಾಮಪಿ ಮುಕ್ತಿದಂ || ೪೬ ||

ಇದಂ ಮಂತ್ರಂ ಜಪನ್ನಿತ್ಯಮಮಲಸ್ತ್ವಂ ಭವಿಷ್ಯಸಿ |
ಭಸ್ಮಾಸ್ಥಿಧಾರಣಾದ್ಯತ್ತು ಸಂಭೂತಂ ಕಿಲ್ಬಿಷಂ ತ್ವಯಿ || ೪೭ ||

ಮಂಗಳಂ ತದ್ಭವೇತ್ಸರ್ವಂ ಮನ್ಮಂತ್ರೋಚ್ಚಾರಣಾಚ್ಛುಭಾತ್ |
ತ್ವದ್ವಿಘ್ನಾನ್ನಾಶಯಿಷ್ಯಾಮಿ ಸದಾ ಸರ್ವಾನ್ ಸುರೋತ್ತಮ || ೪೮ ||

ಮದನ್ಯದೇವತಾಭಕ್ತಿರ್ಜಾಯತೇ ನ ತು ಸುವ್ರತ |
ಮನಸ್ಯೈವಾರ್ಚಯ ಹೃದಿ ಮಾಂ ನಾಥಂ ಪುರುಷೋತ್ತಮಂ || ೪೯ ||

---

೪೫. ಶಂಖ ಚಕ್ರ ಧನುಸ್ಸು ಬಾಣಗಳನ್ನು ಧರಿಸಿರುವ, ಎಲ್ಲಾ ಆಭರಣ ಗಳನ್ನೂ ಧರಿಸಿರುವ, ಹೊಂಬಣ್ಣದ ಬಟ್ಟೆಯನ್ನುಟ್ಟಿರುವ, ನಾಲ್ಕು ತೋಳುಗಳುಳ್ಳ, ಜಾನಕಿಗೆ ಪ್ರೀತಿಪಾತ್ರನಾದ, ಸ್ವಾಮಿಯಾದ, ನನ್ನನ್ನು ಭಜಿಸಿದವರಿಗೆ ಮುಕ್ತಿ ಎಂಬುದು ಬರುತ್ತದೆ. ಸಂಶಯವಿಲ್ಲ.

೪೬. 'ಶ್ರೀರಾಮಾಯನಮಃ' ಎಂಬ ಮಂತ್ರವನ್ನು ಉಚ್ಚರಿಸಬೇಕು. ಇದು ಸರ್ವದುಃಖಗಳನ್ನೂ ನಾಶಮಾಡುತ್ತದೆ. ಪಾಪಿಗಳಿಗೂ ಮುಕ್ತಿಯನ್ನು ಕೊಡುತ್ತದೆ

೪೭. ನೀನು ಭಸ್ಮ, ಅಸ್ಥಿ ಮುಂತಾದುವನ್ನು ಧರಿಸುವುದರಿಂದ ಉಂಟಾಗುವ ಪಾಪವು ಈ ಮಂತ್ರವನ್ನು ಜಪಿಸುವುದರಿಂದ ಹೋಗುತ್ತದೆ.

೪೮. ನನ್ನ ಮಂತ್ರವನ್ನು ಉಚ್ಚಾರಣೆ ಮಾಡುವುದರಿಂದ ಎಲ್ಲವೂ ಕೂಡ ಮಂಗಳಕರವಾಗುತ್ತದೆ. ಮತ್ತು ಈ ಮಂತ್ರವನ್ನುಚ್ಚಾರಣೆಮಾಡುವವನ ವಿಘ್ನ ಗಳೆಲ್ಲವೂ ನಾಶವಾಗುತ್ತವೆ.

೪೯. ಅಂತಹವನಿಗೆ ನನಗಿಂತ ಬೇರೆಯಾದ ದೇವರಲ್ಲಿ ಭಕ್ತಿಹುಟ್ಟುವುದೇ ಇಲ್ಲ. ನನ್ನನ್ನು ಹೃದಯದಲ್ಲಿಯೇ ಇಟ್ಟುಕೊಂಡು ಧ್ಯಾನಿಸುತ್ತಾ ಪೂಜಿಸುತ್ತಿರು.

ಮದಾಜ್ಞಾಂ ಕುರು ಮತ್ಪ್ರೀತ್ಯಾ ಸರ್ವಮೇತಚ್ಛುಭಂ ತವ ।
ಇತಿ ಸಂದಿಶ್ಯ ಮಾಂ ದೇವಿ ವಿಸಸರ್ಜ ಮರುದ್ಗಣಾನ್ ॥ ೫೦ ॥

ವಿಸೃಷ್ಟಾಸ್ತೇನ ತೇ ದೇವಾ ನಿರ್ವೃತಾಃ ಸ್ವಾಶ್ರಮಾನ್ ಯಯುಃ ।
ತತೋ ಮಾಂ ಪ್ರಾರ್ಥಯಾಮಾಸುಃ ದೇವಾ ಇಂದ್ರಪುರೋಗಮಾಃ ॥೫೧॥

॥ ಇಂದ್ರಾದಯ ಊಚುಃ ॥

ಶೀಘ್ರಂ ಕುರು ಹಿತಂ ದೇವ ಯಥೋಕ್ತಂ ಹರಿಣಾಽಧುನಾ ॥ ೫೨ ॥

॥ ಮಹಾದೇವ ಉವಾಚ ॥

ದೇವತಾನಾಂ ಹಿತಾರ್ಥಾಯ ವೃತ್ತಿಃ ಪಾಷಂಡಿನಾಂ ಶುಭೇ ।
ಕಪಾಲಚರ್ಮಭಸ್ಮಾಸ್ಥಿಧಾರಣಂ ತತ್ಕೃತಂ ಮಯಾ ॥ ೫೩ ॥

ತಾಮಸಾನಿ ಪುರಾಣಾನಿ ಯಥೋಕ್ತಂ ವಿಷ್ಣುನಾ ಮಮ ।
ಪಾಷಂಡಶೈವಶಾಸ್ತ್ರಾಣಿ ಯಥೋಕ್ತಂ ಕೃತವಾನಹಂ ॥ ೫೪ ॥

---

೫೦. ನನ್ನಲ್ಲಿ ಪ್ರೀತಿಯನ್ನಿಟ್ಟು ನನ್ನ ಆಜ್ಞೆಯನ್ನು ಪಾಲಿಸು. ನಿನಗೆ ಎಲ್ಲವೂ ಮಂಗಳವಾಗುತ್ತದೆ. ಎಂಬದಾಗಿ ನನಗೆ ಹೇಳಿ ನನ್ನನ್ನೂ ದೇವತೆಗಳನ್ನೂ ಕಳುಹಿಸಿಬಿಟ್ಟನು.

೫೧. ಆಗ ಅವರೆಲ್ಲರನ್ನೂ ಕಳುಹಿಸಲು ಸಂತೋಷದಿಂದ ಅವರು ತಮ್ಮ ತಮ್ಮ ಆಶ್ರಮಕ್ಕೆ ಹೊರಟುಹೋದರು. ಆಗ ಅವರೆಲ್ಲರೂ ನನ್ನನ್ನು ಕುರಿತು ಇಂತೆಂದು ಕೇಳಿಕೊಂಡರು.

೫೨. ಇಂದ್ರಾದಿಗಳು ಹೇಳಿದರು-ಎಲೈ ದೇವನೆ! ವಾಸುದೇವನು ಹೇಳಿದಂತೆ ನೀನು ಜಾಗ್ರತೆಯಾಗಿ ಮಾಡು.

೫೩. ಮಹಾದೇವನು ಹೇಳಿದನು—ಆಗ ನಾನು ಆ ದೇವತೆಗಳಿಗೆ ಹಿತವಾಗಲೆಂದು ಪಾಷಂಡಿಗಳ ವೃತ್ತಿಯನ್ನು ಅನುಸರಿಸಿಕೊಂಡು ಕಪಾಲ, ಭಸ್ಮ, ಅಸ್ಥಿ, ಚರ್ಮಗಳ ಧಾರಣವನ್ನು ಮಾಡಿದೆನು.

೫೪. ವಿಷ್ಣುವು ಹೇಳಿದಂತೆ ತಾಮಸವಾದ ಪುರಾಣಗಳನ್ನು ರಚಿಸಿದೆನು. ಮತ್ತು ಪಾಷಂಡಶೈವಶಾಸ್ತ್ರಗಳನ್ನೂ ರಚಿಸಿದೆನು.

ಮಚ್ಛಕ್ತ್ಯಾ ನೈ ಸಮಾವಿಶ್ಯ ಗೌತಮಾದಿದ್ವಿಜಾನಪಿ ।
ವೇದಬಾಹ್ಯಾನಿ ಶಾಸ್ತ್ರಾಣಿ ಸಮ್ಯಗುಕ್ತಂ ಮಯಾನಘೇ ॥ ೫೫ ॥

ಇದಂ ಮತಮವಷ್ಟಭ್ಯ ಮಾಂ ದೃಷ್ಟ್ವಾ ಸರ್ವರಾಕ್ಷಸಾಃ ।
ಭಗವದ್ವಿಮುಖಾಃ ಸರ್ವೇ ಬಭೂವುಸ್ತಮಸಾ ವೃತಾಃ ॥ ೫೬ ॥

ಭಸ್ಮಾದಿಧಾರಣಂ ಕೃತ್ವಾ ಮಹೋಗ್ರತಮಸಾವೃತಾಃ ।
ಮಾಮೇವ ಪೂಜಯಾಂಚಕ್ರುರ್ಮಾಂಸಾಸೃಕ್ಚಂದನಾದಿಭಿಃ ॥ ೫೭ ॥

ಮತ್ತೋ ವರಪ್ರದಾನಾನಿ ಲಬ್ಧ್ವಾ ಮದಬಲೋದ್ಧತಾಃ ।
ಅತ್ಯಂತವಿಷಯಾಸಕ್ತಾಃ ಕಾಮಕ್ರೋಧಸಮನ್ವಿತಾಃ ॥ ೫೮ ॥

ಸತ್ವಹೀನಾಸ್ತು ನಿರ್ವೀರ್ಯಾ ಜಿತಾ ದೇವಗಣೈಸ್ತದಾ ।
ಸತ್ವಧರ್ಮಪರಿಭ್ರಷ್ಟಾಃ ಕಾಲೇ ಯಾಂತ್ಯಧಮಾಂ ಗತಿಂ ॥ ೫೯ ॥

---

೫೫. ಅನಂತರ ಗೌತಮನೇ ಮುಂತಾದ ಬ್ರಾಹ್ಮಣರನ್ನು ನಾನು ನನ್ನ ಶಕ್ತಿಯಿಂದ ಒಳಹೊಕ್ಕು ವೇದಬಾಹ್ಯವಾದ ಶಾಸ್ತ್ರಗಳನ್ನು ಕೂಡ ಚೆನ್ನಾಗಿ ರಚಿಸುವಂತೆ ಮಾಡಿದನು.

೫೬. ಆಗ ರಾಕ್ಷಸರೆಲ್ಲರೂ ಈ ನಾನು ರಚಿಸಿದ ಮತವನ್ನು ನೋಡಿ ಅದನ್ನೇ ಅನುಸರಿಸಿಕೊಂಡು ಭಗವದ್ವಿಮುಖರಾಗಿ ತಮೋವೃತ್ತಿಯನ್ನು ಅನುಸರಿಸಿದರು.

೫೭. ಆ ತಮೋಗುಣದಿಂದ ಕೂಡಿಕೊಂಡು ಭಸ್ಮಾದಿ ಧಾರಣೆಗಳನ್ನು ಮಾಡಿಕೊಳ್ಳುತ್ತಾ ಮಾಂಸ, ಮದ್ಯ, ರಕ್ತ, ಚಂದನಗಳಿಂದ ನನ್ನನ್ನೇ ಪೂಜಿಸುತ್ತ ಬಂದರು.

೫೮-೫೯. ನನ್ನಿಂದಲೇ ವರಗಳನ್ನು ಹೊಂದಿ ಮದದಿಂದಲೂ ಬಲದಿಂದಲೂ ಕೂಡಿದವರಾಗಿ ವಿಷಯ ಸುಖದಲ್ಲಿ ಆಸಕ್ತಿಯನ್ನು ಹೊಂದಿ ಕಾಮಕ್ರೋಧಗಳಿಗೊಳಗಾಗಿ ಬಲವೂ ವೀರ್ಯವೂ ಕುಂದಿದವರಾಗಿ ಕೊನೆಗೆ ದೇವತೆಗಳಿಂದ ಜಿತರಾದರು. ಇಂತೆಯೇ ಧರ್ಮಗಳೆಲ್ಲವನ್ನೂ ಕಾಲಕ್ರಮದಿಂದ ಬಿಡುತ್ತಾ ಹೀನಗತಿಯನ್ನು ಹೊಂದುತ್ತಾರೆ.

ಯೇ ಮೇ ಮತಮುಪಷ್ಟಭ್ಯ ಚರಂತಿ ಪೃಥಿವೀತಲೇ ।
ಸರ್ವಧರ್ಮೈಶ್ಚ ರಹಿತಾಃ ಪಶ್ಯಂತಿ ನಿರಯಂ ಸದಾ　　॥ ೬೦ ॥

ಏವಂ ದೇವಹಿತಾರ್ಥಾಯ ವೃತ್ತಿರ್ಮೇ ದೇವಿ ಗರ್ಹಿತಾ ।
ವಿಷ್ಣೋರಾಜ್ಞಾಂ ಪುರಸ್ಕೃತ್ಯ ಕೃತಂ ಭಸ್ಮಾದಿಧಾರಣಂ　　॥ ೬೧ ॥

ಬಾಹ್ಯಚಿಹ್ನಮಿದಂ ದೇವಿ ಮೋಹನಾರ್ಥಾಯ ವಿದ್ವಿಷಾಂ ।
ಅಥಾನ್ತರ್ಹೃದಯೇ ನಿತ್ಯಂ ಧ್ಯಾತ್ವಾ ದೇವಂ ಜನಾರ್ದನಂ　　॥ ೬೨ ॥

ಜಪನ್ನೇವ ಚ ತಂ ಮಂತ್ರಂ ತಾರಕಂ ಬ್ರಹ್ಮವಾಚಕಂ ।
ಸಹಸ್ರನಾಮಸದೃಶಂ ವಿಷ್ಣೋರ್ನಾರಾಯಣಸ್ಯ ತು　　॥ ೬೩ ॥

ಷಡಕ್ಷರಮಹಾಮಂತ್ರಂ ರಘೂಣಾಂ ಕುಲವರ್ಧನಂ ।
ಜಪನ್ವೈ ಸತತಂ ದೇವಿ ಸದಾನಂದಸುಧಾಪ್ಲುತಂ ।
ಸುಖಮಾತ್ಯಂತಿಕಂ ಬ್ರಹ್ಮ ಹ್ಯಶ್ನಾಮಿ ಸತತಂ ಶುಭೇ　　॥ ೬೪ ॥

---

೬೦. ನನ್ನ ಮತವನ್ನು ಅನುಸರಿಸಿಕೊಂಡು ಭೂಮಿಯಲ್ಲಿ ಓಡಾಡುತ್ತ ಧರ್ಮವನ್ನು ಬಿಟ್ಟು ನರಕಭಾಗಿಗಳಾಗುತ್ತಾರೆ.

೬೧-೬೩. ಈ ರೀತಿಯಾಗಿ ದೇವತೆಗಳ ಹಿತಕ್ಕೋಸ್ಕರ ನಾನು ಆ ದೇವತೆಗಳಿಗೆ ವಿರುದ್ಧವಾದ ಸ್ಥಿತಿಯನ್ನು ಹೊಂದಿದೆನು. ವಿಷ್ಣುವಿನ ಆಜ್ಞೆಯನ್ನು ಅನುಸರಿಸಿಕೊಂಡು ಈ ಬೂದಿ ಮುಂತಾದುವನ್ನು ಧರಿಸಿರುವೆನು. ಈ ರೀತಿಯಾಗಿ ನಾನು ಮಾಡುವುದೆಲ್ಲವೂ ಶತ್ರುಗಳನ್ನು ಮೋಹಗೊಳಿಸುವುದಕ್ಕೋಸ್ಕರ ಬಾಹ್ಯ ಚಿಹ್ನೆಯಾಗಿರುವುದು. ನಾನು ಯಾವಾಗಲೂ ಜನಾರ್ದನನನ್ನು ಹೃದಯದಲ್ಲಿ ಧ್ಯಾನಿಸುತ್ತಲಿರುತ್ತೇನೆ. ಆ ತಾರಕಬ್ರಹ್ಮನನ್ನು ಹೇಳುವ ಆ ಸ್ವಾಮಿಯ ಮಂತ್ರವನ್ನೇ ಜಪಿಸುತ್ತಿರುವೆನು. ಆ ತಾರಕಮಂತ್ರವು ನಾರಾಯಣ ವಾಚಕವಾಗಿಯೂ ಆ ನಾರಾಯಣನ ಸಹಸ್ರನಾಮಕ್ಕೆ ಸಮವಾಗಿಯೂ ಇರುವುದು.

೬೪. ಶ್ರೀರಾಮಾಯನಮಃ ಎಂಬ ಆರು ಅಕ್ಷರದ ಮಂತ್ರವು ರಘುಗಳ ಕುಲವನ್ನೇ ವೃದ್ಧಿಮಾಡುವಂತಹದು. ಯಾವಾಗಲೂ ಆನಂದವನ್ನುಂಟು ಮಾಡುವ ಈ ಮಂತ್ರವನ್ನು ಜಪಿಸುತ್ತ ಉತ್ತಮೋತ್ತಮವಾದ ಕೊನೆಯ ಸುಖವಾದ ಬ್ರಹ್ಮಸುಖವನ್ನು ಅನುಭವಿಸುತ್ತೇನೆ.

|| ಪಾರ್ವತ್ಯುವಾಚ ||

ತಾಮಸಾನಿ ಚ ಶಾಸ್ತ್ರಾಣಿ ಸಮಾಚಕ್ಷ ಮಮಾನಘೇ ।
ಸಂಪ್ರೋಕ್ತಾನಿ ಚ ಯೈರ್ವಿಪ್ರೈರ್ಭಗವದ್ಭಕ್ತಿವರ್ಜಿತೈಃ ॥
ತೇಷಾಂ ನಾಮಾನಿ ಕ್ರಮಶಃ ಸಮಾಚಕ್ಷ್ವ ಸುರೇಶ್ವರ || ೬೫ ||

|| ರುದ್ರ ಉವಾಚ ||

ಶೃಣು ದೇವಿ ಪ್ರವಕ್ಷ್ಯಾಮಿ ತಾಮಸಾನಿ ಯಥಾಕ್ರಮಂ ।
ಯೇಷಾಂ ಸ್ಮರಣಮಾತ್ರೇಣ ಪಾತಿತ್ಯಂ ಜ್ಞಾನಿನಾಮಪಿ || ೬೬ ||

ಪ್ರಥಮಂ ಹಿ ಮಯಾ ಪ್ರೋಕ್ತಂ ಶೈವಂ ಪಾಶುಪತಾದಿಕಂ ।
ಮಚ್ಛಕ್ತ್ಯಾವೇಶಿತೈಃ ವಿಪ್ರೈಃ ಪ್ರೋಕ್ತಾನಿ ಚ ತತಃ ಶೃಣು || ೬೭ ||

ಕಣಾದೇನ ತು ಸಂಪ್ರೋಕ್ತಂ ಶಾಸ್ತ್ರಂ ವೈಶೇಷಿಕಂ ಮಹತ್ ।
ಗೌತಮೇನ ತಥಾ ನ್ಯಾಯಂ ಸಾಂಖ್ಯಂ ತು ಕಪಿಲೇನ ವೈ || ೬೮ ||

---

೬೫. ಪಾರ್ವತಿಯು ಹೇಳಿದಳು– ಎಲೈ ಶಿವನೇ ! ತಾಮಸಶಾಸ್ತ್ರಗಳಾವುವು ? ಭಗವಂತನಲ್ಲಿ ಭಕ್ತಿಯನ್ನು ಬಿಟ್ಟು ಯಾರು ಅದನ್ನು ರಚಿಸಿದರು ? ಅವರ ಹೆಸರುಗಳನ್ನೂ ಆ ಗ್ರಂಥಗಳ ಹೆಸರುಗಳನ್ನೂ ಹೇಳು.

೬೬. ರುದ್ರನು ಹೇಳಿದನು–ಎಲೈ ದೇವಿಯೆ ! ಆ ತಾಮಸಪುರಾಣಗಳನ್ನು ಕ್ರಮವಾಗಿ ಹೇಳುತ್ತೇನೆ. ಕೇಳು. ಅವುಗಳ ಹೆಸರನ್ನು ಹೇಳಿದ ಮಾತ್ರದಿಂದಲೇ ಜ್ಞಾನಿಗಳಿಗೂ ಕೂಡ ಪಾತಕವುಂಟಾಗುತ್ತದೆ.

೬೭. ಮೊದಲು ನಾನು ಶೈವವನ್ನೂ ಪಾಶುಪತವನ್ನೂ ಹೇಳಿದೆನು. ಅನಂತರ ನನ್ನ ಶಕ್ತಿಗೊಳಗಾದ ಆ ಬ್ರಾಹ್ಮಣರು ಉಳಿದವನ್ನು ಹೇಳಿದರು. ಅವನ್ನು ಹೇಳುತ್ತೇನೆ. ಕೇಳು.

೬೮-೭೧. ಕಣಾದನು ವೈಶೇಷಿಕ ಶಾಸ್ತ್ರವನ್ನು ಹೇಳಿದನು. ಗೌತಮನು ನ್ಯಾಯಶಾಸ್ತ್ರವನ್ನೂ ಕಪಿಲನು ಸಾಂಖ್ಯಶಾಸ್ತ್ರವನ್ನೂ ಬೃಹಸ್ಪತಿಯು

ಧಿಷಣೇನ ತಥಾ ಪ್ರೋಕ್ತಂ ಚಾರ್ವಾಕಮತಿಗರ್ಹಿತಂ ।
ದೈತ್ಯಾನಾಂ ನಾಶನಾರ್ಥಾಯ ವಿಷ್ಣುನಾ ಬುದ್ಧರೂಪಿಣಾ　　॥ ೬೯ ॥

ಬೌದ್ಧಶಾಸ್ತ್ರಮಸತ್ಪ್ರೋಕ್ತಂ ನಗ್ನನೀಲಪಟಾದಿಕಂ ।
ಮಾಯಾವಾದಮಸಚ್ಛಾಸ್ತ್ರಂ ಪ್ರಚ್ಛನ್ನಂ ಬೌದ್ಧಮುಚ್ಯತೇ　　॥ ೭೦ ॥

ಮಯೈವ ಕಥಿತಂ ದೇವಿ ಕಲೌ ಬ್ರಾಹ್ಮಣರೂಪಿಣಾ ।
ಅಪಾರ್ಥಂ ಶ್ರುತಿವಾಕ್ಯಾನಾಂ ದರ್ಶಯಲ್ಲೋಕಗರ್ಹಿತಂ　　॥ ೭೧ ॥

ಕರ್ಮಸ್ವರೂಪತ್ಯಾಜ್ಯತ್ವಮತ್ರ ವೈ ಪ್ರತಿಪಾದ್ಯತೇ ।
ಸರ್ವಕರ್ಮಪರಿಭ್ರಷ್ಟಂ ವೈಧರ್ಮ್ಯತ್ವಂ ತದುಚ್ಯತೇ　　॥ ೭೨ ॥

ಪರೇಶಜೀವಯೋರೈಕ್ಯಂ ಮಯಾ ತು ಪ್ರತಿಪಾದ್ಯತೇ ।
ಬ್ರಹ್ಮಣೋಽಸ್ಯ ಸ್ವಯಂ ರೂಪಂ ನಿರ್ಗುಣಂ ವಕ್ಷ್ಯತೇ ಮಯಾ　　॥ ೭೩ ॥

---

ಬಹು ನಿಂದಿತವಾದ ಚಾರ್ವಾಕಶಾಸ್ತ್ರವನ್ನೂ ಹೇಳಿದರು. ದೈತ್ಯರೆಲ್ಲರನ್ನೂ ನಾಶ ಮಾಡಲು ಬುದ್ಧನ ರೂಪವನ್ನು ಹೊಂದಿದ ವಿಷ್ಣುವಿನಿಂದ ಬೌದ್ಧಶಾಸ್ತ್ರವು ಹೇಳಲ್ಪಟ್ಟಿತು. ಅದರಲ್ಲಿ ಬೆತ್ತಲೆ ಇರುವುದು, ನೀಲಿಯ ಬಟ್ಟೆಯನ್ನುಡುವುದು, ಮುಂತಾದುವು ಉಕ್ತವಾಗಿವೆ. ಮಾಯಾವಾದವನ್ನು ಹೇಳತಕ್ಕ ಮತ್ತೆ ಕೆಲವು ಶಾಸ್ತ್ರಗಳು ಬೌದ್ಧರನ್ನೇ ಅನುಸರಿಸಿಕೊಂಡಿವೆ. ಅವನ್ನೂ ಕೂಡ ಈ ಕಲಿಯುಗದಲ್ಲಿ ಬ್ರಾಹ್ಮಣರೂಪಿಯಾದ ನಾನೇ ಹೇಳಿದ್ದೇನೆ. ಆಗ ಶ್ರುತಿಗಳಿಗೆಲ್ಲಾ ಅಪಾರ್ಥವನ್ನು ಕಲ್ಪಿಸುತ್ತ ಅವು ಲೋಕದಲ್ಲಿ ನಿಂದಿತವಾಗುವಂತೆ ಮಾಡಿದ್ದೇನೆ.

೭೨. ಕರ್ಮಮಾಡುವುದನ್ನು ಬಿಡಬೇಕೆಂಬುದೇ ಈ ಶಾಸ್ತ್ರದಲ್ಲಿ ಹೇಳಲ್ಪಡುತ್ತದೆ. ಕರ್ಮಸ್ವರೂಪವನ್ನು ಬಿಡಬೇಕೆಂಬುದೇನೋ ಸರಿಯಾದುದು. ಆದರೂ ಎಲ್ಲಾ ಕರ್ಮಗಳನ್ನೂ ಬಿಡಕೂಡದು. ಆದರೂ ಇದರಲ್ಲಿ ಎಲ್ಲಾ ಕರ್ಮಗಳನ್ನೂ ಬಿಡುವಿಕೆಯನ್ನೇ ವೈಧರ್ಮ್ಯವೆಂದು ನಾನು ಹೇಳುತ್ತಿರುವುದು.

೭೩. ಪರಮಾತ್ಮ ಜೀವಾತ್ಮರಿಗೆ ಐಕ್ಯವನ್ನು ಹೇಳುವಿಕೆಯೇ ಮಾಯೆ ಎನ್ನಿಸಿಕೊಳ್ಳುತ್ತದೆ. ಈ ಪರಬ್ರಹ್ಮನು ನಿರ್ಗುಣನು ಎಂದು ನಾನು ಹೇಳುತ್ತೇನೆ.

ಸರ್ವಸ್ಯ ಜಗತೋಽಪ್ಯತ್ರ ಮೋಹನಾರ್ಥಂ ಕಲೌ ಯುಗೇ ||
ವೇದಾರ್ಥವನ್ಮಹಾಶಾಸ್ತ್ರಂ ಮಾಯಯಾ ಯದವೈದಿಕಂ || ೭೪ ||

ಮಯ್ಯೈವ ರಕ್ಷ್ಯತೇ ದೇವಿ ಜಗತಾಂ ನಾಶಕಾರಣಾತ್ ।
ದ್ವಿಜನ್ಮನಾ ಜೈಮಿನಿನಾ ಪೂರ್ವಂ ವೇದಮಪಾರ್ಥಕಂ || ೭೫ ||

ನಿರೀಶ್ವರೇಣ ವಾದೇನ ಕೃತಂ ಶಾಸ್ತ್ರಂ ಮಹತ್ತರಂ ।
ಶಾಸ್ತ್ರಾಣಿ ಚೈವ ಗಿರಿಜೇ ತಾಮಸಾನಿ ನಿಬೋಧ ಮೇ || ೭೬ ||

ಪುರಾಣಾನಿ ಚ ವಕ್ಷ್ಯಾಮಿ ತಾಮಸಾನಿ ಯಥಾಕ್ರಮಂ ।
ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ || ೭೭ ||

ತಥೈವ ನಾರದೀಯಂ ಚ ಮಾರ್ಕಂಡೇಯಂ ತು ಸಪ್ತಮಂ ।
ಆಗ್ನೇಯಮಷ್ಟಮಂ ಪ್ರೋಕ್ತಂ ಭವಿಷ್ಯಂ ನವಮಂ ತಥಾ || ೭೮ ||

---

೭೪-೮೩. ಈ ಕಲಿಯುಗದಲ್ಲಿ ಜನಗಳನ್ನು ಮೋಹಗೊಳಿಸುವುದಕ್ಕೆ ವೈದಿಕವಲ್ಲದ ಮಂತ್ರಗಳನ್ನು ವೇದಾರ್ಥದ ಮಂತ್ರಗಳಂತೆ ನಾನೇ ಕಾಪಾಡುತ್ತಿದ್ದೇನೆ. ಅವು ಈ ಜಗತ್ತನ್ನು ನಾಶಮಾಡಿ ಯಾವು? ಎಂಬುವೇ ಅದಕ್ಕೆ ಕಾರಣವಾಗಿರುವುದು. ಜೈಮಿನಿಯೆಂಬ ಬ್ರಾಹ್ಮಣನು ವೇದಕ್ಕೆ ಅಪಾರ್ಥವನ್ನು ಮೊದಲೇ ಕಲ್ಪಿಸಿದನು. ಅವನು ಅದರಲ್ಲಿಯೇ ನಿರೀಶ್ವರವಾದವನ್ನು ಎತ್ತಿ ಹಿಡಿದು ದೊಡ್ಡದೊಂದು ಶಾಸ್ತ್ರವನ್ನೇ ಮಾಡಿರುವನು. ಇವು ತಾಮಸವಾದ ಶಾಸ್ತ್ರಗಳಾದುವು. ತಾಮಸವಾದ ಪುರಾಣಗಳನ್ನು ಹೇಳುತ್ತೇನೆ. ಕೇಳು. ಅವುಗಳ ಕ್ರಮವು ಹೀಗಿರುವುದು. ೧. ಬ್ರಹ್ಮಪುರಾಣ, ೨. ಪದ್ಮಪುರಾಣ, ೩. ವಿಷ್ಣುಪುರಾಣ ೪. ಶಿವಪುರಾಣ, ೫. ಭಾಗವತ, ೬. ನಾರದಪುರಾಣ, ೭. ಮಾರ್ಕಂಡೇಯಪುರಾಣ, ೮. ಅಗ್ನಿಪುರಾಣ, ೯. ಭವಿಷ್ಯಪುರಾಣ,

**ದಶಮಂ ಬ್ರಹ್ಮವೈವರ್ತಂ ಲೈಂಗಮೇಕಾದಶಂ ಸ್ಮೃತಂ ।**
**ದ್ವಾದಶಂ ಚ ವರಾಹಂ ಚ ವಾಮನಂ ಚ ತ್ರಯೋದಶಂ ॥ ೮೯ ॥**

**ಕೌರ್ಮಂ ಚತುರ್ದಶಂ ಪ್ರೋಕ್ತಂ ಮಾತ್ಸ್ಯಂ ಪಂಚದಶಂ ಸ್ಮೃತಂ ।**
**ಷೋಡಶಂ ಗಾರುಡಂ ಪ್ರೋಕ್ತಂ ಸ್ಕಾಂದಂ ಸಪ್ತದಶಂ ಸ್ಮೃತಂ ॥ ೯೦ ॥**

**ಅಷ್ಟಾದಶಂ ತು ಬ್ರಹ್ಮಾಂಡಂ ಪುರಾಣಾನಿ ಯಥಾಕ್ರಮಂ ।**
**ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ ॥ ೯೧ ॥**

**ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಬೋಧ ಮೇ ।**
**ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಂ ॥ ೯೨ ॥**

**ಗಾರುಡಂ ಚ ತಥಾ ಪಾದ್ಮಂ ವರಾಹಂ ಶುಭದರ್ಶನೇ ।**
**ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ ಶುಭಾನಿ ವೈ ॥ ೯೩ ॥**

**ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವ ಚ ।**
**ಭವಿಷ್ಯಂ ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ ॥ ೯೪ ॥**

---

೧೦. ಬ್ರಹ್ಮವೈವರ್ತಪುರಾಣ, ೧೧. ಲಿಂಗಪುರಾಣ, ೧೨. ವರಾಹಪುರಾಣ, ೧೩. ವಾಮನಪುರಾಣ, ೧೪ ಕೂರ್ಮಪುರಾಣ, ೧೫. ಮತ್ಸ್ಯಪುರಾಣ, ೧೬. ಗರುಡ ಪುರಾಣ, ೧೭. ಸ್ಕಾಂದಪುರಾಣ, ೧೮. ಬ್ರಹ್ಮಾಂಡಪುರಾಣ, ಈ ರೀತಿಯಾಗಿ ಹದಿನೆಂಟು ಪುರಾಣಗಳು ಪ್ರಸಿದ್ಧವಾಗಿವೆ. ೧. ಮತ್ಸ್ಯಪುರಾಣ, ೨ ಕೂರ್ಮ ಪುರಾಣ, ೩. ಲಿಂಗಪುರಾಣ, ೪. ಸ್ಕಾಂದಪುರಾಣ, ೫. ಅಗ್ನಿಪುರಾಣ, ೬. ಶಿವ ಪುರಾಣ ಈ ಆರುಪುರಾಣಗಳೂ ತಾಮಸಪುರಾಣಗಳು ಎನ್ನಿಸಿಕೊಳ್ಳುತ್ತವೆ. ೧. ವಿಷ್ಣುಪುರಾಣ, ೨. ನಾರದಪುರಾಣ, ೩. ಭಾಗವತಪುರಾಣ, ೪. ಗರುಡ ಪುರಾಣ, ೫. ಪದ್ಮಪುರಾಣ, ೬. ವರಾಹಪುರಾಣ. ಈ ಆರು ಪುರಾಣಗಳೂ ಸಾತ್ವಿಕಪುರಾಣಗಳು ಎನ್ನಿಸಿಕೊಳ್ಳುತ್ತವೆ.

೯೪. ೧. ಬ್ರಹ್ಮಾಂಡಪುರಾಣ, ೨. ಬ್ರಹ್ಮವೈವರ್ತಪುರಾಣ, ೩. ಮಾರ್ಕಂಡೇಯಪುರಾಣ, ೪. ಭವಿಷ್ಯಪುರಾಣ, ೫. ವಾಮನಪುರಾಣ, ೬. ಬ್ರಹ್ಮಪುರಾಣ, ಈ ಆರು ಪುರಾಣಗಳೂ ರಾಜಸಪುರಾಣಗಳೆನಿಸಿಕೊಳ್ಳುತ್ತವೆ.

ಸಾತ್ವಿಕಾ ಮೋಕ್ಷದಾ ಪ್ರೋಕ್ತಾ ರಾಜಸಾಃ ಸ್ವರ್ಗದಾಶ್ಶುಭಾಃ ।
ತಥೈವ ತಾಮಸಾ ದೇವಿ ನಿರಯಪ್ರಾಪ್ತಿಹೇತವಃ ॥ ೮೫ ॥

ತಥೈವ ಸ್ಮೃತಯಃ ಪ್ರೋಕ್ತಾ ಋಷಿಭಿಸ್ತ್ರಿಗುಣಾನ್ವಿತಾಃ ।
ಸಾತ್ವಿಕಾ ರಾಜಸಾಶ್ಚೈವ ತಾಮಸಾಃ ಶುಭದರ್ಶನೇ ॥ ೮೬ ॥

ವಾಸಿಷ್ಠಂ ಚೈವ ಹಾರೀತಂ ವ್ಯಾಸಂ ಪಾರಾಶರಂ ತಥಾ ।
ಭಾರಧ್ವಾಜಂ ಕಾಶ್ಯಪಂ ಚ ಸಾತ್ವಿಕಾ ಮುಕ್ತಿದಾಃ ಶುಭಾಃ ॥ ೮೭ ॥

ಯಾಜ್ಞವಲ್ಕ್ಯಂ ತಥಾತ್ರೇಯಂ ತೈತ್ತಿರಂ ದಾಕ್ಷಮೇವ ಚ ।
ಕಾತ್ಯಾಯನಂ ವೈಷ್ಣವಂ ಚ ರಾಜಸಾಃ ಸ್ವರ್ಗದಾಃ ಶುಭಾಃ ॥ ೮೮ ॥

ಗೌತಮಂ ಬಾರ್ಹಸ್ಪತ್ಯಂ ಚ ಸಾಂವರ್ತಂ ಚ ಯಮಂ ಸ್ಮೃತಂ ।
ಶಾಂಖಂ ಔಶನಸಂ ದೇವಿ ತಾಮಸಾ ನಿರಯಪ್ರದಾಃ ॥ ೮೯ ॥

---

೮೫ ಎಲೈ ದೇವಿಯೆ ! ಸಾತ್ವಿಕಪುರಾಣಗಳು ಮೋಕ್ಷವನ್ನೂ ರಾಜಸ ಪುರಾಣಗಳು ಸ್ವರ್ಗವನ್ನೂ ತಾಮಸಪುರಾಣಗಳು ನರಕವನ್ನೂ ಹೊಂದಿಸುತ್ತವೆ.

೮೬. ಅದೇ ರೀತಿಯಲ್ಲಿಯೇ ಋಷಿಗಳು ಸ್ಮೃತಿಗಳನ್ನು ತ್ರಿಗುಣಗಳಿಂದಲೂ ಕೂಡಿದುವೆಂದು ಹೇಳಿದ್ದಾರೆ. ಅವುಗಳೂ ಅಂತೆಯೇ ಸಾತ್ವಿಕರಾಜಸ ತಾಮಸಗಳೆಂದು ಮೂರುಬಗೆಯಾಗಿವೆ.

೮೭. ವಾಸಿಷ್ಠ, ಹಾರೀತ, ವ್ಯಾಸ, ಪಾರಾಶರ, ಭಾರದ್ವಾಜ, ಕಾಶ್ಯಪ, ಈ ಸ್ಮೃತಿಗಳು ಸಾತ್ವಿಕ ಸ್ಮೃತಿಗಳು. ಮುಕ್ತಿಯನ್ನು ಕೊಡುತ್ತವೆ.

೮೮. ಯಾಜ್ಞವಲ್ಕ್ಯ, ಆತ್ರೇಯ, ತೈತ್ತಿರ, ದಾಕ್ಷ, ಕಾತ್ಯಾಯನ, ವೈಷ್ಣವ, ಈ ಸ್ಮೃತಿಗಳೆಲ್ಲವೂ ರಾಜಸಗಳು. ಸ್ವರ್ಗವನ್ನು ಕೊಡುತ್ತವೆ.

೮೯. ಗೌತಮ, ಬಾರ್ಹಸ್ಪತ್ಯ, ಸಾಂವರ್ತಕ, ಮಮು, ಶಾಂಖ, ಔಶನಸ, ಈ ಸ್ಮೃತಿಗಳು ತಾಮಸವಾದುವು.

ಕಿಮತ್ರ ಬಹುನೋಕ್ತೇನ ಪುರಾಣೇಷು ಸ್ಮೃತಿಷ್ವಪಿ ।
ತಾಮಸಾ ನರಕಾಯೈವ ವರ್ಜಯೇತ್ತಾನ್ವಿಚಕ್ಷಣಃ ॥ ೯೦ ॥

ಏತತ್ತೇ ಸರ್ವಮಾಖ್ಯಾತಂ ಪ್ರಸಂಗಾಚ್ಛುಭದರ್ಶನೇ ।
ತೇಷಾಂ ಚ ಪ್ರಭವಾಸ್ಥಾಂ ಹರೇರ್ವಕ್ಷ್ಯಾಮಿ ತೇ ಶೃಣು ॥ ೯೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಗುಣತ್ರಯವಿವರಣಂ
ನಾಮ ತ್ರಿಷಷ್ಟ್ಯಧಿಕದ್ವಿಶತತಮೋಧ್ಯಾಯಃ

---

೯೦. ಎಲೈ ದೇವಿಯೆ! ಬಹುವಾಗಿ ಹೇಳಿದುದರಿಂದ ಪ್ರಯೋಜನವಿಲ್ಲ. ಪುರಾಣಗಳಲ್ಲಾಗಲಿ, ಸ್ಮೃತಿಗಳಲ್ಲಾಗಲಿ, ತಾಮಸಗಳಾದರೆ ಅವು ನರಕವನ್ನುಂಟುಮಾಡುತ್ತವೆ. ಆದ್ದರಿಂದ ಜ್ಞಾನಿಯಾಗಿ ಬುದ್ಧಿವಂತನಾದವನು ಅವನ್ನು ಬಿಟ್ಟುಬಿಡಬೇಕು.

೯೧. ಪ್ರಸಂಗದಿಂದ ಎಲ್ಲವನ್ನೂ ನಿನಗೆ ಹೇಳಿದ್ದೇನೆ. ಇನ್ನು ಆ ಹರಿಯ ದೆಸೆಯಿಂದ ಅವುಗಳ ಉತ್ಪತ್ತಿಯನ್ನು ವಿವರಿಸುತ್ತೇನೆ. ಕೇಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದಲ್ಲಿ ಗುಣತ್ರಯವಿವರಣವೆಂಬ
ಇನ್ನೂರ ಅರವತ್ತಮೂರನೆಯ ಅಧ್ಯಾಯವು



|| ಶ್ರೀಃ ||

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಚತುಷ್ಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ||



|| ರುದ್ರ ಉವಾಚ ||

ಹಿರಣ್ಯಕಹಿರಣ್ಯಾಕ್ಷೌ ಕಾಶ್ಯಪೇಯೌ ಮಹಾಬಲೌ |
ದಿತಿಪುತ್ರೌ ಮಹಾವೀರ್ಯೌ ಸರ್ವದೈತ್ಯಪತೀ ಉಭೌ || ೧ ||

ನಾಮ್ನಾ ತೌ ಜಯವಿಜಯೌ ಶ್ವೇತದ್ವೀಪೇ ಹರಿಂ ಗತೌ |
ತಸ್ಮಿನ್ ಪ್ರವಿಷ್ಟಾನ್ ಯೋಗೀಂದ್ರಾನ್ ಸನಕಾದೀನ್ ಮಹಾಬಲೌ || ೨ ||

ತಾರಯಾಮಾಸತುರ್ದೇವಿ ಹರಿಸಂದರ್ಶನೋತ್ಸುಕಾನ್ |
ತೈಶ್ಚ ಶಪ್ತೌ ಮಹಾವೀರ್ಯೌ ದ್ವಾರಪಾಲೌ ಸುರೋತ್ತಮೌ || ೩ ||

---

## ಇನ್ನೂರ ಅರವತ್ತ ನಾಲ್ಕನೆಯ ಅಧ್ಯಾಯ



೧-೩. ರುದ್ರನು ಹೇಳಿದನು—ಹಿರಣ್ಯಕಶಿಪು ಹಿರಣ್ಯಾಕ್ಷರೆಂಬುವರು ಕಶ್ಯಪನ ಮಕ್ಕಳು. ಬಹು ಬಲಿಷ್ಠರು. ದಿತಿಯ ಹೊಟ್ಟೆಯಲ್ಲಿ ಹುಟ್ಟಿದವರು. ವೀರರಾಗಿದ್ದುಕೊಂಡು ದೈತ್ಯರಿಗೆಲ್ಲಾ ಒಡೆಯರಾಗಿದ್ದರು. ಅವರು ಜಯವಿಜಯರೆಂದು ಹೆಸರನ್ನು ಹೊಂದಿ ಶ್ವೇತ ದ್ವೀಪದಲ್ಲಿ ಹರಿಯನ್ನು ಸೇವಿಸಿದರು. ಆ ಜಯವಿಜಯರು ಶ್ವೇತ ದ್ವೀಪದಲ್ಲಿ ವಿಷ್ಣುವಿನ ಬಳಿಯಲ್ಲಿದ್ದುಕೊಂಡು ಇರುತ್ತಿರುವಾಗ ಆ ವಿಷ್ಣುವಿನ ಬಳಿಗೆ ಅವನ ದರ್ಶನಾರ್ಥವಾಗಿ ಸನಕಾದಿ ಯೋಗಿಗಳು ಹೋದರು ಅವರನ್ನು ಈ ಪರಾಕ್ರಮಿಗಳಾದ ಜಯ ವಿಜಯರು ತಡೆದರು. ಅದರಿಂದ ಅವರು ಆ ದ್ವಾರಪಾಲಕರಿಗೆ ಶಾಪವನ್ನು ಕೊಟ್ಟರು.

॥ ಸನಕಾದಯ ಊಚುಃ ॥

ಉತ್ಸೃಜ್ಯೈತತ್ಪೃಥಿವ್ಯಾಂ ಚ ಯಾತಂ ದೇವಸ್ಯ ಕಿಂಕರೌ ॥ ೪ ॥

॥ ರುದ್ರ ಉವಾಚ ॥

ಇತಿ ಶಾಪಂ ತಯೋರ್ದತ್ವಾ ತತ್ರ ತಸ್ಥುರ್ಮುನೀಶ್ವರಾಃ ।
ದೇವಸ್ತದರ್ಥಂ ಜ್ಞಾತ್ವಾ ಚ ತಾನಾಹೂಯ ಚ ತಾವಪಿ ॥
ತೌ ಚೋತ್ಥಾಯಾಬ್ರವೀತ್ತತ್ರ ಭಗವಾನ್ ಭೂತಭಾವನಃ ॥ ೫ ॥

॥ ಭಗವಾನುವಾಚ ॥

ಕೃತವನ್ತೌ ಮಹಾವೀರ್ಯಾವಪರಾಧಂ ಮಹಾತ್ಮನಾಂ ।
ನಾತಿಕ್ರಮಣೀಯಮಿದಂ ಭವದ್ಭ್ಯಾಂ ದ್ವಾರಪಾಲಕೌ ॥ ೬ ॥

ದಾಸತ್ವಂ ಸಪ್ತಜನ್ಮಾನಿ ಯುವಾಂ ಭಕ್ತೌ ಮಮಾನಘೌ ।
ಅಮಿತ್ರತಾಂ ತಥಾ ತ್ರೀಣಿ ಜನ್ಮಾನಿ ಭಜತಂ ತು ವಾ ॥ ೭ ॥

---

೪. ಸನಕಾದಿಗಳು ಹೇಳಿದರು–ಎಲೈ ದೇವಕಿಂಕರರಾದ ಜಯವಿಜಯರೆ! ಈ ಸ್ವಾಮಿಯ ದಾಸರಾಗಿರುವಿಕೆಯನ್ನು ಬಿಟ್ಟು ಭೂಮಿಗೆ ಹೋಗಿ ಜನ್ಮತಾಳಿರಿ.

೫ ರುದ್ರನು ಹೇಳಿದನು–ಈ ರೀತಿಯಾಗಿ ಅವರಿಗೆ ಶಾಪವನ್ನು ಕೊಟ್ಟು ಆ ಮುನಿಗಳು ಅಲ್ಲಿಯೇ ಇದ್ದರು. ಸ್ವಾಮಿಯು ಈ ವಿಷಯವನ್ನು ತಿಳಿದು ಆ ಋಷಿಗಳನ್ನೂ ಆ ಆಳುಗಳನ್ನೂ ಕರೆಸಿದನು. ಆಗ ಆಳುಗಳನ್ನು ಕರೆದು ಹಿಂದುಮುಂದನ್ನು ಬಲ್ಲ ಆ ಸ್ವಾಮಿಯು ಇಂತೆಂದು ಹೇಳಿದನು

೬. ಭಗವಂತನು ಹೇಳಿದನು–ಎಲೈ ಬಲಶಾಲಿಗಳಾದ ಜಯವಿಜಯರೆ! ನೀವು ಮಹಾತ್ಮರಿಗೆ ಅಪರಾಧವನ್ನು ಮಾಡಿರುವಿರಿ. ಈ ಅಪರಾಧವನ್ನು ಮೀರಲಾಗುವುದಿಲ್ಲ. ಅದನ್ನು ಅನುಭವಿಸಿಯೇ ತೀರಬೇಕು.

೭ ಎಲೈ ಸೇವಕರಿರಾ! ನೀವು ನನಗೆ ದಾಸರಾಗಿ ಏಳು ಜನ್ಮಗಳನ್ನು ಭೂಲೋಕದಲ್ಲಿ ಎತ್ತಲು ಸಾಧ್ಯವೆ? ಅದಿಲ್ಲದಿದ್ದರೆ ಶತ್ರುಗಳಾಗಿ ಮೂರು ಜನ್ಮಗಳನ್ನು ಭೂಲೋಕದಲ್ಲಿ ಎತ್ತಲು ಸಾಧ್ಯವೆ? ಹೇಳಿರಿ.

॥ ರುದ್ರ ಉವಾಚ ॥

ಇತ್ಯುಕ್ತೌ ತೌ ಮಹಾವೀರ್ಯೌ ಅಬ್ರೂತಾಂ ಪರಮೇಶ್ವರಂ ॥ ೮ ॥

॥ ಜಯ ವಿಜಯಾವೂಚತುಃ ॥

ಚಿರಕಾಲಂ ಮಹೀಂ ಪ್ರಾಪ್ಯ ತ್ವಮಸವರ್ಥೌ ಸ್ವಮಾನದ ।
ತಸ್ಮಾತ್ತ್ರೀಣ್ಯೇವ ಜನ್ಮಾನಿ ವಿದ್ವಿಟ್ತ್ವಂ ಚ ಭಜಾವಹೇ ॥
ಹತೌ ತ್ವಯೈವ ದೇವೇಶ ಪ್ರಾಪ್ಸ್ಯಾವೋ ಭವದನ್ತಿಕಂ ॥ ೯ ॥

॥ ರುದ್ರ ಉವಾಚ ॥

ಇತ್ಯುಕ್ತ್ವಾ ದ್ವಾರಪಾಲೌ ತೌ ಪೂರ್ವಂ ಜಾತೌ ಮಹಾಬಲೌ ।
ಕಶ್ಯಪಸ್ಯ ಮಹಾವೀರ್ಯೌ ದಿತಿಗರ್ಭೇ ಮಹಾಸುರೌ ॥ ೧೦ ॥

ಹಿರಣ್ಯಕಶಿಪುರ್ಜ್ಯೇಷ್ಠೋ ಹಿರಣ್ಯಾಕ್ಷಃ ಕನಿಷ್ಠಕಃ ।
ಉಭೌ ತೌ ಲೋಕವಿಖ್ಯಾತೌ ಮಹಾವೀರ್ಯೌ ಬಲೋದ್ಧತೌ ॥ ೧೧ ॥

---

೮. ರುದ್ರನು ಹೇಳಿದನು-ಸ್ವಾಮಿಯು ಅವರಿಗೆ ಇಂತೆನಲು ಅವರಿಬ್ಬರೂ ಸ್ವಾಮಿಯನ್ನು ಕುರಿತು ಇಂತೆಂದರು.

೯. ಜಯವಿಜಯರು ಹೇಳಿದರು–ಎಲೈ ಸ್ವಾಮಿಯೆ! ಬಹುಕಾಲ ನಿನ್ನನ್ನು ಬಿಟ್ಟು ಭೂಮಿಯಲ್ಲಿರಲಾರೆವು ಆದ್ದರಿಂದ ದಾಸರಾಗಿರುವುದು ಸಾಧ್ಯವಾಗುವುದಿಲ್ಲ. ಮೂರು ಜನ್ಮಗಳವರೆಗೆ ಭೂಮಿಯಲ್ಲಿ ಹುಟ್ಟಿ ನಿನಗೆ ಶತ್ರುಗಳಾಗಿಯೇ ಇರುತ್ತೇವೆ. ನಿನ್ನಿಂದಲೇ ಕೊಲ್ಲಲ್ಪಟ್ಟು ಮತ್ತೆ ನಿನ್ನ ಬಳಿಗೇ ಬೇಗ ಬರುತ್ತೇವೆ.

೧೦. ರುದ್ರನು ಹೇಳಿದನು–ಅವರಿಬ್ಬರೂ ಸ್ವಾಮಿಗೆ ಆ ರೀತಿ ಹೇಳಿ ಕಶ್ಯಪನಿಂದ ದಿತಿಯ ಹೊಟ್ಟೆಯಲ್ಲಿ ಹುಟ್ಟಿ ಮಹಾ ಬಲಿಷ್ಠರಾಗಿ ಮೆರೆದರು.

೧೧. ಇವರಲ್ಲಿ ಹಿರಣ್ಯಕಶಿಪುವು ದೊಡ್ಡವನು. ಹಿರಣ್ಯಾಕ್ಷನು ಚಿಕ್ಕವನು. ಇವರಿಬ್ಬರೂ ಬಲಿಷ್ಠರಾಗಿ ಪ್ರಸಿದ್ಧರಾಗಿದ್ದರು.

**ಅಪ್ರಮಾಣಶರೀರಃ ಸ ಹಿರಣ್ಯಾಕ್ಷೋ ಮದೋದ್ಧತಃ |**
**ಉತ್ಪಾಟ್ಯ ಬಾಹುಸಾಹಸ್ರ್ಯೈಃ ಪೃಥಿವೀಂ ಸಮಹೀಧರಾಂ || ೧೨ ||**

**ಸಸಾಗರಾಂ ದ್ವೀಪಯುತಾಂ ಸರ್ವಪ್ರಾಣಿಸಮನ್ವಿತಾಂ |**
**ಉತ್ಪಾಟ್ಯ ಶಿರಸಾಧಾರ್ಯ ಪ್ರವಿವೇಶ ರಸಾತಳಂ || ೧೩ ||**

**ತತೋ ದೇವಗಣಾಸ್ಸರ್ವೇ ಚುಕ್ರುಶುರ್ಭಯಪೀಡಿತಾಃ |**
**ಶರಣಂ ಪ್ರಯಯುರ್ದೇವಂ ನಾರಾಯಣಮನಾಮಯಂ || ೧೪ ||**

**ತತಸ್ತದದ್ಭುತಂ ಜ್ಞಾತ್ವಾ ಶಂಖಚಕ್ರಗದಾಧರಃ |**
**ವಾರಾಹರೂಪಮಾಸ್ಥಾಯ ವಿಶ್ವರೂಪೀ ಜನಾರ್ದನಃ || ೧೫ ||**

**ಅನಾದಿಮಧ್ಯಾನ್ತವಪುಃ ಸರ್ವದೇವಮಯೋ ವಿಭುಃ |**
**ವಿಶ್ವತಃ ಪಾಣಿಪಾಕ್ಚಕ್ಷುರ್ಮಹಾದಂಷ್ಟ್ರೋ ಮಹಾಭುಜಃ || ೧೬ ||**

---

೧೨-೧೩. ಹಿರಣ್ಯಾಕ್ಷನು ಬಹು ದಪ್ಪವಾದ ಶರೀರವುಳ್ಳವನು. ಮದದಿಂದ ಕೂಡಿದವನು. ಸಾಗರಪರ್ವತಗಳಿರುವ ಈ ಭೂಮಿಯನ್ನು ದ್ವೀಪಗಳೊಡನೆಯೂ ಪ್ರಾಣಿಗಳೊಡನೆಯೂ ತನ್ನ ಸಾವಿರ ತೋಳುಗಳಿಂದ ಕಿತ್ತು ಅದನ್ನು ತಲೆಯಮೇಲಿಟ್ಟುಕೊಂಡು ರಸಾತಳಕ್ಕೆ ಹೊರಟುಹೋದನು.

೧೪. ಅನಂತರ ದೇವತೆಗಳು ಭಯಗೊಂಡು ದುಃಖಪಡುತ್ತಾ ನಿರ್ದುಷ್ಟನೂ ನಿರ್ಗುಣನೂ ಆದ ನಾರಾಯಣನನ್ನು ಮರೆಹೊಕ್ಕರು.

೧೫-೧೬. ಶಂಖಚಕ್ರಗದಾಧರನಾದ ಆ ಸ್ವಾಮಿಯು ಈ ಅದ್ಭುತವನ್ನು ತಿಳಿದು ಹಂದಿಯ ಆಕಾರವಾದ ಅವತಾರವನ್ನು ಹೊಂದಿದನು. ವಿಶ್ವರೂಪನೂ ಜನಾರ್ದನನೂ ಆದಿ ಮಧ್ಯ ಅಂತಗಳನ್ನು ಹೊಂದದ ದೇಹವುಳ್ಳವನೂ ಎಲ್ಲಾ ದೇವತೆಗಳೂ ತನ್ನ ದೇಹದಲ್ಲಿಯೇ ಇರುವವನೂ ಎಲ್ಲಾ ಕಡೆಗೂ ಕೈಕಾಲು ಕಣ್ಣುಗಳುಳ್ಳವನೂ ಆದ ಆ ಸ್ವಾಮಿಯು ದೊಡ್ಡದಾದ ಕೋರೆದಾಡೆಯನ್ನು ಹೊಂದಿದನು.

ದಂಷ್ಟ್ರಯೈಕಯಾ ತಂ ದೈತ್ಯಂ ಜಘಾನ ಪರಮೇಶ್ವರಃ ।
ಸಂಚೂರ್ಣಿತಮಹಾಗಾತ್ರೋ ಮಮಾರ ದಿತಿಜಾಧಮಃ ॥ ೧೭ ॥

ಪತಿತಾಂ ಧರಣೀಂ ದೃಷ್ಟ್ವಾ ದಂಷ್ಟ್ರಯೋದ್ಧೃತ್ಯ ಪೂರ್ವವತ್ ।
ಸಂಸ್ಥಾಪ್ಯ ಧಾರಯಾಮಾಸ ಶೇಷೇ ಕೂರ್ಮವಪುಸ್ತಥಾ ॥ ೧೮ ॥

ತಂ ದೃಷ್ಟ್ವಾ ದೇವತಾಸ್ಸರ್ವೇ ಕ್ರೋಡರೂಪಂ ಮಹಾಹರಿಂ ।
ತುಷ್ಟುವುರ್ಮುನಯಶ್ಚೈವ ಭಕ್ತಿನಮ್ರಾತ್ಮಮೂರ್ತಯಃ ॥ ೧೯ ॥

॥ ದೇವಾ ಊಚುಃ ॥

ನಮೋ ಯಜ್ಞವರಾಹಾಯ ನಮಸ್ತೇ ಶತಬಾಹವೇ ।
ಸಮಸ್ತವೇದವೇದಾಂಗತನವೇ ವಿಶ್ವರೂಪಿಣೇ ॥ ೨೦ ॥

ಸರ್ಗಸ್ಥಿತಿಸ್ವರೂಪಾಯ ಸರ್ವಯಜ್ಞಸ್ವರೂಪಿಣೇ
ಕಲಾಕಾಷ್ಠನಿಮೇಷಾಯ ನಮಸ್ತೇ ಕಾಲರೂಪಿಣೇ ॥ ೨೧ ॥

---

೧೭. ಆಗ ಆ ದೈತ್ಯನನ್ನು ಓಡಿಸಿಕೊಂಡು ಹೋಗಿ ಬಂದು ಕೋರೆಹಲ್ಲಿನಿಂದ ಅವನನ್ನು ಹೊಡೆದನು. ತಕ್ಷಣವೇ ದೇಹವೆಲ್ಲವೂ ನಜ್ಜುಗುಜ್ಜಾಗಿ ಆ ಅಧಮನು ಸತ್ತನು.

೧೮. ಅವನು ಸತ್ತನಂತರ ಭೂಮಿಯು ಕೆಳಗೆ ಬಿದ್ದುಹೋಗಲು ಅದನ್ನು ಆ ಸ್ವಾಮಿಯು ಮೊದಲಿನಂತೆಯೇ ಕೋರೆದಾಡೆಯಿಟ್ಟು ಕೂರ್ಮಾಕಾರದಿಂದ ಧರಿಸಿದನು.

೧೯. ಆ ಹಂದಿಯ ಆಕಾರವನ್ನು ಹೊಂದಿದ ಹರಿಯನ್ನು ನೋಡಿ ದೇವತೆಗಳೂ ಋಷಿಗಳೂ ಭಕ್ತಿಯಿಂದ ನಮ್ರರಾಗಿ ಸ್ತುತಿಸಿದರು.

೨೦-೨೧. ದೇವತೆಗಳು ಹೇಳಿದರು-ಯಜ್ಞವರಾಹನಾದ ನಿನಗೆ ನಮಸ್ಕಾರವು. ಅನೇಕ ತೋಳುಗಳುಳ್ಳ ನಿನಗೆ ನಮಸ್ಕಾರವು. ವೇದವೇದಾಂಗಗಳ ರೂಪವಾದ ದೇಹವುಳ್ಳ ನಿನಗೆ ನಮಸ್ಕಾರವು. ಉತ್ಪತ್ತಿ ಸ್ಥಿತಿ ನಾಶಗಳನ್ನು ಮಾಡುವ ನಿನಗೆ ನಮಸ್ಕಾರವು. ವಿಶ್ವರೂಪಿಯಾದ ನಿನಗೆ ನಮಸ್ಕಾರವು. ಯಜ್ಞಸ್ವರೂಪಿಯಾದ ನಿನಗೆ ನಮಸ್ಕಾರವು. ಕಲೆ, ಕಾಷ್ಠ, ನಿಮಿಷರೂಪವಾದ ಕಾಲಸ್ವರೂಪಿಯಾದ ನಿನಗೆ ನಮಸ್ಕಾರವು.

ಭೂತಾತ್ಮನೇ ನಮಸ್ತುಭ್ಯಮ್ಪೃಗ್ವೇದವಪುಷೇ ತಥಾ ।
ಸುಧಾತ್ಮನೇ ನಮಸ್ತುಭ್ಯಂ ಸರ್ವಾಧಾರಾಯ ತೇ ನಮಃ　　॥ ೨೨ ॥

ಋಚಸ್ವರೂಪಿಣೇ ಚೈವ ಚತುರ್ವೇದಮಯಾಯ ಚ ।
ಓಂಕಾರಾಯ ನಮಸ್ತುಭ್ಯಂ ಋಜುರ್ವೇದಸ್ವರೂಪಿಣೇ　　॥ ೨೩ ॥

ನಮಸ್ತೇ ವೇದವೇದಾಂಗಸಾಂಗೋಪಾಂಗಾಯ ತೇ ನಮಃ ।
ಗೋವಿಂದಾಯ ನಮಸ್ತುಭ್ಯಮನಾದಿನಿಧನಾಯ ಚ　　॥ ೨೪ ॥

ನಮಸ್ತೇ ವೇದವಿದುಷೇ ವಿಶಿಷ್ಟೈಕಸ್ವರೂಪಿಣೇ ।
ಶ್ರೀಭೂಲೀಲಾಧಿಪತಯೇ ಜಗತ್ಪಿತ್ರೇ ನಮೋ ನಮಃ　　॥ ೨೫ ॥

॥ ರುದ್ರ ಉವಾಚ ॥

ಇತ್ಯಾದಿಸ್ತುತಿಭಿಸ್ಸ್ತುತ್ವಾ ದೇವಂ ವರಾಹರೂಪಿಣಂ ।
ಅರ್ಚಯಾಮಾಸುರಾತ್ಮೇಶಂ ಗಂಧಪುಷ್ಪಾದಿಭಿರ್ಹರಿಂ　　॥ ೨೬ ॥

---

೨೨-೨೩. ಪಂಚಮಹಾಭೂತಸ್ವರೂಪನಾದ ನಿನಗೆ ನಮಸ್ಕಾರವು. ಸುಧಾಸ್ವರೂಪನಾದ ನಿನಗೆ ನಮಸ್ಕಾರವು ಸರ್ವಕ್ಕೂ ಆಧಾರರೂಪನಾದ ನಿನಗೆ ನಮಸ್ಕಾರವು. ಋಕ್ಕುಗಳ ಸ್ವರೂಪನಾದ ನಿನಗೆ ನಮಸ್ಕಾರವು. ಚತುರ್ವೇದ ಸ್ವರೂಪನಾದ ನಿನಗೆ ನಮಸ್ಕಾರವು. ಓಂಕಾರರೂಪನಾದ ನಿನಗೆ ನಮಸ್ಕಾರವು. ಯಜುರ್ವೇದದ ಆಕಾರನಾದ ನಿನಗೆ ನಮಸ್ಕಾರವು.

೨೪-೨೫. ವೇದ, ವೇದಾಂಗ, ಅಂಗ, ಉಪಾಂಗರೂಪನಾಗಿರುವ ನಿನಗೆ ನಮಸ್ಕಾರವು. ಗೋವಿಂದನಾದ ನಿನಗೆ ನಮಸ್ಕಾರವು. ಆದ್ಯಂತರಹಿತನಾದ ನಿನಗೆ ನಮಸ್ಕಾರವು. ವೇದವನ್ನು ಬಲ್ಲ ನಿನಗೆ ನಮಸ್ಕಾರವು. ಸಮಸ್ತ ಚರಾಚರರೂಪನಾಗಿರುವ ನಿನಗೆ ನಮಸ್ಕಾರವು. ಶ್ರೀದೇವಿ ಭೂದೇವಿ ಲೀಲಾ ದೇವಿಯರಿಗೆ ಅಧಿಪತಿಯಾದ ನಿನಗೆ ನಮಸ್ಕಾರವು. ಲೋಕಕ್ಕೆ ತಂದೆಯಾದ ನಿನಗೆ ನಮಸ್ಕಾರವು.

೨೬. ರುದ್ರನು ಹೇಳಿದನು—ಇವೇ ಮುಂತಾದ ಸ್ತೋತ್ರಗಳಿಂದ ಆ ಸ್ವಾಮಿಯನ್ನು ಸ್ತುತಿಸಿ ಗಂಧಪುಷ್ಪಾಕ್ಷತೆಗಳಿಂದ ಆ ಹರಿಯನ್ನು ಪೂಜಿಸಿದರು.

ಸಮುಚ್ಯಮಾನಸ್ತೈರ್ದೇವೈಸ್ತೇಷಾಮಿಷ್ಟಂ ವರಂ ದದೌ ।
ಗಂಧರ್ವೈರಪ್ಸರೋಭಿಶ್ಚ ಗೀಯಮಾನೋ ಮುದಾ ಹರಿಃ ॥ ೨೭ ॥

ಮಹರ್ಷಿಭಿಃ ಸ್ತೂಯಮಾನಸ್ತತ್ರೈವಾನ್ತರಧೀಯತ ।
ಏಭಿಃ ಸ್ತುತ್ವಾ ನರೋ ಭಕ್ತ್ಯಾ ಪ್ರಾತರುತ್ಥಾಯ ಭಕ್ತಿಮಾನ್ ॥ ೨೮ ॥

ಈಪ್ಸಿತಾಂ ಲಭತೇ ಭೂಮಿಂ ವರಸಸ್ಯ ಫಲಾನ್ವಿತಾಂ ।
ಏತತ್ತೇ ಸರ್ವಮಾಖ್ಯಾತಂ ವಾರಾಹಂ ವೈಭವಂ ಹರೇಃ ॥
ನಾರಸಿಂಹಂ ತಥಾ ವಕ್ಷ್ಯೇ ಶೃಣು ದೇವಿ ವರಾನನೇ ॥ ೨೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡ ಉಮಾಮಹೇಶ್ವರ
ಸಂವಾದೇ ವರಾಹಾವತಾರ ಕಥನಂ ನಾಮ
ಚತುಷ್ಷಷ್ಟ್ಯಧಿಕದ್ವಿಶತತಮೋಽಧ್ಯಾಯಃ

---

೨೭-೨೮. ಆ ದೇವತೆಗಳು ಈ ರೀತಿಯಾಗಿ ಪೂಜೆಯನ್ನು ಮಾಡಲು ಹರಿಯು ಅವರಿಗೆ ಬೇಕಾದ ವರವನ್ನು ಕೊಟ್ಟನು. ಅನಂತರ ಗಂಧರ್ವರೂ ಅಪ್ಸರರೂ ಮಹರ್ಷಿಗಳೂ ಸ್ತುತಿಸುತ್ತಿರಲು ಹೊರಟುಹೋದನು. ಮನುಷ್ಯನಾದವನು ಬೆಳಗ್ಗೆ ಎದ್ದು ಈ ಸ್ತುತಿಯಿಂದ ಸ್ತುತಿಸಿದರೆ ಶ್ರೇಷ್ಠವಾದ ಸಸ್ಯಗಳಿಂದ ಕೂಡಿದ ಉತ್ತಮವಾದ ಭೂಮಿಯನ್ನು ಹೊಂದುತ್ತಾನೆ.

೨೯. ಈ ರೀತಿಯಾಗಿ ವರಾಹಾವತಾರದ ವೈಭವವನ್ನು ಹೇಳಿದ್ದೇನೆ. ಇನ್ನು ಮೇಲೆ ನಾರಸಿಂಹಾವತಾರವನ್ನು ಹೇಳುತ್ತೇನೆ. ಕೇಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದಲ್ಲಿ ವಾರಾಹಾವತಾರ ಕಥನವೆಂಬ ಇನ್ನೂರ
ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ॥



॥ ರುದ್ರ ಉವಾಚ ॥

**ಭ್ರಾತರಂ ನಿಹತಂ ಜ್ಞಾತ್ವಾ ಹಿರಣ್ಯಕಶಿಪುಸ್ತತಃ ।**
**ತಪಸ್ತೇಪೇ ಮಹಾದೈತ್ಯೋ ಮೇರೋಃ ಪಾರ್ಶ್ವೇ ಚ ಮಾಂ ಪ್ರತಿ ॥ ೧ ॥**

**ದಿವ್ಯವರ್ಷಸಹಸ್ರಾಣಿ ವಾಯುಭಕ್ಷೋ ಮಹಾಬಲಃ ।**
**ಜಪನ್ ಪಂಚಾಕ್ಷರಂ ಮಂತ್ರಂ ಪೂಜಯಾಮಾಸ ಮಾಂ ಶುಭೇ ॥ ೨ ॥**

**ತತಃ ಪ್ರಹೃಷ್ಟಮನಸಾ ತಮವೋಚಂ ಮಹಾಸುರಂ ।**
**ವರಂ ವೃಣೀಷ್ವ ದೈತೇಯ ಯತ್ತೇ ಮನಸಿ ವರ್ತತೇ ॥**
**ತತಃ ಪ್ರೋವಾಚ ದೈತೇಯೋ ಮಾಂ ಪ್ರಸನ್ನಂ ಶುಭಾನನೇ ॥ ೩ ॥**

---

### ಇನ್ನೂರ ಅರವತ್ತೈದನೆಯ ಅಧ್ಯಾಯವು



೧. ಹಿರಣ್ಯಕಶಿಪುವು ತನ್ನ ಸಹೋದರನು ವಿಷ್ಣುವಿನಿಂದ ಕೊಲ್ಲಲ್ಪಟ್ಟ ನೆಂಬುದನ್ನು ತಿಳಿದು ಮೇರುಪರ್ವತಕ್ಕೆ ಹೋಗಿ ಅಲ್ಲಿ ನನ್ನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದನು.

೨. ಅವನು ವಾಯುವೊಂದನ್ನೇ ಸೇವಿಸುತ್ತಾ ದೇವತೆಗಳ ಸಾವಿರ ವರ್ಷಗಳವರೆಗೆ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತ ನನ್ನನ್ನು ಪೂಜಿಸಿದನು.

೩. ಆಗ ನನಗೆ ಸಂತೋಷವಾಗಲು ಎಲೈ ದೈತ್ಯನೇ! ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ಎಂದು ಹೇಳಿದೆನು. ಅದಕ್ಕೆ ಅವನು ನನ್ನನ್ನು ಕುರಿತು ಇಂತೆಂದನು.

॥ ಹಿರಣ್ಯಕಶಿಪುರುವಾಚ ॥

ದೇವಾಸುರಮನುಷ್ಯಾಣಾಂ ಗಂಧರ್ವೋರಗರಕ್ಷಸಾಂ ।
ಪಶುಪಕ್ಷಿಮೃಗಾಣಾಂ ಚ ಸಿದ್ಧಾನಾಂ ವೈ ಮಹಾತ್ಮನಾಂ ॥ ೪ ॥

ಯಕ್ಷವಿದ್ಯಾಧರಾಣಾಂ ಚ ಕಿನ್ನರಾಣಾಂ ತಥೈವ ಚ ।
ಸರ್ವೇಷಾಮೇವ ರೋಗಾಣಾಮಾಯುಧಾನಾಂ ತಥೈವ ಚ ।
ಸರ್ವೇಷಾಂ ಋಷಿಮುಖ್ಯಾನಾಮವಧ್ಯತ್ವಂ ಪ್ರಯಚ್ಛ ಮೇ ॥ ೫ ॥

॥ ರುದ್ರ ಉವಾಚ ॥

ಏವಮಸ್ತ್ವಿತಿ ತದ್ರಕ್ಷಸ್ತ್ವಬ್ರುವಂ ಪ್ರಿಯದರ್ಶನೇ ।
ಮತ್ತೋಽಂ ಮಹಾವರಂ ಪ್ರಾಪ್ಯ ಸ ದೈತೇಯೋ ಮಹಾಬಃ ॥ ೬ ॥

ಜಿತ್ವಾ ಮಹೇಂದ್ರಂ ದೇವಾಂಶ್ಚ ಸ ತ್ರೈಲೋಕ್ಯೇಶ್ವರೋಽಭವತ್ ।
ಸರ್ವಾಂಶ್ಚ ಯಜ್ಞಭಾಗಾಂಶ್ಚ ಸ್ವಯಮೇವಾಗ್ರಹೀದ್ಬಲಾತ್ ॥ ೭ ॥

---

೪-೫. ದೇವತೆಗಳು, ಅಸುರರು, ಮನುಷ್ಯರು, ಗಂಧರ್ವರು, ಉರಗರು, ರಾಕ್ಷಸರು, ಪಶುಗಳು, ಪಕ್ಷಿಗಳು, ಮೃಗಗಳು, ಸಿದ್ಧರು, ಮಹಾತ್ಮರು, ಯಕ್ಷರು, ವಿದ್ಯಾಧರರು, ಕಿನ್ನರರು, ರೋಗಗಳು, ಎಲ್ಲಾ ಆಯುಧಗಳು, ಎಲ್ಲಾ ಋಷಿಗಳು, ಇವರೊಬ್ಬರಿಂದಲೂ ಕೂಡ ನನಗೆ ಮರಣವು ಸಂಭವಿಸಕೂಡದು. ಆ ರೀತಿ ಯಾದ ವರವನ್ನು ನನಗೆ ಕೊಡು.

೬-೭ ರುದ್ರನು ಹೇಳಿದನು—ಹಾಗೆಯೇ ಆಗಲೆಂಬುದಾಗಿ ಆ ದೈತ್ಯನಿಗೆ ಹೇಳಿ ನಾನು ವರವನ್ನು ಕೊಟ್ಟೆನು. ಅನಂತರ ಆ ಬಲಿಷ್ಠನಾದ ದೈತ್ಯನು ನನ್ನಿಂದ ಈ ವರವನ್ನು ಹೊಂದಿ ಇಂದ್ರನನ್ನೂ ದೇವತೆಗಳನ್ನೂ ಜಯಿಸಿ ಮೂರು ಲೋಕಕ್ಕೂ ಒಡೆಯನಾದನು. ಎಲ್ಲಾ ಯಜ್ಞಭಾಗಗಳನ್ನೂ ತಾನೇ ತೆಗೆದು ಕೊಳ್ಳಲುಪಕ್ರಮಿಸಿದನು.

ತ್ರಾತಾರಂ ನಾಧಿಗಚ್ಛಂತಿ ದೇವತಾಸ್ತೇನ ನಿರ್ಜಿತಾಃ |
ತಸ್ಯೈವ ಕಿಂಕರಾಸ್ಸರ್ವೇ ಗಂಧರ್ವಾ ದೇವದಾನವಾಃ || ೮ ||

ಯಕ್ಷಾಶ್ಚ ನಾಗಾಸ್ಸಿದ್ಧಾಶ್ಚ ತಸ್ಯೈವ ವಶವರ್ತಿನಃ |
ಉತ್ತಾನಪಾದಸ್ಯ ಸುತಾಂ ಕಲ್ಯಾಣೀಂ ನಾಮ ಕನ್ಯಕಾಂ || ೯ ||

ಉಪಯೇಮೇ ವಿಧಾನೇನ ದೈತ್ಯರಾಜೋ ಮಹಾಬಲಃ |
ತಸ್ಯಾಂ ಜಾತೋ ಮಹಾತೇಜಾಃ ಪ್ರಹ್ಲಾದೋ ದೈತ್ಯರಾಟ್ ಶುಭೇ ||೧೦||

ಅನುರಕ್ತೋ ಹೃಷೀಕೇಶೇ ಗರ್ಭವಾಸೇಪಿ ಯೋ ಹರೌ |
ಸರ್ವಾವಸ್ಥಾಸು ಕೃತ್ಯೇಷು ಮನೋವಾಕ್ಕಾಯಕರ್ಮಭಿಃ || ೧೧ ||

ನಾನ್ಯಂ ಜಾನಾತಿ ದೇವೇಶಾತ್ ಪದ್ಮನಾಭಾತ್ಸನಾತನಾತ್ |
ಸ ಕಾಲೇ ಚೋಪನೀತಸ್ಸ ಗುರಗೇಹೇಽವಸತ್ಸುಧೀಃ || ೧೨ ||

---

೮. ಅವನಿಂದ ಸೋತ ದೇವತೆಗಳಿಗೆ ರಕ್ಷಕರೇ ಇಲ್ಲದಂತಾದರು. ಅನಂತರ ಅವರೆಲ್ಲರೂ ಅವನಿಗೆ ಸೇವಕರಾದರು. ಗಂಧರ್ವರು, ಉರಗರು, ದಾನವರು, ಯಕ್ಷರು, ನಾಗರು, ಸಿದ್ಧರು, ಇವರೂ ಕೂಡ ಅವನಿಗೇ ಅಧೀನರಾಗಿ ಅವನ ಸೇವೆಯಲ್ಲಿಯೇ ನಿರತರಾದರು.

೯-೧೦. ಉತ್ತಾನಪಾದರಾಜನಿಗೆ ಕಲ್ಯಾಣಿ ಎಂಬ ಲಕ್ಷಣವತಿಯಾದ ಮಗಳಿದ್ದಳು. ಆಕೆಯನ್ನು ದೈತ್ಯರಾಜನಾದ ಈ ಹಿರಣ್ಯಕಶಿಪುವು ಶಾಸ್ತ್ರೋಕ್ತ ರೀತಿಯಿಂದ ಮದುವೆಯಾದನು. ಅವಳಲ್ಲಿ ಮಹಾತೇಜಸ್ಸುಳ್ಳ ಪ್ರಹ್ಲಾದನೆಂಬ ಮಗನು ಹುಟ್ಟಿದನು.

೧೧-೧೨. ಆ ಪ್ರಹ್ಲಾದನು ಗರ್ಭದಲ್ಲಿದ್ದಾಗಲೂ ಕೂಡ ಆ ಸ್ವಾಮಿಯಾದ ಹೃಷೀಕೇಶನಲ್ಲಿಯೇ ಭಕ್ತಿಯನ್ನಿಟ್ಟಿದ್ದನು ಎಲ್ಲಾ ಅವಸ್ಥೆಗಳಲ್ಲಿಯೂ ಎಲ್ಲಾ ಕೆಲಸಗಳಲ್ಲಿಯೂ ಕೂಡ ಈ ಸನಾತನನೂ ದೇವೇಶನೂ ಆದ ಪದ್ಮನಾಭನಿಗಿಂತಲೂ ಮತ್ತೊಬ್ಬರನ್ನು ಸ್ಮರಿಸುತ್ತಿರಲಿಲ್ಲ. ಹಿರಣ್ಯಕಶಿಪುವು ಅವನಿಗೆ ಶಾಸ್ತ್ರೋಕ್ತವಾದ ಕಾಲಕ್ಕೆ ಉಪನಯನವನ್ನು ಮಾಡಿ ಗುರುಕುಲವಾಸಕ್ಕೆ ಕಳುಹಿಸಿದನು.

ಅಧೀತ್ಯ ಸರ್ವವೇದಾಂಶ್ಚ ಶಾಸ್ತ್ರಾಣಿ ವಿವಿಧಾನಿ ಚ ।
ಕಸ್ಮಿಂಶ್ಚಿತ್ವಥ ಕಾಲೇ ಚ ಗುರುಣಾ ಸಹ ದೈತ್ಯಜಃ ॥ ೧೩ ॥

ಪಿತುಸ್ಸಮೀಪಮಾಗತ್ಯ ವವಂದೇ ವಿನಯಾನ್ವಿತಃ ।
ತಂ ಪರಿಷ್ವಜ್ಯ ಬಾಹುಭ್ಯಾಂ ತನಯಂ ಶುಭಲಕ್ಷಣಂ ।
ಅಂಕೇ ನಿಧಾಯ ದೈತ್ಯೇಂದ್ರಃ ಪ್ರೋವಾಚೇದಂ ಶುಚಿಸ್ಮಿತೇ ॥ ೧೪ ॥

॥ ಹಿರಣ್ಯಕಶಿಪುರುವಾಚ ॥

ಪ್ರಹ್ಲಾದ ಚಿರಕಾಲಂ ತ್ವಂ ಗುರುಗೇಹೇ ನಿವೇಶಿತಃ ।
ಯದುಕ್ತಂ ಗುರುಣಾ ವೇದ್ಯಂ ತನ್ಮಮಾಚಕ್ಷ್ವ ಸುವ್ರತ ॥ ೧೫ ॥

॥ ರುದ್ರ ಉವಾಚ ॥

ಇತಿ ಪೃಷ್ಟಃ ಸ್ವಪಿತ್ರಾ ವೈ ಪ್ರಹ್ಲಾದೋ ಜನ್ಮವೈಷ್ಣವಃ ।
ಪ್ರಾಹ ದೈತ್ಯೇಶ್ವರಂ ಪ್ರೀತ್ಯಾ ವಚನಂ ಕಲುಷಾಪಹಂ ॥ ೧೬ ॥

---

೧೩-೧೪. ಆ ಗುರುವಿನಲ್ಲಿ ಪ್ರಹ್ಲಾದನು ಎಲ್ಲಾ ವೇದಗಳನ್ನೂ ಅಧ್ಯಯನ ಮಾಡಿದನು. ಎಲ್ಲಾ ಶಾಸ್ತ್ರಗಳನ್ನೂ ಓದಿದನು. ಅನಂತರ ಒಂದು ದಿನ ಗುರುವಿನೊಡನೆ ಈ ಪ್ರಹ್ಲಾದನು ತಂದೆಯ ಬಳಿಗೆ ಬಂದು ವಿನಯದಿಂದ ನಮಸ್ಕರಿಸಿದನು. ಆಗ ಹಿರಣ್ಯಕಶಿಪುವು ಶುಭಲಕ್ಷಣಗಳುಳ್ಳ ಈ ಮಗನನ್ನು ತೋಳುಗಳಿಂದ ತಬ್ಬಿಕೊಂಡು ತೊಡೆಯಮೇಲೆ ಕೂರಿಸಿಕೊಂಡು ಇಂತೆಂದನು.

೧೫. ಹಿರಣ್ಯಕಶಿಪುವು ಹೇಳಿದನು—ಎಲೈ ಪ್ರಹ್ಲಾದನೆ! ಬಹುದಿನಗಳ ವರೆಗೆ ನಿನ್ನನ್ನು ಗುರುವಿನ ಮನೆಯಲ್ಲಿ ಬಿಟ್ಟಿದ್ದೆನು. ಆ ಗುರುವು ನಿನಗೆ ಏನನ್ನು ಹೇಳಿಕೊಟ್ಟಿದ್ದಾನೆ? ಅದನ್ನು ನನಗೆ ಹೇಳು.

೧೬. ರುದ್ರನು ಹೇಳಿದನು—ತನ್ನ ತಂದೆಯು ಹೀಗೆಂದು ಕೇಳಲು ಜನ್ಮದ ಮೊದಲಿನಿಂದ ವಿಷ್ಣುಭಕ್ತನಾದ ಈ ಪ್ರಹ್ಲಾದನು ಆ ತಂದೆಯಾದ ದೈತ್ಯೇಶ್ವರನಿಗೆ ಪ್ರೀತಿಯಿಂದ ಇಂತೆಂದು ನುಡಿದನು.

|| ಪ್ರಹ್ಲಾದ ಉವಾಚ ||

ಯೋ ವೈ ಸರ್ವೋಪನಿಷದಾಮರ್ಥಃ ಪುರುಷ ಈಶ್ವರಃ ।
ತಂ ವೈ ಸರ್ವಗತಂ ವಿಷ್ಣುಂ ನಮಸ್ಕೃತ್ವಾ ಬ್ರವೀಮಿ ತೇ || ೧೭ ||

|| ರುದ್ರ ಉವಾಚ ||

ಇತಿ ವಿಷ್ಣುಸ್ತವಂ ಶ್ರುತ್ವಾ ದೈತ್ಯರಾಟ್ ವಿಸ್ಮಯಾನ್ವಿತಃ ।
ಉವಾಚ ತಂ ಗುರು ರೋಷಾತ್ ಕಿಂ ತ್ವಯೋಕ್ತಂ ಮಮಾತ್ಮಜೇ || ೧೮ ||

ಮಮಾತ್ಮಜಸ್ಯ ದುರ್ಬುದ್ಧೇ ಹರಿಸಂಸ್ತವಮೀದೃಶಂ ।
ಕಿಮರ್ಥಮುಕ್ತವಾನ್ ಜಾಡ್ಯಮಕಾರ್ಯಂ ಬ್ರಾಹ್ಮಣೋಚಿತಂ || ೧೯ ||

ಅಶ್ರಾವ್ಯಂ ಮದಮಿತ್ರಸ್ಯ ಸ್ತವನೇವಂ ಮಮಾಗ್ರತಃ ।
ಬಾಲೇನಾಪಿ ಕೃತಂ ಹ್ಯೇತತ್ತ್ವತ್ಪ್ರಸಾದ್ವಿಜಾಧಮ || ೨೦ ||

---

೧೭. ಪ್ರಹ್ಲಾದನು ಹೇಳಿದನು–ಯಾವನು ಎಲ್ಲಾ ಉಪನಿಷತ್ತುಗಳಲ್ಲಿಯೂ ಹೊಗಳಲ್ಪಡುತ್ತಾನೆಯೋ, ಯಾವನು ಎಲ್ಲಾ ಉಪನಿಷತ್ತುಗಳಿಗೂ ಅರ್ಥವಾಗಿರುವನೋ, ಯಾವನು ಪರಮ ಪುರುಷನೆಂದೂ ಈಶ್ವರನೆಂದೂ ಎನ್ನಿಸಿಕೊಳ್ಳುತ್ತಾನೆಯೋ, ಯಾವನು ಎಲ್ಲದರಲ್ಲಿಯೂ ವ್ಯಾಪಿಸಿರುವನೋ, ಅಂತಹ ವಿಷ್ಣುವನ್ನು ನಮಸ್ಕರಿಸಿ ನಿನಗೆ ಎಲ್ಲವನ್ನೂ ಹೇಳುತ್ತೇನೆ.

೧೮. ರುದ್ರನು ಹೇಳಿದನು–ಮಗನು ಹೇಳಿದ ಈ ವಿಷ್ಣುವಿನ ಸ್ತೋತ್ರವನ್ನು ಕೇಳಿ ದೈತ್ಯರಾಜನಾದ ಹಿರಣ್ಯಕಶಿಪುವು ಬಹು ಕೋಪಗೊಂಡು ಗುರುವನ್ನು ಇದೇನು ? ನನ್ನ ಮಗನಿಗೆ ಏನು ಹೇಳಿಕೊಟ್ಟಿದ್ದೀಯೆ ?

೧೯–೨೦. ಎಲೈ ದುರ್ಬುದ್ಧಿಯಾದ ಉಪಾಧ್ಯಾಯನೇ ! ನನ್ನ ಮಗನಿಗೆ ನೀನು ಈ ರೀತಿಯಾದ ಹರಿಯ ಸ್ತೋತ್ರವನ್ನು ಏತಕ್ಕೆ ಹೇಳಿಕೊಟ್ಟಿದ್ದೀಯೆ ? ಅದು ಉಪಯೋಗವಿಲ್ಲದ್ದು. ಅದು ಅಕಾರ್ಯವು. ನೀನು ಇದನ್ನು ಹೇಳಬಾರದು. ಕೇಳುವುದಕ್ಕಾಗುವುದಿಲ್ಲ. ಇದು ನನ್ನ ಶತ್ರುವಾದವನ ಸ್ತೋತ್ರವು. ಇವನು ಮಗುವಾಗಿದ್ದರೂ ನನ್ನೆದುರಿಗೆ ಅಯೋಗ್ಯವಾದ ಸ್ತೋತ್ರವನ್ನು ಹೇಳಿದರೆ ನನಗೆ ಸಹಿಸಲಾಗುತ್ತಿಲ್ಲವಲ್ಲ ! ಇದನ್ನು ನೀನು ನನ್ನ ಮಗನಿಗೆ ಹೇಳಿಕೊಡಬಹುದೆ ?

ಇತ್ಯುಕ್ತ್ವಾ ಪರಿತೋ ವೀಕ್ಷ್ಯ ದೈತ್ಯರಾಟ್ ಕ್ರೋಧಮೂರ್ಛಿತಃ ।
ಪ್ರಾಹ ದೈತ್ಯಾನಸೌ ವಿಪ್ರೋ ವಧ್ಯತಾಮಿತಿ ರಾಕ್ಷಸಃ ॥ ೨೧ ॥

ಇತ್ಯುಕ್ತಾ ರಾಕ್ಷಸಾಃ ಕ್ರುದ್ಧಾಃ ಕಂಠನೇಷಣರಜ್ಜುಭಿಃ ।
ಬಬಂಧುಸ್ತಂ ದ್ವಿಜವರಂ ಭೃಶಂ ದೈತ್ಯೇಶ್ವರಾಜ್ಞಯಾ ॥ ೨೨ ॥

ಬಧ್ಯಮಾನಂ ಗುರುಂ ದೃಷ್ಟ್ವಾ ಪ್ರಹ್ಲಾದೋ ಬ್ರಾಹ್ಮಣಪ್ರಿಯಃ ।
ಉವಾಚ ಪಿತರಂ ತಾತ ಇದಂ ಯೋ ನೋಕ್ತವಾನ್ ಗುರುಃ ॥ ೨೩ ॥

ಕೃಪಯಾ ದೇವದೇವಸ್ಯ ಶಿಕ್ಷಿತೋಽಸ್ಮಿ ಹರೇಃ ಪ್ರಭೋಃ ।
ನಾನ್ಯೋ ಗುರುರ್ಮೇ ವದತಿ ಸ ಏವ ಪ್ರೇರಕೋ ಹರಿಃ ॥ ೨೪ ॥

ಶ್ರೋತಾ ಮಂತಾ ತಥಾ ವಕ್ತಾ ದ್ರಷ್ಟಾ ಸರ್ವಗ ಈಶ್ವರಃ ।
ಹರಿರೇವಾಕ್ಷಯಃ ಕರ್ತಾ ನಿಯಂತಾ ಸರ್ವದೇಹಿನಾಂ ॥
ತಸ್ಮಾದನಾಗಸೋ ವಿಪ್ರೋ ಮೋಕ್ತವ್ಯೋ ಮೇ ಗುರುಃ ಪ್ರಭೋ ॥೨೫॥

---

೨೧ ಹೀಗೆಂದು ಹೇಳಿ ಆ ದೈತ್ಯೇಶ್ವರನು ಸುತ್ತಲೂ ನೋಡಿ ಕೋಪದಿಂದ ದೈತ್ಯರನ್ನು ಕರೆದು ಈ ಬ್ರಾಹ್ಮಣನನ್ನು ಕೊಂದುಹಾಕಿರಿ. ಎಂದನು.

೨೨. ಆ ರಾಕ್ಷಸರು ಹೇಳಿದ ಒಡನೆಯೇ ಕೋಪಗೊಂಡು ಕತ್ತಿಗೆ ಕಟ್ಟುವ ಹಗ್ಗವೇ ಮುಂತಾದುವನ್ನು ತೆಗೆದುಕೊಂಡು ಹೋಗಿ ಆ ದೈತ್ಯೇಶ್ವರನ ಅಪ್ಪಣೆ ಮೇರೆಗೆ ಆ ಗುರುವಾದ ಬ್ರಾಹ್ಮಣನನ್ನು ಕಟ್ಟಿಹಾಕಿದರು.

೨೩-೨೪. ಆಗ ಆ ಗುರುವಿನಲ್ಲಿ ವಿಶ್ವಾಸವುಳ್ಳ ಪ್ರಹ್ಲಾದನು ಅವನನ್ನು ಕಟ್ಟಿಹಾಕುತ್ತಿರುವುದನ್ನು ನೋಡಿ ತಂದೆಯನ್ನು ಕುರಿತು ಇಂತೆಂದನು. ಎಲೈ ತಂದೆಯೆ! ಇದು ನಿನಗೆ ಯುಕ್ತವಲ್ಲ. ಗುರುವು ಈ ವಿಷಯವನ್ನು ನನಗೆ ಹೇಳಿಕೊಟ್ಟಿಲ್ಲ. ಆ ದೇವದೇವನಾದ ಹರಿಯಿಂದಲೇ ನಾನು ಇದನ್ನು ತಿಳಿದುಕೊಂಡೆ. ಇದರ ವಿಷಯದಲ್ಲಿ ನನಗೆ ಬೇರೆ ಒಬ್ಬ ಗುರುವೂ ಇಲ್ಲ. ಆ ಸ್ವಾಮಿಯಾದ ಹರಿಯೇ ಪ್ರೇರಕನು.

೨೫. ಕೇಳುವವನು, ತಿಳಿಯುವವನು, ಹೇಳುವವನು, ನೋಡುವವನು, ಎಲ್ಲ ಕಡೆಯಲ್ಲಿಯೂ ಇರುವವನು, ಎಲ್ಲವನ್ನೂ ಕೊಡುವವನು,

॥ ರುದ್ರ ಉವಾಚ ॥

ಇತಿ ಪುತ್ರವಚಶ್ಶ್ರುತ್ವಾ ಹಿರಣ್ಯಕಶಿಪುಸ್ತತಃ ।
ತಂ ಬ್ರಾಹ್ಮಣಂ ಮೋಚಯಿತ್ವಾ ಸ್ವಸುತಂ ಪ್ರಾಹ ವಿಸ್ಮಯಾತ್ ॥ ೨೬ ॥

॥ ಹಿರಣ್ಯಕಶಿಪುರುವಾಚ ॥

ಕಿಂ ವತ್ಸ ತ್ವಂ ಭ್ರಮಸ್ಯೇವಂ ಮಿಥ್ಯಾವಾಕ್ಯೈರ್ದ್ವಿಜನ್ಮನಃ ।
ಕೋ ವಿಷ್ಣುಃ ಕಿಂ ತು ತದ್ರೂಪಂ ಕುತ್ರಾಸೌ ಸಂಸ್ಥಿತೋ ಹರಿಃ ॥ ೨೭ ॥

ಅಹಮೇವೇಶ್ವರೋ ಲೋಕೇ ತ್ರೈಲೋಕ್ಯಾಧಿಪತಿರ್ಮತಃ ।
ಮಾಮೇವಾರ್ಚಯ ಗೋವಿಂದಂ ತ್ಯಜ ಶತ್ರುಂ ದುರಾಸದಂ ॥ ೨೮ ॥

ಅಥವಾ ಶಂಕರಂ ದೇವಂ ರುದ್ರಂ ಲೋಕಗುರುಂ ಪ್ರಭುಂ ।
ಅರ್ಚಯಸ್ವ ಸುರಾಧ್ಯಕ್ಷಂ ಸರ್ವೈಶ್ವರ್ಯಪ್ರದಂ ಶಿವಂ ॥ ೨೯ ॥

---

ಆ ಹರಿಯೇನೇ. ಅವನು ನಾಶರಹಿತನು. ಸೃಷ್ಟಿಕರ್ತನು. ಎಲ್ಲಾ ಪ್ರಾಣಿಗಳನ್ನೂ ನಿಯಮಿಸುವವನು. ಆದ್ದರಿಂದ ಈ ನನ್ನ ಗುರುವಾದ ಬ್ರಾಹ್ಮಣನನ್ನು ಕಟ್ಟಿಹಾಕಬೇಡ. ಅವನು ತಪ್ಪಿತಸ್ಥನಲ್ಲ. ಬಿಟ್ಟುಬಿಡು.

೨೬. ರುದ್ರನು ಹೇಳಿದನು–ಮಗನು ಹೀಗೆ ಹೇಳಿದುದನ್ನು ಹಿರಣ್ಯಕಶಿಪುವು ಕೇಳಿ ಅನಂತರ ಆ ಬ್ರಾಹ್ಮಣನನ್ನು ಬಿಡಿಸಿಬಿಟ್ಟು ತನ್ನ ಮಗನನ್ನು ಕುರಿತು ಆಶ್ಚರ್ಯಪಡುತ್ತಾ ಇಂತೆಂದನು.

೨೭. ಎಲೈ ವತ್ಸನೇ ! ಈ ಬ್ರಾಹ್ಮಣರ ಸುಳ್ಳಾದ ಮಾತುಗಳಿಂದ ನೀನೇಕೆ ಈ ರೀತಿಯಾಗಿ ಭ್ರಮೆಗೊಳ್ಳುವೆ ? ವಿಷ್ಣುವೆಂಬುವನಾರು ? ಅವನ ಆಕಾರವೇನು ? ಅವನೆಲ್ಲಿರುವನು ?

೨೮. ಎಲೈ ಪುತ್ರನೆ ! ನಾನೇ ಲೋಕಕ್ಕೆಲ್ಲಾ ಒಡೆಯನು ಮೂರು ಲೋಕಕ್ಕೂ ಅಧಿಪತಿಯು. ನನ್ನನ್ನೇ ಪೂಜೆಮಾಡು. ಆ ಅಯೋಗ್ಯನೂ ಶತ್ರುವೂ ಆದ ಗೋವಿಂದನನ್ನು ಬಿಟ್ಟುಬಿಡು.

೨೯. ಅದಿಲ್ಲದಿದ್ದರೆ ಲೋಕ ಗುರುವಾದ, ಸೌಖ್ಯವನ್ನು ಕೊಡತಕ್ಕ, ಸರ್ವೇಶ್ವರನಾದ, ರುದ್ರನನ್ನು ಪೂಜಿಸು. ಅವನು ದೇವದಾನವರಿಗೆಲ್ಲಾ ಒಡೆಯನು. ಎಲ್ಲಾ ಐಶ್ವರ್ಯಗಳನ್ನೂ ಕೊಡತಕ್ಕವನು.

ತ್ರಿಪುಂಡ್ರಧಾರಣಂ ಕೃತ್ವಾ ಭಸ್ಮನಾ ದೈತ್ಯಪೂಜಿತಂ ।
ಪೂಜಯಿತ್ವಾ ಮಹಾದೇವಂ ಪಾಶುಪತೋಕ್ತಮಾರ್ಗತಃ ॥ ೩೦ ॥

॥ ರುದ್ರ ಉವಾಚ ॥

ಇತಿ ದೈತ್ಯಪತೇರ್ವಾಕ್ಯಂ ಶ್ರುತ್ವೋಚುಸ್ತತ್ಪುರೋಹಿತಾಃ ॥ ೩೧ ॥

॥ ಪುರೋಹಿತಾ ಊಚುಃ ॥

ಏವಮೇವ ಮಹಾಭಾಗ ಕುರುಷ್ವ ವಚನಂ ಪಿತುಃ ।
ತ್ಯಜ ಶತ್ರುಂ ಕೈಟಭಾರಿಂ ಪೂಜಯಸ್ವ ತ್ರಿಲೋಚನಂ ॥ ೩೨ ॥

ರುದ್ರಾತ್ಪರತರೋ ದೇವೋ ನಾಸ್ತಿ ಸರ್ವಪ್ರದೋ ನೃಣಾಂ ।
ಪಿತಾ ತವಾಪಿ ತಸ್ಯೈವ ಪ್ರಸಾದಾದೀಶ್ವರೋಽಭವತ್ ॥ ೩೩ ॥

॥ ರುದ್ರ ಉವಾಚ ॥

ಇತಿ ತೇಷಾಂ ವಚಶ್ಶ್ರುತ್ವಾ ಪ್ರಹ್ಲಾದಃ ಪ್ರಾಹ ವೈಷ್ಣವಃ ॥ ೩೪ ॥

---

೩೦. ಭಸ್ಮದಿಂದ ತ್ರಿಪುಂಡ್ರಧಾರಣವನ್ನು ಮಾಡಿಕೊಂಡು ದೈತ್ಯಪೂಜಿತನಾದ ಆ ಮಹಾದೇವನನ್ನು ಪಾಶುಪತೋಕ್ತ ರೀತಿಯಿಂದ ಪೂಜಿಸು.

೩೧. ರುದ್ರನು ಹೇಳಿದನು–ದೈತ್ಯಪತಿಯಾದ ಹಿರಣ್ಯಕಶಿಪುವು ಹೀಗೆ ಹೇಳಿದುದನ್ನು ಕೇಳಿ ಅವನ ಪುರೋಹಿತರು ಇಂತೆಂದರು.

೩೨. ಪುರೋಹಿತರು ಹೇಳಿದರು–ಎಲೈ ಪ್ರಹ್ಲಾದನೆ! ನಿನ್ನ ತಂದೆಯು ಹೇಳಿದುದು ಸರಿ. ಆವನ ಮಾತಿನಂತೆ ಮಾಡು. ಶತ್ರುವಾದ ಆ ಕೈಟಭಾರಿಯನ್ನು ಭಜಿಸಬೇಡ. ಆ ತ್ರಿಲೋಚನನಾದ ಹರನನ್ನು ಪೂಜಿಸು.

೩೩. ಮನುಷ್ಯರಿಗೆ ಬೇಕಾದುದನ್ನು ಕೊಡುವುದಕ್ಕೆ ರುದ್ರನಿಗಿಂತಲೂ ಬೇರೆಯಾದ ದೇವರೇ ಇಲ್ಲ. ನಿನ್ನ ತಂದೆಯೂ ಕೂಡ ಆ ರುದ್ರನ ಅನುಗ್ರಹದಿಂದಲೇ ಸರ್ವೇಶ್ವರನಾದನು.

೩೪. ರುದ್ರನು ಹೇಳಿದನು-ಅವರ ಈ ಮಾತನ್ನು ಕೇಳಿ ವೈಷ್ಣವನಾದ ಪ್ರಹ್ಲಾದನು ಇಂತೆಂದನು.

॥ ಪ್ರಹ್ಲಾದ ಉವಾಚ ॥

ಅಹೋ ಭಗವತಃ ಶ್ರೈಷ್ಠ್ಯಂ ಯನ್ಮಾಯಾಮೋಹಿತಂ ಜಗತ್ ।
ಅಹೋ ವೇದಾಂತವಿದುಷಃ ಸರ್ವಲೋಕೇಷು ಪೂಜಿತಾಃ ॥ ೩೫ ॥

ಬ್ರಾಹ್ಮಣಾ ಅಪಿ ಚಾಪಲ್ಯಾದ್ವದಂತ್ಯೇವಂ ಮದಾನ್ವಿತಾಃ ।
ನಾರಾಯಣಃ ಪರಂ ಬ್ರಹ್ಮ ತತ್ವಂ ನಾರಾಯಣಃ ಪರಂ ॥ ೩೬ ॥

ನಾರಾಯಣಃ ಪರೋ ಧ್ಯಾತಾ ಧ್ಯಾನಂ ನಾರಾಯಣಃ ಪರಂ ।
ಗತಿರ್ವಿಶ್ವಸ್ಯ ಜಗತಃ ಶಾಶ್ವತಃ ಸ ಶಿವೋಽಚ್ಯುತಃ ॥ ೩೭ ॥

ಧಾತಾ ವಿಧಾತಾ ಜಗತೋ ವಾಸುದೇವಃ ಸನಾತನಃ ।
ವಿಶ್ವನೋವೇದಂ ಪುರುಷಃ ತದ್ವಿಶ್ವಮುಪಜೀವತಿ ॥ ೩೮ ॥

---

೩೫. ಪ್ರಹ್ಲಾದನು ಹೇಳಿದನು–ಅಹೋ ಆಶ್ಚರ್ಯವು. ಆ ಸ್ವಾಮಿಯ ಮಾಯೆಯಿಂದ ಪ್ರಪಂಚವೆಲ್ಲವೂ ಮೋಹಗೊಂಡಿರುವುದಲ್ಲ! ವೇದಾಂತವನ್ನು ಬಲ್ಲ ಸರ್ವರಿಂದಲೂ ಪೂಜಿತರಾದ ಈ ವಿದ್ವಾಂಸರೂ ಕೂಡ ಈ ರೀತಿಯಾಗಿ ಭ್ರಮಿಸಿ ಹೇಳುತ್ತಿರುವರಲ್ಲ!

೩೬–೩೭. ಈ ಬ್ರಾಹ್ಮಣರೂ ಕೂಡ ಚಪಲದಿಂದ ಮದಿಸಿ ಈ ರೀತಿಯಾಗಿ ಹೇಳುತ್ತಿರುವರಲ್ಲ! ನಾರಾಯಣನೇ ಪರಬ್ರಹ್ಮನು. ನಾರಾಯಣನೇ ಉತ್ತಮತತ್ವವು. ನಾರಾಯಣನೇ ಧ್ಯಾನಿಸುವವನು. ನಾರಾಯಣನೇ ಧ್ಯಾನಕ್ಕೆ ವಿಷಯನು. ಪ್ರಪಂಚವೆಲ್ಲಕ್ಕೂ ಕೂಡ ಅವನೇ ಗತಿಯು. ಅವನೇ ಶಾಶ್ವತನು. ಅವನೇ ನಾಶವಿಲ್ಲದವನು.

೩೮. ಜಗತ್ತನ್ನು ಸೃಷ್ಟಿಸುವವನೂ ಕಾಪಾಡುವವನೂ ಆ ಸ್ವಾಮಿಯೇ. ಅವನು ಸನಾತನನು. ಪ್ರಪಂಚವೆಲ್ಲವೂ ಅವನ ರೂಪವಾದುದು. ಈ ಪ್ರಪಂಚವನ್ನೂ ಅವನೇ ರಕ್ಷಿಸುತ್ತಾನೆ. ಈ ಪ್ರಪಂಚವೆಲ್ಲವೂ ಅವನಿಂದಲೇ ಬದುಕಿವೆ.

ಹಿರಣ್ಮಯವಪುರ್ನಿತ್ಯಃ ಪುಂಡರೀಕನಿಭೇಕ್ಷಣಃ ।
ಶ್ರೀಭೂಲೀಲಾಪತಿಃ ಸೌಮ್ಯೋ ನಿರ್ಮಲಃ ಶುಭವಿಗ್ರಹಃ ॥ ೩೯ ॥

ತೇನೈವ ಸೃಷ್ಟೌ ಬ್ರಹ್ಮೇಶೌ ಸರ್ವದೇವೋತ್ತಮಾವುಭೌ ।
ತಸ್ಯೈವಾಜ್ಞಾಂ ಪುರಸ್ಕೃತ್ಯ ವರ್ತೇತೇ ಬ್ರಹ್ಮಶಂಕರೌ ॥ ೪೦ ॥

ಭೀಷಾಸ್ಮಾದ್ವಾತಿ ಪವನೋ ಭೀಷೋದೇತಿ ದಿವಾಕರಃ ।
ಭೀಷಾಸ್ಮಾದಗ್ನಿಶ್ಚೇಂದ್ರಶ್ಚ ಮೃತ್ಯುರ್ಧಾವತಿ ಪಂಚಮಃ ॥ ೪೧ ॥

ಆಸೀದೇಕೋ ಹರಿರ್ದೇವೋ ನಿತ್ಯೋ ನಾರಾಯಣಃ ಪರಃ ।
ನ ಬ್ರಹ್ಮಾ ನ ಚ ಈಶಾನೋ ನ ಚ ಚಂದ್ರದಿವಾಕರೌ ॥ ೪೨ ॥

ನ ವಾ ದ್ಯಾವಾಪೃಥಿವ್ಯೌ ಚ ನಕ್ಷತ್ರಾಣಿ ದಿವೌಕಸಃ ।
ತಸ್ಯ ವಿಷ್ಣೋಃ ಪರಂ ಧಾಮ ಸದಾ ಪಶ್ಯಂತಿ ಸೂರಯಃ ॥ ೪೩ ॥

---

೩೯. ಸುವರ್ಣವರ್ಣವಾದ ದೇಹವುಳ್ಳವನು. ನಿತ್ಯನು. ಪುಂಡರೀಕದಂತೆ ಕಣ್ಣುಳ್ಳವನು. ಶ್ರೀದೇವಿ ಭೂದೇವಿ ಲೀಲಾದೇವಿಯರಿಂದ ಕೂಡಿರುವನು. ಸೌಮ್ಯನು. ನಿರ್ಮಲನು. ಮಂಗಳಕರವಾದ ದೇಹವುಳ್ಳವನು.

೪೦. ಎಲ್ಲಾ ದೇವತೆಗಳಲ್ಲಿಯೂ ಉತ್ತಮರಾದ ಬ್ರಹ್ಮಶಿವರು ಅವನಿಂದಲೇ ನಿರ್ಮಿತರಾದರು. ಅವರಿಬ್ಬರೂ ಕೂಡ ಅವನ ಆಜ್ಞೆಯನ್ನೇ ಶಿರಸಾ ವಹಿಸುತ್ತಿರುವರು.

೪೧. ಗಾಳಿಯು ಈತನಿಗೆ ಹೆದರಿಕೊಂಡೇ ಬೀಸುವನು. ಸೂರ್ಯನು ಆತನಿಗೆ ಹೆದರಿಕೊಂಡೇ ಉದಯಿಸುವನು. ಅಗ್ನಿ ಇಂದ್ರರೂ ಆತನಿಗೆ ಹೆದರಿಕೊಂಡೇ ಇರುವರು. ಎಲ್ಲರಿಗೂ ನಾಶಕನಾದ ಮೃತ್ಯುವೂ ಕೂಡ ಈವನಿಗೆ ಹೆದರಿಯೇ ಓಡಿಯಾಡುತ್ತಿರುವನು. ಜನರನ್ನು ಹಿಡಿಯುವನು.

೪೨-೪೩. ಮೊದಲಿನಿಂದಿರುವವನು ಆ ಹರಿಯೊಬ್ಬನೇ ! ಅವನು ನಿತ್ಯನು. ಪರನು. ಬ್ರಹ್ಮ, ಈಶ್ವರ, ಚಂದ್ರ, ಸೂರ್ಯ, ಆಕಾಶ, ಭೂಮಿ, ನಕ್ಷತ್ರ, ದೇವತೆಗಳು, ಯಾರೂ ಕೂಡ ಇವನಿಗಿಂತಲೂ ಮೊದಲು ಇರಲೇ ಇಲ್ಲ. ಮತ್ತು ಆ ಸ್ವಾಮಿಯ ಜಾಗವನ್ನೂ ತಿಳಿಯಲಾರರು. ಆ ಸ್ವಾಮಿಯ ಜಾಗವನ್ನು ಯಾವಾಗಲೂ ವಿದ್ವಾಂಸರು ಮಾತ್ರ ತಿಳಿಯಬಲ್ಲರು.

ಏವಂ ಸರ್ವೋಪನಿಷದಾಮರ್ಥಂ ಹಿತ್ವಾ ದ್ವಿಜೋತ್ತಮಾಃ |
ರಾಗಾಲ್ಲೋಭಾದ್ಭಯಾದ್ವಾಪಿ ಅನ್ಯತ್ರ ಮತಿಮಾನಸಾಃ ॥ ೪೪ ॥

ತಂ ಸರ್ವರಕ್ಷಕಂ ದೇವಂ ತ್ಯಕ್ತ್ವಾ ಸರ್ವೇಶ್ವರಂ ಹರಿಂ ।
ಕಥಂ ಪಾಷಂಡಮಾಶ್ರಿತ್ಯ ಪೂಜಯಾಮಿ ಚ ಶಂಕರಂ ॥ ೪೫ ॥

ಲಕ್ಷ್ಮೀಪತಿಂ ದೇವದೇವಮನಂತಂ ಪುರುಷೋತ್ತಮಂ |
ಇಂದೀವರದಳಶ್ಯಾಮಂ ಪದ್ಮಪತ್ರಾಯತೇಕ್ಷಣಂ ॥ ೪೬ ॥

ಶ್ರೀವತ್ಸ ಲಕ್ಷಿತೋರಸ್ಕಂ ಸರ್ವಾಭರಣಭೂಷಿತಂ ।
ಸದಾಕುಮಾರಂ ಸರ್ವೇಷಾಂ ನಿತ್ಯಾನಂದಸುಖಪ್ರದಂ ॥ ೪೭ ॥

ಕೃಷ್ಣಂ ಧ್ಯಾಯೇನ್ಮಹಾತ್ಮಾನೋ ಯೋಗಿನಃ ಸನಕಾದಯಃ |
ಯಮರ್ಚಯಂತಿ ಬ್ರಹ್ಮೇಶಶಕ್ರಾದ್ಯಾ ದೇವತಾಗಣಾಃ ॥ ೪೮ ॥

---

೪೪. ಈ ರೀತಿಯಾಗಿ ಎಲ್ಲಾ ಉಪನಿಷತ್ತುಗಳೂ ಹೇಳುತ್ತವೆ. ಇದೇ ಅವೆಲ್ಲಕ್ಕೂ ಅರ್ಥವು. ಇದನ್ನು ಬಿಟ್ಟು ಬ್ರಾಹ್ಮಣರು ರಾಗದಿಂದಲೋ ಲೋಭದಿಂದಲೋ ಭಯದಿಂದಲೋ ಬೇರೆಯವನಲ್ಲಿ ಮನಸ್ಸನ್ನಿಟ್ಟು ಅವನನ್ನೇ ದೊಡ್ಡವನೆಂದು ಹೊಗಳುತ್ತಾರೆ.

೪೫. ಎಲ್ಲರನ್ನೂ ರಕ್ಷಿಸುವ ಸರ್ವೇಶ್ವರನಾದ ಆ ಹರಿಯನ್ನು ಬಿಟ್ಟು ಪಾಷಂಡಿತನವನ್ನು ಆಶ್ರಯಿಸಿ ಆ ಶಿವನನ್ನು ಹೇಗೆ ತಾನೇ ನಾನು ಪೂಜಿಸಲಿ?

೪೬–೫೧. ಲಕ್ಷ್ಮೀಪತಿಯೂ, ದೇವನೂ, ಅನಂತನೂ, ಪುರುಷೋತ್ತಮನೂ, ಇಂದೀವರದಂತೆ ಶ್ಯಾಮಳವರ್ಣನೂ, ಪದ್ಮದಂತೆ ಅಗಲವಾದ ಕಣ್ಣುಳ್ಳವನೂ, ಶ್ರೀವತ್ಸಚಿಹ್ನೆಯಿಂದ ಕೂಡಿದ ಎದೆಯುಳ್ಳವನೂ ಎಲ್ಲಾ ಆಭರಣಗಳನ್ನೂ ತೊಟ್ಟಿರುವವನೂ, ಯಾವಾಗಲೂ ಕುಮಾರನೂ, ಎಲ್ಲರಿಗೂ ನಿತ್ಯಸುಖಗಳನ್ನು ಕೊಡುವವನೂ, ಆದ ಆ ಕೃಷ್ಣನನ್ನು ಮಹಾತ್ಮರಾದ ಯೋಗಿಗಳೂ ಧ್ಯಾನ ಮಾಡುತ್ತಾರೆ. ರುದ್ರನೇ ಆದಿಯಾಗಿ ಇಂದ್ರ ಮೊದಲಾದ ದೇವತೆಗಳು

ಯಸ್ಯ ಪತ್ನ್ಯಾಃ ಕಟಾಕ್ಷಾರ್ಧದೃಷ್ಟ್ಯಾ ಹೃಷ್ಟಾ ದಿವೌಕಸಃ ।
ಬ್ರಹ್ಮೇಂದ್ರರುದ್ರವರುಣಯಮಸೋಮಧನಾಧಿಪಾಃ ॥ ೪೯ ॥

ಯನ್ನಾಮಸ್ಮರಣಾದೇವ ಪಾಪಿನಾಮಪಿ ಸತ್ವರಂ ।
ಮುಕ್ತಿರ್ಭವತಿ ಜಂತೂನಾಂ ಬ್ರಹ್ಮಾದೀನಾಂ ಸುದುರ್ಲಭಾ ॥ ೫೦ ॥

ಸ ಏವ ರಕ್ಷಕಃ ಶ್ರೀಶೋ ದೇವಾನಾಮಪಿ ಸರ್ವದಾ ।
ತಮೇವ ಪೂಜಯಿಷ್ಯಾಮಿ ಲಕ್ಷ್ಮ್ಯಾ ಸಂಯುತಮೀಶ್ವರಂ ॥
ಪ್ರಾಪ್ಸ್ಯಾಮಿ ಸುಸುಖೇನೈವ ತದ್ವಿಷ್ಣೋಃ ಪರಮಂ ಪದಂ ॥ ೫೧ ॥

॥ ರುದ್ರ ಉವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ಹಿರಣ್ಯಕಶಿಪುಸ್ತತಃ ।
ಕ್ರೋಧೇನ ಮಹತಾವಿಷ್ಟೋ ಜಜ್ವಾಲಾಗ್ನಿರಿವಾಪರಃ ॥
ಪರಿತೋ ವೀಕ್ಷ್ಯ ದೈತೇಯಾನಿತ್ಯಾಹ ಕ್ರೋಧಮೂರ್ಛಿತಃ ॥ ೫೨ ॥

---

ಯಾವನನ್ನು ಪುಜಿಸುತ್ತಾರೆಯೋ ಯಾವನ ಹೆಂಡತಿಯು ಅಲ್ಪವಾದ ಕಟಾಕ್ಷಕ್ಕೆ ಪಾತ್ರರಾಗುವುದರಿಂದಲೇ ದೇವತೆಗಳೂ ಬ್ರಹ್ಮ, ರುದ್ರ, ವರುಣ, ಯಮ, ಸೋಮ, ಕುಬೇರರೂ, ಸಂತೋಷಗೊಂಡವರಾಗಿ ಈ ಉತ್ತಮ ಸ್ಥಿತಿಯನ್ನು ಹೊಂದಿರುವರೋ ಯಾವನ ನಾಮಸ್ಮರಣೆ ಮಾಡಿದೊಡನೆಯೇ ಪಾಪಿಗಳ ಪಾಪವೆಲ್ಲವೂ ಕೂಡ ಜಾಗ್ರತೆಯಾಗಿ ಹೋಗಿ ಬ್ರಹ್ಮಾದಿಗಳಿಗೂ ಕೂಡ ಮುಕ್ತಿಯು ಸಿಕ್ಕುತ್ತದೆಯೋ ಆ ಶ್ರೀಶನಾದ ವಿಷ್ಣುವೇ ದೇವತೆಗಳಿಗೆ ಯಾವಾಗಲೂ ರಕ್ಷಕನೆಂದು ತಿಳಿ. ಲಕ್ಷ್ಮಿಯೊಡಗೂಡಿದ ಆ ಸ್ವಾಮಿಯನ್ನೇ ಯಾವಾಗಲೂ ಪೂಜಿಸುತ್ತೇನೆ. ಸುಖವಾಗಿಯೇ ವಿಷ್ಣುವಿನ ಪರಮಪದವನ್ನು ಹೊಂದಿಯೂ ಹೋದುತ್ತೇನೆ.

೫೨ ರುದ್ರನು ಹೇಳಿದನು—ಆ ಪ್ರಹ್ಲಾದನ ಮಾತನ್ನು ಕೇಳಿ ಆ ಹಿರಣ್ಯಕಶಿಪುವು ಬಹು ಕೋಪವುಳ್ಳವನಾಗಿ ಮತ್ತೊಬ್ಬ ಅಗ್ನಿಯೋ ಎಂಬಂತೆ ಜ್ವಲಿಸಿದನು ಒಡನೆಯೇ ಸುತ್ತಲೂ ನೋಡಿ ಕೋಪದಿಂದ ಆ ದೈತ್ಯರನ್ನು ಕೂಗಿ ಇಂತೆಂದನು.

॥ ಹಿರಣ್ಯಕಶಿಪುರುವಾಚ ॥

ಭೀಷಣೈಃ ಶಸ್ತ್ರಸಂಘಾತೈಃ ಪ್ರಹ್ಲಾದಂ ಪಾಪಕಾರಿಣಂ ।
ಮಮಾಯಜ್ಞಯಾ ಘಾತಯಧ್ವಂ ಶತ್ರುಪೂಜನತತ್ಪರಂ ॥ ೫೩ ॥

ರಕ್ಷಿತಾ ಹರಿರೇವೇತಿ ವಕ್ಷ್ಯತೇ ತೇನ ವೈ ಬಲಾತ್ ।
ಅದ್ಯೈವ ಸಫಲಂ ತಸ್ಯ ಪಶ್ಯೇಯಂ ಹರಿರಕ್ಷಣಂ ॥ ೫೪ ॥

॥ ರುದ್ರ ಉವಾಚ ॥

ತತೋದ್ಯತಾಸ್ತ್ರಾ ದೈತೇಯಾ ಹಂತುಂ ದೈತ್ಯೇಶ್ವರಾತ್ಮಜಂ ।
ಪರಿವಾರ್ಯ ಮಹಾತ್ಮಾನಂ ತಸ್ಥುರ್ದೈತ್ಯೇಶ್ವರಾಜ್ಞಯಾ ॥ ೫೫ ॥

ಪ್ರಹ್ಲಾದೋ ಪಿ ತಥಾ ವಿಷ್ಣುಂ ಧ್ಯಾತ್ವಾ ಹೃದಯಪಂಕಜೇ ।
ಜಪನ್ನಷ್ಟಾಕ್ಷರಂ ಮಂತ್ರಂ ತಸ್ಥೌ ಗಿರಿರಿವಾಪರಃ ॥ ೫೬ ॥

---

೫೩. ಹಿರಣ್ಯಕಶಿಪುವು ಹೇಳಿದನು—ಈ ಪಾಪಕಾರಿಯಾದ ಪ್ರಹ್ಲಾದನನ್ನು ಭಯಂಕರವಾದ ಶಸ್ತ್ರಗಳನ್ನು ತಂದು ನನ್ನ ಅಪ್ಪಣೆಯಂತೆ ಕೊಂದು ಹಾಕಿರಿ. ಇವನು ಶತ್ರುವನ್ನೇ ಯಾವಾಗಲೂ ಪೂಜಿಸುತ್ತಾನೆ.

೫೪. ಏನುಮಾಡಿದರೂ ಕೂಡ ಹರಿಯೇ ಎಲ್ಲರಿಗೂ ರಕ್ಷಕನೆಂದು ಹೇಳುತ್ತಿದ್ದಾನೆ. ಅವನನ್ನು ಹರಿಯು ರಕ್ಷಿಸುವುದು ಈಗ ಸಫಲವಾಗುವುದೇ ನೋಡುತ್ತೇನೆ. ಕೊಂದುಹಾಕಿರಿ.

೫೫. ರುದ್ರನು ಹೇಳಿದನು—ಒಡನೆಯೇ ಆ ದೈತ್ಯರು ಅಸ್ತ್ರಗಳನ್ನು ಎತ್ತಿ ಹಿಡಿದುಕೊಂಡು ಅವನನ್ನು ಕೊಲ್ಲವುದಕ್ಕೆ ಸಿದ್ಧರಾದರು. ಮತ್ತು ಆ ದೈತ್ಯೇಶ್ವರನ ಅಪ್ಪಣೆಯಂತೆ ಅವನನ್ನು ಕೊಲ್ಲಲು ಸುತ್ತಲೂ ನಿಂತುಕೊಂಡರು.

೫೬. ಪ್ರಹ್ಲಾದನೂ ಕೂಡ ಮನಸ್ಸಿನಲ್ಲಿ ವಿಷ್ಣುವಿನ ಧ್ಯಾನವನ್ನು ಧ್ಯಾನ ಮಾಡುತ್ತಾ ಅಷ್ಟಾಕ್ಷರಿಯ ಮಂತ್ರವನ್ನು ಜಪಿಸುತ್ತ ಬೆಟ್ಟದಂತೆ ಅಲುಗದೆ ನಿಂತನು.

ತಂ ಜಘ್ನುಃ ಪರಿತೋ ವೀರಾಃ ಶೂಲಶೋಮರಶಕ್ತಿಭಿಃ ।
ಪ್ರಹ್ಲಾದಸ್ಯ ವಪುಸ್ತತ್ರ ಹರಿಸಂಸ್ಮರಣಾಜ್ಜ್ವಭೇ ॥ ೫೭ ॥

ವಿಷ್ಣೋಃ ಪ್ರಭಾವಾದ್ದುರ್ಧರ್ಷಂ ವಜ್ರಭೂತಮಭೂತ್ ಭೃಶಂ ।
ಅಥ ಸಂಪ್ರಾಪ್ಯ ತದ್ಗಾತ್ರಂ ಮಹಾಸ್ತ್ರಾಣಿ ಸುರದ್ವಿಷಾಂ ॥ ೫೮ ॥

ಛಿನ್ನಾನಿ ಚ ಕ್ಷಿತೌ ಪೇತುಃ ನೀಲೋತ್ಪಲದಳಾನಿ ಚ ।
ಅಲ್ಪಮಪ್ಯಸ್ಯ ತದ್ಗಾತ್ರಂ ಭೇತ್ತುಂ ದೈತ್ಯಾ ನ ಚ ಕ್ಷಮಾಃ ॥ ೫೯ ॥

ವಿಸ್ಮಿತಾವಾಙ್ಮುಖಾಸ್ತಸ್ಥುಃ ದೈತ್ಯರಾಜ್ಞೋಽಂತಿಕೇ ಭಟಾಃ ।
ತಾದೃಗ್ವಿಧಂ ಮಹಾತ್ಮಾನಂ ದೃಷ್ಟ್ವಾ ಪುತ್ರಂ ತಮವ್ರಣಂ ॥ ೬೦ ॥

ವಿಸ್ಮಯಂ ಪರಮಂ ಗತ್ವಾ ದೈತ್ಯರಾಟ್ ಕ್ರೋಧಮೂರ್ಛಿತಃ ।
ಆದಿದೇಶ ತತಸ್ಸರ್ಪಾನ್ ದಂದಶೂಕಾನ್ ಮಹಾವಿಷಾನ್ ॥ ೬೧ ॥

---

೫೭. ವೀರರೆಲ್ಲರೂ ಸುತ್ತಲೂ ನಿಂತುಕೊಂಡು ಪರಿಘಶಕ್ತಿ ಮುಂತಾದುವು ಗಳಿಂದ ಹೊಡೆದರು. ಪ್ರಹ್ಲಾದನ ದೇಹವಾದರೋ ಹರಿಯ ಸ್ಮರಣೆಯಿಂದಲೂ ಹರಿಯ ಪ್ರಭಾವದಿಂದಲೂ ವಜ್ರದಂತೆ ಗಟ್ಟಿಯಾಯಿತು.

೫೮–೫೯. ಆ ದೈತ್ಯರ ಮಹಾಸ್ತ್ರಗಳು ಆ ಪ್ರಹ್ಲಾದನ ಮೈಮೇಲೆ ಬಿದ್ದು ಚೂರುಚೂರಾಗಿ ಕನ್ನೈದಿಲೆಯ ದಳಗಳಂತೆ ನೆಲದಮೇಲೆ ಬಿದ್ದುವು. ಅವನ ದೇಹದಲ್ಲಿ ಒಂದು ಚೂರು ಗಾಯವನ್ನೂ ಕೂಡ ಮಾಡಲು ಅವರಿಗೆ ಸಾಧ್ಯ ವಾಗಲೇ ಇಲ್ಲ.

೬೦. ಇದನ್ನು ನೋಡಿ ಆ ಭಟರೆಲ್ಲರೂ ಹಿರಣ್ಯಕಶಿಪುವಿನ ಬಳಿಗೆ ಹೋಗಿ ಆಶ್ಚರ್ಯದಿಂದ ಮುಖವನ್ನು ತಗ್ಗಿಸಿಕೊಂಡು ನಿಂತರು. ಆ ದೈತ್ಯರಾಜನೂ ಕೂಡ ಆ ರೀತಿಯಾಗಿ ಮಹಿಮನಾದ ಆ ಮಗನು ಎಷ್ಟು ಹೊಡೆದರೂ ಗಾಯ ವನ್ನು ಹೊಂದದೇ ಇರುವುದನ್ನು ನೋಡಿದನು.

೬೧. ಆಗ ಹಿರಣ್ಯಕಶಿಪುವು ಬಹುವಾಗಿ ಆಶ್ಚರ್ಯವನ್ನೂ ಕೋಪವನ್ನೂ ಹೊಂದಿ ಮಹಾವಿಷವುಳ್ಳ ವಾಸುಕಿಯೇ ಮುಂತಾದ ಸರ್ಪಗಳು ಇವನನ್ನು ಕಚ್ಚಿ ತಿಂದುಬಿಡಿರೆಂದು ಅಪ್ಪಣೆಮಾಡಿದನು

ವಾಸುಕಿಪ್ರಭೃತೀನ್ ಭೀಮಾನ್ ಖಾದಯಧ್ವಮಿತಿ ಬ್ರುವನ್ ।
ಆದಿಷ್ಟಾಸ್ತೇನ ರಾಜ್ಞಾಥ ತೇ ನಾಗಾಸ್ಸುಮಹಾಬಲಾಃ　　　　|| ೬೨ ||

ಜ್ವಲಿತಾಸ್ಯಾ ಮಹಾಭೀಮಾಸ್ತಂ ಚಖಾದುರ್ಮಹಾಬಲಂ ।
ಗರುಡಧ್ವಜಭಕ್ತಂ ತಂ ವಿದಶ್ಯ ಗರಳಾಯುಧಾಃ　　　　|| ೬೩ ||

ನಿರ್ವಿಷಾಶ್ಛಿನ್ನದಶನಾ ಬಭೂವುರನಿಲಾಶನಾಃ ।
ವೈನತೇಯಸಹಸ್ರೇಣ ಛಿನ್ನಗಾತ್ರಾಸ್ಸುವಿಹ್ವಲಾಃ　　　　|| ೬೪ ||

ಪ್ರದುದ್ರುವುರ್ದಿಶಃ ಸರ್ವಾ ವಮಂತೋ ರುಧಿರಂ ಭೃಶಂ ।
ತಾದೃಗ್ವಿಧಾನ್ ಮಹಾಸರ್ಪಾನ್ ದೃಷ್ಟ್ವಾ ದೈತ್ಯಪತಿಸ್ತದಾ　　　　|| ೬೫ ||

ಆದಿದೇಶ ತತಃ ಕ್ರುದ್ಧೋ ದಿಗ್ಗಜಾನ್ ಸುಮದಾನ್ವಿತಾನ್ ।
ನೋದಿತಾಸ್ತೇನ ರಾಜ್ಞಾಥ ದಿಗ್ಗಜಾಶ್ಚ ಮದೋದ್ಧತಾಃ　　　　|| ೬೬ ||

---

೬೨-೬೪. ಆ ದೈತ್ಯೇಂದ್ರನು ಅಪ್ಪಣೆಮಾಡಿದೊಡನೆಯೇ ಬಹುಬಲಿಷ್ಠವಾದ ಆ ಸರ್ಪಗಳು ಉಗ್ರವಾಗಿ ಬಂದು ಅವನನ್ನು ಕಚ್ಚಿ ತಿನ್ನಲು ಮೊದಲಿಟ್ಟವು. ಗರುಡಧ್ವಜಭಕ್ತನಾದ ಅವನನ್ನು ಕಚ್ಚಿದೊಡನೆಯೇ ಅವು ತಮ್ಮ ವಿಷವನ್ನೂ ಕಳೆದುಕೊಂಡುವು. ಮತ್ತು ಒಡನೆಯೇ ಸಾವಿರಾರು ಗರುಡಗಳು ಬಂದು ಆ ಹಾವುಗಳನ್ನು ಕಚ್ಚಲು ಅವು ರಕ್ತವನ್ನು ಕಾರುತ್ತ ಸಿಕ್ಕಿದ ಕಡೆಗೆ ಓಡಿದುವು.

೬೫. ಆ ರೀತಿಯಾಗಿ ಮಹಾಸರ್ಪಗಳೂ ಓಡಿಹೋದುದನ್ನು ನೋಡಿ ಆ ಹಿರಣ್ಯಕಶಿಪುವು ಕೋಪಗೊಂಡು ಮದದಿಂದ ಕೂಡಿದ ದಿಗ್ಗಜಗಳಿಗೆ ಅಪ್ಪಣೆ ಮಾಡಿದನು.

೬೬. ಆ ರಾಜನಿಂದ ಪ್ರೇರಿತವಾದ ಆ ಮದ್ದಾನೆಗಳು ಅವನನ್ನು ಸುತ್ತಿಕೊಂಡು ತಮ್ಮ ದಂತಗಳಿಂದ ಬಹುವಾಗಿ ಹೊಡೆಯಲು ಮೊದಲಿಟ್ಟವು.

ಪರಿವಾರ್ಯಾಥ ತಂ ಜಘ್ನುರ್ದಂತೈಃ ಪೃಥುತರೈರ್ಭೃಶಂ ।
ಅಥ ದಿಗ್ಗಜದಂತಾಶ್ಚ ಛಿನ್ನಮೂಲಾಪತನ್ ಭುವಿ ॥ ೬೭ ॥

ದಂತೈರ್ವಿನಾಕೃತಾ ನಾಗಾ ಭೃಶಾರ್ತಾ ವಿಪ್ರದುದ್ರುವುಃ ।
ತಾನ್ ದೃಷ್ಟ್ವಾಥ ಮಹಾನಾಗಾನ್ ದೈತ್ಯೇಂದ್ರಃ ಕುಪಿತೋ ಬಲೀ ॥ ೬೮ ॥

ಪ್ರಜ್ವಾಲ್ಯ ಚ ಮಹಾವಹ್ನೌ ಚಿಕ್ಷೇಪ ಸುತಮಾತ್ಮನಃ ।
ಜಲಶಾಯಿಪ್ರಿಯಂ ದೃಷ್ಟ್ವಾ ಪ್ರಹ್ಲಾದಂ ಹವ್ಯವಾಹನಃ ॥ ೬೯ ॥

ನ ದದಾಹ ಚ ತಂ ಧೀರಂ ಪ್ರಶಾಂತೋ ಹ್ಯಭವಚ್ಛಿಖೀ ।
ಅದಹ್ಯಮಾನಂ ತಂ ಬಾಲಂ ದೃಷ್ಟ್ವಾ ರಾಜಾ ಸುವಿಸ್ಮಿತಃ ॥ ೭೦ ॥

ಪ್ರಾದಾತ್ತಸ್ಮೈ ವಿಷಂ ಘೋರಂ ಸರ್ವಭೂತಹರಂ ತದಾ ।
ತಸ್ಯ ವಿಷ್ಣೋಃ ಪ್ರಭಾವಾಚ್ಚ ವಿಷಮಪ್ಯಮೃತಂ ಭವೇತ್ ॥ ೭೧ ॥

---

೬೭-೬೮. ಅನಂತರ ಆ ದಿಗ್ಗಜಗಳ ದಂತಗಳು ಮುರಿದುಬಿದ್ದುವು. ದಂತಗಳು ಬಿದ್ದುಹೋಗುತ್ತಲೂ ಆ ದಿಗ್ಗಜಗಳು ದುಃಖಪಡುತ್ತ ಓಡಿಹೋದುವು. ಆ ಮದ್ದಾನೆಗಳು ಹಾಗೆ ಓಡುತ್ತಿರುವುದನ್ನು ನೋಡಿ ಈ ಹಿರಣ್ಯಕಶಿಪುವಿಗೆ ಬಹು ಕೋಪ ಬಂದಿತು.

೬೯-೭೦. ಆಗ ಆ ದೈತ್ಯೇಶನು ಬೆಂಕಿಯನ್ನು ಬಹುವಾಗಿ ಉರಿಯು ವಂತೆ ಮಾಡಿ ಅದರಲ್ಲಿ ಎಸೆದನು. ಆ ಬೆಂಕಿಯು ವಿಷ್ಣುಭಕ್ತನಾದ ಇವನನ್ನು ನೋಡಿದ ಕೂಡಲೇ ಸುಡಲಾರದೆ ಶಾಂತವಾಯಿತು. ಆ ಬೆಂಕಿಯೂ ಸುಡ ದಿರಲು ಅದನ್ನು ನೋಡಿ ಬಹುವಾಗಿ ಆ ದೈತ್ಯನು ಆಶ್ಚರ್ಯಗೊಂಡನು.

೭೧. ಆಗ ಸರ್ವ ಪ್ರಾಣಿಗಳನ್ನೂ ನಾಶಮಾಡುವ ವಿಷವನ್ನು ತಂದು ಮಗನಿಗೆ ಕೊಟ್ಟನು. ಅದೂ ಕೂಡ ಆ ವಿಷ್ಣುವಿನ ಪ್ರಭಾವದಿಂದ ಅಮೃತವಾಗಿ ಪರಿಣಮಿಸಿತು. ಅದನ್ನೂ ಆ ಪ್ರಹ್ಲಾದನು ಆ ಸ್ವಾಮಿಗೆ ಅರ್ಪಣೆಮಾಡಿ ಕುಡಿದನು. ಅದು ಅಮೃತವೇ ಆಗಿ ಪರಿಣಮಿಸಿತು.

ಅರ್ಪಣಾತ್ತಸ್ಯ ದೇವಸ್ಯ ತದೇವಾಮೃತಮಶ್ನುತೇ ।
ಏವಮಾದ್ಯೈರ್ವಧೋಪಾಯೈಃ ಘೋರರೂಪೈಸ್ಸುದಾರುಣೈಃ ॥ ೭೨ ॥

ನೋದಯಿತ್ವಾತ್ಮಜಂ ರಾಜಾ ತಸ್ಯಾವಧ್ಯತ್ವಮೀಕ್ಷ್ಯ ಚ ।
ತತಃ ಸಮ್ರಾಟ್ ಸುತಂ ಪ್ರಾಹ ದೈತ್ಯರಾಟ್ ವಿಸ್ಮಯಾಕುಲಃ ॥ ೭೩ ॥

॥ ಹಿರಣ್ಯಕಶಿಪುರುವಾಚ ॥

ತ್ವಯಾ ವಿಷ್ಣೋಃ ಪರತ್ವಂ ಚ ಸಮ್ಯಗುಕ್ತಂ ಮಮಾಗ್ರತಃ ।
ವ್ಯಾಪಿತ್ವಾತ್ಸರ್ವಭೂತಾನಾಂ ವಿಷ್ಣುರಿತ್ಯಭಿಧೀಯತೇ ॥ ೭೪ ॥

ಯೋಽಸೌ ಸರ್ವಗತೋ ದೇವಃ ಸ ಏವ ಪರಮೇಶ್ವರಃ ।
ತಸ್ಯ ಸರ್ವಗತತ್ವಂ ವೈ ಪ್ರತ್ಯಕ್ಷಂ ದರ್ಶಯಸ್ವ ಮೇ ॥ ೭೫ ॥

ಐಶ್ವರ್ಯಶಕ್ತಿತೇಜಾಂಸಿ ಜ್ಞಾನವೀರ್ಯಬಲಾನಿ ಚ ।
ಪಶ್ಯೇಯಂ ತಸ್ಯ ಪರಮಂ ರೂಪಂ ಗುಣವಿಭೂತಯಃ ॥ ೭೬ ॥

---

೭೨-೭೩. ಈ ರೀತಿಯಾಗಿ ಬಹು ಘೋರವಾದ ಉಪಾಯಗಳಿಂದಲೂ ಕೂಡ ಅವನನ್ನು ನೋಯಿಸಲು ಅವುಗಳಿಂದ ಅವನು ಸಾಯದಿದ್ದುದರಿಂದ ಇವನು ಅವಧ್ಯನೆಂದು ತಿಳಿದು ಅನಂತರ ಆಶ್ಚರ್ಯದಿಂದ ಆ ಮಗನನ್ನು ಕುರಿತು ಆ ದೈತ್ಯರಾಜನು ಇಂತೆಂದನು.

೭೪. ಹಿರಣ್ಯಕಶಿಪುವು ಹೇಳಿದನು—ಎಲೈ ಪುತ್ರನೆ! ನೀನು ವಿಷ್ಣುವು ಪರರೂಪನು ಎಂದು ನನ್ನ ಎದುರಿಗೆ ಹೇಳಿದೆ. ವಿಷ್ಣು ಎಂಬ ಪದವು ಸರ್ವಭೂತಗಳಲ್ಲಿಯೂ ವ್ಯಾಪಿಸುವವನು ಯಾವನೋ ಅವನಿಗೆ ವಿಷ್ಣುವು ಎಂಬ ಹೆಸರನ್ನು ಹೇಳುತ್ತದೆ.

೭೫. ಯಾವ ದೇವರು ಎಲ್ಲರಲ್ಲಿಯೂ ಅಂತರ್ಯಾಮಿಯಾಗಿ ಇರುವನೋ ಅವನೇ ಪರಮೇಶ್ವರನು. ಆ ವಿಷ್ಣುವು ಎಲ್ಲ ಕಡೆಯಲ್ಲಿಯೂ ಇರುವನೆಂಬುದನ್ನು ನನಗೆ ಈಗ ತೋರಿಸು.

೭೬. ಅವನ ಐಶ್ವರ್ಯ, ಶಕ್ತಿ, ತೇಜಸ್ಸು, ಜ್ಞಾನ, ವೀರ್ಯ, ಬಲ, ರೂಪ, ಗುಣ, ವಿಭೂತಿಗಳು ಇವನ್ನೂ ಸರಿಯಾಗಿ ನೋಡುತ್ತೇನೆ.

ಸಮ್ಯಕ್ ದೃಷ್ಟ್ವಾ ಪ್ರಯತ್ನೇನ ವಿಷ್ಣುಂ ಮನ್ಯೇ ದಿವೌಕಸಂ ।
ಮಮ ಪ್ರತಿಬಲೋ ಲೋಕೇ ನಾಸ್ತಿ ದೇವೇಷು ಕಶ್ಚನ ॥ ೭೭ ॥

ಈಶಾನವರದಾನೇನ ಸರ್ವಭೂತೇಷ್ವವಧ್ಯತಾಂ ।
ಪ್ರಾಪ್ತವಾನ್ ಸರ್ವಭೂತಾನಾಂ ದುರ್ಜಯತ್ವಂ ಚ ಮಾನದ ।
ಈಶ್ವರತ್ವಂ ಲಭೇದ್ವಿಷ್ಣುರ್ಮಾಂ ಜಿತ್ವಾ ಬಲವೀರ್ಯತಃ ॥ ೭೮ ॥

॥ ಮಹಾದೇವ ಉವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ಪ್ರಹ್ಲಾದಃ ಪ್ರಾಹ ವಿಸ್ಮಿತಃ ।
ಹರೇಃ ಪ್ರಭಾವಂ ದೈತ್ಯಸ್ಯ ಕಥಯಾಮಾಸ ಸುವ್ರತಃ ॥ ೭೯ ॥

॥ ಪ್ರಹ್ಲಾದ ಉವಾಚ ॥

ಯೋಽಸೌ ನಾರಾಯಣಃ ಶ್ರೀಮಾನ್ ಪರಮಾತ್ಮಾ ಸನಾತನಃ ।
ವಸನಾತ್ಸರ್ವಭೂತೇಷು ವಾಸುದೇವಃ ಸ ಉಚ್ಯತೇ ॥ ೮೦ ॥

---

೭೭. ಅಂತಹವನನ್ನು ಪ್ರಯತ್ನಪಟ್ಟು ನೋಡಿ ಆಗ ಆ ವಿಷ್ಣುವನ್ನು ದೇವನೆಂದು ತಿಳಿದುಕೊಳ್ಳುತ್ತೇನೆ. ನನಗೆ ಪ್ರತಿಬಲನಾದವನು ಲೋಕದಲ್ಲಿ ದೇವತೆಗಳಲ್ಲಿಯೂ ಒಬ್ಬನೂ ಇಲ್ಲವು.

೭೮ ಈಶ್ವರನ ವರದಾನದಿಂದ ನಾನು ಅವಧ್ಯತ್ವವನ್ನು ಹೊಂದಿರುವೆನು. ಮತ್ತು ಯಾವ ಪ್ರಾಣಿಯಿಂದಲೂ ಜಯಿಸಲಾಗದಿರುವಿಕೆಯನ್ನೂ ಹೊಂದಿರುವೆನು. ಈಗ ಆ ವಿಷ್ಣುವು ತನ್ನ ಪರಾಕ್ರಮದಿಂದ ನನ್ನನ್ನು ಜಯಿಸಿ ಆ ಈಶ್ವರತನವನ್ನು ಹೊಂದಲಿ.

೭೯. ಮಹಾದೇವನು ಹೇಳಿದನು.–ಪ್ರಹ್ಲಾದನು ತಂದೆಯು ಹೇಳಿದ ಈ ಮಾತನ್ನು ಕೇಳಿ ಆಶ್ಚರ್ಯಪಟ್ಟು ಆ ಹರಿಯ ಪ್ರಭಾವವನ್ನು ಆ ಹಿರಣ್ಯಕಶಿಪುವಿಗೆ ಇಂತೆಂದು ಹೇಳಿದನು.

೮೦. ಪ್ರಹ್ಲಾದನು ಹೇಳಿದನು-ಆ ಪರಮಾತ್ಮನಾದ ನಾರಾಯಣನು ಶ್ರೀಮಂತನು. ಸನಾತನನು. ಅವನು ಎಲ್ಲರಲ್ಲಿಯೂ ವಾಸಮಾಡುವುದರಿಂದ ವಾಸುದೇವನೆನಿಸಿಕೊಳ್ಳುತ್ತಾನೆ

ಸರ್ವಸ್ಯಾಪಿ ಜಗದ್ಧಾತಾ ವಿಷ್ಣುರಿತ್ಯಭಿಧೀಯತೇ ।
ನ ಕಿಂಚಿದಸ್ಮಾದನ್ಯತ್ರ ಜಗತ್ ಸ್ಥಾವರಜಂಗಮಂ ॥ ೮೧ ॥

ಸರ್ವತ್ರ ಚಿದಚಿದ್ವಸ್ತು ರೂಪಂ ತಸ್ಯೈವ ನಾನ್ಯಥಾ ।
ತ್ರಿಪಾದ್ವ್ಯಾಪ್ತಿಃ ಪರವ್ಯೋಮ್ನಿ ಪಾದವ್ಯಾಪ್ತಿರಿಹಾಚ್ಯುತಃ ॥ ೮೨ ॥

ಯೋಽಸೌ ಚಕ್ರಗದಾಪಾಣಿಃ ಪೀತವಾಸಾ ಜನಾರ್ದನಃ ।
ಯೋಗಿಭಿರ್ದೃಶ್ಯತೇ ಭಕ್ತ್ಯಾ ನಾಭಕ್ತ್ಯಾ ದೃಶ್ಯತೇ ಕ್ವಚಿತ್ ॥ ೮೩ ॥

ದ್ರಷ್ಟುಂ ನ ಶಕ್ಯೋ ರೋಷಾದ್ವೈ ಮತ್ಸರಾದ್ಯೈರ್ಜನಾರ್ದನಃ ।
ದೇವತಿರ್ಯಙ್ಮನುಷ್ಯೇಷು ಸ್ಥಾವರೇಷಿ ಚ ಜಂತುಷು ॥ ೮೪ ॥

ವ್ಯಾಪ್ಯ ತಿಷ್ಠತಿ ಸರ್ವೇಷು ಕ್ಷುದ್ರೇಷ್ವಪಿ ಮಹತ್ಸು ಚ ॥ ೮೫ ॥

---

೮೧-೮೨. ಎಲ್ಲಾ ಜಗತ್ತನ್ನೂ ಪೋಷಿಸುವವನು ವಿಷ್ಣುವೇ ಎನ್ನಿಸಿಕೊಂಡಿದ್ದಾನೆ. ಈ ವಿಷ್ಣುವನ್ನು ಬಿಟ್ಟಿರುವ ಸ್ಥಾವರಜಂಗಮಗಳೊಂದೂ ಇಲ್ಲವೇ ಇಲ್ಲ. ಚಿದ್ವಸ್ತುವಾಗಲಿ ಅಚಿದ್ವಸ್ತುವಾಗಲಿ ಎಲ್ಲವೂ ಕೂಡ ಈ ಸ್ವಾಮಿಯ ರೂಪವೇ ಹೊರತು ಬೇರೆಯಲ್ಲ. ಉತ್ತಮವಾದ ವೈಕುಂಠದಲ್ಲಿ ಮೂರುಭಾಗದಿಂದಲೂ ಇಲ್ಲೆಲ್ಲವೂ ಕಾಲು ಭಾಗದಿಂದಲೂ ಇರುವನು.

೮೩. ಶಂಖ, ಚಕ್ರಗಳನ್ನು ಕೈಯ್ಯಲ್ಲಿ ಹಿಡಿದಿರುವ ಆ ಜನಾರ್ದನನು ಯೋಗಿಗಳಿಗಾದರೂ ಭಕ್ತಿಯಿಂದಲೇ ನೋಡಲು ಸಾಧ್ಯನು. ಭಕ್ತಿಯಿಲ್ಲದಿದ್ದರೆ ಅವನನ್ನು ನೋಡಲಾಗುವುದೇ ಇಲ್ಲ.

೮೪-೮೫ ರೋಷದಿಂದಾಗಲಿ ಮತ್ಸರದಿಂದಾಗಲಿ ಅವನನ್ನು ನೋಡಲಾಗುವುದೇ ಇಲ್ಲ. ದೇವತೆಗಳು, ತಿರ್ಯಕ್‌ಪ್ರಾಣಿಗಳು, ಮನುಷ್ಯರು, ಸ್ಥಾವರಜಂಗಮಗಳು, ಮತ್ತು ಎಲ್ಲಾ ಜಂತುಗಳಲ್ಲಿಯೂ ಆ ಸ್ವಾಮಿಯು ವ್ಯಾಪಿಸಿಕೊಂಡಿರುವನು. ಸಣ್ಣದರಲ್ಲಿಯೂ ದೊಡ್ಡದರಲ್ಲಿಯೂ ಕೂಡ ಇರುವನು.

|| ಮಹಾದೇವ ಉವಾಚ ||

ಇತಿ ಪ್ರಹ್ಲಾದವಚನಂ ಶ್ರುತ್ವಾ ದೈತ್ಯವರಸ್ತದಾ |
ಉವಾಚ ರೋಷತಾಮ್ರಾಕ್ಷೋ ಭರ್ತ್ಸಯನ್ ಸ್ವಸುತಂ ಮುಹುಃ || ೮೬ ||

|| ಹಿರಣ್ಯಕಶಿಪುರುವಾಚ ||

ಅಸೌ ಸರ್ವಗತೋ ವಿಷ್ಣುರಪಿ ಚೇತ್ಪರಮಃ ಪುಮಾನ್ |
ಪ್ರತ್ಯಯಂ ದರ್ಶಯಸ್ವಾದ್ಯ ಬಹುಭಿಃ ಕಿಂ ಪ್ರಲಾಪಿತೈಃ || ೮೭ ||

|| ಮಹಾದೇವ ಉವಾಚ ||

ಇತ್ಯುಕ್ತ್ವಾ ಸಹಸಾ ದೈತ್ಯಃ ಪ್ರಾಸಾದಸ್ತಂಭಮಾತ್ಮನಃ |
ತಾಡಯಾಮಾಸ ಹಸ್ತೇನ ಪ್ರಹ್ಲಾದಮಿದಮಬ್ರವೀತ್ || ೮೮ ||

|| ಹಿರಣ್ಯಕಶಿಪುರುವಾಚ ||

ಅಸ್ಮಿನ್ ದರ್ಶಯ ತಂ ವಿಷ್ಣುಂ ಯದಿ ಸರ್ವಗತೋ ಭವೇತ್ |
ಅನ್ಯಥಾ ತ್ವಾಂ ವಧಿಷ್ಯಾಮೋ ಮಿಥ್ಯಾವಾಕ್ಯಪ್ರಲಾಪಿನಂ || ೮೯ ||

---

೮೬. ಮಹಾದೇವನು ಹೇಳಿದನು–ಆಗ ಆ ದೈತ್ಯಚಕ್ರವರ್ತಿಯು ಪ್ರಹ್ಲಾದನ ಈ ಮಾತನ್ನು ಕೇಳಿ ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಮಗನನ್ನು ಗದರಿಸುತ್ತಾ ಇಂತೆಂದನು.

೮೭. ಹಿರಣ್ಯಕಶಿಪುವು ಹೇಳಿದನು–ಎಲೈ ಪ್ರಹ್ಲಾದನೇ! ನಿನ್ನ ಈ ವಿಷ್ಣುವು ಪರಮಪುರುಷನಾಗಿ ಎಲ್ಲಾ ಕಡೆಯಲ್ಲಿಯೂ ಇರುವ ಪಕ್ಷದಲ್ಲಿ ಆ ವಿಷಯದಲ್ಲಿ ನನಗೆ ನಂಬಿಕೆಯನ್ನು ತೋರಿಸು. ಬಹಳ ಮಾತಿನಿಂದ ಪ್ರಯೋಜನವೇನು?

೮೮. ಮಹಾದೇವನು ಹೇಳಿದನು–ಆ ದೈತ್ಯೇಂದ್ರನು ಪ್ರಹ್ಲಾದನಿಗೆ ಹೀಗೆಂದು ಹೇಳುತ್ತ ತನ್ನ ಅರಮನೆಯ ಕಂಬವನ್ನು ಕೈಯ್ಯಿಂದ ಬಡಿದು ಇಂತೆಂದನು.

೮೯. ಹಿರಣ್ಯಕಶಿಪುವು ಹೇಳಿದನು–ಆ ವಿಷ್ಣುವು ಎಲ್ಲ ಕಡೆಯಲ್ಲಿಯೂ ಇರುವ ಪಕ್ಷದಲ್ಲಿ ಆ ನಿನ್ನ ವಿಷ್ಣುವನ್ನು ಇದರಲ್ಲಿ ತೋರಿಸು. ಹಾಗಿಲ್ಲದಿದ್ದರೆ ಸುಳ್ಳುಹೇಳಿದ ನಿನ್ನನ್ನು ಕೊಲ್ಲಿಸುತ್ತೇನೆ.

|| ಮಹಾದೇವ ಉವಾಚ ||

ಇತ್ಯುಕ್ತ್ವಾ ಸಹಸಾ ಖಡ್ಗಮಾಕೃಷ್ಯ ದಿತಿಜೇಶ್ವರಃ |
ಪ್ರಹ್ಲಾದೋರಸಿ ಚಿಕ್ಷೇಪ ಹನ್ತುಂ ಖಡ್ಗೇನ ತಂ ರುಷಾ || ೯೦ ||

ತಸ್ಮಿನ್ ಕ್ಷಣೇ ಮಹಾಶಬ್ದಃ ಸ್ತಂಭೇ ಸಂಶ್ರೂಯತೇ ಭೃಶಂ |
ಸಂವರ್ತಾಶನಿಸಂರಾವೈಃ ಖಮಿವ ಸ್ಫುಟಿತಾಂತರಂ || ೯೧ ||

ತೇನ ಶಬ್ದೇನ ಮಹತಾ ದೈತ್ಯಶ್ರೋತ್ರವಿಘಾತಿನಾ |
ಸರ್ವೇ ನಿಪಾತಿತಾ ಭೂಮೌ ಛಿನ್ನಮೂಲಾ ಇವ ದ್ರುಮಾಃ || ೯೨ ||

ಬಿಭ್ಯತಿ ಸಂಪ್ಲುತಂ ದೈತ್ಯಾ ಮೇನಿರೇ ವೈ ಜಗತ್ತ್ರಯಂ |
ತತಃ ಸ್ತಂಭೇ ಮಹಾತೇಜಾ ನಿಷ್ಕ್ರಾಂತೋ ವೈ ಮಹಾಹರಿಃ || ೯೩ ||

---

೯೦. ಮಹಾದೇವನು ಹೇಳಿದನು–ಹೀಗೆಂದು ಹೇಳಿ ಶೀಘ್ರವಾಗಿ ಖಡ್ಗವನ್ನು ಆ ಹಿರಣ್ಯಕಶಿಪುವು ಒರೆಯಿಂದ ಎಳೆದು ಅವನನ್ನು ಕೊಲ್ಲಲು ಎದೆಯಮೇಲೆ ಹೊಡೆದನು.

೯೧. ಆ ಕ್ಷಣದಲ್ಲಿಯೇ ಆ ಕಂಬದಲ್ಲಿ ಒಂದು ಶಬ್ದವು ಅಂತರಿಕ್ಷವನ್ನು ಭೇದಿಸಿಕೊಂಡು ಬಂದ ಪ್ರಳಯಕಾಲದ ಸಿಡಿಲಿನ ಶಬ್ದದಂತೆ ಕೇಳಿಬರುತ್ತಿದ್ದಿತು.

೯೨. ಆ ಶಬ್ದವು ಹಿರಣ್ಯಕಶಿಪುವಿನ ಕಿವಿಯನ್ನು ಕಿವುಡು ಮಾಡುವಷ್ಟು ದೊಡ್ಡದಾಗಿದ್ದಿತು. ಒಡನೆಯೇ ಅಲ್ಲಿದ್ದವರೆಲ್ಲರೂ ಬೇರೊಡನೆ ಕಿತ್ತುಬಿದ್ದ ಮರದಂತೆ ಬಿದ್ದರು

೯೩. ದೈತ್ಯರೆಲ್ಲರೂ ಹೆದರುತ್ತ ಮೂರು ಲೋಕಗಳೂ ಅಲ್ಲೋಲಕಲ್ಲೋಲವಾದಂತೆ ತಿಳಿದುಕೊಂಡರು. ಅನಂತರ ಆ ಕಂಬದಿಂದ ಬಹುವಾದ ತೇಜಸ್ಸುಳ್ಳ ಆ ಹರಿಯು ಹೊರಟನು.

ಚಕಾರ ಸುಮಹಾಘೋರಂ ಜಗತ್‌ಕ್ಷಯಕರಂ ಸ್ವನಂ ।
ತೇನ ನಾದೇನ ಮಹತಾ ತಾರಕಾಃ ಪತಿತಾ ಭುವಿ ॥ ೯೪ ॥

ನೃಸಿಂಹಂ ವಪುರಾಸ್ಥಾಯ ತತ್ರೈವಾವಿರಭೂದ್ಧರಿಃ ।
ಅನೇಕಕೋಟಿಸೂರ್ಯಾಗ್ನಿತೇಜಸಾ ಸುಸಮಾವೃತಃ ॥ ೯೫ ॥

ಮುಖೇ ಪಂಚಾನನಪ್ರಖ್ಯಃ ಶರೀರೇ ಮಾನುಷಾಕೃತಿಃ ।
ದಂಷ್ಟ್ರಾಕರಾಳವದನಃ ಸ್ಫುರಜ್ಜಿಹ್ವಾವರೋದ್ಧತಃ ॥ ೯೬ ॥

ಜ್ವಾಲಾವಲಿತಕೇಶಾಂತಸ್ತಪ್ತಾಲಾತೇಕ್ಷಣೋ ವಿಭುಃ ।
ಸಹಸ್ರಬಾಹುಭಿರ್ದೀರ್ಘೈಃ ಸರ್ವಾಯುಧಸಮನ್ವಿತೈಃ ॥ ೯೭ ॥

---

೯೪. ಆ ಸ್ವಾಮಿಯು ಜಗತ್ತನ್ನೇ ನಾಶಮಾಡುವಂತಹ ದೊಡ್ಡ ಶಬ್ದವನ್ನು ಮಾಡಿದನು. ಆ ಮಹಾನಾದದಿಂದ ಅಂತರಿಕ್ಷದಿಂದ ನಕ್ಷತ್ರಗಳೂ ಕೂಡ ಕೆಳಕ್ಕೆ ಬಿದ್ದುವು.

೯೫. ನರಸಿಂಹನ ದೇಹವನ್ನು ಹೊಂದಿ ಆ ಕಂಬದಲ್ಲಿಯೇ ಆ ಸ್ವಾಮಿಯು ಹುಟ್ಟಿದನು. ಅವನು ಅನೇಕ ಕೋಟಿ ಸೂರ್ಯ ಚಂದ್ರ ಅಗ್ನಿಗಳ ತೇಜಸ್ಸನ್ನು ಹೊಂದಿದ್ದನು.

೯೬. ಮುಖವು ಸಿಂಹದಂತೆಯೂ ಶರೀರವೆಲ್ಲ ಮನುಷ್ಯರಂತೆಯೂ ಇದ್ದಿತು. ಮುಖವು ಭಯಂಕರವಾದ ಕೋರೆದಾಡೆಯಿಂದಲೂ ಅಲ್ಲಾಡುತ್ತಿರುವ ನಾಲಗೆಯಿಂದಲೂ ಕೂಡಿದ್ದಿತು.

೯೭. ಕೂದಲುಗಳೆಲ್ಲವೂ ಉರಿಯಂತೆ ಕೆಂಚಗೆ ಕಾಣುತ್ತಿದ್ದುವು. ಕಣ್ಣುಗಳು ಜ್ವಲಿಸುತ್ತಿರುವ ಕೊಳ್ಳಿಗಳಂತೆ ಇದ್ದುವು. ಸಾವಿರ ಉದ್ದವಾದ ತೋಳುಗಳನ್ನು ಹೊಂದಿ ಅವುಗಳಲ್ಲಿ ಎಲ್ಲಾ ಆಯುಧಗಳನ್ನೂ ಹಿಡಿದಿದ್ದನು.

ವೃತೋ ಮೇರುರಿವಾಭಾತಿ ಬಹುಶಾಖನಗಾನ್ವಿತಃ ।
ದಿವ್ಯಮಾಲ್ಯಾಂಬರಧರೋ ದಿವ್ಯಾಭರಣಭೂಷಿತಃ ॥ ೯೮ ॥

ತಸ್ಥೌ ನೃಕೇಸರೀ ತತ್ರ ಸಂಹರ್ತುಂ ಸರ್ವದಾನವಾನ್ ।
ತಂ ದೃಷ್ಟ್ವಾ ಘೋರಸಂಕಾಶಂ ನಾರಸಿಂಹಂ ಮಹಾಬಲಂ ॥ ೯೯ ॥

ದಗ್ಧಾಕ್ಷಿಪಕ್ಷ್ಮೋ ದೈತ್ಯೇಂದ್ರೋ ವಿಹ್ವಲಾಂಗಃ ಪಪಾತ ಹ ।
ಪ್ರಹ್ಲಾದೋಥ ತದಾ ದೃಷ್ಟ್ವಾ ನಾರಸಿಂಹೋಪಮಂ ಹರಿಂ || ೧೦೦ ||

ಜಯಶಬ್ದೇನ ದೇವೇಶಂ ನಮಶ್ಚಕ್ರೇ ಜನಾರ್ದನಂ ।
ದದರ್ಶ ತಸ್ಯ ಗಾತ್ರೇಷು ನೃಸಿಂಹಸ್ಯ ಮಹಾತ್ಮನಃ || ೧೦೧ ||

ಲೋಕಾನ್ ಸಮುದ್ರಾನ್ ಸದ್ವೀಪಾನ್ ಸುರಗಂಧರ್ವಮಾನುಷಾನ್ ।
ಅಂಡಜಾನಾಂ ಸಹಸ್ರಂ ತು ಸಟಾಗ್ರೇ ತಸ್ಯ ದೃಶ್ಯತೇ || ೧೦೨ ||

---

೯೮. ಈ ಕೈಗಳನ್ನು ನೋಡಿದರೆ ಅನೇಕ ಮರಗಳಿಂದ ಕೂಡಿರುವ ಮೇರುಪರ್ವತದಂತೆ ಕಾಣುತ್ತಿದ್ದನು. ದಿವ್ಯವಾದ ಮಾಲೆಯನ್ನೂ ಬಟ್ಟೆಯನ್ನೂ ಆಭರಣಗಳನ್ನೂ ಹಾಕಿಕೊಂಡಿದ್ದನು.

೯೯-೧೦೨. ಆ ನಾರಸಿಂಹನು ಎಲ್ಲಾ ದಾನವರನ್ನೂ ಸಂಹರಿಸಲು ಅಲ್ಲಿ ನಿಂತನು. ಆ ಮಹಾಬಲಿಷ್ಠನಾದ ಕ್ರೂರನಾದ ನರಸಿಂಹನನ್ನು ನೋಡಿ ಆ ಹಿರಣ್ಯಕಶಿಪುವಿಗೆ ಕಣ್ಣುಗಳ ಎವೆಗಳು ಸುಟ್ಟುಹೋದುವು. ಮತ್ತು ಮೈಕೈಗಳು ಸ್ವಾಧೀನವಿಲ್ಲದೆ ಬಿದ್ದುಬಿಟ್ಟನು. ಪ್ರಹ್ಲಾದನು ನರಸಿಂಹನ ಆಕಾರವನು, ಹೊಂದಿರುವ ಆ ಹರಿಯನ್ನು ನೋಡಿ ಜಯ ಜಯ ಎಂದೆನ್ನುತ್ತ ಆ ಸ್ವಾಮಿಗೆ ನಮಸ್ಕರಿಸಿದನು. ಅಲ್ಲದೆ ಆ ಸ್ವಾಮಿಯ ಶರೀರದಲ್ಲಿ ಎಲ್ಲಾ ಲೋಕಗಳನ್ನೂ, ಸಮುದ್ರಗಳನ್ನೂ, ದ್ವೀಪಗಳನ್ನೂ ಸುರರು, ಗಂಧರ್ವರು, ಮನುಷ್ಯರನ್ನೂ ನೋಡಿದನು. ಆ ನರಸಿಂಹನ ಕೇಸರದ ತುದಿಯಲ್ಲಿ ಅನೇಕವಾದ ಅಂಡಜಗಳು ಕಾಣುತ್ತಿದ್ದುವು.

ದೃಶ್ಯಂತೇ ತಸ್ಯ ನೇತ್ರೇಷು ಸೋಮಸೂರ್ಯಾದಯಸ್ತಥಾ ।
ಕರ್ಣಯೋರಶ್ವಿನೌ ದೇವೌ ದಿಶಶ್ಚ ವಿದಿಶಸ್ತಥಾ ॥ ೧೦೩ ॥

ಲಲಾಟೇ ಬ್ರಹ್ಮರುದ್ರೌ ಚ ನಭೋ ವಾಯುಶ್ಚ ನಾಸಿಕೇ ।
ಇಂದ್ರಾಗ್ನೀ ತಸ್ಯ ವಕ್ತ್ರಾಂತೇ ಜಿಹ್ವಾಯಾಂ ಚ ಸರಸ್ವತೀ ॥ ೧೦೪ ॥

ದಂಷ್ಟ್ರಾಸು ಸಿಂಹಶಾರ್ದೂಲಶರಭಾಶ್ಚ ಮಹೋರಗಾಃ ।
ಕಂಠೇ ಚ ದೃಶ್ಯತೇ ಮೇರುಃ ಸ್ಕಂಧೇಷ್ವಪಿ ಮಹಾದ್ರಯಃ ॥ ೧೦೫ ॥

ದೇವತಿರ್ಯಙ್ಮನುಷ್ಯಾಶ್ಚ ಬಾಹುಷ್ವಪಿ ಮಹಾತ್ಮನಃ ।
ನಾಭೌ ಚಾಸ್ಯಾಂತರಿಕ್ಷಂ ಚ ಪಾದಯೋಃ ಪೃಥಿವೀ ತಥಾ ॥ ೧೦೬ ॥

ರೋಮಸ್ವೌಷಧಯಸ್ಸರ್ವಾಃ ಪಾದಪಾ ನಖ ಪಂಕ್ತಿಷು ।
ನಿಶ್ವಾಸೇಷು ಚ ವೇದಾಶ್ಚ ಸಾಂಗೋಪಾಂಗಸಮನ್ವಿತಾಃ ॥ ೧೦೭ ॥

---

೧೦೩. ಅವನ ಕಣ್ಣುಗಳಲ್ಲಿ ಸೂರ್ಯಚಂದ್ರರೂ ಕಿವಿಗಳಲ್ಲಿ ಅಶ್ವಿನೀದೇವತೆಗಳೂ ಅಂತೆಯೇ ದಿಕ್ಕುಗಳೂ ವಿದಿಕ್ಕುಗಳೂ ಕಾಣುತ್ತಿದ್ದುವು.

೧೦೪-೧೦೫. ಹಣೆಯಲ್ಲಿ ಬ್ರಹ್ಮರುದ್ರರೂ, ಮೂಗಿನಲ್ಲಿ ಅಂತರಿಕ್ಷವಾಯುಗಳೂ, ಬಾಯೊಳಗೆ ಇಂದ್ರನೂ, ನಾಲಗೆಯಲ್ಲಿ ಸರಸ್ವತಿಯೂ, ಕೋರೆದಾಡೆಯಲ್ಲಿ ಸಿಂಹ, ಶಾರ್ದೂಲ, ಶರಭ, ಮಹಾಸರ್ಪಗಳೂ, ಕತ್ತಿನಲ್ಲಿ ಮೇರು ಪರ್ವತವೂ, ಭುಜಗಳಲ್ಲಿ ಮಹಾಪರ್ವತಗಳೂ, ಕಾಣುತ್ತಿದ್ದುವು.

೧೦೬-೧೦೭. ಅವನ ಬಾಹುಗಳಲ್ಲಿ ದೇವತೆಗಳೂ, ತಿರ್ಯಕ್‌ಜಂತುಗಳೂ, ಮನುಷ್ಯರೂ ಕಾಣುತ್ತಿದ್ದರು. ಹೊಕ್ಕುಳಲ್ಲಿ ಅಂತರಿಕ್ಷವೂ, ಪಾದಗಳಲ್ಲಿ ಭೂಮಿಯೂ ರೋಮಗಳಲ್ಲಿ ಎಲ್ಲಾ ಔಷಧಿಗಳೂ, ಉಗುರಿನಲ್ಲಿ ಎಲ್ಲಾ ಮರಗಳೂ, ನಿಶ್ವಾಸದಲ್ಲಿ ಸಾಂಗೋಪಾಂಗವಾದ ವೇದಗಳೂ ಕಾಣುತ್ತಿದ್ದುವು.

ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ।
ಸರ್ವಾಂಗೇಷು ಪ್ರದೃಶ್ಯಂತೇ ಗಂಧರ್ವಾಪ್ಸರಶ್ಚ ಯೇ　　　॥ ೧೦೮ ॥

ಇತ್ಥಂ ವಿಭೂತಯಸ್ತಸ್ಯ ದೃಶ್ಯಂತೇ ಪರಮಾತ್ಮನಃ ।
ಶ್ರೀವತ್ಸಕೌಸ್ತುಭೋರಸ್ಕಂ ವನಮಾಲಾವಿಭೂಷಿತಂ　　　॥ ೧೦೯ ॥

ಶಂಖಚಕ್ರಗದಾಖಡ್ಗಶಾಂಗಾರ್ದ್ಯಹೇತಿಭಿರ್ಯುತಂ ।
ಸರ್ವೋಪನಿಷದಾಮರ್ಥಂ ದೃಷ್ಟ್ವಾ ದೈತ್ಯೇಶ್ವರಾತ್ಮಜಃ　　　॥ ೧೧೦ ॥

ಹರ್ಷಾಶ್ರುಜಲಸಿಕ್ತಾಂಗಃ ಪ್ರಣನಾಮ ಮುಹುರ್ಮುಹುಃ ।
ದೈತ್ಯೇಂದ್ರಸ್ತು ಹರಿಂ ದೃಷ್ಟ್ವಾ ಕ್ರೋಧಾತ್ ಮೃತ್ಯುವಶೇ ಸ್ಥಿತಃ॥ ೧೧೧ ॥

ಯೋದ್ಧುಂ ಖಡ್ಗಂ ಸಮುದ್ಯಮ್ಯ ನೃಸಿಂಹಂ ತಮಥಾದ್ರವತ್ ।
ಅಥ ದೈತ್ಯಗಣಾಸ್ಸರ್ವೇ ಲಬ್ಧಸಂಜ್ಞಾ ಮಹಾಬಲಾಃ　　　॥ ೧೧೨ ॥

---

೧೦೮. ಎಲ್ಲಾ ಅವಯಗಳಲ್ಲಿಯೂ ಆದಿತ್ಯರೂ, ವಸುಗಳೂ, ರುದ್ರರೂ, ವಿಶ್ವೇದೇವರೂ, ಮರುದ್ಗಣಗಳೂ, ಗಂಧರ್ವರೂ, ಅಪ್ಸರರೂ, ಎಲ್ಲರೂ ಕಾಣುತ್ತಿದ್ದರು.

೧೦೯-೧೧೧. ಆ ಪರಮಾತ್ಮನ ವಿಭೂತಿಗಳು ಈ ರೀತಿಯಲ್ಲಿ ಕಾಣುತ್ತಿದ್ದುವು. ಆ ಸ್ವಾಮಿಯು ಎದೆಯಲ್ಲಿ ಕೌಸ್ತುಭವನ್ನು ಧರಿಸಿದ್ದನು. ಮತ್ತು ಶ್ರೀವತ್ಸವೆಂಬ ಲಾಂಛನವೂ ಇದ್ದಿತು. ವನಮಾಲೆಯೆಂಬ ಮಾಲೆಯನ್ನು ಹಾಕಿಕೊಂಡಿದ್ದನು ಶಂಖಚಕ್ರಗದಾಖಡ್ಗಗಳನ್ನು ಧರಿಸಿದ್ದನು. ಸರ್ವವಾದ ಉಪನಿಷತ್ತುಗಳಿಗೆ ಅವನು ಅರ್ಥರೂಪವಾಗಿದ್ದನು. ಇಂತಹ ಸ್ವಾಮಿಯನ್ನು ಪ್ರಹ್ಲಾದನು ನೋಡಿ ಸಂತೋಷದ ಕಣ್ಣೀರನ್ನು ಸುರಿಸುತ್ತಾ ಅನೇಕ ಬಾರಿ ನಮಸ್ಕರಿಸಿದನು. ಆ ದೈತ್ಯೇಂದ್ರನಾದ ಹಿರಣ್ಯಕಶಿಪುವು ಕೋಪಗೊಂಡು ಮೃತ್ಯುಶಯ್ಯೆಯಲ್ಲಿದ್ದನು.

೧೧೨-೧೧೮. ಆ ಹಿರಣ್ಯಕಶಿಪುವು ಆ ನೃಸಿಂಹನೊಡನೆ ಯುದ್ಧಮಾಡಲು ಮುಂದೆ ನುಗ್ಗಿದನು ಅನಂತರ ದೈತ್ಯರ ಗುಂಪು ಎಚ್ಚೆತ್ತು ತಮ್ಮ ತಮ್ಮ

ಸ್ವಾನ್ಯಾಯುಧಾನಿ ಚಾದಾಯ ಹರಿಂ ಜಘ್ನುಸ್ತ್ವರಾನ್ವಿತಾಃ ।
ಪಲಾಲಕಾಂಡಾನಿ ಯಥಾ ವಹ್ನೌ ಕ್ಷಿಪ್ತಾನ್ಯನೇಕಶಃ ॥ ೧೧೩ ॥

ತಥೈವ ಭಸ್ಮತಾಂ ಯಾಂತಿ ಸಹಸ್ರಾಣ್ಯಾಯುಧಾನಿ ವೈ ।
ತಾನ್ಯನೇಕಾನಿ ದೈತ್ಯಾನಾಂ ದೃಷ್ಟ್ವಾ ನರಹರಿಸ್ತದಾ ॥ ೧೧೪ ॥

ಸಟೈರ್ದದಾಹ ಚ ಜ್ವಾಲಾಮಾಲಾವಿರಚಿತಸ್ಫುಟೈಃ ।
ನೃಕೇಸರಿಸಟೋದ್ಭೂತವಹ್ನಿನಾ ದಾನವಾ ಭೃಶಂ ॥ ೧೧೫ ॥

ನಿರ್ಭಸ್ಮಿತಾಃ ಕ್ಷಣಾತ್ಸರ್ವೇ ನಿಶ್ಶೇಷಂ ತದಭೂದ್ಬಲಂ ।
ಪ್ರಹ್ಲಾದಂ ಸಾನುಗಂ ಹಿತ್ವಾ ಭಸ್ಮಿತೇ ರಕ್ಷಸಾಂ ಬಲೇ ॥ ೧೧೬ ॥

ಕ್ರೋಧಾದ್ದೈತ್ಯಪತಿಃ ಖಡ್ಗಮಾಕೃಷ್ಯಾಭ್ಯಪ್ರಪದ್ಯತ ।
ಖಡ್ಗಹಸ್ತಂ ತು ದೈತ್ಯೇಂದ್ರಂ ಜಗ್ರಾಹೈಕೇನ ಬಾಹುನಾ ॥ ೧೧೭ ॥

ಪಾತಯಾಮಾಸ ದೇವೇಶೋ ಯಥಾ ಶಾಖಾಂ ಮಹಾನಿಲಃ ।
ಗೃಹೀತ್ವಾ ಪತಿತಂ ಭೂಮೌ ಮಹಾಕಾಯಂ ನೃಕೇಸರೀ ॥ ೧೧೮ ॥

---

ಆಯುಧಗಳನ್ನು ತೆಗೆದುಕೊಂಡು ಅವನನ್ನು ಹೊಡೆಯಲು ಮುನ್ನುಗ್ಗಿತು. ದೈತ್ಯರ ಆ ಆಯುಧಗಳೆಲ್ಲವೂ ಬೆಂಕಿಗೆ ಹಾಕಿದ ಹುಲ್ಲಿನಂತೆ ಭಸ್ಮವಾಗುತ್ತಾ ಬಂದುವು. ನರಹರಿಯು ಆ ಅನೇಕರಾದ ದೈತ್ಯರ ಗುಂಪನ್ನು ನೋಡಿ ತನ್ನ ಕೇಸರಿಗಳಿಂದ ಹೊರಹೊಮ್ಮಿದ ಬೆಂಕಿಯಿಂದಲೇ ಸುಟ್ಟುಬಿಟ್ಟನು. ಆ ನರ ಸಿಂಹನ ಜಟಿಗಳಿಂದ ಹುಟ್ಟಿದ ಬೆಂಕಿಯಿಂದ ದಾನವರೆಲ್ಲರೂ ಕ್ಷಣಕಾಲದಲ್ಲಿ ಭಸ್ಮವಾಗಿ ನಿಶ್ಶೇಷರಾದರು. ಇಂತು ಆ ಸೈನ್ಯವೆಲ್ಲವೂ ನಿಶ್ಶೇಷವಾಯಿತು. ಪ್ರಹ್ಲಾದನನ್ನೂ ಅವನ ಕಡೆಯುವರನ್ನೂ ಬಿಟ್ಟು ಆ ರಾಕ್ಷಸನ ಕಡೆಯುವರೆಲ್ಲರೂ ನಾಶವಾಗಲು ಹಿರಣ್ಯಕಶಿಪುವು ಕೋಪದಿಂದ ಖಡ್ಗವನ್ನು ಎಳೆದುಕೊಂಡು ಆ ನರಸಿಂಹನ ಮೇಲೆ ಬಿದ್ದನು. ಆ ನರಹರಿಯು ಖಡ್ಗವನ್ನು ಹಿಡಿದಿರುವ ಆ ದೈತ್ಯೇಂದ್ರನನ್ನು ಒಂದು ಕೈಯ್ಯಿಂದ ಹಿಡಿದುಕೊಂಡನು. ಮತ್ತು ಮಹಾ ವಾತವು ಮರವನ್ನು ಕೆಡಗುವಂತೆ ಕೆಡವಿದನು. ಹಾಗೆ ಬಿದ್ದ ಆ ಹಿರಣ್ಯ ಕಶಿಪುವನ್ನು ಆ ನರಸಿಂಹನು ಹಿಡಿದುಕೊಂಡನು.

ಸ್ವೋತ್ಸಂಗೇ ಸ್ಥಾಪಯಿತ್ವಾ ಚ ದದರ್ಶಾಸೌ ಮುಖಂ ಹರೇಃ ।
ವಿಷ್ಣುನಿಂದಾಕೃತಂ ಪಾಪಂ ತಥಾವೈಷ್ಣವದ್ವೇಷಜಂ ॥ ೧೧೯ ॥

ನೃಸಿಂಹಸ್ಪರ್ಶನಾದೇನ ನಿರ್ಭಸ್ಮಿತಮಭೂತ್ತದಾ ।
ಅಥ ದೈತ್ಯೇಶ್ವರಸ್ಯಾಸೌ ಮಹದ್ಗಾತ್ರಂ ನೃಕೇಸರೀ ॥ ೧೨೦ ॥

ನಖೈರ್ವಿದಾರಯಾಮಾಸ ತೀಕ್ಷ್ಣೈಃ ವಜ್ರನಿಭೈಃ ಘನೈಃ ।
ಸ ನಿರ್ಮಲಾತ್ಮಾ ದೈತ್ಯೇಂದ್ರಃ ಪಶ್ಯನ್ ಸಾಕ್ಷಾನ್ಮುಖಂ ಹರೇಃ ॥ ೧೨೧ ॥

ನಖೈರ್ನಿರ್ಭಿನ್ನಹೃದಯಃ ಕೃತಾರ್ಥೋ ವಿಜಹಾವಸೂನ್ ।
ತದ್ಗಾತ್ರಂ ಶತಧಾ ಭಿತ್ವಾ ನಖೈಸ್ತೀಕ್ಷ್ಣೈರ್ಮಹಾಹರಿಃ ॥ ೧೨೨ ॥

ಆಕೃಷ್ಯಾಂತ್ರಾಣಿ ದೀರ್ಘಾಣಿ ಕಂಠೇ ಸಂಸಕ್ತವಾನ್ ಪ್ರಿಯಾತ್
ಅಥ ದೇವಗಣಾಸ್ಸರ್ವೇ ಮುನಯಶ್ಚ ತಪೋಧನಾಃ ॥ ೧೨೩ ॥

ಬ್ರಹ್ಮರುದ್ರೌ ಪುರಸ್ಕೃತ್ಯ ಶನೈಃ ಸ್ತೋತುಂ ಸಮಾಯಯುಃ ।
ತೇ ಪ್ರಸಾದಯಿತುಂ ಭೀತಾಃ ಜ್ವಲಿತಂ ವಿಶ್ವತೋ ಮುಖಂ ॥ ೧೨೪ ॥

---

೧೧೯–೧೨೬. ಆ ನರಸಿಂಹನು ಹಿರಣ್ಯಕಶಿಪುವನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡನು. ಆಗ ವಿಷ್ಣುವನ್ನು ನಿಂದೆಮಾಡಿದ ಪಾಪವೂ ವೈಷ್ಣದ್ವೇಷದಿಂದ ಮಾಡಿದ ಪಾಪವೂ ಹೋದುವು. ಅಲ್ಲದೆ ಆ ನರಸಿಂಹನ ಸ್ಪರ್ಶದಿಂದಲೇ ಅವನ ಪಾಪಗಳೆಲ್ಲವೂ ಭಸ್ಮವಾಗಿ ಹೋದುವು. ಅನಂತರ ನರಸಿಂಹನು ಹಿರಣ್ಯಕಶಿಪುವಿನ ದೊಡ್ಡ ದೇಹವನ್ನು ದೊಡ್ಡದಾದ ಉಗುರುಗಳಿಂದ ಸೀಳಿದನು. ಆಗ ದೈತ್ಯೇಂದ್ರನು ಹರಿಯ ಮುಖವನ್ನು ನೋಡಿದುದರಿಂದ ಪಾಪವನ್ನು ಕಳೆದುಕೊಂಡು ನಿರ್ಮಲನಾದನು. ಉಗುರುಗಳಿಂದ ಸೀಳಲ್ಪಟ್ಟ ಹೃದಯವುಳ್ಳ ಅವನು ಕೃತಾರ್ಥನಾಗಿ ಪ್ರಾಣಗಳನ್ನು ಬಿಟ್ಟನು. ಆ ಹರಿಯು ಉಗುರಿನಿಂದ ಅವನ ಶರೀರವನ್ನು ಸೀಳಿ ಅವನ ಕರುಳನ್ನು ಎಳೆದು ಪ್ರೀತಿಯಿಂದ ಕತ್ತಿಗೆ ಮಾಲೆಯನ್ನು ಹಾಕಿಕೊಂಡನು. ಅನಂತರ ದೇವತೆಗಳೂ ಮುನಿಗಳೂ, ತಪಸ್ವಿಗಳೂ, ಬ್ರಹ್ಮರುದ್ರರನ್ನು ಮುಂದುಮಾಡಿಕೊಂಡು ಸ್ತೋತ್ರ ಮಾಡಲು ಮೆಲ್ಲಗೆ ಬಂದರು ಅವರೆಲ್ಲರೂ ಈ ನರಸಿಂಹನನ್ನು ಸಮಾಧಾನ

ಮಾತರಂ ಜಗತಾಂ ಧಾತ್ರೀಂ ಚಿತಂಯಾಮಾಸುರೀಶ್ವರೀಂ ।
ಹಿರಣ್ಯವರ್ಣಾಂ ಹರಿಣೀಂ ಸರ್ವ್ವೋಪದ್ರವನಾಶಿನೀಂ ॥ ೧೨೫ ॥

ವಿಷ್ಣೋರ್ನಿತ್ಯಾನವದ್ಯಾಂಗೀಂ ಧ್ಯಾತ್ವಾ ನಾರಾಯಣೀಂ ಶುಭಾಂ ।
ದೇವೀಸೂಕ್ತಂ ಜಪಂತೋ ವೈ ನಮಶ್ಚಕ್ರುಃ ಸನಾತನೀಂ ॥ ೧೨೬ ॥

ತೈಶ್ಚಿಂತ್ಯಮಾನಾ ಸಾ ದೇವೀ ತತ್ರೈವಾವಿರಭೂತ್ತದಾ ।
ಚತುರ್ಭುಜಾ ವಿಶಾಲಾಕ್ಷೀ ಸರ್ವಾಭರಣಭೂಷಿತಾ ॥ ೧೨೭ ॥

ದುಕೂಲವಸ್ತ್ರಸಹಿತಾದಿವ್ಯಮಾಲಾನುಲೇಪನಾ ।
ತಾಂ ದೃಷ್ಟ್ವಾ ದೇವದೇವಸ್ಯ ಪ್ರಿಯಾಂ ಸರ್ವೇ ದಿವೌಕಸಃ ॥ ೧೨೮ ॥

ಊಚುಃ ಪ್ರಾಂಜಲಯೋ ದೇವೀಂ ಪ್ರಸನ್ನಂ ಕುರು ತೇ ಪ್ರಿಯಂ ।
ತ್ರೈಲೋಕ್ಯಸ್ಯಾಭಯಂ ಸ್ವಾಮೀ ಯಥಾ ದದ್ಯಾತ್ತಥಾ ಕುರು ॥ ೧೨೯ ॥

---

ಪಡಿಸಲು ಹೆದರಿದವರಾಗಿ ಜಗತ್ತಿಗೆ ತಾಯಿಯಾದ ಆ ಮಹಾಲಕ್ಷ್ಮಿಯನ್ನು ಧ್ಯಾನಿಸಿದರು. ಸುವರ್ಣದ ಬಣ್ಣವುಳ್ಳ ಎಲ್ಲಾ ರೋಗಗಳನ್ನೂ ನಾಶಮಾಡುವ ವಿಷ್ಣುವಿನ ಜೊತೆಯಲ್ಲಿಯೇ ಯಾವಾಗಲೂ ಇರುವ ಆ ನಾರಾಯಣನ ಹೆಂಡತಿ ಯಾದ ಲಕ್ಷ್ಮಿಯನ್ನು ಲಕ್ಷ್ಮಿಸೂಕ್ತದಿಂದ ಜಪಿಸಿ ನಮಸ್ಕರಿಸಿದರು.

೧೨೭–೧೨೯. ದೇವತೆಗಳು ಇಂತು ಧ್ಯಾನಮಾಡುತ್ತಿರಲು ಆ ಲಕ್ಷ್ಮಿಯು ಅಲ್ಲಿಯೇ ಕಾಣಿಸಿಕೊಂಡಳು. ನಾಲ್ಕು ಭುಜಗಳನ್ನು ಹೊಂದಿ ಎಲ್ಲಾ ಆಭರಣ ಗಳನ್ನೂ ಧರಿಸಿ ರೇಷ್ಮೆಯ ಸೀರೆಯನ್ನುಟ್ಟು ಒಳ್ಳೆಯಗಂಧ ಮುಂತಾದುವನ್ನು ಪೂಸಿಕೊಂಡು ಹೂಮಾಲೆಯನ್ನು ಧರಿಸಿದ್ದಳು. ದೇವದೇವನಿಗೆ ಪ್ರೀತಿ ಪಾತ್ರಳಾದ ಆ ಲಕ್ಷ್ಮಿದೇವಿಯನ್ನು ದೇವತೆಗಳು ನೋಡಿ ಕೈಮುಗಿದುಕೊಂಡು “ ಅಮ್ಮಾ ” ನಿನ್ನ ಗಂಡನನ್ನು ಪ್ರಸನ್ನನನ್ನಾಗಿ ಮಾಡು. ಮೂರು ಲೋಕ ಗಳಿಗೆ ಅಭಯವನ್ನು ಕೊಡುವಂತೆ ಮಾಡು. ಎಂದು ಕೇಳಿಕೊಂಡರು.

॥ ಮಹಾದೇವ ಉವಾಚ ॥

ಇತ್ಯುಕ್ತ್ವಾ ಸಹಸಾ ದೇವೀ ಪ್ರಿಯಂ ಪ್ರಾಪ್ಯ ಜನಾರ್ದನಂ ।
ಪ್ರಣಿಪತ್ಯ ನಮಸ್ಕೃತ್ಯ ಪ್ರಸೀದೇತಿ ಉವಾಚ ತಂ ॥ ೧೩೦ ॥

ತಾಂ ದೃಷ್ಟ್ವಾ ಮಹಿಷೀಂ ಸ್ವಸ್ಯ ಪ್ರಿಯಾಂ ಸರ್ವೇಶ್ವರೋ ಹರಿಃ ।
ರಕ್ಷಃಶರೀರಜಂ ಕ್ರೋಧಂ ತತ್ಯಾಜ ಸ ತು ತತ್ಕ್ಷಣಾತ್ ॥ ೧೩೧ ॥

ಅಂಕಮಾದಾಯ ತಾಂ ದೇವೀಂ ಸಮಾಶ್ಲಿಷ್ಯ ದಯಾನಿಧಿಃ ।
ಕೃಪಾಸುಧಾರ್ದ್ರದೃಷ್ಟ್ಯಾ ವೈ ನಿರೈಕ್ಷತ ಮಹಾಹರಿಃ ॥ ೧೩೨ ॥

ತತೋ ಜಯಜಯೇತ್ಯುಚ್ಚೈಃ ಸ್ತುವತಾಂ ನಮತಾಂ ತದಾ ।
ತದ್ಯಥಾದೃಷ್ಟಿತುಷ್ಟಾನಾಂ ಸಾನಂದಃ ಸಂಭ್ರಮೋಭವತ್ ॥ ೧೩೩ ॥

ತತೋ ದೇವಗಣಾಸ್ಸರ್ವೇ ಹರ್ಷನಿರ್ಭರಮಾನಸಾಃ ।
ಊಚುಃ ಪ್ರಾಂಜಲಯೋ ದೇವಂ ನಮಸ್ಕೃತ್ಯ ಜಗತ್ಪತಿಂ ॥ ೧೩೪ ॥

---

೧೩೦. ಮಹಾದೇವನು ಹೇಳಿದನು-ದೇವತೆಗಳೆಲ್ಲರೂ ಹೀಗೆಂದು ಹೇಳುತ್ತಲೂ ಆ ಲಕ್ಷ್ಮಿಯು ಜನಾರ್ದನನ ಬಳಿಗೆ ಹೋಗಿ ದೀರ್ಘದಂಡ ನಮಸ್ಕಾರಮಾಡಿ ಪ್ರಸನ್ನನಾಗು. ಎಂದು ಕೇಳಿಕೊಂಡಳು.

೧೩೧. ಸರ್ವೇಶ್ವರನಾದ ಹರಿಯು ಆ ತನ್ನ ಪ್ರೀತಿಪಾತ್ರೆಯಾದ ಹೆಂಡತಿಯನ್ನು ನೋಡಿ ದೈತ್ಯನ ಸಂಬಂಧದಿಂದ ಉಂಟಾಗಿದ್ದ ಕೋಪವನ್ನು ಬಿಟ್ಟುಬಿಟ್ಟನು.

೧೩೨. ಒಡನೆಯೇ ಆ ಹೆಂಡತಿಯನ್ನು ತೊಡೆಯಮೇಲೆ ಕೂರಿಸಿಕೊಂಡು ಉಳಿದ ದೇವತೆಗಳನ್ನು ಆ ಸ್ವಾಮಿಯು ಕೃಪೆಯಿಂದ ಕೂಡಿದ ನೋಟದಿಂದ ನೋಡಿದನು.

೧೩೩. ಒಡನೆಯೇ ಆ ದೇವತೆಗಳು ಜಯಜಯ ಎಂದು ಗಟ್ಟಿಯಾಗಿ ಕೂಗುತ್ತ ಸ್ತೋತ್ರಮಾಡುತ್ತಲಿದ್ದರು. ಅವನ ಕೃಪಾದೃಷ್ಟಿಯಿಂದ ನೋಡಲ್ಪಟ್ಟವರಾಗಿ ಆನಂದದಿಂದಲೂ ಸಂಭ್ರಮದಿಂದಲೂ ಕೂಡಿದರು.

೧೩೪. ಆಗ ದೇವತೆಗಳು ಹರ್ಷದಿಂದ ಕೂಡಿದವರಾಗಿ ಆ ದೇವನನ್ನು ನಮಸ್ಕರಿಸಿ ಕೈಮುಗಿದುಕೊಂಡು ಇಂತೆಂದರು.

॥ ದೇವಗಣಾ ಊಚುಃ ॥

ದ್ರಷ್ಟುಮತ್ಯದ್ಭುತಂ ತೇಜೋ ನ ಶಕ್ತಾಸ್ತೇ ಜಗತ್ಪತೇ ।
ಅತ್ಯದ್ಭುತಮಿದಂ ರೂಪಂ ಬಹುಬಾಹುಪದಾಂಕಿತಂ ॥ ೧೩೫ ॥

ಜಗತ್ರಯಂ ಸಮಾಕ್ರಾನ್ತಂ ತೇಜಸ್ತೀಕ್ಷ್ಣತರಂ ತವ ।
ದ್ರಷ್ಟುಂ ಸ್ಥಾತುಂ ನ ಶಕ್ತಾಃ ಸ್ಮಃ ಸರ್ವ ಏವ ದಿವೌಕಸಃ ॥ ೧೩೬ ॥

॥ ಮಹಾದೇವ ಉವಾಚ ॥

ಅತ್ಯರ್ಥಿತಸ್ತು ವಿಬುಧೈಃ ತೇಜಸ್ತದತಿಭೀಷಣಂ ।
ಉಪಸಂಹೃತ್ಯ ದೇವೇಶೋ ಬಭೂವ ಸುಖದರ್ಶನಃ ॥ ೧೩೭ ॥

ಶರತ್ಕೋಟೀಂದುಸಂಕಾಶಃ ಪುಂಡರೀಕನಿಭೇಕ್ಷಣಃ ।
ಸುಧಾಮಯಸಟಾಪುಂಜವಿದ್ಯುತ್ಕೋಟಿನಿಭಃ ಶುಭಃ ॥ ೧೩೮ ॥

---

೧೩೫–೧೩೬. ದೇವಗಣಗಳು ಹೇಳಿದರು–ಎಲೈ ಜಗತ್ಪತಿಯೇ ! ನಿನ್ನ ತೇಜಸ್ಸು ಬಹು ಅಧಿಕವಾಗಿದೆ. ನಮ್ಮಿಂದ ನೋಡಲು ಸಾಧ್ಯವಾಗುವುದಿಲ್ಲ. ಈ ರೂಪವೂ ಕೂಡ ಅದ್ಭುತವಾದುದು. ಅನೇಕವಾದ ಕೈಗಳಿಂದಲೂ ಕಾಲುಗಳಿಂದಲೂ ಕೂಡಿಕೊಂಡಿದೆ. ನಿನ್ನ ತೇಜಸ್ಸು ಬಹು ಉಗ್ರವಾಗಿ ಮೂರು ಲೋಕವನ್ನೂ ಆಕ್ರಮಿಸಿಕೊಂಡಿದೆ. ನಾವು ನಿನ್ನ ಮುಂದೆ ನಿಲ್ಲುವುದಕ್ಕಾಗುವುದಿಲ್ಲ. ನಿನ್ನನ್ನು ನೋಡುವುದಕ್ಕೂ ಆಗುವುದಿಲ್ಲ.

೧೩೭. ಮಹಾದೇವನು ಹೇಳಿದನು–ದೇವತೆಗಳು ಈ ರೀತಿಯಾಗಿ ಬಹುವಾಗಿ ಪ್ರಾರ್ಥಿಸಿಕೊಳ್ಳಲು ಆ ಸ್ವಾಮಿಯು ಬಹು ಭಯಂಕರವಾದ ತೇಜಸ್ಸನ್ನು ಶಮನ ಮಾಡಿಕೊಂಡು ಅವರೆಲ್ಲರೂ ಸುಖವಾಗಿ ನೋಡುವಂತಾದನು.

೧೩೮. ಶರತ್ಕಾಲದಲ್ಲಿರುವ ಕೋಟಿಜನ ಚಂದ್ರರಂತೆ ಪ್ರಕಾಶವಾದನು. ಪುಂಡರೀಕದಂತೆ ಕಣ್ಣುಗಳನ್ನು ಹೊಂದಿದನು. ಅಮೃತದಂತೆ ಇರುವ ಕೇಸರಗಳನ್ನು ಹೊಂದಿ ಅನೇಕ ಕೋಟಿ ವಿದ್ಯುತ್‌ಗಳಂತೆ ಕಂಡುಬಂದನು

ನಾನಾರತ್ನಮಯೈರ್ದಿವ್ಯೈಃ ಕೇಯೂರೈಃ ಕಟಕಾನ್ವಿತೈಃ ।
ಬಾಹುಭಿಃ ಕಲ್ಪವೃಕ್ಷಸ್ಯ ಶಾಖೌಘೈರಿವ ಸತ್ಫಲೈಃ　　　　॥ ೧೩೯ ॥

ಚತುರ್ಭಿಃ ಕೋಮಲೈರ್ದಿವ್ಯೈರನ್ವಿತಃ ಪರಮೇಶ್ವರಃ ।
ಜಪಾಕುಸುಮಸಂಕಾಶೈಃ ಶೋಭಿತಃ ಕರಪಂಕಜೈಃ　　　　॥ ೧೪೦ ॥

ಶಂಖಚಕ್ರಗೃಹಿತಾಭ್ಯಾಮುದ್ಬಾಹುಭ್ಯಾಂ ವಿರಾಜಿತಃ ।
ವರದಾಭಯಹಸ್ತಾಭ್ಯಾಮಿತರಾಭ್ಯಾಂ ನೃಕೇಸರೀ　　　　॥ ೧೪೧ ॥

ಶ್ರೀವತ್ಸಕೌಸ್ತುಭೋರಸ್ಕೋ ವನಮಾಲಾವಿಭೂಷಿತಃ ।
ಉದ್ಯದ್ದಿನಕರಾಭಾಭ್ಯಾಂ ಕುಂಡಲಾಭ್ಯಾಂ ವಿರಾಜಿತಃ　　　　॥ ೧೪೨ ॥

ಹಾರಕೇಯೂರಕಟಕೈರ್ಭೂಷಣೈಃ ಸಮಲಂಕೃತಃ ।
ಸವ್ಯಾಂಗಸ್ಥಶ್ರಿಯಾ ಯುಕ್ತೋ ರಾಜತೇ ನರಕೇಸರೀ　　　　॥ ೧೪೩ ॥

---

೧೩೯-೧೪೧. ಬಗೆಬಗೆಯಾದ ರತ್ನಗಳುಳ್ಳ ದಿವ್ಯವಾದ ಭುಜಕೀರ್ತಿ ಕೈಬಳೆಗಳನ್ನು ಹೊಂದಿರುವ ಕೋಮಲವಾದ ಕೈಗಳನ್ನು ಹೊಂದಿದ್ದನು. ಇದನ್ನು ನೋಡಿದರೆ ಹಣ್ಣುಗಳಿಂದ ಕೂಡಿರುವ ಕಲ್ಪವೃಕ್ಷದ ಕೊಂಬೆಗಳಿರುವಂತಿದ್ದಿತು ಕೈಯಿನ ಹಸ್ತಗಳು ಕೆಂಪು ದಾಸವಾಳದ ಹೂಗಳಂತೆ ಕೆಂಪಗೆ ಕಂಗೊಳಿಸಿದುವು. ಎರಡು ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದು ಮತ್ತೆರಡು ಕೈಗಳಲ್ಲಿ ಒಂದನ್ನು ಅಭಯ ಹಸ್ತವನ್ನಾಗಿಯೂ ಮತ್ತೊಂದನ್ನು ವರದ ಹಸ್ತವನ್ನಾಗಿಯೂ ಧರಿಸಿದ್ದನು.

೧೪೨. ಎದೆಯಲ್ಲಿ ಶ್ರೀವತ್ಸ ಕೌಸ್ತುಭಗಳೆರಡೂ ಪ್ರಕಾಶಿಸುತ್ತಿದ್ದುವು. ವನಮಾಲೆಯನ್ನು ಕತ್ತಿನಲ್ಲಿ ಧರಿಸಿದ್ದನು. ಉದಯಿಸುತ್ತಿರುವ ಸೂರ್ಯನಂತೆ ಕಂಗೊಳಿಸುವ ಕರ್ಣಾಭರಣಗಳನ್ನು ಹಾಕಿಕೊಂಡಿದ್ದನು

೧೪೩. ಹಾರ, ಕೇಯೂರ, ಕಟಕ ಮುಂತಾದ ಒಡವೆಗಳಿಂದ ಅಲಂಕೃತನಾಗಿ ಬಲಗಡೆಯಲ್ಲಿ ಲಕ್ಷ್ಮಿಯನ್ನು ಕೂರಿಸಿಕೊಂಡು ಪ್ರಕಾಶಿಸುತ್ತಿದ್ದನು

ಲಕ್ಷ್ಮೀನೃಸಿಂಹಂ ತಂ ದೃಷ್ಟ್ವಾ ದೇವತಾಸ್ಸಮಹರ್ಷಯಃ ।
ಆನಂದಾಶ್ರುಜಲೈಸ್ಸಿಕ್ತಾ ಹರ್ಷನಿರ್ಭರಚೇತಸಃ ॥ ೧೪೪ ॥

ಆನಂದಸಿಂಧುಮಗ್ನಾಸ್ತೇ ನಮಶ್ಚಕ್ರುರ್ನಿರಂತರಂ ।
ಅರ್ಚಯಾಮಾಸುರಾತ್ಮೇಶಂ ದಿವ್ಯಪುಷ್ಪಸಮರ್ಪಣೈಃ ॥ ೧೪೫ ॥

ರತ್ನಕುಂಭೈಸ್ಸುಧಾಪೂರ್ಣೈರಭಿಷಿಚ್ಯ ಸನಾತನಂ ।
ವಸ್ತ್ರೈರಾಭರಣೈರ್ಗಂಧೈಃ ಪುಷ್ಪೈರ್ಧೂಪೈರ್ಮನೋಹರೈಃ ॥ ೧೪೬ ॥

ದಿವ್ಯೈರ್ನಿವೇದಿತೈರ್ದೀಪೈರರ್ಚಯಿತ್ವಾ ನೃಕೇಸರಿಂ ।
ತುಷ್ಟುವುರ್ದಿವ್ಯಸ್ತುತಿಭಿರ್ನಮಶ್ಚಕ್ರುರ್ಮುಹುರ್ಮುಹುಃ ॥ ೧೪೭ ॥

ತತಃ ಪ್ರಸನ್ನೋ ಲಕ್ಷ್ಮೀಶಃ ತೇಷಾಮಿಷ್ಟಾನ್ ವರಾನ್ ದದೌ ।
ತತೋ ದೇವಗಣೈಸ್ಸಾರ್ಧಂ ಸರ್ವೇಶೋ ಭಕ್ತವತ್ಸಲಃ ॥ ೧೪೮ ॥

---

೧೪೪. ಆಗ ದೇವತೆಗಳೆಲ್ಲರೂ ಲಕ್ಷ್ಮೀನರಸಿಂಹನಾದ ಆ ಸ್ವಾಮಿಯನ್ನು ನೋಡಿ ಆನಂದದಿಂದ ಕಣ್ಣೀರನ್ನು ಸುರಿಸುತ್ತ ಬಹುವಾಗಿ ಸಂತೋಷಗೊಂಡರು.

೧೪೫. ಆನಂದದಿಂದ ಕೂಡಿದ ಆ ದೇವತೆಗಳು ಬಹುವಾಗಿ ನಮಸ್ಕರಿಸಿ ದಿವ್ಯವಾದ ಹೂವುಗಳನ್ನು ಸಮರ್ಪಿಸುತ್ತಾ ಅರ್ಚನೆ ಮಾಡಿದರು.

೧೪೬–೧೪೭. ರತ್ನದ ಕುಂಭಗಳಲ್ಲಿ ನೀರನ್ನು ತಂದು ಅವನಿಗೆ ಅಭಿಷೇಕ ಮಾಡಿದರು. ವಸ್ತ್ರ, ಆಭರಣ, ಗಂಧ, ಹೂ, ಧೂಪ, ದೀಪ, ದಿವ್ಯವಾದ ನೈವೇದ್ಯಗಳಿಂದ ಪೂಜಿಸಿ ಸ್ತುತಿಗಳಿಂದ ಸ್ತುತಿಸಿದರು. ಮತ್ತೆ ಮತ್ತೆ ನಮಸ್ಕರಿಸಿದರು.

೧೪೮-೧೫೧. ಆಗ ಲಕ್ಷ್ಮೀಪತಿಯು ಪ್ರಸನ್ನನಾಗಿ ಅವರಿಗೆ ಬೇಕಾದ ವರಗಳನ್ನು ಕೊಟ್ಟನು. ಅನಂತರ ಆ ಭಕ್ತವತ್ಸಲನು ದೇವತೆಗಳೊಡನೆ ಪ್ರಹ್ಲಾದನನ್ನು

ಪ್ರಹ್ಲಾದಂ ಸರ್ವದೈತ್ಯಾನಾಂ ಚಕ್ರೇ ರಾಜಾನಮವ್ಯಯಂ ।
ಆಶ್ವಾಸ್ಯ ಭಕ್ತಂ ಪ್ರಹ್ಲಾದಮಭಿಷಿಚ್ಯ ಸುರೋತ್ತಮೈಃ ॥ ೧೪೯ ॥

ದದೌ ತಸ್ಮೈ ವರಾನಿಷ್ಟಾನ್ ಭಕ್ತಿಂ ಚಾವ್ಯಭಿಚಾರಿಣೀಂ ।
ತತೋ ದೇವಗಣೈಸ್ಸಾರ್ಧಂ ಸ್ತೂಯಮಾನೋ ನೃಕೇಸರೀ ॥ ೧೫೦ ॥

ವಿಕೀರ್ಣಃ ಪುಷ್ಪವರ್ಷೈಸ್ತು ತತ್ರೈವಾಂತರಧೀಯತ ।
ತತೋ ಸುರಗಣಾಸ್ಸರ್ವೇ ಸ್ವಂ ಸ್ವಂ ಸ್ಥಾನಂ ಪ್ರಪೇದಿರೇ ॥ ೧೫೧ ॥

ಪುನಶ್ಚ ಯಜ್ಞಭಾಗಾಂಶ್ಚ ಬುಭುಜುಃ ಪ್ರೀತಮಾನಸಾಃ ।
ತತೋ ದೇವಾಸ್ಸಗಂಧರ್ವಾ ನಿರಾತಂಕಾಭವಂಸ್ತದಾ ॥ ೧೫೨ ॥

ತಸ್ಮಿನ್ ಹತೇ ಮಹಾದೈತ್ಯೇ ಸರ್ವ ಏವ ಪ್ರಹರ್ಷಿತಾಃ ।
ಪ್ರಹ್ಲಾದಸ್ತು ತದಾ ಚಕ್ರೇ ರಾಜ್ಯಂ ಧರ್ಮೇಣ ವೈಷ್ಣವಃ ॥ ೧೫೩ ॥

---

ಎಲ್ಲಾ ದೈತ್ಯರಿಗೂ ರಾಜನಾಗಿರುವಂತೆ ದೈತ್ಯರಾಜ್ಯದಲ್ಲಿ ಅಭಿಷೇಕ ಮಾಡಿದನು. ಪ್ರಹ್ಲಾದನು ಎಲ್ಲಾ ದೈತ್ಯರಿಗೂ ರಾಜನಾದನು. ಅನಂತರ ಭಕ್ತನಾದ ಪ್ರಹ್ಲಾದನನ್ನು ಸಮಾಧಾನಪಡಿಸಿ ದೇವತೆಗಳೊಡನೆ ಪಟ್ಟಾಭಿಷೇಕ ಮಾಡಿ ಬೇಕಾದ ವರಗಳನ್ನೂ ನಾಶರಹಿತವಾದ ಭಕ್ತಿಯನ್ನೂ ಕೊಟ್ಟನು. ಅನಂತರ ಎಲ್ಲರೂ ಆ ಸ್ವಾಮಿಯನ್ನು ಸ್ತುತಿಸುತ್ತ ಹೂಮಳೆಯನ್ನು ಕರೆಯಲು ಒಡನೆಯೇ ಅಂತರ್ಧಾನನಾದನು. ಅನಂತರ ದೇವತೆಗಳೂ ಕೂಡ ತಮ್ಮ ತಮ್ಮ ಜಾಗಗಳಿಗೆ ಹೊರಟುಹೋದರು

೧೫೨ ಅನಂತರ ದೇವತೆಗಳಿಗೆ ಯಜ್ಞಭಾಗಗಳು ಸಿಕ್ಕಲು ಸಂತೋಷದಿಂದ ತಿನ್ನುತ್ತಾ ಬಂದರು. ಮತ್ತು ಎಲ್ಲರೂ ಕೂಡ ತೊಂದರೆಯಿಲ್ಲದೆ ಸುಖವಾಗಿದ್ದರು.

೧೫೩–೧೫೬. ಆ ಹಿರಣ್ಯಕಶಿಪುವನ್ನು ಕೊಂದಮೇಲೆ ಎಲ್ಲರೂ ಸಂತೋಷದಿಂದಿದ್ದರು. ಪ್ರಹ್ಲಾದನು ಹರಿಯ ಅನುಗ್ರಹದಿಂದ ಸಿಕ್ಕಿದ ರಾಜ್ಯವನ್ನು

ಹರೇಃ ಪ್ರಸಾದಲಬ್ಧಂ ತು ವೈಷ್ಣವಂ ರಾಜ್ಯಮುತ್ತಮಂ ।
ಬಹುಭಿರ್ಯಜ್ಞದಾನಾದ್ಯೈರರ್ಚಯಿತ್ವಾ ನೃಕೇಸರಿಂ ॥ ೧೫೪ ॥

ಕಾಲೇ ಹರಿಪದಂ ಪ್ರಾಪ್ತೋ ಯೋಗಿಗಮ್ಯಂ ಸನಾತನಂ ।
ಏತತ್ಪ್ರಹ್ಲಾದಚರಿತಂ ಯೇ ತು ಶೃಣ್ವಂತಿ ನಿತ್ಯಶಃ ॥ ೧೫೫ ॥

ತೇ ಸರ್ವೇ ಪಾಪನಿರ್ಮುಕ್ತಾ ಯಾಸ್ಯಂತಿ ಪರಮಾಂ ಗತಿಂ ।
ಏತತ್ತೇ ಕಥಿತಂ ದೇವಿ ನೃಸಿಂಹವೈಭವಂ ಹರೇಃ ।
ಶೇಷಾಂ ಚ ವೈಭವಾವಸ್ಥಾಂ ಶೃಣು ದೇವಿ ಯಥಾಕ್ರಮಂ ॥ ೧೫೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೆ ಉತ್ತರಖಂಡ ಉಮಾಮಹೇಶ್ವರ
ಸಂವಾದೇ ನೃಸಿಂಹ ಪ್ರಾದುರ್ಭಾವೋ ನಾಮ
ಪಂಚಷಷ್ಟ್ಯಧಿಕದ್ವಿಶತತಮೋಽಧ್ಯಾಯಃ

---

ಧರ್ಮದಿಂದ ಆಳುತ್ತಾ ಬಂದನು. ಅನಂತರ ಪ್ರಹ್ಲಾದನು ಅನೇಕ ಯಜ್ಞ ದಾನಗಳಿಂದ ಆ ಹರಿಯನ್ನು ತೃಪ್ತಿಪಡಿಸಿ ಕಡೆಗೆ ಯೋಗಿಗಳು ಹೊಂದತಕ್ಕ ಸನಾತನವಾದ ಹರಿಪದವಾದ ವೈಕುಂಠವನ್ನು ಹೊಂದಿದನು. ಈ ಪ್ರಹ್ಲಾದ ಚರಿತ್ರೆಯನ್ನು ಕೇಳಿದವರೆಲ್ಲರೂ ಪಾಪವನ್ನು ಕಳೆದುಕೊಂಡು ಉತ್ತಮವಾದ ಗತಿಯನ್ನು ಹೊಂದುತ್ತಾರೆ. ಎಲೈ ದೇವಿಯೇ ! ಈ ನರಸಿಂಹನ ವೈಭವವನ್ನು ಹೇಳಿದ್ದೇನೆ. ಇದರಂತೆಯೇ ಮಿಕ್ಕ ವೈಭವಗಳನ್ನು ಕೇಳು. ಹೇಳುತ್ತೇನೆ. ಕ್ರಮವಾಗಿ ಕೇಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದಲ್ಲಿ ನೃಸಿಂಹ ಪ್ರಾದುರ್ಭಾವವೆಂಬ ಇನ್ನೂರ
ಅರವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ॥



॥ ರುದ್ರ ಉವಾಚ ॥

ಪ್ರಹ್ಲಾದಸ್ಯ ಸುತೋ ಜಜ್ಞೇ ವಿರೋಚನ ಇತೀರಿತಃ ।
ತಸ್ಯ ಪುತ್ರೋ ಮಹಾಬಾಹುಃ ಬಲಿರ್ವೈಶ್ವಾನರಃ ಪ್ರಭುಃ ॥ ೧ ॥

ಸ ತು ಧರ್ಮವಿದಾಂ ಶ್ರೇಷ್ಠಃ ಸತ್ಯಸಂಧೋ ಜಿತೇಂದ್ರಿಯಃ ।
ಹರೇಃ ಪ್ರಿಯತಮೋ ಭಕ್ತೋ ನಿತ್ಯಂ ಧರ್ಮರತಶ್ಶುಚಿಃ ॥ ೨ ॥

ಸ ಜಿತ್ವಾ ಸಕಲಾನ್ ದೇವಾನ್ ಸೇಂದ್ರಾಂಶ್ಚ ಸಮರುದ್ಗಣಾನ್ ।
ತ್ರೀನ್ ಲೋಕಾನ್ ಸ್ವವಶೇ ಸ್ಥಾಪ್ಯ ರಾಜ್ಯಂ ಚಕ್ರೇ ಮಹಾಬಲಃ ॥ ೩ ॥

---

## ಇನ್ನೂರ ಅರವತ್ತಾರನೆಯ ಅಧ್ಯಾಯವು



೧. ರುದ್ರನು ಹೇಳಿದನು–ಪ್ರಹ್ಲಾದನಿಗೆ ವಿರೋಚನನೆಂಬ ಮಗನಾದನು. ಆ ವಿರೋಚನನಿಗೆ ಬಲಿಯೆಂಬ ಮಗನಾದನು. ಅವನು ಬಹು ಗಟ್ಟಿಗನು.

೨. ಅವನು ಒಳ್ಳೆಯ ಧರ್ಮಿಷ್ಠನು. ಸತ್ಯವಂತನು. ಜಿತೇಂದ್ರಿಯನು. ಹರಿಗೆ ಅತಿ ಪ್ರಿಯನಾದ ಭಕ್ತನು. ಧರ್ಮದಲ್ಲಿಯೇ ಆಸಕ್ತನಾಗಿ ಶುಚಿಯಾಗಿದ್ದನು.

೩. ಅವನು ದೇವತೆಗಳೆಲ್ಲರನ್ನೂ ಜಯಿಸಿದನು. ಇಂದ್ರನೇ ಮುಂತಾದವರನ್ನೂ ಜಯಿಸಿದನು. ಹೀಗೆ ಜಯಿಸುತ್ತಾ ಮೂರು ಲೋಕಗಳನ್ನೂ ಜಯಿಸಿ ತನ್ನ ಸ್ವಾಧೀನದಲ್ಲಿಟ್ಟುಕೊಂಡು ರಾಜ್ಯಭಾರಮಾಡಿದನು.

ಅಕೃಷ್ಟಪಚ್ಯಾ ಪೃಥಿವೀ ಬಹುಸಸ್ಯಫಲಪ್ರದಾ ।
ಗಾವಃ ಪೂರ್ಣದುಘಾಃ ಸರ್ವಾಃ ಪಾದಪಾಃ ಫಲಪುಷ್ಪಿತಾಃ ॥ ೪ ॥

ಸ್ವಧರ್ಮನಿರತಾಸ್ಸರ್ವೇ ನರಾಃ ಪಾಪವಿವರ್ಜಿತಾಃ ।
ಅರ್ಚಯಂತಿ ಹೃಷೀಕೇಶಂ ಸತತಂ ವಿಗತಜ್ವರಾಃ ॥ ೫ ॥

ಏವಂ ಚಕಾರ ಧರ್ಮೇಣ ರಾಜ್ಯಂ ದೈತ್ಯಪತಿರ್ಬಲಿಃ ।
ಇಂದ್ರಾದಿತ್ರಿದಶಾಸ್ತಸ್ಯ ಕಿಂಕರಾಃ ಸಮುಪಸ್ಥಿತಾಃ ॥ ೬ ॥

ಐಶ್ವರ್ಯಂ ತ್ರಿಷು ಲೋಕೇಷು ಬುಭುಜೇ ಬಲದರ್ಪಕೃತ್ ।
ಭ್ರಷ್ಟರಾಜ್ಯಂ ಸುತಂ ದೃಷ್ಟ್ವಾ ತಸ್ಯಾಪಿ ಹಿತಕಾಮ್ಯಯಾ ॥ ೭ ॥

ಕಶ್ಯಪೋ ಭಾರ್ಯಯಾ ಸಾರ್ಧಂ ತಪಸ್ತೇಪೇ ಹರಿಂ ಪ್ರತಿ ।
ಅದಿತ್ಯಾ ಸಹ ಧರ್ಮಾತ್ಮಾ ಪಯೋವ್ರತಸಮನ್ವಿತಃ ॥ ೮ ॥

---

೪-೫. ಆ ಬಲಿಯು ರಾಜ್ಯವಾಳುತ್ತಿರಲು ಭೂಮಿಯು ವ್ಯವಸಾಯವಿಲ್ಲದೇನೆ ಬಹು ಸಸ್ಯವುಳ್ಳದ್ದಾಗಿ ಪರಿಣಮಿಸಿತು. ಗೋವುಗಳು ಸಂಪೂರ್ಣವಾಗಿ ಪಾಲನ್ನು ಕೊಡುತ್ತಿದ್ದುವು. ಮರಗಳು ಹೂವು ಹಣ್ಣುಗಳಿಂದ ತುಂಬಿದ್ದುವು. ಎಲ್ಲರೂ ಅವರವರ ಧರ್ಮದಲ್ಲಿಯೇ ಆಸಕ್ತರಾಗಿದ್ದರು. ಒಬ್ಬರೂ ಪಾಪಕೆಲಸವನ್ನು ಮಾಡುತ್ತಿರಲಿಲ್ಲ. ಯಾವಾಗಲೂ ಯಾವ ಯೋಚನೆ ದುಃಖಗಳೂ ಇಲ್ಲದೆ ಹರಿಯನ್ನು ಪೂಜಿಸುತ್ತಿದ್ದರು.

೬-೮. ಆ ಬಲಿಷ್ಠನಾದ ಬಲಿಯು ಈ ರೀತಿಯಾಗಿ ಧರ್ಮದಿಂದ ರಾಜ್ಯವಾಳುತ್ತಿದ್ದನು. ಇಂದ್ರನೇ ಮುಂತಾದ ದೇವತೆಗಳು ಆ ಬಲಿಗೆ ಆಳುಗಳಾಗಿ ನಿಂತರು. ಈತನು ಮೂರುಲೋಕಗಳ ಐಶ್ವರ್ಯವನ್ನೂ ತನ್ನ ಬಲದಿಂಪಲೇ ಅನುಭವಿಸುತ್ತಿದ್ದನು. ಇತ್ತ ಕಶ್ಯಪನು ರಾಜನಾಗಿದ್ದ ಇಂದ್ರನು ರಾಜ್ಯವನ್ನು ಕಳೆದುಕೊಂಡುದನ್ನು ನೋಡಿ ಅವನಿಗೂ ರಾಜ್ಯವನ್ನು ಕೊಡಿಸಬೇಕೆಂಬ ಇಷ್ಟದಿಂದ ಹರಿಯನ್ನು ಕುರಿತು ಅದಿತಿಯೊಡನೆ ಪಯೋವ್ರತವೆಂಬ ವ್ರತವನ್ನು ಅನುಸರಿಸಿ ತಪಸ್ಸನ್ನು ಮಾಡಿದನು.

ಅರ್ಚಯಾಮಾಸ ದೇವೇಶಂ ಪದ್ಮನಾಭಂ ಜನಾರ್ದನಂ ।
ತತೋ ವರ್ಷಸಹಸ್ರಾಣಿ ತೇನ ಸಂಪೂಜಿತೋ ಹರಿಃ ॥ ೯ ॥

ತ್ರೈವಾವಿರಭೂತ್ತಸ್ಯ ದೇವ್ಯಾ ಸಹ ಸನಾತನಃ ।
ತಂ ದೃಷ್ಟ್ವಾ ಪುಂಡರೀಕಾಕ್ಷಂ ಶಂಖಚಕ್ರಗದಾಧರಂ ॥ ೧೦ ॥

ಇಂದ್ರನೀಲಮಣಿಶ್ಯಾಮಂ ಸರ್ವಾಭರಣಭೂಷಿತಂ ।
ಸ್ಫುರತ್ಕಿರೀಟಕೇಯೂರಹಾರಕುಂಡಲಶೋಭಿತಂ ॥ ೧೧ ॥

ಕೌಸ್ತುಭೋದ್ಭಾಸಿತೋರಸ್ಕಂ ಪೀತವಸ್ತ್ರೇಣ ವೇಷ್ಟಿತಂ ।
ಶ್ರಿಯಾ ಸಹ ಸಮಾಸೀನಮಂಡಜೇಂದ್ರೇ ಮಹಾತ್ಮನಿ ॥ ೧೨ ॥

ತಂ ದೃಷ್ಟ್ವಾ ಜಗತಾಮೀಶಂ ಹರ್ಷನಿರ್ಭರಚೇತಸಾ ।
ಪತ್ನ್ಯಾ ಸಹ ನಮಸ್ಕೃತ್ವಾ ತುಷ್ಟಾವ ದ್ವಿಜಸತ್ತಮಃ ॥ ೧೩ ॥

---

೯. ಆ ಕಶ್ಯಪನು ಪದ್ಮನಾಭನೂ ಜನಾರ್ದನನೂ ಆದ ಹರಿಯನ್ನು ಪೂಜಿಸಿದನು. ಹೀಗೆಯೇ ಪೂಜಿಸುತ್ತಾ ಸಾವಿರ ವರ್ಷಗಳು ಕಳೆದುವು.

೧೦-೧೧. ಅಲ್ಲಿಯೇ ಲಕ್ಷ್ಮೀ ದೇವಿಯಿಂದ ಕೂಡಿದ ವಿಷ್ಣುವು ಪ್ರತ್ಯಕ್ಷನಾದನು. ಅವನು ಶಂಖಚಕ್ರಗಳನ್ನು ಧರಿಸಿದ್ದನು. ಪುಂಡರೀಕದಂತೆ ಕಣ್ಣುಗಳಿದ್ದುವು. ಇಂದ್ರನೀಲದಂತೆ ಕಪ್ಪಗಿದ್ದನು. ಎಲ್ಲಾ ಒಡವೆಗಳನ್ನೂ ತೊಟ್ಟಿದ್ದನು. ಕಿರೀಟ, ಕೇಯೂರ, ಹಾರ, ಕುಂಡಲಗಳನ್ನು ಅಳವಡಿಸಿಕೊಂಡಿದ್ದನು.

೧೨. ಕೌಸ್ತುಭವನ್ನು ಎದೆಗೆ ಅಳವಡಿಸಿಕೊಂಡಿದ್ದನು. ಹೊಂಬಣ್ಣದ ಬಟ್ಟೆಯನ್ನು ಹೊದ್ದಿದ್ದನು. ಲಕ್ಷ್ಮಿಯೊಡನೆ ಗರುಡನಮೇಲೆ ಕುಳಿತಿದ್ದನು.

೧೩. ಕಶ್ಯಪನು ಆ ಜಗದೀಶ್ವರನಾದ ಹರಿಯನ್ನು ನೋಡಿ ಬಹು ಸಂತೋಷಪಟ್ಟವನಾಗಿ ಹೆಂಡತಿಯೊಡನೆ ನಮಸ್ಕರಿಸುತ್ತಾ ಇಂತೆಂದನು.

॥ ಕಶ್ಯಪ ಉವಾಚ ॥

ನಮೋ ನಮಸ್ತೇ ಲಕ್ಷ್ಮೀಶ ಸರ್ವಜ್ಞ ಜಗದೀಶ್ವರ ।
ಸರ್ವಾತ್ಮನ್ ಸರ್ವದೇವೇಶ ಸೃಷ್ಟಿಸಂಹಾರಕಾರಕ ॥ ೧೪ ॥

ಅನಾದಿನಿಧನಾನಂತವಪುಷೇ ವಿಶ್ವರೂಪಿಣೇ ।
ನಮಸ್ತೇ ವೇದವೇದಾಂಗವಪುಷೇ ಸರ್ವಚಕ್ಷುಷೇ ॥ ೧೫ ॥

ಸರ್ವಾತ್ಮನೇ ನಮಸ್ತುಭ್ಯಂ ಸೂಕ್ಷ್ಮಾತ್ ಸೂಕ್ಷ್ಮತರಾಯ ಚ ।
ಕಲ್ಯಾಣಗುಣಪೂರ್ಣಾಯ ಯೋಗಿಧ್ಯೇಯಾತ್ಮನೇ ನಮಃ ॥ ೧೬ ॥

ನಮೋ ಯುವಕುಮಾರಾಯ ಶ್ರೀಭೂಲೀಲಾಧಿಪಾಯ ಚ ।
ನಿತ್ಯಮುಕ್ತೈಕಭೋಗಾಯ ಪರಧಾಮ್ನಿ ಸ್ಥಿತಾಯ ಚ ॥ ೧೭ ॥

---

೧೪. ಕಶ್ಯಪನು ಹೇಳಿದನು–ಎಲೈ ಲಕ್ಷ್ಮೀಶನೆ ! ನಿನಗೆ ನಮಸ್ಕಾರವು. ಸರ್ವಜ್ಞನೆ ! ನಿನಗೆ ನಮಸ್ಕಾರವು. ಜಗದೀಶ್ವರನೆ ! ನಿನಗೆ ನಮಸ್ಕಾರವು. ಸರ್ವಾತ್ಮನೆ ! ನಿನಗೆ ನಮಸ್ಕಾರವು. ಸರ್ವದೇವೇಶನೆ ! ನಿನಗೆ ನಮಸ್ಕಾರವು. ಸೃಷ್ಟಿಸಂಹಾರಕಾರಕನೆ ! ನಿನಗೆ ನಮಸ್ಕಾರವು.

೧೫. ಆದಿ ಅಂತ್ಯಗಳಿಲ್ಲದಿರುವ ಅನೇಕವಾದ ದೇಹಗಳುಳ್ಳ ನಿನಗೆ ನಮಸ್ಕಾರವು. ವಿಶ್ವರೂಪಿಯಾದ ನಿನಗೆ ನಮಸ್ಕಾರವು. ವೇದ ವೇದಾಂಗರೂಪನಾದ ನಿನಗೆ ನಮಸ್ಕಾರವು. ಎಲ್ಲಾ ಕಡೆಗೂ ಕಣ್ಣುಗಳುಳ್ಳ ನಿನಗೆ ನಮಸ್ಕಾರವು.

೧೬. ಸರ್ವಾತ್ಮನಾದ ನಿನಗೆ ನಮಸ್ಕಾರವು. ಸೂಕ್ಷ್ಮಕ್ಕಿಂತಲೂ ಬಹು ಸೂಕ್ಷ್ಮನಾದ ನಿನಗೆ ನಮಸ್ಕಾರವು. ಕಲ್ಯಾಣಗುಣಗಳಿಂದ ಕೂಡಿದ ನಿನಗೆ ನಮಸ್ಕಾರವು. ಯೋಗಿಗಳಿಂದ ಧ್ಯಾನಮಾಡಲ್ಪಡುತ್ತಿರುವ ನಿನಗೆ ನಮಸ್ಕಾರವು.

೧೭. ಯುವಕನೂ ಕುಮಾರನೂ ಆದ ನಿನಗೆ ನಮಸ್ಕಾರವು. ಶ್ರೀದೇವಿ ಭೂದೇವಿ ಲೀಲಾದೇವಿಯರಿಗೆ ಒಡೆಯನಾದ ನಿನಗೆ ನಮಸ್ಕಾರವು. ನಿತ್ಯ ಮುಕ್ತತನವೇ ಭೋಗವಾಗಿ ಉಳ್ಳ ನಿನಗೆ ನಮಸ್ಕಾರವು. ವೈಕುಂಠವಾಸಿಯಾದ ನಿನಗೆ ನಮಸ್ಕಾರವು.

**ಚತುರಾತ್ಮನ್ನಮಸ್ತುಭ್ಯಂ ಚತುರ್ವ್ಯೂಹ ನಮೋಸ್ತು ತೇ ।**
**ಪಂಚಾವಸ್ಥಾಯ ತೇ ತುಭ್ಯಂ ನಮಸ್ತೇ ಪಂಚಮಾತ್ಮಕ ॥ ೧೮ ॥**

**ಪಂಚಮಾತ್ಮಕನಿಷ್ಠೈಸ್ತ್ವಂ ಯೋಗಿಭಿಃ ಪೂಜ್ಯಸೇ ಸದಾ ।**
**ಪಂಚಾರ್ಥತತ್ವವಿದುಷಾಂ ಪಂಚಸಂಸ್ಕಾರಸಂಸ್ಥಿತಃ ॥ ೧೯ ॥**

**ಪಂಚಪ್ರಸ್ಥಸ್ವರೂಪಂ ತೇ ವಿಜ್ಞೇಯಂ ಸತತಂ ಹರೇಃ ।**
**ಚತುರ್ವಾಕ್ಷ್ಪತಿಪೂರ್ಣಾತ್ಮಾ ನಿಯತಂ ಕವಯೋ ವಿದುಃ ॥ ೨೦ ॥**

**ತೇ ಬ್ರಾಹ್ಮಣಾ ಜಗತ್ಸರ್ವಂ ರಕ್ಷಂತಿ ತವ ಕಿಂಕರಾಃ ।**
**ತ್ರಯೀಮಯಾಃ ಕರ್ಮನಿಷ್ಠಾ ಯೇ ದ್ವಿಜಾ ಭಕ್ತವತ್ಸಲ ॥ ೨೧ ॥**

**ತೇಷಾಂ ದಯೇಕ್ಷಣಾದೇವ ಭವಬಂಧವಿಮುಕ್ತಯಃ ।**
**ನಮಸ್ತೇ ತ್ರಿಜಗದ್ಧಾತ್ರೇ ಸ್ವಯಂ ಧಾತ್ರೇಽಪಲಾತ್ಮನೇ ॥ ೨೨ ॥**

---

೧೮. ಧರ್ಮ, ಅರ್ಥ, ಕಾಮ, ಮೋಕ್ಷರೂಪನಾದ ನಿನಗೆ ನಮಸ್ಕಾರವು. ಚತುರ್ವ್ಯೂಹರೂಪನಾದ ನಿನಗೆ ನಮಸ್ಕಾರವು. ಐದು ಅವಸ್ಥೆಗಳ ರೂಪನಾದ ನಿನಗೆ ನಮಸ್ಕಾರವು.

೧೯. ಪಂಚಮಾತ್ಮಕನಿಂದ ಕೂಡಿದ ಯೋಗಿಗಳು ನಿನ್ನನ್ನು ಪೂಜಿಸುತ್ತಾರೆ. ಪಂಚಾರ್ಥದ ತತ್ವವನ್ನು ಬಲ್ಲ ವಿದ್ವಾಂಸರಿಗೆ ಪಂಚಸಂಸ್ಕಾರರೂಪನಾಗಿದ್ದೀಯೆ.

೨೦. ಪಂಚಪ್ರಸ್ಥರೂಪನಾದ ನಿನ್ನ ಸ್ವರೂಪವನ್ನು ತಿಳಿಯಬೇಕು. ನಾಲ್ಕು ವೇದಗಳಲ್ಲಿ ಪೂರ್ಣವಾದ ಆತ್ಮವುಳ್ಳವನೆಂದು ನಿನ್ನನ್ನು ವಿದ್ವಾಂಸರು ತಿಳಿಯುತ್ತಾರೆ.

೨೧-೨೨ ಆ ಬ್ರಾಹ್ಮಣರೆಲ್ಲರೂ ನಿನ್ನ ಕಿಂಕರರಾಗಿ ಎಲ್ಲಾ ಪ್ರಪಂಚವನ್ನೂ ರಕ್ಷಿಸುತ್ತಾರೆ. ವೇದವು ಯಾವಾಗಲೂ ಹೇಳುತ್ತಿರುವ ಕರ್ಮವನ್ನು ಆಚರಿಸುತ್ತಿರುವ, ಭಕ್ತರಲ್ಲಿ ಅಭಿಮಾನವುಳ್ಳ, ಬ್ರಾಹ್ಮಣರ ದಯಾಪೂರ್ವಕವಾದ ನೋಟದಿಂದಲೇ ಬಂಧಗಳೆಲ್ಲವೂ ಹೋಗುತ್ತವೆ. ಮೂರು ಲೋಕವನ್ನೂ ಪೋಷಿಸುವ ನಿನಗೆ ನಮಸ್ಕಾರವು. ಎಲ್ಲವನ್ನೂ ನಿನ್ನಲ್ಲಿಯೇ ಇಟ್ಟುಕೊಂಡು ರಕ್ಷಿಸುತ್ತಿರುವ ನಿನಗೆ ನಮಸ್ಕಾರವು.

ಧಾತ್ರೇ ವಿಧಾತ್ರೇ ವಿಶ್ವಾಯ ವಿಶ್ವರೂಪಾಯ ತೇ ನಮಃ ।
ನಾರಾಯಣಾಯ ಕೃಷ್ಣಾಯ ವಾಸುದೇವಾಯ ಶಾಂರ್ಗಿಣೇ ॥ ೨೩ ॥

ವಿಷ್ಣವೇ ಜಿಷ್ಣವೇ ತುಭ್ಯಂ ಶುದ್ಧಸತ್ತ್ವಾಯ ತೇ ನಮಃ ॥ ೨೪ ॥

॥ ಮಹಾದೇವ ಉವಾಚ ॥

ಇತ್ಯಾದಿಸ್ತುತಿಭಿಸ್ಸಮ್ಯಕ್ ಸ್ತೂಯಮಾನೋ ಮಹರ್ಷಿಣಾ ।
ಪ್ರಾಹ ಗಂಭೀರಯಾ ವಾಚಾ ಪರಿತುಷ್ಟೋ ಜನಾರ್ದನಃ ॥ ೨೫ ॥

॥ ಶ್ರೀ ಭಗವಾನುವಾಚ ॥

ಸಂತುಷ್ಟೋಽಹಂ ದ್ವಿಜಶ್ರೇಷ್ಠ ತ್ವಯಾ ಭಕ್ತ್ಯಾ ಸಮರ್ಚಿತಃ ।
ವರಂ ವೃಣೀಷ್ವ ಭದ್ರಂ ತೇ ಕರೋಮಿ ತವ ವಾಂಛಿತಂ ॥ ೨೬ ॥

॥ ಮಹಾದೇವ ಉವಾಚ ॥

ತತಃ ಪ್ರಾಹ ಹೃಷೀಕೇಶಂ ಭಾರ್ಯಯಾ ಸಹ ಕಶ್ಯಪಃ ॥ ೨೭ ॥

---

೨೩–೨೪. ಧರಿಸುವವನಾದ, ಪೋಷಿಸುವವನಾದ, ಪ್ರಪಂಚರೂಪನಾದ, ಪ್ರಪಂಚವೇ ಆದ ನಿನಗೆ ನಮಸ್ಕಾರವು. ನಾರಾಯಣನೂ, ಕೃಷ್ಣನೂ, ವಾಸುದೇವನೂ, ಶಾಂರ್ಗಿಯೂ, ವಿಷ್ಣುವೂ ಆದ ನಿನಗೆ ನಮಸ್ಕಾರವು. ಶುದ್ಧಸತ್ತ್ವ ಸ್ವರೂಪನಾದ ನಿನಗೆ ನಮಸ್ಕಾರವು.

೨೫. ಮಹಾದೇವನು ಹೇಳಿದನು—ಆ ಮಹರ್ಷಿಯು ಇವೇ ಮುಂತಾದ ಸ್ತೋತ್ರಗಳಿಂದ ಸ್ತುತಿಸುತ್ತಿರಲು ಸಂತೋಷಗೊಂಡ ಜನಾರ್ದನನು ಗಂಭೀರ ಸ್ವರದಿಂದ ಇಂತೆಂದನು.

೨೬. ಶ್ರೀಭಗವಂತನು ಹೇಳಿದನು—ಎಲೈ ಬ್ರಾಹ್ಮಣಶ್ರೇಷ್ಠನೆ! ನೀನು ಭಕ್ತಿಯಿಂದ ಪೂಜಿಸಿರುವೆ. ಅದರಿಂದ ಸಂತೋಷಗೊಂಡಿದ್ದೇನೆ. ವರವನ್ನು ಕೇಳಿಕೊ. ನಿನಗೆ ಒಳ್ಳೆಯದಾಗಲಿ. ನಿನ್ನ ಇಷ್ಟವನ್ನು ನೆರವೇರಿಸುತ್ತೇನೆ.

೨೭. ಮಹಾದೇವನು ಹೇಳಿದನು—ಅನಂತರ ಕಶ್ಯಪನೂ ಅವನ ಹೆಂಡತಿಯೂ ಸ್ವಾಮಿಯಾದ ವಿಷ್ಣುವನ್ನು ಕುರಿತು ಇಂತೆಂದು ಕೇಳಿದರು.

|| ಕಶ್ಯಪ ಉವಾಚ ||

ಪುತ್ರತ್ವಂ ಮಮ ದೇವೇಶ ಸಂಪ್ರಾಪ್ಯ ತ್ರಿದಶಾಹಿತಂ |
ಕುರುಷ್ವ ಬಲಿನಾ ದೇವ ತ್ರೈಲೋಕ್ಯಂ ನಿರ್ಜಿತಂ ಬಲಾತ್ || ೨೮ ||

ಇಂದ್ರಸ್ಯಾವರಜೋ ಭೂತ್ವಾ ಉಪೇಂದ್ರ ಇತಿ ವಿಶ್ರುತಃ |
ಯೇನ ಕೇನ ಚ ಮಾರ್ಗೇಣ ಬಲಿಂ ನಿರ್ಜಿತ್ಯ ಮಾಯಯಾ ||
ತ್ರೈಲೋಕ್ಯಂ ಮಮ ಪುತ್ರಾಯ ದೇಹಿ ಶಕ್ರಾಯ ಶಾಶ್ವತಂ || ೨೯ ||

|| ಮಹಾದೇವ ಉವಾಚ ||

ಇತ್ಯುಕ್ತಸ್ತೇನ ವಿಪ್ರೇಣ ತಥೇತ್ಯಾಹ ಜನಾರ್ದನಃ |
ಸಂಸ್ತೂಯಮಾನಸ್ತ್ರಿದಶೈಃ ತತ್ರೈವಾಂತರಧೀಯತ || ೩೦ ||

ಏತಸ್ಮಿನ್ನೇವ ಕಾಲೇ ತು ಕಶ್ಯಪಸ್ಯ ಮಹಾತ್ಮನಃ |
ಅದಿತ್ಯಾ ಗರ್ಭಮಾಗಚ್ಛತ್ ಭಗವಾನ್ ಭೂತಭಾವನಃ | || ೩೧ ||

---

೨೮. ಕಶ್ಯಪನು ಹೇಳಿದನು—ಎಲೈ ದೇವನೆ! ಬಲಿಯು ಮೂರುಲೋಕವನ್ನೂ ತನ್ನ ಬಲದಿಂದ ಜಯಿಸಿರುವನು. ಆದ್ದರಿಂದ ನೀನು ನನಗೆ ಮಗನಾಗಿ ಹುಟ್ಟಿ ದೇವತೆಗಳಿಗೆ ಅನುಕೂಲವನ್ನು ಮಾಡು.

೨೯. ಇಂದ್ರನಿಗೆ ತಮ್ಮನಾಗಿ ಹುಟ್ಟು. ಉಪೇಂದ್ರನೆಂಬ ಹೆಸರನ್ನು ಹೊಂದು ಯಾವರೀತಿಯಿಂದಲಾದರೂ ಸರಿಯೆ. ಕೊನೆಗೆ ಮಾಯೆಯಿಂದಲಾದರೂ ಬಲಿಯನ್ನು ಜಯಿಸು. ಮೂರು ಲೋಕವನ್ನೂ ನನ್ನ ಮಗನಾದ ಇಂದ್ರನು ಶಾಶ್ವತವಾಗಿ ಆಳುವಂತೆ ಮಾಡು.

೩೦. ಮಹಾದೇವನು ಹೇಳಿದನು—ಆ ಕಶ್ಯಪನು ಹೀಗೆಂದು ಹೇಳಲು ಜನಾರ್ದನನು ಹಾಗೆಯೇ ಆಗಲೆಂದು ಹೇಳಿದನು. ದೇವತೆಗಳೆಲ್ಲರೂ ಹೊಗಳುತ್ತಿರುವಾಗಲೇ ಅವನು ಹೊರಟುಹೋದನು.

೩೧. ಆಗಲೇನೆ ಆ ಕಶ್ಯಪನ ಹೆಂಡತಿಯಾದ ಅದಿತಿಯು ಋತುಸ್ನಾನ ಮಾಡಿ ಗರ್ಭವನ್ನು ಧರಿಸಿದಳು ಆ ಗರ್ಭದಲ್ಲಿ ಆ ಸ್ವಾಮಿಯು ಬಂದನು.

**ತಸ್ಮಿನ್ ಕಾಲೇ ಬಲಿರ್ಯಾಗಂ ದೀರ್ಘಸತ್ರಂ ಮಹಾತಪಾಃ |**
**ಅಷ್ಟಮಹರ್ಷಿಭಿಸ್ಸಾರ್ಧಮಾರೇಭೇ ತದ್ವಿಧಾನತಃ ॥ ೩೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ವಾಮನಪ್ರಾದುರ್ಭಾವೋ ನಾಮ ಷಷ್ಟ್ಯಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೩೨. ಇದೇ ಕಾಲದಲ್ಲಿ ಬಲಿಯು ದೊಡ್ಡ ಯಾಗವನ್ನು ಮಾಡಲು ಉದ್ದೇಶಿಸಿ ಎಂಟು ಜನ ಮಹರ್ಷಿಗಳೊಡನೆ ಕೂಡಿಕೊಂಡು ಆ ಯಾಗವನ್ನು ಮೊದಲುಮಾಡಿದನು.

ಇಂತು ಶ್ರೀಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ವಾಮನ ಪ್ರಾದುರ್ಭಾವವೆಂಬ ಇನ್ನೂರ ಅರವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತಷಷ್ಟ್ಯಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ಶಂಕರ ಉವಾಚ ॥

**ಅಥ ವರ್ಷಸಹಸ್ರಾಂತೇ ಸರ್ವಲೋಕಮಹೇಶ್ವರಂ ।**
**ಅದಿತಿರ್ಜನಯಾಮಾಸ ವಾಮನಂ ವಿಷ್ಣುಮಚ್ಯುತಂ ॥ ೧ ॥**

**ಶ್ರೀವತ್ಸಕೌಸ್ತುಭೋರಸ್ಕಂ ಪೂರ್ಣೇಂದುಸದೃಶದ್ಯುತಿಂ ।**
**ಸುಂದರಂ ಪುಂಡರೀಕಾಕ್ಷಮತಿಖರ್ವತನುಂ ಹರಿಂ ॥ ೨ ॥**

**ವಟುವೇಷಧರಂ ದೇವಂ ಸರ್ವವೇದಾಂಗಗೋಚರಂ ।**
**ಮೇಖಲಾಜಿನದಂಡಾದಿಚಿಹ್ನೈರಂಕಿತಮೀಶ್ವರಂ ॥ ೩ ॥**

---

### ಇನ್ನೂರ ಅರವತ್ತೈಳನೆಯ ಅಧ್ಯಾಯವು



೧. ಶ್ರೀಶಂಕರನು ಹೇಳಿದನು—ಅನಂತರ ಒಂದುಸಾವಿರ ವರ್ಷಗಳಾದ ಮೇಲೆ ಅದಿತಿಯು ಸರ್ವಲೋಕಮಹೇಶ್ವರನಾದ ಅಚ್ಯುತನಾದ ವಾಮನನನ್ನು ಹೆತ್ತಳು

೨-೩. ಶ್ರೀವತ್ಸವೂ ಕೌಸ್ತುಭವೂ ಎದೆಯಲ್ಲಿರುವ, ಪೂರ್ಣೇಂದುವಿನಂತೆ ಕಾಂತಿಯುಳ್ಳ, ಸುಂದರನಾದ, ಪುಂಡರೀಕದಂತೆ ಕಣ್ಣುಗಳುಳ್ಳ, ಬಹಳ ಕುಳ್ಳನಾದ ಬ್ರಹ್ಮಚಾರಿಯ ವೇಷವನ್ನು ಧರಿಸಿರುವ, ವೇದ ಉಪನಿಷತ್ತುಗಳಲ್ಲಿ ಹೊಗಳಲ್ಪಟ್ಟಿರುವ, ಮೌಂಜಿ ಕೃಷ್ಣಾಜಿನ ದಂಡಕೋಲುಗಳನ್ನು ಹಿಡಿದಿರುವ ಆ ಸ್ವಾಮಿಯನ್ನು ಹೆತ್ತಳು.

ತಂ ದೃಷ್ಟ್ವಾ ದೇವತಾಸ್ಸರ್ವಾಃ ಶತಕ್ರತುಪುರೋಗಮಾಃ ।
ಸ್ತುತ್ವಾ ಮಹರ್ಷಿಭಿಸ್ಸಾರ್ಧಂ ನಮಶ್ಚಕ್ರುರ್ಮಹೌಜಸಂ ॥
ತತಃ ಪ್ರಸನ್ನೋ ಭಗವಾನ್ ಆಹ ತಾನ್ಸುರಸತ್ತಮಾನ್ ॥ ೪ ॥

॥ ವಾಮನ ಉವಾಚ ॥

ಕಿಂ ಕರ್ತವ್ಯಂ ಮಯಾ ಚಾದ್ಯ ತದ್ಬ್ರವೀತ ಸುರೋತ್ತಮಾಃ ॥ ೫ ॥

॥ ಶಂಕರ ಉವಾಚ ॥

ತತಃ ಪ್ರಹೃಷ್ಟಾಸ್ತ್ರಿದಶಾಸ್ತಮೂಚುಃ ಪರಮೇಶ್ವರಂ ॥ ೬ ॥

॥ ದೇವಾ ಊಚುಃ ॥

ಅಸ್ಮಿನ್ ಕಾಲೇ ಬಲೇರ್ಯಜ್ಞೋ ವರ್ತತೇ ಮಧುಸೂದನ ।
ಅಪ್ರತ್ಯಾಖ್ಯಾನಕಾಲೋಽಯಂ ತಸ್ಯ ದೈತ್ಯಪತೇಃ ಪ್ರಭೋ ॥
ಯಾಚಿತ್ವಾ ತ್ರಿದಿವಂ ಲೋಕಂ ತತ್ರ ತ್ವಂ ದಾತುಮರ್ಹಸಿ ॥ ೭ ॥

---

೪. ಇಂದ್ರನೇ ಮುಂತಾದ ದೇವತೆಗಳೂ ಅವನನ್ನು ನೋಡಿ ಮಹರ್ಷಿಗಳೊಡನೆ ಸ್ತುತಿಸುತ್ತಾ ಅವನನ್ನು ನಮಸ್ಕರಿಸಿದರು. ಅನಂತರ ಭಗವಂತನು ಪ್ರಸನ್ನನಾಗಿ ಆ ದೇವತೆಗಳಿಗೆ ಇಂತೆಂದನು.

೫ ವಾಮನನು ಹೇಳಿದನು—ಎಲೈ ದೇವತೆಗಳಿರಾ ! ನಾನು ನಿಮಗೆ ಈಗ ಏನುಮಾಡಬೇಕು ? ಅದನ್ನು ಹೇಳಿರಿ.

೬. ಶಂಕರನು ಹೇಳಿದನು—ಆಗ ಆ ದೇವತೆಗಳು ಸಂತೋಷಗೊಂಡು ಆ ಸ್ವಾಮಿಯನ್ನು ಕುರಿತು ಇಂತೆಂದರು.

೭. ದೇವತೆಗಳು ಹೇಳಿದರು—ಎಲೈ ಮಧುಸೂದನನೆ ! ಈಗ ಬಲಿಯು ಯಜ್ಞವನ್ನು ಮಾಡುತ್ತಿರುವನು. ಆ ಬಲಿಯು ಈಗ ಕೇಳಿದುದನ್ನೆಲ್ಲಾ ಕೊಡುವ ಕಾಲವು. ತಿರಸ್ಕರಿಸುವ ಕಾಲವಲ್ಲ. ಅಲ್ಲಿಗೆ ನೀನು ಹೋಗಿ ಸ್ವರ್ಗವನ್ನು ಯಾಚಿಸಿ ತೆಗೆದುಕೊಂಡು ಅದನ್ನು ನಮಗೆ ಕೊಡು.

॥ ಶಂಕರ ಉವಾಚ ॥

ಇತ್ಯುಕ್ತಸ್ತ್ರಿದಶೈಸ್ಸರ್ವೈರಾಜಗಾಮ ಬಲಿಂ ಹರಿಃ ।
ಯಾಗದೇಶೇ ಸಮಾಸೀನಮೃಷಿಭಿಸ್ಸಾರ್ಧಮಷ್ಟಭಿಃ ॥ ೮ ॥

ಅಭ್ಯಾಗತಂ ವಟುಂ ದೃಷ್ಟ್ವಾ ಸಹಸೋತ್ಥಾಯ ದೈತ್ಯರಾಟ್ ।
ಅಭ್ಯಾಗತಸ್ಸ್ವಯಂ ವಿಷ್ಣುರಿತಿ ಹಾಸಸಮನ್ವಿತಃ ॥ ೯ ॥

ಪೂಜಯಾಮಾಸ ವಿಧಿನಾ ನಿವೇಶ್ಯ ಕುಸುಮಾಸನೇ ।
ಪ್ರಣಿಪತ್ಯ ನಮಸ್ಕೃತ್ವಾ ಪ್ರಾಹ ಗದ್ಗದಯಾ ಗಿರಾ ॥ ೧೦ ॥

॥ ಬಲಿರುವಾಚ ॥

ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಸಫಲಂ ಮಮ ಜೀವಿತಂ ।
ತ್ವಾಮರ್ಚಯಿತ್ವಾ ವಿಪ್ರೇಂದ್ರ ಕಿಂ ಕರೋಮಿ ತವ ಪ್ರಿಯಂ ॥ ೧೧ ॥

ಆಗತೋಽಸಿ ಯಮರ್ಥಂ ತ್ವಮಾಮುದ್ದಿಶ್ಯ ದ್ವಿಜೋತ್ತಮ ।
ತತ್ಪ್ರಯಚ್ಛಾಮಿ ತೇ ಶೀಘ್ರಂ ಬ್ರೂಹಿ ವೇದವಿದಾಂ ವರ ॥ ೧೨ ॥

---

೮. ಶಂಕರನು ಹೇಳಿದನು–ದೇವತೆಗಳೆಲ್ಲರೂ ಹೀಗೆಂದು ಹೇಳಲು ಅದರಂತೆ ಆ ಸ್ವಾಮಿಯು ಬಲಿಚಕ್ರವರ್ತಿಯು ಯಾಗಮಾಡುತ್ತಿರುವ ಜಾಗಕ್ಕೆ ಬಂದನು. ಆ ಬಲಿಯು ಎಂಟು ಜನ ಋಷಿಗಳೊಡನೆ ಯಾಗದಲ್ಲಿ ಕುಳಿತಿದ್ದನು.

೯-೧೦. ಆ ವಟುವು ಬರಲು ದೈತ್ಯರಾಜನಾದ ಬಲಿಯು ಮೇಲಕ್ಕೆದ್ದು ವಿಷ್ಣುವೇ ಬಂದಿರುವನೆಂದು ತಿಳಿದು ನಕ್ಕನು. ಮತ್ತು ಒಳ್ಳೆಯ ಆಸನದಲ್ಲಿ ಕೂರಿಸಿ ವಿಧಿವತ್ತಾಗಿ ಪೂಜಿಸಿದನು. ಮತ್ತು ನಮಸ್ಕರಿಸಿ ಗದ್ಗದ ಧ್ವನಿಯ ಭಾಷಣದಿಂದ ಇಂತೆಂದನು.

೧೧. ಬಲಿಯು ಹೇಳಿದನು–ಎಲೈ ವಿಪ್ರೇಂದ್ರನೆ! ನಿನ್ನನ್ನು ಪೂಜಿಸಿದುದ ರಿಂದ ನಾನು ಧನ್ಯನಾದೆನು. ಕೃತಕೃತ್ಯನಾದೆನು. ನನ್ನ ಜೀವಿತವು ಸಫಲ ವಾಯಿತು. ನಿನಗೆ ಬೇಕಾದುದನ್ನು ಯಾವುದನ್ನು ಕೊಡಲಿ? ಅದನ್ನು ಹೇಳು.

೧೨. ಎಲೈ ವೈದಿಕಶ್ರೇಷ್ಠನೆ! ನೀನು ನನ್ನ ಬಳಿಗೆ ಯಾವ ಉದ್ದೇಶದಿಂದ ಬಂದಿದ್ದೀಯೆ? ಅದನ್ನು ನನಗೆ ಹೇಳು. ನಿನಗೆ ಕೊಡುತ್ತೇನೆ.

॥ ಶಂಕರ ಉವಾಚ ॥

ತತಃ ಪ್ರಹೃಷ್ಟಮನಸಾ ತಮುವಾಚ ಮಹೀಪತಿಂ ॥ ೧೩ ॥

॥ ವಾಮನ ಉವಾಚ ॥

ಶೃಣು ರಾಜೇಂದ್ರ ವಕ್ಷ್ಯಾಮಿ ಮಮಾಗಮನಕಾರಣಂ ।
ಅಗ್ನಿಕುಂಡಸ್ಯ ಪೃಥಿವೀಂ ದೇಹಿ ದೈತ್ಯಪತೇ ಮಮ ॥ ೧೪ ॥

ಮಮ ತ್ರಿವಿಕ್ರಮಮಿತಾಂ ಮಹೀಂ ತ್ವಂ ದಾತುಮರ್ಹಸಿ ।
ಸರ್ವೇಷಾಮೇವ ದಾನಾನಾಂ ಭೂಮಿದಾನಮನುತ್ತಮಂ ॥ ೧೫ ॥

ಯೋ ದದಾತಿ ಮಹೀಂ ರಾಜನ್ ವಿಪ್ರಾಯಾಕಿಂಚನಾಯ ವೈ ।
ಅಂಗುಷ್ಠಮಾತ್ರಾಮಪಿ ವಾ ಸ ಭವೇತ್ಪೃಥಿವೀಪತಿಃ ॥ ೧೬ ॥

ನ ಭೂಮಿದಾನಸದೃಶಂ ಪವಿತ್ರಮಿಹ ವಿದ್ಯತೇ ।
ಭೂಮಿಂ ಯಃ ಪ್ರತಿಗೃಹ್ಣಾತಿ ಭೂಮಿಂ ಯಶ್ಚ ಪ್ರಯಚ್ಛತಿ ॥ ೧೭ ॥

---

೧೩. ಶಂಕರನು ಹೇಳಿದನು—ಆಗ ಅವನು ಸಂತೋಷಗೊಂಡು ಆ ಬಲಿಯನ್ನು ಕುರಿತು ಇಂತೆಂದನು.

೧೪. ವಾಮನನು ಹೇಳಿದನು—ಎಲೈ ರಾಜಾಧಿರಾಜನೆ! ನಾನು ಬಂದ ಕಾರಣವನ್ನು ಹೇಳುತ್ತೇನೆ. ಕೇಳು. ನನಗೆ ಅಗ್ನಿಕಾರ್ಯವನ್ನು ಮಾಡಲು ಅಗ್ನಿಯನ್ನು ಇಟ್ಟುಕೊಳ್ಳಬೇಕು. ಅದಕ್ಕೆ ಸಾಕಾಗುವಷ್ಟು ಭೂಮಿಯನ್ನು ಕೊಡು.

೧೫. ನನಗೆ ಮೂರು ಹೆಜ್ಜೆಯಷ್ಟಿರುವ ಭೂಮಿಯನ್ನು ನೀನು ಕೊಡು, ಎಲ್ಲಾ ದಾನಗಳಿಗಿಂತಲೂ ಭೂಮಿದಾನವು ಉತ್ತಮವಾದುದು.

೧೬. ಬಡವನಾಗಿರುವ ಬ್ರಾಹ್ಮಣನಿಗೆ ಯಾವನು ಭೂಮಿಯನ್ನು ದಾನ ಮಾಡುವನೋ ಅವನಿಗೆ ಒಳ್ಳೆಯ ಪದವಿಯು ಬರುತ್ತದೆ. ಕೊನೆಗೆ ಒಂದು ಹೆಬ್ಬೆಟ್ಟಿನಷ್ಟಾದರೂ ಕೊಟ್ಟರೆ ಅವನೂ ಕೂಡ ರಾಜನಾಗುತ್ತಾನೆ.

೧೭-೧೮. ಭೂಮಿದಾನಕ್ಕಿಂತಲೂ ಪವಿತ್ರವಾದ ದಾನವು ಮತ್ತೊಂದಿಲ್ಲ. ಯಾವನು ಭೂದಾನವನ್ನು ತೆಗೆದುಕೊಳ್ಳುವನೋ ಆ ದಾನವನ್ನು ಯಾವನು

ಉಭೌ ತೌ ಪುಣ್ಯಕರ್ಮಾಣೌ ನಿಯತೌ ಸ್ವರ್ಗಗಾಮಿನೌ ।
ತಸ್ಮಾದ್ಭೂಮಿಂ ಮಹಾರಾಜ ಪ್ರಯಚ್ಛ ತ್ರಿಪದೀಂ ಮಮ ॥ ೧೮ ॥

ಏತದಲ್ಪಾಂ ಮಹೀಂ ದಾತುಂ ಮಾ ವಿಶಂಕ ಮಹೀಪತೇ ।
ಜಗತ್ತ್ರಯಪ್ರದಾನೇನ ನಾಮ ಭೂಪ ಭವಿಷ್ಯತಿ ॥ ೧೯ ॥

॥ ಶಂಕರ ಉವಾಚ ॥

ತತಃ ಪ್ರಹೃಷ್ಟವದನಃ ತಥೇತ್ಯಾಹ ಮಹೀಪತಿಃ ।
ತಸ್ಮೈ ಮಹೀಪ್ರದಾನಂ ತು ಕರ್ತುಂ ಮೇನೇ ವಿಧಾನತಃ ॥ ೨೦ ॥

ತಂ ದೃಷ್ಟ್ವಾ ದೈತ್ಯರಾಜಾನಂ ತದಾ ತಸ್ಯ ಪುರೋಹಿತಃ ।
ಉಶನಾ ಹ್ಯಬ್ರವೀದ್ವಾಕ್ಯಂ ಮಾ ರಾಜನ್ ದೀಯತಾಂ ಮಹೀ ॥ ೨೧ ॥

---

ಕೊಡುತ್ತಾನೆಯೋ ಅವರಿಬ್ಬರೂ ಪುಣ್ಯವಂತರು. ಖಂಡಿತವಾಗಿಯೂ ಸ್ವರ್ಗಕ್ಕೆ ಹೋಗುತ್ತಾರೆ. ಆದ್ದರಿಂದ ಎಲೈ ದೊರೆಯೆ! ನನಗೆ ಮೂರು ಹೆಜ್ಜೆಯಷ್ಟು ಭೂಮಿಯನ್ನು ದಾನವಾಗಿ ಕೊಡು.

೧೯. ಎಲೈ ಬಲಿಚಕ್ರವರ್ತಿಯೆ! ಈ ಸ್ವಲ್ಪವಾದ ಭೂಮಿಯನ್ನು ಕೊಡಲು ಸಂದೇಹಪಡಬೇಡ. ಈ ಮೂರು ಹೆಜ್ಜೆ ಭೂಮಿಯನ್ನು ಕೊಟ್ಟರೆ ಮೂರು ಲೋಕವನ್ನು ಕೊಟ್ಟ ಕೀರ್ತಿಯು ನಿನಗೆ ಬರುವುದು

೨೦. ಶಂಕರನು ಹೇಳಿದನು-ಆಗ ಆ ಬಲಿಯು ಸಂತೋಷದಿಂದ ಹಾಗೆಯೇ ಆಗಲಿ ಎಂದನು. ಮತ್ತು ಶಾಸ್ತ್ರದ ರೀತಿಯಿಂದ ಭೂದಾನವನ್ನು ಮಾಡಲು ಮನಸ್ಸು ಮಾಡಿದನು.

೨೧. ಹೀಗೆ ಭೂಮಿಯನ್ನು ಕೊಡಲು ಉದ್ದೇಶಪಟ್ಟ ಆ ಬಲಿಯನ್ನು ನೋಡಿ ಅವನ ಪುರೋಹಿತನಾದ ಶುಕ್ರನು "ಎಲೈ ರಾಜನೆ! ಭೂದಾನ ವನ್ನಿವನಿಗೆ ಕೊಡಬೇಡ" ಎಂದನು.

॥ ಶುಕ್ರ ಉವಾಚ ॥

ಏಷ ವಿಷ್ಣುಃ ಪರೇಶೋಽಥ ದೇವೈಃ ಸಂಪ್ರಾರ್ಥಿತೋ ಹರಿಃ ।
ವಂಚಯಿತ್ವಾ ಮಹೀಂ ಸರ್ವಾಂ ತ್ವತ್ತಃ ಪ್ರಾಪ್ತುಮಿಹಾಗತಃ ॥ ೨೨ ॥

ತಸ್ಮಾನ್ಮಹೀ ನ ದಾತವ್ಯಾ ತಸ್ಮೈ ರಾಜನ್ ಮಹಾತ್ಮನೇ ।
ಅನ್ಯಮರ್ಥಂ ಪ್ರಯಚ್ಛಸ್ವ ವಚನಾನ್ಮಮ ಭೂತಲೇ ॥ ೨೩ ॥

॥ ಶಂಕರ ಉವಾಚ ॥

ತತಃ ಪ್ರಹಸ್ಯ ರಾಜಾಸೌ ತಂ ಗುರುಂ ಪ್ರಾಹ ಧೈರ್ಯತಃ ॥ ೨೪ ॥

॥ ಬಲಿರುವಾಚ ॥

ಪ್ರೀತಯೇ ವಾಸುದೇವಸ್ಯ ಸರ್ವಂ ಪುಣ್ಯಂ ಕೃತಂ ಮಯಾ ।
ಅದ್ಯ ಧನ್ಯೋಽಸ್ಮ್ಯಹಂ ವಿಷ್ಣುಃ ಸ್ವಯಮೇವಾಗತೋ ಯದಿ ॥ ೨೫ ॥

---

೨೨. ಶುಕ್ರನು ಹೇಳಿದನು–ಎಲೈ ಬಲಿಯೆ ! ಈತನು ಪರಾತ್ಪರನಾದ ವಿಷ್ಣುವು. ದೇವತೆಗಳ ಪ್ರಾರ್ಥನೆಯಂತೆ ಬಂದಿದ್ದಾನೆ. ನಿನ್ನನ್ನು ವಂಚನೆ ಮಾಡಿ ಎಲ್ಲಾ ಭೂಮಿಯನ್ನೂ ನಿನ್ನಿಂದ ಅಪಹರಿಸಿಕೊಳ್ಳುತ್ತಾನೆ.

೨೩. ಆದ್ದರಿಂದ ಈತನಿಗೆ ನೀನು ಭೂಮಿಯನ್ನು ದಾನಕೊಡಬೇಡ. ಬೇರೆ ಯಾವುದನ್ನಾದರೂ ಕೊಡು. ನನ್ನ ಮಾತನ್ನು ಕೇಳು.

೨೪. ಶಂಕರನು ಹೇಳಿದನು–ಅನಂತರ ಆ ರಾಜನು ನಕ್ಕು ಆ ಗುರುವಾದ ಶುಕ್ರನನ್ನು ಕುರಿತು ಧೈರ್ಯದಿಂದ ಇಂತೆಂದನು.

೨೫. ಬಲಿಯು ಹೇಳಿದನು–ನಾನು ಶ್ರೀವಿಷ್ಣುವಿನ ಪ್ರೀತಿಗೋಸ್ಕರ ಸಮಸ್ತ ಪುಣ್ಯಗಳನ್ನೂ ಮಾಡುತ್ತಿದ್ದೇನೆ. ಅಂತಹ ವಿಷ್ಣುವು ಪ್ರತ್ಯಕ್ಷನಾಗಿ ಬಂದಿದ್ದ ಪಕ್ಷದಲ್ಲಿ ನಾನೇ ಧನ್ಯನು.

ತಸ್ಯ ಪ್ರದೇಯಮೇವಾದ್ಯ ಜೀವಿತಂ ಚ ಮಹಾಸುಖಂ ।
ತಸ್ಮಾದಸ್ಮೈ ಪ್ರಯಚ್ಛಾಮಿ ತ್ರಿಲೋಕೀಮಪಿ ಚ ಧ್ರುವಂ ॥ ೧೬ ॥

॥ ಶಂಕರ ಉವಾಚ ॥

ಇತ್ಯುಕ್ತ್ವಾ ಭೂಪತಿಸ್ತಸ್ಯ ಪಾದೌ ಪ್ರಕ್ಷಾಳ್ಯ ಭಕ್ತಿತಃ ।
ವಾಂಛಿತಾಂ ಪ್ರದದೌ ಭೂಮಿಂ ವಾರಿಪೂರ್ವಂ ವಿಧಾನತಃ ॥ ೧೭ ॥

ಪರಿಣೀಯ ನಮಸ್ಕೃತ್ವಾ ದತ್ವಾ ವೈ ದಕ್ಷಿಣಾಂ ವಸು ।
ಪ್ರೋವಾಚ ತಂ ಪುನರ್ವಿಪ್ರಂ ಪ್ರಹೃಷ್ಟೇನಾಂತರಾತ್ಮನಾ ॥ ೧೮ ॥

॥ ಬಲಿರುವಾಚ ॥

ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ತವ ದತ್ವಾ ಮಹೀಂ ದ್ವಿಜ ।
ಯಥೇಷ್ಟಂ ತವ ವಿಪ್ರೇಂದ್ರ ತದ್ಗೃಹಾಣ ಮಹೀಮಿಮಾಂ ॥ ೧೯ ॥

---

೧೬. ಏನನ್ನು ಬೇಕಾದರೂ ಅವನಿಗೆ ಕೊಡುತ್ತೇನೆ. ಅದೇ ನನಗೆ ಮಹಾ ಸುಖವು. ಆದ್ದರಿಂದ ಅವನು ಕೇಳುವ ಪಕ್ಷದಲ್ಲಿ ನಾನು ಮೂರು ಲೋಕವನ್ನೂ ಕೊಡುತ್ತೇನೆ ಇದು ನಿಶ್ಚಯವು.

೧೭. ಶಂಕರನು ಹೇಳಿದನು–ಹೀಗೆಂದು ಹೇಳಿ ಆ ಬಲಿಚಕ್ರವರ್ತಿಯು ಆ ವಾಮನನ ಕಾಲುಗಳನ್ನು ತೊಳೆದು ಅವನಿಗೆ ಬೇಕಾದಷ್ಟು ಭೂಮಿಯನ್ನು ನೀರನ್ನು ಬಿಟ್ಟು ಕೊಟ್ಟುಬಿಟ್ಟನು

೧೮. ನಮಸ್ಕಾರ ಮಾಡಿ ದಕ್ಷಿಣೆಯನ್ನು ಕೊಟ್ಟು ಆ ಬ್ರಾಹ್ಮಣನನ್ನು ಕುರಿತು ಭಕ್ತಿಯಿಂದಲೂ ಸಂತೋಷದಿಂದಲೂ ಇಂತೆಂದನು.

೧೯. ಬಲಿಯು ಹೇಳಿದನು-ಎಲೈ ದ್ವಿಜನೆ ! ನಿನಗೆ ಭೂಮಿದಾನವನ್ನು ಕೊಟ್ಟು ಧನ್ಯನಾದೆ. ಕೃತಕೃತ್ಯನಾದೆ. ನೀನು ಇದನ್ನು ಸಂತಸದಿಂದ ತೆಗೆದುಕೊ.

॥ ಶಂಕರ ಉವಾಚ ॥

ತಮುವಾಚ ನೃಪಂ ವಿಷ್ಣೋ ರಾಜಂಸ್ತವ ಸಮೀಪತಃ ।
ಮಾಪಯಾಮಿ ಪದೇನಾದ್ಯ ಪೃಥಿವೀಂ ತವ ಪಶ್ಯತ ॥ ೩೦ ॥

ಇತ್ಯುಕ್ತ್ವಾ ವಟುರೂಪಂ ತದ್ವಿಹಾಯ ಪರಮೇಶ್ವರಃ ।
ತ್ರಿವಿಕ್ರಮವಪುರ್ಭೂತ್ವಾ ಜಗ್ರಾಹ ಪೃಥಿವೀಮಿಮಾಂ ॥ ೩೧ ॥

ಪಂಚಾಶತ್ಕೋಟಿವಿಸ್ತೀರ್ಣಾಂ ಸ ಸಮುದ್ರಮಹೀಧರಾಂ ।
ಸಸಾಗರಾಂ ಚ ಸದ್ವೀಪಾಂ ಸದೇವಾಸುರಮಾನುಷಾಂ ॥ ೩೨ ॥

ಪಾದೇನೈಕೇನ ಪುರುಷೋ ವಿಕ್ರಮ್ಯ ಮಧುಸೂದನಃ ।
ಉವಾಚ ದೈತ್ಯರಾಜೇಂದ್ರಂ ಕಿಂ ಕರೋಮೀತಿ ಸಾಂಪ್ರತಂ ॥ ೩೩ ॥

ತದ್ವೈ ತ್ರೈವಿಕ್ರಮಂ ರೂಪಮೀಶ್ವರಸ್ಯ ಮಹೌಜಸಂ ।
ಹಿತಾರ್ಥಮಪಿ ದೇವಾನಾಮೃಷೀಣಾಂ ಚ ಮಹಾತ್ಮನಾಂ ॥ ೩೪ ॥

---

೩೦. ಶಂಕರನು ಹೇಳಿದನು-ಆಗ ವಿಷ್ಣುವು ಅವನನ್ನು ಕುರಿತು, ಎಲೈ ದೊರೆಯೆ! ನೀನು ಕೊಟ್ಟುದು ಸರಿಯಷ್ಟೆ! ಆದರೆ ನಿನ್ನ ಕಣ್ಣೆದುರಿಗೆ ನೀನು ಕೊಟ್ಟ ಮೂರುಹೆಜ್ಜೆ ಭೂಮಿಯನ್ನು ಅಳೆಯುಬೇಕು.

೩೧. ಈರೀತಿ ಹೇಳಿ ವಿಷ್ಣುವು ಆ ವಟುವಿನ ಆಕಾರವನ್ನು ಬಿಟ್ಟು ತ್ರಿವಿಕ್ರಮಾವತಾರವನ್ನು ತಾಳಿ ಈ ಭೂಮಿಯನ್ನು ಅಳೆದನು.

೩೨-೩೩. ಐವತ್ತುಕೋಟಿ ಯೋಜನಗಳ ಚದರಳತೆಯುಳ್ಳ, ಸಮುದ್ರ ಬೆಟ್ಟಗಳಿಂದ ಕೂಡಿರುವ, ಸಾಗರ ದ್ವೀಪಗಳಿಂದ ಸೇರಿಕೊಂಡಿರುವ, ದೇವತೆಗಳು ಅಸುರರು ಮನುಷ್ಯರುಗಳುಳ್ಳ ಈ ಭೂಮಿಯನ್ನು ಆ ಸ್ವಾಮಿಯು ಒಂದೇ ಹೆಜ್ಜೆಯಿಂದ ಅಳೆದು, ಅನಂತರ ಎಲೈ ಬಲಿಯೆ! ಈಗ ಮುಂದೇನು ಮಾಡಲೆಂದನು.

೩೪. ದೇವತೆಗಳಿಗೂ ಋಷಿಗಳಿಗೂ ಮಹಾತ್ಮರಿಗೂ ಒಳ್ಳೆಯದಾಗಬೇಕೆಂದು ಆ ಸ್ವಾಮಿಯು ತ್ರಿವಿಕ್ರಮಾವತಾರವನ್ನು ತಾಳಿದನು.

ನ ದ್ರಷ್ಟುಮಪಿ ಶಕ್ಯಂ ಸ್ಯಾದ್ಬ್ರಹ್ಮಣಃ ಶಂಕರಸ್ಯ ಚ ।
ತತ್ಪದಂ ಪೃಥಿವೀಂ ಸರ್ವಾಮಾಕ್ರಮ್ಯ ಗಿರಿಜೇ ಶುಭೇ ॥ ೩೫ ॥

ಅತಿರಿಕ್ತಂ ಸಮಭವತ್ ಶತಯೋಜನಮಾಯತಂ ।
ದಿವ್ಯಂ ಚಕ್ಷುರ್ದದೌ ತಸ್ಮೈ ದೈತ್ಯರಾಜ್ಞೇ ಸನಾತನಃ ॥ ೩೬ ॥

ತಸ್ಮೈ ಸಂದರ್ಶಯಾಮಾಸ ಸ್ವಕಂ ರೂಪಂ ಜನಾರ್ದನಃ ।
ತದ್ವಿಶ್ವರೂಪಂ ದೇವಸ್ಯ ದೃಷ್ಟ್ವಾ ದೈತ್ಯೇಶ್ವರೋ ಬಲೀ ॥ ೩೭ ॥

ಪ್ರಹರ್ಷಮತುಲಂ ಲೇಭೇ ಸಾನಂದಾಶ್ರುಪರಿಪ್ಲುತಃ
ದೃಷ್ಟ್ವಾ ದೇವಂ ನಮಸ್ಕೃತ್ಯ ಸ್ತುತ್ವಾ ಸ್ತುತಿಭಿರೇವ ಚ ।
ಪ್ರಾಹ ಗದ್ಗದಯಾ ವಾಚಾ ಪ್ರಹೃಷ್ಟೇನಾಂತರಾತ್ಮನಾ ॥ ೩೮ ॥

॥ ಬಲಿರುವಾಚ ॥

ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ತ್ವಾಂ ದೃಷ್ಟ್ವಾ ಪರಮೇಶ್ವರಂ ।
ಲೋಕತ್ರಯಂ ತ್ವಯ್ಯೈವೈತದ್ಗೃಹಾಣ ಪರಮೇಶ್ವರ ॥ ೩೯ ॥

---

೩೫-೩೮. ಆ ರೂಪವನ್ನು ಶಂಕರನಾಗಲೀ ಬ್ರಹ್ಮನಾಗಲೀ ನೋಡಲಾರದೆ ಹೋದರು. ಆ ಅಳೆಯುವ ಕಾಲು ಐವತ್ತು ಕೋಟಿ ಯೋಜನಗಳ ಚದುರಳತೆಯುಳ್ಳ ಭೂಮಿಯನ್ನು ಅಳೆದುದಲ್ಲದೆ, ನೂರು ಯೋಜನದಷ್ಟು ಹೆಚ್ಚಾಗಿ ಮಿಕ್ಕಿತು. ಆ ಸನಾತನನಾದ ಸ್ವಾಮಿಯು ಆ ದೈತ್ಯರಾಜನಿಗೆ ದಿವ್ಯವಾದ ಕಣ್ಣುಗಳನ್ನು ಕೊಟ್ಟನು. ಮತ್ತು ತನ್ನ ಆ ದಿವ್ಯರೂಪವನ್ನು ಬಲಿಗೆ ಸ್ವಾಮಿಯು ತೋರಿಸಿದನು. ಆ ದೈತ್ಯೇಶ್ವರನಾದ ಬಲಿಯು ಆ ಸ್ವಾಮಿಯ ವಿಶ್ವರೂಪವನ್ನು ನೋಡಿ ಬಹುವಾಗಿ ಸಂತೋಷಪಟ್ಟು ಆನಂದಾಶ್ರುಗಳನ್ನು ಸುರಿಸಿದನು. ಆ ಸ್ವಾಮಿಯನ್ನು ನೋಡಿ ನಮಸ್ಕರಿಸಿ ಸ್ತುತಿಸಿ ಸಂತೋಷಗೊಂಡ ಮನಸ್ಸಿನಿಂದ ಇಂತೆಂದು ಹೇಳಿದನು.

೩೯. ಬಲಿಯು ಹೇಳಿದನು-ಎಲೈ ಸ್ವಾಮಿಯೆ ! ಧನ್ಯನಾದೆನು ಕೃತಕೃತ್ಯನಾದೆನು. ನಿನ್ನನ್ನು ನೋಡಿದುದರಿಂದ ಬಹು ಸಂತೋಷವಾಯಿತು. ಈ ಮೂರು ಲೋಕವೂ ನಿನ್ನದೇ ! ಇದನ್ನು ಸ್ವೀಕರಿಸು.

|| ಶಂಕರ ಉವಾಚ ||

ಅಥ ಸರ್ವೇಶ್ವರೋ ವಿಷ್ಣುರ್ದ್ವಿತೀಯಂ ಪದಮವ್ಯಯಂ |
ಊರ್ಧ್ವಂ ಪ್ರಸಾರಯಾಮಾಸ ಬ್ರಹ್ಮಲೋಕಾಂತಮಚ್ಯುತಃ || ೪೦ ||

ಸನಕ್ಷತ್ರಗ್ರಹೋಪೇತಂ ಸರ್ವಂ ದೇವಸಮಾವೃತಂ |
ಪಾದೋ ನ ಪರಿಪೂರ್ಣೋಽಭೂದಚ್ಯುತಸ್ಯ ಶುಭಾನನೇ || ೪೧ ||

ತತಃ ಪಿತಾಮಹೋ ದೃಷ್ಟ್ವಾ ಚಕ್ರಪದ್ಮಾದಿಚಿಹ್ನಿತಂ |
ಪದಂ ತದ್ದೇವದೇವಸ್ಯ ಹರ್ಷಸಂಕುಲಚೇತಸಾ || ೪೨ ||

ಧನ್ಯೋಽಸ್ಮೀತಿ ವದನ್ ಬ್ರಹ್ಮಾ ಗೃಹೀತ್ವಾ ಸ್ವಕಮಂಡಲುಂ |
ಭಕ್ತ್ಯಾ ಪ್ರಕ್ಷಾಲಯಾಮಾಸ ತತ್ರ ಸಂಸ್ಥಿತವಾರಿಣಾ || ೪೩ ||

ಅಕ್ಷಯ್ಯಮಭವತ್ತೋಯಂ ತಸ್ಯ ವಿಷ್ಣೋಃ ಪ್ರಭಾವತಃ |
ತತ್ತೀರ್ಥಂ ಮೇರುಶಿಖರೇ ಪಪಾತ ವಿಮಲಂ ಜಲಂ || ೪೪ ||

---

೪೦. ಶಂಕರನು ಹೇಳಿದನು-ಅನಂತರ ಸರ್ವೇಶ್ವರನಾದ ವಿಷ್ಣುವು ಎರಡನೆಯ ಕಾಲನ್ನು ಮೇಲಕ್ಕೆ ಮೇಲಿನ ಲೋಕದವರೆಗೂ ನೀಡಿದನು.

೪೧. ನಕ್ಷತ್ರಗಳಿಂದಲೂ ದೇವತೆಗಳಿಂದಲೂ ಕೂಡಿಕೊಂಡಿರುವ ಆ ಮೇಲಿನ ಲೋಕವು ಈ ಅಚ್ಯುತನ ಪಾದಗಳಿಗೆ ಸಾಕಾಗಲಿಲ್ಲ.

೪೨-೪೩. ಆಗ ಬ್ರಹ್ಮನು ಶಂಖ ಚಕ್ರಗಳ ಚಿಹ್ನೆಗಳಿರುವ ಆ ಕಾಲನ್ನು ನೋಡಿದನು. ಅದು ಆ ದೇವದೇವನಾದ ವಿಷ್ಣುವಿನಕಾಲು ಎಂದು ತಿಳಿದು ಸಂತೋಷಗೊಂಡು ಧನ್ಯನಾದೆನು ಎಂದು ಹೇಳುತ್ತಾ ತನ್ನ ಕಮಂಡುಲುವಿನಲ್ಲಿ ನೀರನ್ನು ತಂದು ಭಕ್ತಿಯಿಂದ ಆ ಪಾದಗಳನ್ನು ತೊಳೆದನು.

೪೪. ಆ ನೀರು ಆ ವಿಷ್ಣುವಿನ ಪ್ರಭಾವದಿಂದ ಅಕ್ಷಯವಾಯಿತು ಆ ನಿರ್ಮಲವಾದ ನೀರು ಮೇರುವಿನಲ್ಲಿ ಬಿದ್ದಿತು.

ಜಗತಃ ಪಾವನಾರ್ಥಂ ವೈ ಚತುರ್ದಿಕ್ಷು ಪ್ರವಾಹಿತಂ ।
ಸೀತಾ ಚಾಲಕನಂದಾ ಚ ಚಕ್ಷುರ್ಭದ್ರಾ ಯಥಾಕ್ರಮಂ　　　॥ ೪೫ ॥

ತತಶ್ಚಾಲಕನಂದಾ ಚ ಮೇರೋರ್ದಕ್ಷಿಣತಃ ಸ್ಮೃತಾ ।
ತ್ರಿಧಾ ನಾಮ್ನಾ ತ್ರಿಪಥಗಾ ತ್ರಿಸ್ರೋತಾ ಲೋಕಪಾವನೀ　　　॥ ೪೬ ॥

ಊರ್ಧ್ವೇ ಮಂದಾಕಿನೀ ಪ್ರೋಕ್ತಾ ತ್ವಧೋ ಭೋಗವತೀ ತಥಾ ।
ಮಧ್ಯೇ ವೇದವತೀ ಗಂಗಾ ಪಾವನಾರ್ಥಂ ನೃಣಾಂ ಶಿವಾ　　　॥ ೪೭ ॥

ತಾಂ ದೃಷ್ಟ್ವಾ ಮೇರುಮಧ್ಯಾತ್ತು ಪ್ರಸ್ರವಂತೀಂ ಶುಭಾನನೇ ।
ಆತ್ಮನಃ ಪಾವನಾರ್ಥಾಯ ಶಿರಸಾಹಮಧಾರಯಂ　　　॥ ೪೮ ॥

---

೪೫. ಆ ನೀರು ಜಗತ್ತನ್ನು ಪಾವನ ಮಾಡುವುದಕ್ಕೋಸ್ಕರ ಆ ಬೆಟ್ಟದಿಂದ ನಾಲ್ಕು ಕಡೆಗೂ ಹರಿಯಿತು. ಸೀತಾ, ಅಲಕನಂದೆ, ಚಕ್ಷು, ಭದ್ರಾ ಎಂಬದಾಗಿ ನಾಲ್ಕುಭಾಗವಾಗಿ ಹರಿಯಿತು.

೪೬. ಅಲಕನಂದೆ ಎಂಬ ನದಿಯು ಮೇರುವಿನ ದಕ್ಷಿಣಭಾಗದಲ್ಲಿ ಹರಿಯುತ್ತದೆ. ಅದು ಮತ್ತೆ ಮೂರುಭಾಗವಾಗಿ ಲೋಕವನ್ನು ಪಾವನ ಮಾಡಲು ಹರಿಯುತ್ತದೆ.

೪೭. ಮಂದಾಕಿನಿ ಎಂಬ ನದಿಯು ಅಂತರಿಕ್ಷದಲ್ಲಿಯೇ ನಿಂತಿತು. ಭೋಗವತಿ ಎಂಬ ನದಿಯು ಪಾತಾಳಕ್ಕೆ ಹೋಯಿತು. ಗಂಗೆ ಎಂಬ ವೇಗವತಿಯಾದ ನದಿಯು ಮನುಷ್ಯರನ್ನು ಪವಿತ್ರರನ್ನಾಗಿ ಮಾಡಲು ಮನುಷ್ಯಲೋಕದಲ್ಲಿ ಹರಿಯಿತು.

೪೮ ಮೇರುವಿನ ಮೇಲಿಂದ ಬೀಳುತ್ತಿರುವ ಆ ನದಿಯನ್ನು ನೋಡಿ ನಾನು ನನ್ನ ಪವಿತ್ರತೆಗೋಸ್ಕರ ಮಧ್ಯಭಾಗದಲ್ಲಿಯೇ ಅದನ್ನು ತಲೆಯಲ್ಲಿ ಧರಿಸಿದೆನು.

ದಿವ್ಯವರ್ಷಸಹಸ್ರಂ ತು ಧೃತ್ವಾ ಗಂಗಾಜಲಂ ಶುಭಂ ।
ಶಿವತ್ವಮಗಮಂ ದೇವಿ ಸರ್ವಲೋಕೇಷು ಪೂಜಿತಃ ॥ ೪೯ ॥

ಯೋ ವಹೇಚ್ಛಿರಸಾ ಗಂಗಾತೋಯಂ ವಿಷ್ಣುಪದೋದ್ಭವಂ ।
ಪ್ರಾಶಯೇದ್ವಾ ಜಗತ್ಪೂಜ್ಯೋ ಭವಿಷ್ಯತಿ ನ ಸಶಯಃ ॥ ೫೦ ॥

ಗಂಗಾ ಗಂಗೇತಿ ಯೋ ಬ್ರೂಯಾತ್ ಯೋಜನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೫೧ ॥

ತತೋ ಭಗೀರಥೋ ರಾಜಾ ಗೌತಮಶ್ಚ ಮಹಾತಪಾಃ ।
ತಪಸಾ ಪೂಜಯಿತ್ವಾ ಮಾಂ ಗಂಗಾರ್ಥಂ ಸಮಯಾಚತ ॥ ೫೨ ॥

ಸರ್ವಲೋಕಹಿತಾರ್ಥಾಯ ತಾಂ ಗಂಗಾಂ ವೈಷ್ಣವೀಂ ಶಿವಾಂ ।
ತಯೋರಹಂ ತಾಮದದಾಂ ಪ್ರೀತ್ಯಾ ದೇವಿ ಸರಿದ್ವರಾಂ ॥ ೫೩ ॥

---

೪೯. ಅನಂತರ ಆ ಗಂಗೆಯ ನೀರನ್ನು ನಾನು ದೇವತೆಗಳ ಸಾವಿರ ವರ್ಷಗಳವರೆಗೂ ತಲೆಯಲ್ಲಿ ಧರಿಸಿದ್ದೆನು. ಅದರಿಂದ ಪವಿತ್ರನಾಗಿ ಎಲ್ಲರಿಂದಲೂ ಪೂಜಿತನಾದೆನು.

೫೦. ವಿಷ್ಣುವಿನ ಪಾದೋದಕವಾದ ಗಂಗೆಯನ್ನು ಯಾವನು ತಲೆಯಲ್ಲಿ ಧರಿಸುವನೋ ಅಥವಾ ಕುಡಿಯುವನೋ ಅವನು ಜಗತ್ತಿಗೇ ಪೂಜ್ಯನಾಗುತ್ತಾನೆ. ಸಂಶಯವಿಲ್ಲ.

೫೧. ನೂರಾರು ಯೋಜನ ದೂರದಲ್ಲಿದ್ದರೂ ಗಂಗೆ ಗಂಗೆ ಎಂದು ಯಾವನು ಹೇಳುತ್ತಾನೆಯೋ ಅವನು ಪಾಪಗಳಿಂದ ಮುಕ್ತನಾಗಿ ವಿಷ್ಣು ಲೋಕವನ್ನು ಹೊಂದುತ್ತಾನೆ. ಸಂಶಯವಿಲ್ಲ.

೫೨. ಅನಂತರ ರಾಜನಾದ ಭಗೀರಥನೂ, ಮಹಾತಪಸ್ವಿಯಾದ ಗೌತಮನೂ ಇಬ್ಬರೂ ತಪಸ್ಸುಮಾಡಿ ನನ್ನನ್ನು ಸಂತೋಷಪಡಿಸಿ ಗಂಗೆಯನ್ನು ಕೇಳಿಕೊಂಡರು.

೫೩. ಸರ್ವಲೋಕಗಳಿಗೂ ಹಿತವನ್ನುಂಟು ಮಾಡಬೇಕೆಂದು ಆ ವೈಷ್ಣವೀ ಗಂಗೆಯನ್ನು ಅವರಿಬ್ಬರಿಗೂ ನಾನು ಪ್ರೀತಿಯಿಂದ ಕೊಟ್ಟೆನು.

**ಗೌತಮೇನ ಸಮಾನೀತಾ ಗೌತಮೀ ತೇನ ಕೀರ್ತಿತಾ ।**
**ಭಾಗೀರಥೀತಿ ವಿಖ್ಯಾತಾ ತೇನ ರಾಜ್ಞಾ ವೃತಾ ಯತಃ ॥ ೫೪ ॥**

**ಪ್ರಸಂಗಾತ್ತೇ ಸಮಾಖ್ಯಾತಂ ಗಂಗಾಜನ್ಮಾತ್ಯನುತ್ತಮಂ ।**
**ತತೋ ನಾರಾಯಣಃ ಶ್ರೀಮಾನ್ ಬಲಿರ್ದೈತ್ಯಪತೇಃ ಪ್ರಭುಃ ॥ ೫೫ ॥**

**ರಸಾತಲಂ ಶುಭಂ ಲೋಕಂ ಪ್ರದದೌ ಭಕ್ತವತ್ಸಲಃ ।**
**ಸರ್ವೇಷಾಂ ದಾನವಾನಾಂ ತು ನಾಗಾನಾಂ ಯಾದಸಾಮಪಿ ॥ ೫೬ ॥**

**ರಾಜಾನಂ ತು ಬಲಿಂ ಚಕ್ರೇ ಯಾವದಾಭೂತಸಂಪ್ಲವಂ ।**
**ಪ್ರತಿಗೃಹ್ಯ ಬಲೇರ್ಲೋಕಾನ್ ವಟುವೇಷೇಣ ದೈತ್ಯಹಾ ।**
**ಮಹೇಂದ್ರಾಯ ದದೌ ಪ್ರೀತ್ಯಾ ಕಾಶ್ಯಪಿಂ ವಿಷ್ಣುರವ್ಯಯಃ ॥ ೫೭ ॥**

**ತತೋ ದೇವಾಸ್ಸಗಂಧರ್ವಾ ಋಷಯಶ್ಚ ಮಹೌಜಸಃ ॥ ೫೮ ॥**

**ತುಷ್ಟುವುಃ ಸ್ತವನೈರ್ದಿವ್ಯೈಃ ಪೂಜಯಾಮಾಸುರಚ್ಯುತಂ ।**
**ಸಂಕ್ಷಿಪ್ಯ ತನ್ಮಹದ್ರೂಪಂ ತೇಷಾಂ ಸಂದರ್ಶನಾಯ ವೈ ॥ ೫೯ ॥**

---

೫೪. ಗೌತಮುನಿಗೆ ಕೊಟ್ಟ ನದಿಯು ಗೌತಮೀ ನದಿಯೆಂದೂ, ಭಗೀರಥನಿಗೆ ಕೊಟ್ಟ ನದಿಯು ಭಾಗೀರಥಿಯೆಂದೂ ಹೆಸರಾದುವು.

೫೫–೬೦. ಪ್ರಸಂಗದಿಂದ ಈ ಗಂಗೆಯ ಜನ್ಮವನ್ನು ಹೇಳಿದೆನು. ಇದು ಅದ್ಭುತವಾದುದು ಅನಂತರ ಶ್ರೀಮಂತನಾದ ನಾರಾಯಣನು ದೈತ್ಯಪತಿಯಾದ ಬಲಿಗೆ ಪ್ರೀತಿಯಿಂದ ರಸಾತಲವೆಂಬ ಶುಭವಾದ ಲೋಕವನ್ನು ಕೊಟ್ಟನು. ಎಲ್ಲಾ ದಾನವರಿಗೂ ನಾಗರಿಗೂ ಯಾದವರಿಗೂ ಪ್ರಳಯಕಾಲದ ವರೆಗೂ ರಾಜನಾಗಿರುವಂತೆ ಈ ಬಲಿಯನ್ನು ನಿಯಮಿಸಿದನು. ಈ ರೀತಿಯಾಗಿ ನಾರಾಯಣನು ವಟುವಿನ ವೇಷದಿಂದ.ಬಲಿಯಿಂದ ರಾಜ್ಯವನ್ನು ಕಸಿದುಕೊಂಡು ತನ್ನ ಅಣ್ಣನಾದ ಮಹೇಂದ್ರನಿಗೆ ರಾಜ್ಯವನ್ನು ಕೊಟ್ಟನು. ಅನಂತರ ದೇವತೆಗಳೂ, ಗಂಧರ್ವರೂ, ಋಷಿಗಳೂ ಅನೇಕ ಬಗೆಯಾಗಿ ಸ್ತುತಿಸಿ ವಿಷ್ಣುವನ್ನು ಪೂಜಿಸಿದರು. ಅನಂತರ ಅವರೆಲ್ಲರ ದರ್ಶನಕ್ಕೋಸ್ಕರವಾಗಿ ಆ ವಿಷ್ಣುವು ಆ ದೊಡ್ಡ ರೂಪವನ್ನು ಸಣ್ಣದನ್ನಾಗಿ ಮಾಡಿಕೊಂಡನು. ಅನಂತರ ದೇವತೆಗಳು ಹೊಗಳುತ್ತಿರಲು

ಸಂಪೂಜ್ಯಮಾನಸ್ತ್ರಿದಶೈರನ್ತರ್ಧಾನಂ ಯಯೌ ಹರಿಃ |
ಇತ್ಥಂ ಸುರಕ್ಷಿತಃ ಶಕ್ರೋ ವಿಷ್ಣುನಾ ಪ್ರಭವಿಷ್ಣುನಾ || ೬೦ ||

ತ್ರೈಲೋಕ್ಯಂ ಮಹದೈಶ್ವರ್ಯಮವಾಪ ತ್ರಿದಶೇಶ್ವರಃ ।
ಏತತ್ತೇ ಸರ್ವಮಾಖ್ಯಾತಂ ವಾಮನಂ ವೈಭವಂ ಶುಭೇ || ೬೧ ||

ಶೇಷಂ ಚ ವೈಭವಂ ದೇವಿ ತದ್ವಕ್ಷ್ಯಾಮಿ ಯಥಾಕ್ರಮಂ || ೬೨ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ
ಮಹೇಶ್ವರ ಸಂವಾದೇ ವಾಮನ ಚರಿತಂ ನಾಮ
ಸಪ್ತಷಷ್ಟ್ಯಧಿಕದ್ವಿಶತತಮೋಧ್ಯಾಯಃ

---

ಅಂತರ್ಧಾನನಾದನು. ಈ ರೀತಿಯಾಗಿ ಸರ್ವಶಕ್ತನಾದ ವಿಷ್ಣುವು ಆ ಶಕ್ರನನ್ನು ಕಾಪಾಡಿದನು.

೬೧-೬೨. ಅನಂತರ ಇಂದ್ರನು ತ್ರೈಲೋಕ್ಯದ ಮಹದೈಶ್ವರ್ಯವನ್ನು ಹೊಂದಿದನು. ಈ ರೀತಿಯಾಗಿ ವಾಮನನ ವೈಭವವನ್ನೆಲ್ಲಾ ಹೇಳಿದ್ದೇನೆ. ಮಿಕ್ಕ ವೈಭವಗಳನ್ನೂ ಹೇಳುತ್ತೇನೆ. ಅದನ್ನು ಕ್ರಮವಾಗಿ ಕೇಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದಲ್ಲಿ ವಾಮನ ಚರಿತವೆಂಬ ಇನ್ನೂರ
ಅರವತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಷ್ಟಷಷ್ಟ್ಯಧಿಕದ್ವಿಶತತಮೋಧ್ಯಾಯಃ ||



|| ಈಶ್ವರ ಉವಾಚ ||

**ಭೃಗುಪುತ್ರೋ ಮಹನಾಸೀಜ್ಜಮದಗ್ನಿರ್ದ್ವಿಜೋತ್ತಮಃ ।**
**ಸಮಸ್ತವೇದವೇದಾಂಗಪಾರಗಶ್ಚ ಮಹಾತಪಾಃ || ೧ ||**

**ತಪಸ್ತೇಪೇ ಸ ಧರ್ಮಾತ್ಮಾ ಮಹೇಂದ್ರಂ ಪ್ರತಿ ಭಾಮಿನಿ ।**
**ಸಹಸ್ರವರ್ಷಪರ್ಯಂತಂ ಗಂಗಾಯಾಃ ಪುಲಿನೇ ಶುಭೇ || ೨ ||**

|| ಇಂದ್ರ ಉವಾಚ ||

**ವರಂ ವೃಣೀಷ್ವ ವಿಪ್ರೇಂದ್ರ ಯತ್ತೇ ಮನಸಿ ವರ್ತತೇ || ೩ ||**

---

### ಇನ್ನೂರ ಅರವತ್ತೆಂಟನೆಯ ಅಧ್ಯಾಯವು



೧. ಈಶ್ವರನು ಹೇಳಿದನು—ಭೃಗುವಿನ ಮಗನಾದ ಜಮದಗ್ನಿ ಎಂಬ ಬ್ರಾಹ್ಮಣನೊಬ್ಬನಿದ್ದನು. ಅವನು ಬಹುಯೋಗ್ಯನಾದ ಬ್ರಾಹ್ಮಣನು. ವೇದ ವೇದಾಂಗಗಳಲ್ಲಿಯೂ ಬಹುವಾಗಿ ಪ್ರವೀಣನಾಗಿದ್ದನು.

೨. ಆ ಜಮದಗ್ನಿಯು ಗಂಗಾನದಿಯ ಮರಳಿನ ಮೇಲೆ ಇದ್ದುಕೊಂಡು ಇಂದ್ರನನ್ನು ಕುರಿತು ತಪಸ್ಸನ್ನು ಮಾಡಿದನು. ಅನಂತರ ಅವನ ತಪಸ್ಸಿಗೆ ಮೆಚ್ಚಿ ಪ್ರಸನ್ನನಾಗಿ ಮಹೇಂದ್ರನು ಇಂತೆಂದನು.

೩. ಇಂದ್ರನು ಹೇಳಿದನು—ಎಲೈ ಬ್ರಾಹ್ಮಣನೆ! ನಾನು ಪ್ರಸನ್ನನಾಗಿದ್ದೇನೆ. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ.

॥ ಈಶ್ವರ ಉವಾಚ ॥

ತತಃ ಪ್ರೋವಾಚ ವಿಪ್ರರ್ಷಿಃ ಪರಿತುಷ್ಟಂ ಶತಕ್ರತುಂ ॥ ೪ ॥

॥ ಜಮದಗ್ನಿರುವಾಚ ॥

ಸುರಭಿಂ ದೇಹಿ ಮೇ ದೇವ ಸರ್ವಕಾಮದುಘಾಂ ಸದಾ ॥ ೫ ॥

॥ ಈಶ್ವರ ಉವಾಚ ॥

ತತಃ ಪ್ರಸನ್ನೋ ದೇವೇಶಃ ತಸ್ಮೈ ವಿಪ್ರಾಯ ಗೋತ್ರಭಿತ್ ।
ಪ್ರದದೌ ಸುರಭಿಂ ದೇವಿ ಸರ್ವಕಾಮದುಘಾಂ ಸದಾ ॥ ೬ ॥

ಸ ಲಬ್ಧ್ವಾ ಸುರಭಿಂ ದೇವಿ ಜಮದಗ್ನಿರ್ಮಹಾತಪಾಃ ।
ಉವಾಸ ಸ ಮಹೈಶ್ವರ್ಯೈಃ ಶತಕ್ರತುರಿವಾಪರಃ ॥ ೭ ॥

ರೇಣುಕಸ್ಯ ಸುತಾಂ ರಮ್ಯಾಂ ರೇಣುಕಾಂ ನಾಮ ನಾಮತಃ ।
ಉಪಯೇಮೇ ವಿಧಾನೇನ ಜಮದಗ್ನಿರ್ಮಹಾತಪಾಃ ॥ ೮ ॥

---

೪. ಈಶ್ವರನು ಹೇಳಿದನು—ಅನಂತರ ಆ ಜಮದಗ್ನಿಯು ಸಂತೋಷ ಗೊಂಡು ಬಂದಿರುವ ಇಂದ್ರನನ್ನು ಕುರಿತು ಇಂತೆಂದನು.

೫. ಜಮದಗ್ನಿಯು ಹೇಳಿದನು—ಎಲೈ ಇಂದ್ರನೇ! ಇಷ್ಟಾರ್ಥಗಳೆಲ್ಲ ವನ್ನೂ ಕೊಡುವ ಆ ಕಾಮದೇನುವನ್ನು ನನಗೆ ಕೊಡು.

೬. ಈಶ್ವರನು ಹೇಳಿದನು—ಆಗ ಇಂದ್ರನು ಪ್ರಸನ್ನನಾಗಿ ಆ ಬ್ರಾಹ್ಮಣ ನಿಗೆ ಕೇಳಿದುದನ್ನೆಲ್ಲಾ ಕೊಡುವ ಆ ಕಾಮಧೇನುವನ್ನು ಕೊಟ್ಟನು.

೭. ಅವನು ಆ ಸುರಭಿಯನ್ನು ತೆಗೆದುಕೊಂಡು ಹೋಗಿ ಅನೇಕವಾದ ಐಶ್ವರ್ಯವನ್ನು ಅನುಭವಿಸುತ್ತಾ ಮತ್ತೊಬ್ಬ ಇಂದ್ರನಂತೆ ಇದ್ದುಕೊಂಡಿದ್ದನು.

೮. ಅನಂತರ ರೇಣುಕನೆಂಬುವನ ಮಗಳಾದ ರೇಣುಕೆ ಎಂಬ ಹೆಸರನ್ನು ಹೊಂದಿರುವ ಸುಂದರಿಯಾದ ಹುಡುಗಿಯೊಬ್ಬಳನ್ನು ಮದುವೆಯಾದನು.

**ತಯಾ ಸಹ ಸ ಧರ್ಮಾತ್ಮಾ ರೇಮೇ ವರ್ಷಾಣ್ಯನೇಕಶಃ |**
**ಪೌಲೋಮ್ಯಾ ಶುಭಯಾ ದೇವ್ಯಾ ಯಥಾ ಸಂಕ್ರಂದನೋ ವಿಭುಃ || ೯ ||**

**ತತಸ್ಸ ಪುತ್ರಕಾಮತ್ವಾದಿಷ್ಟಿಂ ಚಕ್ರೇ ಸುಧಾರ್ಮಿಕಃ |**
**ಇಷ್ಟ್ಯಾ ಸಂತೋಷಯಾಮಾಸ ಪಾಕಶಾಸನಮೀಶ್ವರಂ || ೧೦ ||**

**ಪರಿತುಷ್ಟಃ ಶಚೀಭರ್ತಾ ತಸ್ಮೈ ಪುತ್ರಂ ಮಹಾಬಲಂ |**
**ಮಹೌಜಸಂ ಮಹಾಬಾಹುಂ ಸರ್ವಶತ್ರುಪ್ರತಾಪನಂ || ೧೧ ||**

**ಅಥ ಕಾಲೇನ ವಿಪ್ರೇಂದ್ರೋ ರೇಣುಕಾಯಾಂ ಶುಚಿಸ್ಮಿತೇ |**
**ಪುತ್ರಮುತ್ಪಾದಯಾಮಾಸ ಮಹಾವೀರ್ಯಂ ಬಲಾನ್ವಿತಂ || ೧೨ ||**

**ವಿಷ್ಣೋರಂಶಾಂಶಭಾಗೇನ ಸರ್ವಲಕ್ಷಣಲಕ್ಷಿತಂ |**
**ತಸ್ಮಿನ್ ಸುತೇ ಮಹಾವೀರ್ಯೇ ಭೃಗುಸ್ತಸ್ಯ ಪಿತಾಮಹಃ || ೧೩ ||**

---

೯. ಆ ರೇಣುಕೆಯೊಡನೆ ಆ ಧರ್ಮಿಷ್ಠನಾದ ಜಮದಗ್ನಿಯು ಅನೇಕ ವರ್ಷಗಳವರೆಗೆ ಶಚೀದೇವಿಯೊಡನೆ ಇಂದ್ರನು ಸುಖಿಸುವಂತೆ ಸುಖಿಸುತ್ತಿದ್ದನು

೧೦. ಅನಂತರ ಅವನಿಗೆ ಮಕ್ಕಳು ಆಗಬೇಕೆಂದು ತೋರಲು ಆತನು ಪುತ್ರಕಾಮೇಷ್ಟಿಯನ್ನು ಮಾಡಿ ಇಂದ್ರನನ್ನು ಸಂತೋಷಪಡಿಸಿದನು.

೧೧. ಸಂತೋಷಗೊಂಡ ಇಂದ್ರನು ಆ ಋಷಿಗೆ ಮಹಾಬಲಿಷ್ಠನೂ, ತೇಜಸ್ವಿಯೂ, ಮಹಾಬಾಹುವೂ, ಶತ್ರುಗಳನ್ನು ನಾಶಮಾಡಬಲ್ಲವನೂ, ಆದ ಉತ್ತಮನಾದ ಮಗನನ್ನು ಕೊಟ್ಟನು.

೧೨–೧೩. ಅಂತೆಯೇ ಕೆಲವು ಕಾಲದಮೇಲೆ ರೇಣುಕೆಯಲ್ಲಿ ಮಹಾವೀರನೂ, ಮಹಾಬಲಿಷ್ಠನೂ ಆದ, ಸರ್ವಲಕ್ಷಣಗಳಿಂದಲೂ ಕೂಡಿರುವ, ವಿಷ್ಣುವಿನ ಅಂಶಾಂಶವನ್ನೂ ಹೊಂದಿರುವ, ಒಬ್ಬ ಮಗನು ಹುಟ್ಟಿದನು. ಆ ವೀರ್ಯವಂತನಾದ ಮಗನು ಹುಟ್ಟಲು ತಾತನಾದ ಭೃಗುವು ಬಂದು ಇವನು

ನಾಮ ಚಾಸ್ಮೈ ದದೌ ಹರ್ಷಾದ್ವಿಷ್ಣೋರಂಶೋಪಲಕ್ಷಿತಂ ।
ಚಕ್ರೇಽಥ ನಾಮಧೇಯಂ ತು ರಾಮ ಇತ್ಯಸ್ಯ ಶೋಭಿತಂ ॥ ೧೪ ॥

ಜಮದಗ್ನೇಃ ಸಮುತ್ಪನ್ನೋ ಜಾಮದಗ್ನ್ಯ ಇತೀರಿತಃ ।
ತದ್ಭಾರ್ಗವಾನ್ವಯಃ ಸೋಽಪಿ ವವೃಧೇ ದ್ವಿಜಪುಂಗವಃ ॥ ೧೫ ॥

ಉಪನೀತಸ್ತಥಾ ತೇನ ಸರ್ವವಿದ್ಯಾವಿಶಾರದಃ ।
ತಪಸ್ತಪ್ತುಂ ಜಗಾಮಾಥ ಸಾಲಗ್ರಾಮಾಚಲಂ ಪ್ರತಿ ॥ ೧೬ ॥

ದದರ್ಶ ಕಶ್ಯಪಂ ತತ್ರ ಬ್ರಹ್ಮರ್ಷಿಮಮಿತೌಜಸಂ ।
ಹರ್ಷೇಣ ಪೂಜಿತಸ್ತೇನ ಮರೀಚಿತನಯೋ ದ್ವಿಜಃ ॥ ೧೭ ॥

ವಿಧಿನಾ ಪ್ರದದೌ ತಸ್ಮೈ ಮಂತ್ರಂ ವೈಷ್ಣವಮವ್ಯಯಂ ।
ಲಬ್ಧಮಂತ್ರಸ್ತದಾ ರಾಮಃ ಕಶ್ಯಪಾತ್ತು ಮಹಾತ್ಮನಃ ॥ ೧೮ ॥

---

ವಿಷ್ಣುವಿನ ಅಂಶಾಂಶನೆಂಬುದನ್ನು ತಿಳಿದು ಸಂತೋಷಪಟ್ಟು ರಾಮನೆಂಬುವ ಉತ್ತಮವಾದ ಹೆಸರನ್ನು ಇಟ್ಟನು.

೧೫. ಜಮದಗ್ನಿಯ ಹೊಟ್ಟೆಯಲ್ಲಿ ಹುಟ್ಟಿದುದರಿಂದ ಜಾಮದಗ್ನ್ಯ ಎಂಬ ಕುಲದ ಹೆಸರೂ ಬಂದಿತು. ಆ ಭೃಗುಕುಲತಿಲಕನಾದ ರಾಮನು ಚೆನ್ನಾಗಿ ಬೆಳೆಯುತ್ತಿದ್ದನು.

೧೬. ಯೋಗ್ಯವಾದ ಕಾಲದಲ್ಲಿ ಉಪನಯನವನ್ನು ಮಾಡಲು ಸಮಸ್ತ ವಿದ್ಯೆಗಳನ್ನೂ ಕಲಿತನು. ಅನಂತರ ತಪಸ್ಸನ್ನು ಮಾಡಲು ಸಾಲಗ್ರಾಮಾಚಲಕ್ಕೆ ಹೋದನು.

೧೭. ಅಲ್ಲಿ ಬ್ರಹ್ಮರ್ಷಿಯಾದ ಮಹಾತೇಜಸ್ವಿಯಾದ ಕಶ್ಯಪನನ್ನು ನೋಡಿದನು. ಅವನನ್ನು ಸಂತೋಷದಿಂದ ಗೌರವಿಸಿ ಪೂಜಿಸಿದನು.

೧೮-೧೯. ಕಶ್ಯಪನು ವಿಧಿಯಂತೆ ಉತ್ತಮವಾದ ವೈಷ್ಣವಮಂತ್ರವಾದ ಷಡಕ್ಷರೀ ಮಹಾಮಂತ್ರವನ್ನುಪದೇಶಿಸಿದನು ಕಶ್ಯಪನಿಂದ ಆ ಮಂತ್ರವನ್ನು

ಪೂಜಯಾಮಾಸ ವಿಧಿನಾ ಸ ತದಾ ಕಮಲಾಪತಿಂ |
ಷಡಕ್ಷರಂ ಮಹಾಮಂತ್ರಂ ಜಪನ್ನೇವಂ ದಿವಾನಿಶಂ　　　　॥ ೧೯ ॥

ಧ್ಯಾಯನ್ ಕಮಲಪತ್ರಾಕ್ಷಂ ವಿಷ್ಣುಂ ಸರ್ವಗತಂ ಹರಿಂ |
ತಪಸ್ತೇಪೇ ಸ ಧರ್ಮಾತ್ಮಾ ಬಹುವರ್ಷಾಣಿ ಭಾರ್ಗವಃ　　　　॥ ೨೦ ॥

ಜಿತೇಂದ್ರಿಯಸ್ತು ಯತವಾಕ್ತತ್ರ ತಸ್ಥೌ ಮಹಾತಪಾಃ |
ಜಮದಗ್ನಿಶ್ಚ ವಿಪ್ರರ್ಷಿಃ ಸ್ಥಿತೋ ಗಂಗಾತಟೇ ಶುಭೇ　　　　॥ ೨೧ ॥

ಚಕಾರ ವಿಧಿವದ್ಧರ್ಮಂ ಯಜ್ಞದಾನಾದಿಕಂ ಮಹತ್ |
ಧೇನ್ವಾಃ ಪ್ರಸಾದಾದಿಂದ್ರಸ್ಯ ಸಂಪೂರ್ಣಾಃ ತಸ್ಯ ಸಂಪದಃ　　　　॥ ೨೨ ॥

ಕಸ್ಯ ಚಿತ್ವಥ ಕಾಲಸ್ಯ ಹೈಹಯಾಧಿಪತಿಃ ಪ್ರಭುಃ |
ವಿಜಿತ್ವಾ ಸರ್ವರಾಷ್ಟ್ರಾಣಿ ಸರ್ವಸೈನ್ಯಸಮಾವೃತಃ　　　　॥ ೨೩ ॥

---

ಹೊಂದಿ ವಿಷ್ಣುವನ್ನು ಹಗಲೂ ರಾತ್ರಿಯೂ ಪೂಜಿಸುತ್ತ ಈ ಮಂತ್ರವನ್ನು ಯಾವಾಗಲೂ ಜಪಿಸುತ್ತಲೇ ಇದ್ದನು.

೨೦. ಸರ್ವದಿಕ್ಕಿನಲ್ಲಿಯೂ ಇರುವ ಕಮಲಪತ್ರಾಕ್ಷನಾದ ಹರಿಯನ್ನು ಧ್ಯಾನಿಸುತ್ತ ಬಹು ವರ್ಷಗಳವರೆಗೆ ಆ ಪರಶುರಾಮನು ತಪಸ್ಸನ್ನು ಮಾಡಿದನು.

೨೧. ಆ ಸಾಲಿಗ್ರಾಮಾಚಲದಲ್ಲಿ ರಾಮನು ನಿಯಮದಿಂದ ಮೌನವಾಗಿ ತಪಸ್ಸುಮಾಡುತ್ತಲಿದ್ದನು. ಇತ್ತ ಈ ಜಮದಗ್ನಿಯು ಗಂಗಾನದಿಯ ದಡದಲ್ಲಿದ್ದುಕೊಂಡು ತಪಸ್ಸುಮಾಡುತ್ತಿದ್ದನು.

೨೨. ಆ ಜಮದಗ್ನಿಗೆ ಕಾಮಧೇನುವಿನ ಅನುಗ್ರಹವಿದ್ದುದರಿಂದ ಆವನು ಅಲ್ಲಿ ಅನೇಕವಾದ ಧರ್ಮಗಳನ್ನೂ ಯಜ್ಞ ಯಾಗ ದಾನಗಳನ್ನೂ ಮಾಡುತ್ತಲಿದ್ದನು.

೨೩–೨೪. ಹೀಗಿರುವಲ್ಲಿ ಆಗ ರಾಜನಾಗಿದ್ದ ಹೈಹಯನೆಂಬುವನು ಸೈನ್ಯವನ್ನು ಕಟ್ಟಿಕೊಂಡು ಎಲ್ಲಾ ರಾಜ್ಯಗಳನ್ನೂ ಜಯಿಸಿ ಮಾರ್ಗದಲ್ಲಿ ಬರುತ್ತಾ

ಭಾರ್ಗವಸ್ಯಾಶ್ರಮಂ ಪ್ರಾಪ್ಯ ಜಮದಗ್ನೇರ್ಮಹೀಪತಿಃ ।
ಸಮೀಕ್ಷ್ಯ ತಂ ಮಹಾಭಾಗಂ ವವಂದೇ ಮುನಿಸತ್ತಮಂ ॥ ೨೪ ॥

ಪೃಷ್ಟ್ವಾ ತು ಕುಶಲಂ ತಸ್ಯ ಮಹರ್ಷೇರ್ಭಾವಿತಾತ್ಮನಃ ।
ಪ್ರದದೌ ನೃಪತಿಸ್ತಸ್ಮೈ ವಸ್ತ್ರಾಣ್ಯಾಭರಣಾನಿ ಚ ॥ ೨೫ ॥

ಪ್ರೀತ್ಯಾ ಸಂಪೂಜಯಾಮಾಸ ರಾಜಾನಂ ಗೃಹಮಾಗತಂ ।
ಮಧುಪರ್ಕೇಣ ವಿಧಿನಾ ಪೂಜಯಿತ್ವಾ ನೃಪೋತ್ತಮಂ ॥ ೨೬ ॥

ಸಸೈನ್ಯಾಯ ನೃಪೇಂದ್ರಾಯ ಭೋಜನಂ ಪ್ರದದೌ ಮುನಿಃ ।
ಪ್ರಾರ್ಥಿತಾ ಸುರಭಿಸ್ತೇನ ಭಾರ್ಗವೇಣ ಸುಧೀಮತಾ ॥ ೨೭ ॥

ಸಂಪೂರ್ಣಮನ್ನಪಾನಾದಿ ಸಸರ್ಜ ಸಬಲಾ ತದಾ ।
ಅಕ್ಷಯ್ಯಮನ್ನಪಾನಾದಿ ತಯಾ ಸೃಷ್ಟಂ ಮಹಾತಪಾಃ ॥ ೨೮ ॥

---

ಆ ಜಮದಗ್ನಿಯ ಆಶ್ರಮಕ್ಕೆ ಬಂದನು. ಅಲ್ಲಿ ಆ ಋಷಿಯನ್ನು ನೋಡಿ ಅವನಿಗೆ ಸಾಷ್ಟಾಂಗವಾಗಿ ನಮಸ್ಕರಿಸಿದನು.

೨೫. ಆ ಹೈಹಯನು ಆ ಜಮದಗ್ನಿ ಋಷಿಗೆ ಕುಶಲಪ್ರಶ್ನೆಯನ್ನು ಮಾಡಿ ಅನೇಕವಾದ ವಸ್ತ್ರಾಭರಣಗಳನ್ನೂ ಕೊಟ್ಟು ಪೂಜಿಸಿದನು.

೨೬. ಈ ಜಮದಗ್ನಿಯೂ ಕೂಡ ಮನೆಗೆ ಬಂದ ಈ ರಾಜನನ್ನು ಗೌರವಿಸಿ ಮಧುಪರ್ಕಾದಿಗಳನ್ನು ಕೊಟ್ಟು ಪೂಜಿಸಿ ಅವನಿಗೂ ಅವನ ಸೈನ್ಯಕ್ಕೂ ಭೋಜನವನ್ನು ಮಾಡಿಸಿದನು.

೨೭-೨೮. ಆ ಭಾರ್ಗವನಾದ ಜಮದಗ್ನಿಯು ಸುರಭಿಯನ್ನು ಕೇಳಿಕೊಂಡನು. ಅದರಂತೆ ಅದು ಅವರಿಗೆ ಸಂಪೂರ್ಣವಾಗುವಂತೆ ಅನ್ನಪಾನಗಳನ್ನು ಸೃಷ್ಟಿಮಾಡಿತು. ಅದು ಅಕ್ಷಯವಾಗಿರಲು ಆ ತಪಸ್ವಿಯಾದ ಋಷಿಯು ಸೈನ್ಯಕ್ಕೂ ರಾಜನಿಗೂ ತೃಪ್ತಿಯಾಗುವಂತೆ ಅನ್ನಪಾನಗಳನ್ನು ಕೊಟ್ಟು ತೃಪ್ತಿಪಡಿಸಿದನು.

ಸಸೈನ್ಯಾಯ ನೃಪೇಂದ್ರಾಯ ಪ್ರದದೌ ಮುನಿಸತ್ತಮಃ ।
ತಾಂ ದೃಷ್ಟ್ವಾ ಸಬಲಾಂ ರಾಜಾ ಕೌತೂಹಲಸಮನ್ವಿತಃ ॥ ೨೯ ॥
ಸ್ಪೃಹಾಂ ಚಕಾರ ಪಾಪಾತ್ಮಾ ತಸ್ಯಾಂ ಗವಿ ಸುದುರ್ಮತಿಃ ।
ಅಯಾಚತ್ಸುರಭಿಂ ತತ್ರ ಜಮದಗ್ನಿಂ ನೃಪೋತ್ತಮಃ ॥ ೩೦ ॥

॥ ಕಾರ್ತವೀರ್ಯ ಉವಾಚ ॥

ಸಬಲಾಂ ದೇಹಿ ಮೇ ವಿಪ್ರ ಕಪಿಲಾಂ ಸರ್ವಕಾಮದಾಂ ।
ಅನ್ಯಧೇನುಸಹಸ್ರಾಣಿ ದಾಸ್ಯಾಮಿ ತವ ಸುವ್ರತ ॥ ೩೧ ॥

॥ ಈಶ್ವರ ಉವಾಚ ॥

ಇತ್ಯುಕ್ತಸ್ತೇನ ರಾಜ್ಞಾಹ ಜಮದಗ್ನಿರ್ಮಹಾತಪಾಃ ॥ ೩೨ ॥

॥ ಜಮದಗ್ನಿರುವಾಚ ॥

ನ ದೇಯಾ ಸಬಲಾ ರಾಜನ್ ಮಯಾ ತವ ಮಹೀಪತೇ ।
ಇಯಂ ಚ ದೇವದೇವೇನ ಶಕ್ರೇಣ ಪರಿಪಾಲಿತಾ ।
ದೇವತಾನಾಂ ಧನಂ ರಾಜನ್ ದಾತವ್ಯಂ ಸ್ಯಾತ್ಕಥಂ ಮಯಾ ॥ ೩೩ ॥

---

೨೯-೩೦. ಆ ಅನ್ನಪಾನಗಳನ್ನು ಸೃಷ್ಟಿಸಿದ ಸಬಲೆಯೆಂಬ ಕಾಮಧೇನುವನ್ನು ನೋಡಿ ಆಶ್ಚರ್ಯಪಟ್ಟು ಬುದ್ಧಿಗೇಡಿಯಾದ ರಾಜನು ಅದನ್ನು ತೆಗೆದುಕೊಳ್ಳಬೇಕೆಂದು ಆಸೆಪಟ್ಟು ಜಮದಗ್ನಿಯನ್ನು ಕುರಿತು ಈ ಹಸುವನ್ನು ಕೊಡೆಂದು ಕೇಳಿದನು.

೩೧ ಕಾರ್ತವೀರ್ಯನು ಹೇಳಿದನು—ಎಲೈ ಋಷಿಯೆ! ಈ ಕಪಿಲೆಯಾದ ಸಬಲೆಯನ್ನು ನನಗೆ ಕೊಡು. ಇದು ಸರ್ವಕಾಮಗಳನ್ನೂ ಕೊಡುತ್ತದೆ. ನಿನಗೆ ಬೇರೆಯಾದ ಸಾವಿರ ಧೇನುಗಳನ್ನು ಕೊಡುತ್ತೇನೆ.

೩೨. ಈಶ್ವರನು ಹೇಳಿದನು—ರಾಜನು ಹೀಗೆಂದು ಹೇಳುತ್ತಲೂ ಆ ಮಹಾತಪಸ್ವಿಯಾದ ಋಷಿಯು ಅವನಿಗೆ ಇಂತೆಂದು ಹೇಳಿದನು.

೩೩. ಜಮದಗ್ನಿಯು ಹೇಳಿದನು—ಎಲೈ ರಾಜನೇ! ಈ ಸಬಲೆಯನ್ನು ನಾನು ಕೊಡುವುದಕ್ಕಾಗುವುದಿಲ್ಲ. ಇದನ್ನು ಇಂದ್ರನೇ ಕಾಪಾಡುತ್ತಿರುವನು. ದೇವತೆಗಳ ಧನವಾದ ಈ ಪದಾರ್ಥವನ್ನು ನಾನು ಹೇಗೆತಾನೇ ಕೊಡಲಿ?

|| ಈಶ್ವರ ಉವಾಚ ||

ಇತ್ಯುಕ್ತಸ್ಸ ತದಾ ರಾಜಾ ಕ್ರೋಧೇನ ಕಲುಷೀಕೃತಃ ।
ಬಲಾಜ್ಜಗ್ರಾಹ ಸಬಲಾಂ ಸರ್ವಸೈನ್ಯಸಮಾವೃತಃ || ೩೪ ||

ತತಃ ಕ್ರುದ್ಧಾ ಮಹಾಭಾಗಾ ಸಬಲಾ ವರವರ್ಣಿನಿ ।
ಜಘಾನ ತಸ್ಯ ಸೈನ್ಯಾನಿ ಶೃಂಗೈಃ ಕೃತರವೈರಪಿ || ೩೫ ||

ಘಾತಯಿತ್ವಾ ಮುಹೂರ್ತೇನ ತತ್ಸೈನ್ಯಂ ಸಬಲಾ ಕ್ಷಣಾತ್ ।
ಅನ್ತರ್ಧಾನಂ ಗತಾ ದೇವೀ ಯಯೌ ಶಕ್ರಾನ್ತಿಕಂ ಕ್ಷಣಾತ್ || ೩೬ ||

ಸಸೈನ್ಯಂ ನಿಹತಂ ದೃಷ್ಟ್ವಾ ಸೋಽರ್ಜುನಃ ಕ್ರೋಧಮೂರ್ಛಿತಃ ।
ಮುಷ್ಟಿನಾ ತಾಡಯಾಮಾಸ ಭಾರ್ಗವಂ ದ್ವಿಜಸತ್ತಮಂ || ೩೭ ||

ತಾಡಿತಸ್ತೇನ ಬಹುಶೋ ವಿಕಲಾಂಗಃ ಪ್ರಕಂಪಿತಃ ।
ಪಪಾತ ಸಹಸಾ ಭೂಮೌ ಮಮಾರ ದ್ವಿಜಸತ್ತಮಃ || ೩೮ ||

---

೩೪. ಈಶ್ವರನು ಹೇಳಿದನು–ಋಷಿಯು ಹೀಗೆಂದು ಹೇಳಲು ಆ ರಾಜನು ಕೋಪಗೊಂಡು ಆ ಸಬಲೆಯನ್ನು ತನ್ನ ಸೈನ್ಯದವರ ಸಹಾಯದಿಂದ ಬಲಾತ್ಕರಿಸಿ ಎಳೆದನು.

೩೫. ಆಗ ಆ ಹಸುವು ಕೋಪಗೊಂಡು ಬಹುವಾಗಿ ಕೂಗುತ್ತಾ ಅವನ ಸೈನ್ಯವನ್ನೆಲ್ಲಾ ಕೋಡುಗಳಿಂದಲೂ ಕೂಗುಗಳಿಂದಲೂ ಕೊಂದುಹಾಕಿತು.

೩೬. ಅವನ ಸೈನ್ಯವನ್ನೆಲ್ಲವನ್ನೂ ಕ್ಷಣಕಾಲದಲ್ಲಿ ಕೊಂದುಹಾಕಿ ಅಂತರ್ಧಾನವಾಗಿ ಒಡನೆಯೇ ಇಂದ್ರನ ಬಳಿಗೆ ಹೊರಟುಹೋಯಿತು.

೩೭. ಆ ಹೈಹಯನಾದ ಅರ್ಜುನನು ತನ್ನ ಸೈನ್ಯವೆಲ್ಲವೂ ನಾಶವಾದುದನ್ನು ನೋಡಿ ಕೋಪಗೊಂಡು ಆ ಭಾರ್ಗವನಾದ ಜಮದಗ್ನಿಯನ್ನು ಮುಷ್ಟಿಯಿಂದ ಹೊಡೆದನು.

೩೮. ಆ ಅರ್ಜುನನು ಬಹುವಾಗಿ ಮುಷ್ಟಿಯಿಂದ ಹೊಡೆಯಲು ಆ ಋಷಿಗೆ ಮೈ ಕೈಯೆಲ್ಲವೂ ಮುರಿದುಹೋಗಿ ನೆಲದಮೇಲೆ ಬಿದ್ದು ಸತ್ತನು.

ಹತ್ವಾ ಮುನಿವರಂ ತತ್ರ ಪಾಪಾತ್ಮಾ ಹೈಹಯಾಧಿಪಃ ।
ಮಹಾಸೈನ್ಯಪರಿವಾರೋ ವಿವೇಶ ನಗರಂ ಸ್ವಕಂ || ೩೯ ||

ರಾಮಸ್ತು ದೇವದೇವೇಶಂ ಪೂಜಯಾಮಾಸ ಭಾರ್ಗವಃ ।
ತೇನ ಸಂಪೂಜಿತೋ ದೇವಃ ಪ್ರಸನ್ನಃ ಪ್ರಾಹ ಕೇಶವಃ || ೪೦ ||

|| ಶ್ರೀ ಭಗವಾನುವಾಚ ||

ಪ್ರೀತೋಽಸ್ಮಿ ತಪಸಾ ವತ್ಸ ಭವತೋ ನಿಯತಾತ್ಮನಃ ।
ಸಂಪ್ರದಾಸ್ಯಾಮಿ ತೇ ವಿಪ್ರ ಮಚ್ಛಕ್ತಿಂ ಪರಮಾಂ ಶುಭಾಂ || ೪೧ ||

ಆವೇಶಿತೋಥ ಮಚ್ಛಕ್ತ್ಯಾ ಜಹಿ ದುಷ್ಟಾನ್ನೃಪೋತ್ತಮಾನ್ ।
ಭೂಭಾರಕವಿನಾಶಾಯ ದೇವತಾನಾಂ ಹಿತಾಯ ವೈ || ೪೨ ||

|| ಈಶ್ವರ ಉವಾಚ ||

ಇತ್ಯುಕ್ತ್ವಾ ಪ್ರದದೌ ದೇವಃ ಪರಶುಂ ಶತ್ರುಧರ್ಷಿಣೀಂ ।
ವೈಷ್ಣವಂ ಚ ಮಹಾಚಾಪಂ ದಿವ್ಯಾನ್ಯಸ್ತ್ರಾಣ್ಯನೇಕಶಃ ||
ದತ್ವಾ ಪ್ರೋವಾಚ ಭಗವಾನ್ ಜಾಮದಗ್ನ್ಯಂ ಜನಾರ್ದನಃ || ೪೩ ||

---

೩೯. ಪಾಪಿಯಾದ ಆ ಹೈಹಯಾರ್ಜುನನು ಆ ಮುನಿಯನ್ನು ಕೊಂದು ತನ್ನ ಕಳೆದುಳಿದ ಸೈನ್ಯವನ್ನು ಕರೆದುಕೊಂಡು ತನ್ನ ಪಟ್ಟಣಕ್ಕೆ ಹೋದನು.

೪೦. ಭಾರ್ಗವರಾಮನು ದೇವದೇವನಾದ ಲಕ್ಷ್ಮೀಪತಿಯನ್ನು ಪೂಜಿಸಲು ತೃಪ್ತಿಗೊಂಡ ಆ ಸ್ವಾಮಿಯು ಪ್ರಸನ್ನನಾಗಿ ಇಂತೆಂದು ಹೇಳಿದನು.

೪೧. ಶ್ರೀ ಭಗವಂತನು ಹೇಳಿದನು–ಎಲೈ ರಾಮನೇ ! ನಿಯಮದಿಂದ ತಪಸ್ಸುಮಾಡುತ್ತಿರುವ ನಿನಗೆ ಪ್ರೀತನಾಗಿದ್ದೇನೆ. ನನ್ನ ಉತ್ತಮವಾದ ಶಕ್ತಿಯನ್ನು ನಿನಗೆ ಕೊಡುತ್ತೇನೆ.

೪೨. ನಾನು ನನ್ನ ಶಕ್ತಿಯನ್ನು ಕೊಡುತ್ತೇನೆ. ಈ ನನ್ನ ಶಕ್ತಿಯಿಂದ ಕೂಡಿಕೊಂಡು ದೇವತೆಗಳ ಹಿತಕ್ಕೂ ಭೂಭಾರನಾಶಕ್ಕೂ ದುಷ್ಟರಾದ ರಾಜರುಗಳನ್ನೆಲ್ಲಾ ನಾಶಮಾಡು.

೪೩. ಈಶ್ವರನು ಹೇಳಿದನು–ಹೀಗೆಂದು ಹೇಳಿ ಒಂದು ಶತ್ರುವಿನಾಶಕವಾದ ಕೊಡಲಿಯನ್ನು ಕೊಟ್ಟನು. ಒಂದು ವೈಷ್ಣವ ಚಾಪವನ್ನೂ ಅನೇಕ ದಿವ್ಯಾಸ್ತ್ರಗಳನ್ನೂ ಕೊಟ್ಟು ಮತ್ತೆ ಅವನನ್ನು ಕುರಿತು ಇಂತೆಂದು ಹೇಳಿದನು.

॥ ಭಗವಾನುವಾಚ ॥

ಮದೋತ್ಕಟಾನ್ನೃಪಾನ್ ಹತ್ವಾ ಬಹುಶಃ ಪರವೀರಹಾ ।
ಗೃಹಾಣ ಪೃಥಿವೀಂ ಸರ್ವಾಂ ಸಾಗರಾನ್ತಾಂ ದ್ವಿಜೋತ್ತಮ ॥ ೪೪ ॥

ಪಾಲಯಸ್ವ ಚ ಧರ್ಮೇಣ ವೀರ್ಯೇಣ ಮಹತಾ ವೃತಃ ।
ಕಾಲೇನ ಮತ್ಪದಂ ಚಾಪಿ ಮತ್ಪ್ರಸಾದಾದ್ಗಮಿಷ್ಯಸಿ ॥ ೪೫ ॥

॥ ಈಶ್ವರ ಉವಾಚ ॥

ಇತ್ಯುಕ್ತ್ವಾಂತರ್ಹಿತೋ ದೇವೋ ವರಂ ದತ್ವಾ ದ್ವಿಜನ್ಮನೇ ।
ರಾಮೋಽಪಿ ಚಾಥ ಸಹಸಾ ಪ್ರಯಯೌ ಪಿತುರಾಶ್ರಮಂ ॥ ೪೬ ॥

ಪಿತರಂ ನಿಹತಂ ದೃಷ್ಟ್ವಾ ಭಾರ್ಗವಃ ಕ್ರೋಧಮೂರ್ಛಿತಃ ।
ನಿಃಕ್ಷತ್ರಾಂ ಕರ್ತುಮನ್ವಿಚ್ಛನ್ ಮಹೀಂ ನೃಪಸಮಾಕುಲಾಂ ॥ ೪೭ ॥

ಜಗಾಮ ಹೈಹಯಪತೇರ್ನಗರಂ ನೃಪಸಂವೃತಂ ।
ಕ್ರೋಧಾವೇಶಾಜ್ಜ್ವಲದ್ಗಾತ್ರೋ ದ್ವಾರ್ಯತಿಷ್ಠದುದಾಯುಧಃ ॥ ೪೮ ॥

---

೪೪-೪೫. ಭಗವಂತನು ಹೇಳಿದನು–ಮದಿಸಿರುವ ರಾಜರನ್ನು ಅನೇಕ ಬಾರಿ ಸುತ್ತಿ ಕೊಂದು ಸಮುದ್ರಮೇಖಲೆಯಾದ ಈ ಭೂಮಿಯನ್ನು ತೆಗೆದುಕೊ. ಮಹಾವೀರ್ಯದಿಂದ ಕೂಡಿದವನಾಗಿ ಧರ್ಮದಿಂದ ಈ ಭೂಮಿಯನ್ನು ಕಾಪಾಡು. ಅನಂತರ ಕೆಲವು ಕಾಲದಮೇಲೆ ನನ್ನ ಅನುಗ್ರಹದಿಂದ ನನ್ನ ಜಾಗವಾದ ವೈಕುಂಠವನ್ನು ಹೊಂದುತ್ತೀಯೆ.

೪೬. ಈಶ್ವರನು ಹೇಳಿದನು–ಆ ರಾಮನಿಗೆ ಇಂತೆಂದು ಹೇಳಿ ವರವನ್ನು ಕೊಟ್ಟು ವಿಷ್ಣುವು ಅಂತರ್ಧಾನನಾದನು. ರಾಮನೂ ಕೂಡ ಅಲ್ಲಿಂದ ಹೊರಟು ತಂದೆಯ ಆಶ್ರಮಕ್ಕೆ ಬಂದನು.

೪೭–೪೮. ಅಲ್ಲಿ ಹೈಹಯನು ತನ್ನ ತಂದೆಯನ್ನು ಕೊಂದುದನ್ನು ತಿಳಿದು ಆ ಭಾರ್ಗವರಾಮನು ಬಹು ಕೋಪಗೊಂಡನು ಒಡನೆಯೇ ಪ್ರಪಂಚವೆಲ್ಲ ವನ್ನೂ ಕ್ಷತ್ರಿಯರಿಲ್ಲದಂತೆ ಮಾಡಬೇಕೆಂದು ಯೋಚಿಸಿದನು. ಒಡನೆಯೇ ಅನೇಕ ರಾಜರಿಗೆ ಆಶ್ರಯವಾದ ಹೈಹಯನ ರಾಜಧಾನಿಯನ್ನು ಹೊಕ್ಕನು.

ತಂ ದೃಷ್ಟ್ವಾ ತತ್ಪುರಜನಾ ಜಾಮದಗ್ನ್ಯಂ ಮಹೌಜಸಂ ।
ಜಾಜ್ವಲ್ಯಮಾನಂ ವಪುಷಾ ಕಾಲಾಗ್ನಿಮಿವ ಮೇನಿರೇ ॥ ೪೯ ॥

ಭಯಾರ್ತಾ ವಿದ್ರುತಾಸ್ಸರ್ವೇ ರಾಜಾನಂ ಹೈಹಯಾಧಿಪಂ ।
ಶಶಂಸುಸ್ತಂ ಮಹಾಸತ್ವಂ ಸರ್ವಾಯುಧಸಮನ್ವಿತಂ ॥
ಶ್ರುತ್ವಾ ಸ ರಾಜಾ ತದ್ವಾಕ್ಯಂ ಪ್ರಾಹ ವಿಸ್ಮಿತಚೇತಸಾ ॥ ೫೦ ॥

॥ ಹೈಹಯಾಧಿಪ ಉವಾಚ ॥

ಕೋಽಸೌ ಮಮ ಪುರದ್ವಾರಿ ಸಾಯುಧಃ ಸಂಸ್ಥಿತೋ ಬಲಾತ್ ।
ಮಹೇಂದ್ರೋ ವಾ ಯಮೋ ವಾಪಿ ರುದ್ರೋ ವಾ ಧನದೋಽಪಿ ವಾ ॥
ಸಾಯುಧೋ ಮತ್ಪುರದ್ವಾರಿ ಸ್ಥಾತುಂ ಶಕ್ತೋ ನ ಕರ್ಹಿಚಿತ್ ॥ ೫೧ ॥

---

೪೯. ಆ ಊರಿನ ಜನರು ಜ್ವಲಿಸುತ್ತಿರುವ ಈ ಜಾಮದಗ್ನಿಯನ್ನು ನೋಡಿ ಜ್ವಲಿಸುತ್ತಿರುವ ಕಾಲಾಗ್ನಿಯೋ ಎಂಬಂತೆ ತಿಳಿಯುತ್ತಿದ್ದರು.

೫೦. ಆ ಜನರು ಹೆದರಿಕೊಂಡು ಓಡಿಹೋಗಿ ರಾಜನಾದ ಕಾರ್ತವೀರ್ಯನಿಗೆ ಆಯುಧಗಳೊಡನೆ ಬಂದಿರುವ ಆ ಶೂರನ ವಿಷಯವನ್ನು ತಿಳಿಸಿದರು. ಆ ರಾಜನು ಅದನ್ನು ಕೇಳಿ ಆಶ್ಚರ್ಯಪಟ್ಟು ಇಂತೆಂದನು.

೫೧. ಹೈಹಯಾಧಿಪನು ಹೇಳಿದನು-ನನ್ನ ಈ ಪಟ್ಟಣದ ಬಾಗಿಲಿನಲ್ಲಿ ಬಲಾತ್ಕಾರದಿಂದ ಆಯುಧಗಳನ್ನು ಹಿಡಿದು ನಿಂತಿರುವವನಾರು? ಮಹೇಂದ್ರನಿರಬಹುದೆ? ಯಮನಿರಬಹುದೆ? ಅಥವಾ ರುದ್ರನಿರಬಹುದೆ? ಇಲ್ಲವೆ ಕುಬೇರನೇನಾದರೂ ಬಂದಿರಬಹುದೊ? ಇವರಿಗೂ ಕೂಡ ಆಯುಧವನ್ನು ಹಿಡಿದು ನನ್ನ ರಾಜಧಾನಿಯ ಬಾಗಿಲಿನಲ್ಲಿ ಬಂದು ನಿಲ್ಲಲು ಶಕ್ತಿಯು ಇಲ್ಲವೇ ಇಲ್ಲವಲ್ಲ! ಇದು ಬಹು ಆಶ್ಚರ್ಯವಾಗಿದೆ.

॥ ಮಹಾದೇವ ಉವಾಚ ॥

ಇತ್ಯುಕ್ತ್ವಾ ಪಾರ್ಥಿವೇಂದ್ರೋ ವೈ ಕಿಂಕರಾನ್ ಸುಮಹಾಬಲಾನ್ ।
ಪ್ರೇರಯಾಮಾಸ ತಂ ದುಷ್ಟಂ ಗೃಹ್ಣೀತೇತ್ಯಾಹ ದುರ್ಮತಿಃ ॥ ೫೨ ॥

ತೇ ಗತ್ವಾ ದದೃಶುರ್ವೀರಂ ಪುರದ್ವಾರಿ ಮಹಾಬಲಂ ।
ಜ್ವಲಂತಮಿವ ಕಾಲಾಗ್ನಿಂ ದುರ್ನಿರೀಕ್ಷ್ಯಂ ಸ್ವತೇಜಸಾ ॥ ೫೩ ॥

ತಸ್ಯ ಸಂದರ್ಶನೇಪ್ಯತ್ರ ಶಕ್ತಾಸ್ತೇ ನ ಮಹಾಬಲಾಃ ।
ಗೃಹೀತುಕಾಮಾಸ್ತಂ ವೀರಂ ಸಮಂತಾತ್ಪ್ರಯಯುರ್ಭೃಶಂ ॥ ೫೪ ॥

ತಾನ್ ದೃಷ್ಟ್ವಾ ಸಾಯುಧಾನ್ ಸರ್ವಾನ್ ಪಾರ್ಥಿವೇಂದ್ರಸ್ಯ ಕಿಂಕರಾನ್ ।
ಪ್ರಹಸನ್ ಪ್ರಾಹ ವಿಪ್ರೇಂದ್ರೋ ಜಾಮದಗ್ನಿರ್ಮಹಾಬಲಃ ॥ ೫೫ ॥

---

೫೨. ಮಹಾದೇವನು ಹೇಳಿದನು–ಹೀಗೆಂದು ಹೇಳುತ್ತಾ ಆ ತಿಳಿಗೇಡಿಯಾದ ರಾಜನು ಬಲಿಷ್ಠರಾದ ಭಟರನ್ನು ಕರೆದು ಆ ದುಷ್ಟನನ್ನು ಹಿಡಿದು ತನ್ನಿರೆಂದು ಆಜ್ಞಾಪಿಸಿದನು.

೫೩. ಆ ಭಟರು ಹೋಗಿ ಬಾಗಿಲಿನಲ್ಲಿ ನಿಂತಿರುವ ಬಲಿಷ್ಠನಾದ ಕಾಲಾಗ್ನಿಯಂತೆ ತನ್ನ ತೇಜಸ್ಸಿನಿಂದ ಬೆಳಗುತ್ತಿರುವ ಆ ವೀರನನ್ನು ನೋಡಿದರು.

೫೪. ಮಹಾ ಬಲಿಷ್ಠರಾದ ಆ ಭಟರು ಆತನನ್ನು ನೋಡುವುದಕ್ಕೂ ಶಕ್ತರಾಗದೆ ಹೋದರು. ಆದರೂ ಕೂಡ ಅವನನ್ನು ಹಿಡಿಯಲು ಎಲ್ಲ ಕಡೆಯಲ್ಲಿಯೂ ಸುತ್ತುಗಟ್ಟಿದರು.

೫೫. ಆ ಭಟರು ಆಯುಧಗಳನ್ನು ತೆಗೆದುಕೊಂಡು ಬಂದಿರುವುದನ್ನು ನೋಡಿ ಬಲಿಷ್ಠನಾದ ರಾಮನು ನಗುತ್ತ ಇಂತೆಂದನು.

॥ ಪರಶುರಾಮ ಉವಾಚ ॥

ಭಾರ್ಗವಸ್ಯ ಸುತೋ ರಾಮಃ ಸಂಪ್ರಾಪ್ತೋಽಹಂ ನರಾಧಮಾಃ ।
ಸ್ವಪಿತುರ್ನಿಧನಾತ್ ಸರ್ವಾನ್ ಹನಿಷ್ಯಾಮಿ ನೃಪೋತ್ತಮಾನ್ ॥ ೫೬ ॥

ಕಾರ್ತವೀರ್ಯಸ್ಯ ರುಧಿರಂ ಮತ್ಪಿತ್ರೇ ತಿಲಸಂಯುತಂ ।
ದಾಸ್ಯಾಮಿ ಪಿಂಡದಾನಂ ಚ ತಚ್ಛಿರಃಕಮಲೇನ ವೈ ॥ ೫೭ ॥

॥ ಮಹಾದೇವ ಉವಾಚ ॥

ಇತ್ಯುಕ್ತಾಸ್ತೇ ಮಹಾವೀರ್ಯಾಃ ಕಿಂಕರಾಸ್ತಸ್ಯ ಭೂಪತೇಃ ।
ಶರೈಸ್ಸಂತಾಡಯಾಮಾಸುಃ ಪಲಾಲೈರಿವ ಪಾವಕಂ ॥ ೫೮ ॥

ತತಃ ಕ್ರುದ್ಧೋ ಮಹಾವೀರ್ಯೋ ರಾಮಃ ಸತ್ಯಪರಾಕ್ರಮಃ ।
ವೈಷ್ಣವಂ ಚಾಪಮಾಕೃಷ್ಯ ಜ್ಯಾನಿನಾದಮಥಾಕರೋತ್ ॥ ೫೯ ॥

---

೫೬. ಪರಶುರಾಮನು ಹೇಳಿದನು—ಎಲೈ ನರಾಧಮರಿರಾ! ನಾನು ಜಮದಗ್ನಿಯ ಮಗನಾದ ರಾಮನು. ಇಲ್ಲಿಗೆ ಬಂದಿದ್ದೇನೆ. ನನ್ನ ತಂದೆಯನ್ನು ಈ ರಾಜನು ಕೊಂದುದರಿಂದ ಎಲ್ಲಾ ರಾಜರನ್ನೂ ಕೊಲ್ಲಲು ಬಂದಿದ್ದೇನೆ.

೫೭. ಕಾರ್ತವೀರ್ಯನರುಧಿರದಲ್ಲಿ ಎಳ್ಳನ್ನು ಸೇರಿಸಿಕೊಂಡು ನನ್ನ ತಂದೆಗೆ ತರ್ಪಣವನ್ನು ಕೊಡುತ್ತೇನೆ. ಅವನ ತಲೆಯಿಂದ ನನ್ನ ತಂದೆಗೆ ಪಿಂಡವನ್ನು ಕೊಡುತ್ತೇನೆ.

೫೮. ಮಹಾದೇವನು ಹೇಳಿದನು-ಆ ರಾಮನು ಹೀಗೆನ್ನಲು ಪರಾಕ್ರಮಿಗಳಾದ ಆ ಭಟರು ಆ ರಾಮನನ್ನು ಬಾಣಗಳಿಂದ ಹೊಡೆದರು. ಇದನ್ನು ನೋಡಿದರೆ ಬೆಂಕಿಯನ್ನು ಒಣಗಿದ ಜಳ್ಳುಹುಲ್ಲುಗಳಿಂದ ಹೊಡೆದಂತೆ ಕಾಣುತ್ತಿದ್ದಿತು.

೫೯. ಆಗ ಕೋಪಗೊಂಡ ರಾಮನು ವೈಷ್ಣವ ಧನುಸ್ಸನ್ನು ತೆಗೆದುಕೊಂಡು ಧನುಸ್ಸಿನ ಬೀವನ್ನು ಎಳೆಯುತ್ತ ಟಂಕಾರ ಮಾಡಿದನು.

ತೇನ ನಾದೇನ ಮಹತಾ ಪೂರಿತಂ ಭುವನತ್ರಯಂ ।
ದೇವಾನಾಮಪಿ ಸಂತ್ರಾಸೋ ಬಭೂವ ಮಹದದ್ಭುತಂ ॥ ೬೦ ॥

ತತಃ ಪಾವಕಸಂಕಾಶೈರಾಶುಗೈಃ ಸುಮಹಾಬಲಃ ।
ತಾಡಯಾಮಾಸ ತಾನ್ ವೀರಾನ್ ಕಿಂಕರಾನ್ ವೈ ಮಹಾಬಲಾನ್ ॥ ೬೧ ॥

ಹತ್ವಾ ತು ಕಿಂಕರಾನ್ ತಸ್ಯ ಪಾರ್ಥಿವಸ್ಯ ಮಹಾತ್ಮನಃ ।
ಕಾಲಾಗ್ನಿರಿವ ಸಂತಸ್ಥೌ ಸರ್ವಭೂತಭಯಂಕರಃ ॥ ೬೨ ॥

ಶ್ರುತ್ವಾ ತು ಕಿಂಕರಾನ್ ಸ್ವಸ್ಯ ಹತಾನ್ ರಾಮೇಣ ಧೀಮತಾ ।
ಹೈಹಯಾಧಿಪತಿರ್ವೀರಃ ಕ್ರೋಧಸಂರಕ್ತಲೋಚನಃ ॥ ೬೩ ॥

ನಿರ್ಯಯೌ ಸಹ ಸೈನ್ಯೇನ ಯತ್ರಾಸ್ತೇ ಭಾರ್ಗವೋವ್ಯಯಃ ।
ತಂ ದೃಷ್ಟ್ವಾ ಘೋರಸಂಕಾಶಂ ಜ್ವಲಂತಂ ಸ್ವೇನ ತೇಜಸಾ ॥ ೬೪ ॥

---

೬೦. ಆ ದೊಡ್ಡ ಸದ್ದಿನಿಂದ ಮೂರುಲೋಕವೂ ತುಂಬಿತು. ದೇವತೆಗಳಿಗೂ ಹೆದರಿಕೆಯುಂಟಾಯಿತು. ಇದು ಬಹುವಾಗಿ ಆಶ್ಚರ್ಯವಾಗಿದ್ದಿತು.

೬೧. ಆಮೇಲೆ ಬೆಂಕಿಯಂತಿರುವ ವೇಗವಾದ ಬಾಣಗಳಿಂದ ಆ ಬಲಿಷ್ಠನಾದ ರಾಮನು ಆ ಬಲಿಷ್ಠರಾದ ಆಳುಗಳನ್ನು ಹೊಡೆದನು.

೬೨. ಆ ಕಾರ್ತವೀರ್ಯನ ಭಟರೆಲ್ಲರನ್ನೂ ಕೊಂದು ಬಹು ಭಯಂಕರವಾಗಿ ಪ್ರಳಯಾಗ್ನಿಯಂತೆ ನಿಂತನು.

೬೩-೬೫. ಆ ಕಾರ್ತವೀರ್ಯನು ತನ್ನ ಆಳುಗಳನ್ನು ರಾಮನು ಕೊಂದುದನ್ನು ಕೇಳಿದನು. ಇದರಿಂದ ಅವನಿಗೆ ಬಹುವಾಗಿ ಕೋಪ ಬಂದಿತು. ಆಗ ಆ ಭಾರ್ಗವನ ಎದುರಿಗೆ ಸೈನ್ಯವನ್ನು ತೆಗೆದುಕೊಂಡು ಹೋದನು. ಅಲ್ಲಿ ನಿಂತಿರುವ, ಘೋರವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಆ ರಾಮನನ್ನು

ತ್ರೆಸ್ತಾಃ ಸರ್ವೇ ಜನಾಸ್ತತ್ರ ಶಂಕಮಾನಾ ಜನಕ್ಷಯಂ |
ತತೋ ಯುದ್ಧಮಭೂದ್ಘೋರಂ ರಾಮಸ್ಯ ನೃಪತೇಸ್ತದಾ ॥ ೬೫ ॥

ಶಸ್ತ್ರಾಸ್ತ್ರಪಾತನೈರ್ಭೀಮೈರ್ಮೇಘಯೋರಿವ ವರ್ಷತೋಃ |
ತತೋ ರಾಮೋ ಮಹಾತೇಜಾಃ ತತ್ಸೈನ್ಯಂ ನೃಪತೇಸ್ತದಾ ॥ ೬೬ ॥

ಸಂದದಾಹ ಕ್ಷಣಾತ್ಸರ್ವಂ ವೈಷ್ಣವಾಸ್ತ್ರೇಣ ಲೀಲಯಾ |
ತತಃ ಪರಶುನಾ ರಾಮಃ ತೀಕ್ಷ್ಣೇನಾಮಿತವಿಕ್ರಮಃ ॥ ೬೭ ॥

ಚಿಚ್ಛೇದ ಬಾಹುಸಾಹಸ್ರಂ ಕಾರ್ತವೀರ್ಯಸ್ಯ ದುರ್ಮತೇಃ |
ನ ಶಶಾಕ ಮಹಾವೀರ್ಯೋ ಯೋದ್ಧುಂ ರಾಮೇಣ ಭೂಪತಿಃ ॥ ೬೮ ॥

ನಷ್ಟವೀರ್ಯೋ ಬಭೂವಾತ್ರ ಪಾಪೇನ ಸ್ವೇನ ದುರ್ಮತಿಃ |
ಚಿಚ್ಛೇದ ತಚ್ಛಿರಃ ಕ್ರುದ್ಧೋ ರೇಣುಕಾತನಯೋ ಬಲೀ ॥ ೬೯ ॥

---

ನೋಡಿ ಎಲ್ಲರೂ ಕೂಡ ಬಹುವಾಗಿ ಜನಗಳು ನಾಶವಾಗುವರೆಂದು ತಿಳಿದು ಹೆದರಿದರು. ಅನಂತರ ಆ ಭಾರ್ಗವರಾಮನಿಗೂ ಕಾರ್ತವೀರ್ಯನಿಗೂ ಘೋರವಾದ ಯುದ್ಧವು ನಡೆಯಿತು.

೬೬-೬೮. ಶಸ್ತ್ರಾಸ್ತ್ರಗಳಿಂದ ಇಬ್ಬರೂ ಭಯಂಕರವಾಗಿ ಯುದ್ಧ ಮಾಡುತ್ತಿದ್ದರು. ಇದನ್ನು ನೋಡಿದರೆ ಮಳೆಯನ್ನು ಹುಯ್ಯಿಸುತ್ತಿರುವ ಘನವಾದ ಮೇಘಗಳು ಹೊಡೆದಾಡುತ್ತಿರುವಂತೆ ಇದ್ದಿತು. ಅನಂತರದಲ್ಲಿ ಆ ರಾಮನು ರಾಜನ ಸೈನ್ಯವೆಲ್ಲವನ್ನೂ ವೈಷ್ಣವಾಸ್ತ್ರದಿಂದ ಲೀಲೆಯಿಂದಲೇ ಕೊಂದನು. ಅನಂತರ ಭಾರ್ಗವರಾಮನು ತನ್ನ ಕೊಡಲಿಯಿಂದ ರಾಜನ ಸಾವಿರ ತೋಳುಗಳನ್ನೂ ಕತ್ತರಿಸಿದನು. ಕೊನೆಗೆ ಆ ರಾಜನು ರಾಮನೊಡನೆ ಯುದ್ಧಮಾಡಲಾರದೆ ಹೋದನು.

೬೯. ಆಗ ಆ ಕಾರ್ತವೀರ್ಯನು ತನ್ನ ಬ್ರಹ್ಮಹತ್ಯಾಪಾಪದಿಂದ ಪರಾಕ್ರಮಹೀನನಾದನು ಈ ರಾಮನು ಅವನ ತಲೆಯನ್ನು ಕತ್ತರಿಸಿದನು.

ಮಹಾದ್ರಿಶೃಂಗಂ ವಜ್ರೇಣ ಯಥಾ ದೇವಪತಿರ್ಬಲೀ ।
ಹತ್ವಾ ಸಹಸ್ರಬಾಹುಂ ತಂ ಜಾಮದಗ್ನ್ಯಃ ಪ್ರತಾಪವಾನ್ ॥ ೭೦ ॥

ಜಘಾನ ಪಾರ್ಥಿವಾನ್ ಸರ್ವಾನ್ ಕ್ರುದ್ಧಃ ಪರಶುನಾ ಮೃಧೇ ।
ರಾಮಂ ದೃಷ್ಟ್ವಾ ಮಹಾರೌದ್ರಂ ಪಾರ್ಥಿವಾಃ ಪೃಥಿವೀತಲೇ ॥ ೭೧ ॥

ಭಯಾರ್ತಾ ವಿದ್ರುತಾಃ ಸರ್ವೇ ಮಾತಂಗಾ ಇವ ಕೇಸರಿಂ ।
ವಿದ್ರುತಾನಪಿ ಭೂಪಾಲಾನ್ ಪಿತುರ್ನಿಧನಮನ್ಯುನಾ ॥ ೭೨ ॥

ಜಘಾನ ಭಾರ್ಗವಃ ಕ್ರುದ್ಧೋ ನಾಗಾನಿವ ಖಗೇಶ್ವರಃ ।
ನಿಃಕ್ಷತ್ರಂ ಕೃತವಾನ್ ಸರ್ವಂ ಜಾಮದಗ್ನಿಃ ಪ್ರತಾಪವಾನ್ ॥ ೭೩ ॥

ರರಕ್ಷ ಭಗವಾನೇಕಮಿಕ್ಷ್ವಾಕೋಃ ಸುಮಹತ್ಕುಲಂ ।
ಮಾತಾಮಹಸ್ಯಾನ್ವಯತ್ವಾದ್ರೇಣುಕಾವಚನಾತ್ತಥಾ ॥ ೭೪ ॥

---

೭೦-೭೩. ಆ ತಲೆಯು ಇಂದ್ರನು ವಜ್ರಾಯುಧದಿಂದ ಪರ್ವತಗಳ ಶಿಖರಗಳನ್ನು ಕತ್ತರಿಸಿದಾಗ ಆ ಶೃಂಗವು ಬಿದ್ದಂತೆ ಬಿದ್ದಿತು. ಈ ಮಹಾಬಲಿಷ್ಠನಾದ ರಾಮನು ಕಾರ್ತವೀರ್ಯನನ್ನು ಕೊಂದು ಅನಂತರ ಯುದ್ಧದಲ್ಲಿ ಎಲ್ಲಾ ರಾಜರನ್ನೂ ಕೊಡಲಿಯಿಂದ ಕೊಂದನು. ಆಗ ರಾಜರೆಲ್ಲರೂ ಈ ರಾಮನು ಮಹಾ ರೌದ್ರಾವತಾರಗೊಂಡಿರುವುದನ್ನು ನೋಡಿ ಹೆದರಿದವರಾಗಿ ಆನೆಗಳು ಸಿಂಹವನ್ನು ನೋಡಿ ಹೆದರಿ ಓಡುವಂತೆ ಓಡಿದರು. ರಾಜರುಗಳು ಓಡಿಹೋಗುತ್ತಿದ್ದರೂ ಕೂಡ ಅವರು ತನ್ನ ತಂದೆಯನ್ನು ಕೊಂದ ಕೋಪದಿಂದ ಅವರೆಲ್ಲರನ್ನೂ ಗರುಡನು ಸರ್ಪಗಳನ್ನು ಕೊಲ್ಲುವಂತೆ ಕೊಂದನು. ಇಂತು ಪ್ರತಾಪಶಾಲಿಯಾದ ಆ ರಾಮನು ಭೂಮಿಯಲ್ಲಿಯೇ ಕ್ಷತ್ರಿಯರಿಲ್ಲದಂತೆ ಮಾಡಿದನು.

೭೪. ಆದರೆ ಇಕ್ಷ್ವಾಕುಕುಲವು ತಾಯಿಯ ಕಡೆಯದಾದುದರಿಂದಲೂ ಮತ್ತು ತಾಯಿಯ ಅಪ್ಪಣೆಯಂತೆಯೂ ಅದೊಂದು ಕುಲವನ್ನು ಮಾತ್ರ ಕೊಲ್ಲದೆ ರಕ್ಷಿಸಿದನು.

ತಾನ್ ಭ್ರಷ್ಟರಾಜ್ಯಾನ್ ಕೃತ್ವಾ ವೈ ಮಾತಾಮಹಕುಲೋದ್ಭವಾನ್ ।
ನ ಹತ್ವಾ ಮನುವಂಶ್ಯಾಂಸ್ತಾನ್ ರಾಮೋ ನೃಪಕುಲಾನ್ತಕಃ ॥ ೭೫ ॥

ಸರ್ವಂ ತು ಭೂಭೃತಾಂ ವಂಶಂ ನಾಶಯಾಮಾಸ ವೀರ್ಯವಾನ್ ।
ಕೃತ್ವಾ ಪೃಥ್ವೀಂ ತು ನಿಃಕ್ಷತ್ರಾಂ ಜಮದಗ್ನಿಸುತೋ ಬಲೀ ॥ ೭೬ ॥

ಅಶ್ವಮೇಧಂ ಮಹಾಯಜ್ಞಂ ಚಕಾರ ವಿಧಿವದ್ದ್ವಿಜಃ ।
ಪ್ರದದೌ ವಿಪ್ರಮುಖ್ಯೇಭ್ಯಃ ಸಪ್ತದ್ವೀಪವತೀಂ ಮಹೀಂ ॥ ೭೭ ॥

ದತ್ವಾ ಮಹೀಂ ಸ ವಿಪ್ರೇಭ್ಯೋ ಜಾಮದಗ್ನ್ಯಃ ಪ್ರತಾಪವಾನ್ ।
ತಪಸ್ತಪ್ತುಂ ಯಯೌ ಸೋಥ ನರನಾರಾಯಣಾಶ್ರಮಂ ॥ ೭೮ ॥

ಏತತ್ತೇ ಕಥಿತಂ ದೇವಿ ಜಾಮದಗ್ನೇರ್ಮಹಾತ್ಮನಃ ।
ಶಕ್ತ್ಯಾವೇಶಾವತಾರಸ್ಯ ಚರಿತಂ ಶಾರ್ಙ್ಗಿಣಃ ಪ್ರಭೋಃ ॥ ೭೯ ॥

---

೭೫–೭೭. ಆದರೆ ಅವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡಿದನು. ಎಲ್ಲರನ್ನೂ ಕೊಂದರೂ ಆ ಮನುವಂಶದವರನ್ನು ಕೊಲ್ಲದೆ ಬಿಟ್ಟನು. ಮತ್ತು ಇತರ ಕ್ಷತ್ರಿಯ ವಂಶವನ್ನೇ ಭೂಮಿಯಲ್ಲಿ ನಾಶಮಾಡಿದನು. ಜಮದಗ್ನಿ ಸುತನಾದ ರಾಮನು ಈ ರೀತಿಯಾಗಿ ಭೂಮಿಯನ್ನು ಕ್ಷತ್ರಿಯರಿಲ್ಲದ್ದನ್ನಾಗಿ ಮಾಡಿ ವಿಧಿವತ್ತಾಗಿ ಅಶ್ವಮೇಧಯಾಗವನ್ನು ಮಾಡಿದನು. ಆಗ ಭೂಮಿಯೆಲ್ಲವನ್ನೂ ಬ್ರಾಹ್ಮಣರಿಗೆ ದಾನ ಮಾಡಿದನು.

೭೮. ಆ ಪ್ರತಾಪಶಾಲಿಯಾದ ರಾಮನು ಭೂಮಿಯೆಲ್ಲವನ್ನೂ ಬ್ರಾಹ್ಮಣರಿಗೆ ದಾನಮಾಡಿ ತಪಸ್ಸನ್ನು ಮಾಡಲು ನರನಾರಾಯಣಾಶ್ರಮಕ್ಕೆ ಹೋದನು.

೭೯. ಈ ಮಹಿಮನಾದ ಜಮದಗ್ನಿಯ ಮಗನಾದ ರಾಮನ ಚರಿತ್ರೆಯನ್ನು ಹೇಳಿದೆನು. ಇದು ಮಹಾಪ್ರಭುವಾದ ಶಾರ್ಙ್ಗಿಯಾದ ವಿಷ್ಣುವಿನ ಶಕ್ತ್ಯಾವೇಶಿತವಾದ ಅವತಾರವು. ಇದೆಲ್ಲವನ್ನೂ ಹೇಳಿದ್ದೇನೆ.

ಸೋಽಪಾಸ್ಯಂ ಹಿ ಭವೇತ್ತಸ್ಯ ಶಕ್ತ್ಯಾವೇಶಾನ್ಮಹಾತ್ಮನಃ ।
ಉಪಾಸ್ಯೌ ಭಗವದ್ಭಕ್ತೈಃ ವಿಪ್ರಮುಖ್ಯೈಃ ಮಹಾತ್ಮಭಿಃ ॥ ೮೦ ॥

ರಾಮಕೃಷ್ಣಾವತಾರೌ ತು ಪರಿಪೂರ್ಣೌ ನಿಜೈರ್ಗುಣೈಃ ।
ಉಪಾಸ್ಯಮಾನಾವೃಷಿಭಿರಪವರ್ಗಪ್ರದೌ ನೃಣಾಂ ॥ ೮೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಪರಶುರಾಮ ಚರಿತಂ ನಾಮ ಅಷ್ಟಷಷ್ಟ್ಯಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೮೦-೮೧ ಈ ಅವತಾರವು ಶಕ್ತ್ಯಾವೇಶಿತ ಅವತಾರವಾದುದರಿಂದ ಇದರಲ್ಲಿ ಸ್ವಾಮಿಯನ್ನು ಉಪಾಸನೆ ಮಾಡುವ ಅಂಶವೇನೂ ಇರುವುದಿಲ್ಲ. ರಾಮಕೃಷ್ಣಾವತಾರಗಳು ಆ ಸ್ವಾಮಿಯ ಪೂರ್ಣಗುಣಗಳಿಂದ ಕೂಡಿಕೊಂಡು ಇರುವುದರಿಂದ ಭಗವದ್ಭಕ್ತರಾದವರು ಅವನ್ನು ಉಪಾಸನೆ ಮಾಡಬೇಕು. ಋಷಿಗಳೂ ಕೂಡ ಅವನ್ನು ಉಪಾಸನೆ ಮಾಡುತ್ತಾರೆ. ಅವು ಪ್ರಾಣಿಗಳಿಗೆ ಮೋಕ್ಷವನ್ನು ಕೊಡುತ್ತವೆ.

ಇಂತು ಶ್ರೀಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಪರಶುರಾಮ ಚರಿತವೆಂಬ ಇನ್ನೂರ ಅರವತ್ತೆಂಟನೆಯ ಅಧ್ಯಾಯವು ಮುಗಿದುದು

